# ಗಾಯತ್ರೀ ಮಂತ್ರ ಪ್ರತಿಪಾದ್ಯ ರೂಪ



ಧ್ಯೇಯಃ ಸದಾ ಸವಿತೃ-ಮಂಡಲ-ಮಧ್ಯವರ್ತೀ
ನಾರಾಯಣಃ ಸರಸಿಜಾಸನ-ಸನ್ನಿವಿಷ್ಟಃ
ಕೇಯೂರವಾನ್ ಮಕರ-ಕುಂಡಲವಾನ್ ಕಿರೀಟೀ
ಹಾರೀ ಹಿರಣ್ಮಯ-ವಪುಃ ಧೃತ-ಶಂಖ-ಚಕ್ರಃ

(ನೃಸಿಂಹಪುರಾಣ. ಗರುಡಪುರಾಣ. ಯಾಜ್ಞವಲ್ಕ್ಯಸಂಹಿತಾ. ಬ್ರಹ್ಮಾಂಡಪುರಾಣ. ಭವಿಷ್ಯಪುರಾಣ. ತ್ರ್ಯಂಬಾಕಲ್ಪ )

# ಸಂಧ್ಯಾಸಮೀಕ್ಷಾ ೧




7

ಸಂಪ್ರದಾನ
ಡಾ. ಶತಾವಧಾನಿ ಉಡುಪಿ ರಾಮನಾಥ ಆಚಾರ್ಯ
ಅಷ್ಟಕುಲನಾಗದೇಶಿಕಾರ್ಯ



# ಸಂಧ್ಯಾಸಮೀಕ್ಷಾ ೧


ಸಂಪ್ರದಾನ ಡಾ. ಶತಾವಧಾನಿ ಉಡುಪಿ ರಾಮನಾಥ ಆಚಾರ್ಯ

ಅಷ್ಟಕುಲನಾಗದೇಶಿಕಾರ್ಯ





ಪುಟ 600 (2 ಭಾಗ)

ವರ್ಷ 2020

ಮುದ್ರಣ ಮತ್ತು ವಿನ್ಯಾಸ ಸುಗುಣ ಪ್ರಿಂಟರ್ಸ್

ಶ್ರೀಪುತ್ತಿಗೆ ಮಠ

ರಥಬೀದಿ, ಉಡುಪಿ – 576101

ದೂರವಾಣಿ 0820–2531300


ಲೇಖಕರ ಕೃತಿಗಳು

| | |
|---|---|
| ಅವತಾರಸಮೀಕ್ಷಾ (ಸಂಸ್ಕೃತ) | ಪಕ್ಷಿಸಮೀಕ್ಷಾ |
| ತಂತ್ರಸಮೀಕ್ಷಾ (ಸಂಸ್ಕೃತ) | ಸುರಸಮೀಕ್ಷಾ |
| ನಾಗಸಮೀಕ್ಷಾ (ಸಂಸ್ಕೃತ) | ಸ್ಕಂದಸಮೀಕ್ಷಾ |
| ಕರ್ಮಸಮೀಕ್ಷಾ – 2 3 | ಚಿತ್ರಸಮೀಕ್ಷಾ |
| ಮೂರ್ತಿಸಮೀಕ್ಷಾ – 1 2 3 | ಶಾಂತಿಸಮೀಕ್ಷಾ |
| ಮುದ್ರಾಸಮೀಕ್ಷಾ – 3 | ಸೂತ್ರಸಮೀಕ್ಷಾ |
| ಶ್ರಾದ್ಧಸಮೀಕ್ಷಾ | ವೇದಸಮೀಕ್ಷಾ |



#  ನನ್ನ ಪ್ರತಿಜ್ಞೆ 

ವಿಶ್ವದಲ್ಲಿಯೇ ಅತಿ ಹೆಚ್ಚಿನ ದೈವಿಕ ಶಕ್ತಿ ಕೇಂದ್ರ ಭಾರತ ದೇಶ. ಉತ್ಖನನದಿಂದಲೂ ಅನೇಕ ಐತಿಹಾಸಿಕ ದಾಖಲೆಗಳನ್ನು ಬಹಿರಂಗಗೊಳಿಸಿದ ರಾಷ್ಟ್ರವಿದು. ಇದರ ಪ್ರಾಚೀನ ಭಾಷೆ ಸಂಸ್ಕೃತ ವಿಶ್ವದಲ್ಲೇ ಅತಿ ಹಳೆಯ ಭಾಷೆ ಎಂದು ದೃಢಪಟ್ಟಿದೆ. ಇಂದಿನವರೆಗೂ ಯಾವ ಕೃತಿಗೂ ಸರಿಸಾಟಿ ಇಲ್ಲದ ವೇದವ್ಯಾಸರ ಮೇರುಕೃತಿ **ಮಹಾಭಾರತ** ಸಂಸ್ಕೃತಭಾಷೆಯ ಶಾಸ್ತ್ರಕಾವ್ಯ ನಮ್ಮ ದೇಶದ ಕೊಡುಗೆ. ಇದರಲ್ಲಿ ತಿಳಿಸದ ಸಂಗತಿ ಮತ್ತೆಲ್ಲಿಯೂ ಇಲ್ಲವೆಂದೇ ಇದರ ಪ್ರಖ್ಯಾತಿ. ಮಹಾಭಾರತದ ಮಹಾನಾಯಕ ಶ್ರೀಕೃಷ್ಣ. 5100 ವರುಷದ ಹಿಂದೆಯೇ ಮನುಕುಲಕ್ಕೆ ಶಾಶ್ವತ ಮೌಲ್ಯಗಳ ಜೊತೆಗೆ ಜೀವನ ತತ್ವವನ್ನು ಉಪದೇಶಿಸಿದವನು. ಇದು **ಭಗವದ್ಗೀತೆ**ಯೆಂದೇ ಎಲ್ಲೆಡೆ ಪ್ರಸಿದ್ಧ. ಪ್ರಪಂಚದ ಸಾವಿರಾರು ಭಾಷೆಗಳಲ್ಲಿ ಗೀತೆ ಅನೂದಿತ. ಆಚಾರ್ಯಪುರುಷರೆಲ್ಲರೂ ಇಲ್ಲಿ ಮುಳುಗೆದ್ದವರೇ. ಮತ್ತೆ ಸಮಾಜಸುಧಾರಕರು ಅನೇಕರು ಬಾಪು, ನೆಹರು, ವಿನೋಬಾ, ಅನಿ, ಗೋಖಲೆ, ಬೋಸ್, ಠಾಗೋರ್, ಅರಬಿಂದೋ, ಓಶೋ, ಕಲಾಂ, ಹೆಸ್ಸೆ, ಹೇಮರ್, ಐನ್‌ಸ್ಟೀನ್, ಸರೋಜಿನಿ, ಪಟೇಲ್, ತಿಲಕ್, ಪ್ಲೇಟೋ, ರಮಣ, ದಯಾನಂದ ಮುಂತಾದವರೆಲ್ಲರೂ ಒಪ್ಪಿದ ಗೀತೆ ನಮ್ಮ ಕೃಷ್ಣನದ್ದು. ಕೃಷ್ಣ ತನ್ನ ತಾಯಿಗೆ ತೋರಿಸಿದ ಬಾಲಲೀಲೆಯನ್ನು ರಮಣಿ ರುಗ್ಮಿಣಿ ಮರೆಯಲ್ಲಿ ನೋಡಿ ಸಂತಸಪಟ್ಟಳು. ತನಗೊಂದು ಪೂಜೆಗೆ ಅಂತದ್ದೇ ಮೂರುತಿ ಇರಲೆಂದು ಕೃಷ್ಣನಲ್ಲಿ ಕೇಳಿ ಮಾಡಿಸಿಕೊಂಡಳು. ಕೃಷ್ಣನ ತೆರಳುವಿಕೆಯ ಕಾಲದಲ್ಲಿ ಸಮುದ್ರವು ದ್ವಾರಕೆಯನ್ನು ಆವರಿಸಿದಾಗ ಕೃಷ್ಣಪ್ರತಿಮೆಯು ಸಮುದ್ರಪಾಲಾಯಿತು. ಐತಿಹಾಸಿಕ ಸ್ಮರಣಿಕೆಯೆನಿಸಿದ ಆ ಪ್ರತಿಮೆಯನ್ನು ಸಮುದ್ರದಡಿಯಿಂದ 800 ವರ್ಷದ ಹಿಂದೆ ಮಧ್ವಾಚಾರ್ಯರು ತಂದು ಕಲಿಯುಗದ ಜನರ ಉದ್ಧಾರಕ್ಕಾಗಿ ಉಡುಪಿಯಲ್ಲಿ ಪ್ರತಿಷ್ಠೆಗೈದರು. ಇಂದಿಗೂ ಕೃಷ್ಣನ ವೈಭವದ ಪೂಜೆ ಉಡುಪಿಯಲ್ಲಿ ನಡೆಯುತ್ತಲೇ ಬಂದಿದೆ. **ಉಡುಪಿ ಶ್ರೀಕೃಷ್ಣ ನಮ್ಮೆಲ್ಲರ ಆರಾಧ್ಯ ದೇವರು. ಕೃಷ್ಣಪ್ರತಿಷ್ಠೆಗೈದ ಮಧ್ವಾಚಾರ್ಯರು ನಮ್ಮೆಲ್ಲರ ಮೂಲಗುರುಗಳು.** ಇದು ನನ್ನ ಪ್ರತಿಜ್ಞೆ. 



## ಸಂಧ್ಯಾಸಮೀಕ್ಷಾ ೧



## ಸಂಧ್ಯಾಸಮೀಕ್ಷಾ ೨



# ಸಮೀಕ್ಷೆಯ ಹಿಂದೆ

ಜಪ ಅಥವಾ ಸಂಧ್ಯಾವಂದನೆ ಮಾಡಬೇಕು ಎಂದಾಗ ಮೊದಲು ಬರುವ ಪ್ರಶ್ನೆ – ಈಗ ಜಪಪುಸ್ತಕದಲ್ಲಿ ಬರೆದ ಕ್ರಮದಂತೆ ಹಿಂದಿನವರು ಸಂಧ್ಯಾವಂದನೆ ಮಾಡುತ್ತಿದ್ದರೋ ಹೇಗೆ ?

ಈ ಪ್ರಶ್ನೆಗೆ ಕಾರಣ ಹಲವಾರು.

ಕೆಲವರಿಗೆ ಎಲ್ಲದರಲ್ಲೂ ಸಂಶಯವೇ. ಇವರು ಎಂದೂ ಸತ್ಯವನ್ನು ಪಡೆಯುವ ಸಾಹಸವನ್ನು ಮಾಡುವುದೇ ಇಲ್ಲ. ಇವರಿಗೆ ಪ್ರಶ್ನೆಯೊಂದೇ ಸಾಕು. ಇಂತಹವರ ಈ ಪ್ರಶ್ನೆಗೆ ಏನೂ ಉತ್ತರ ಇರದು.

ಇನ್ನು ಕೆಲವರಿಗೆ ಪುರುಸೊತ್ತು ಕಡಿಮೆಯಾಗಿ ಈ ಜಪಾನುಷ್ಠಾನದ ಬಗ್ಗೆ ಪ್ರಶ್ನೆ ಎದ್ದದ್ದು ಸಹಜವೇ. ಇಂತಹವರು ಉತ್ತರ ತಿಳಿದರೂ ತಮ್ಮ ಕಾಲಕ್ಕೆ ತಕ್ಕಂತೆ ಜಪ ನಡೆಸುವರು ಹೊರತು ತಿದ್ದಿಕೊಳ್ಳುವುದಿಲ್ಲ. ಇವರಿಗೂ ಪ್ರಶ್ನೆಗೆ ಉತ್ತರ ಬೇಡ.

ಉಳಿದ ಕೆಲವರಿಗೆ ನಾವೊಂದು ಪ್ರಶ್ನೆ ಕೇಳುತ್ತೇವೆ. ನಿಮಗೆ ಈ ಪ್ರಶ್ನೆ ಬಂದದ್ದು ಹೇಗೆ? ಎಂದು. ಬೇರೆ ಬೇರೆ ಬಗೆಯ ಜಪದ ಹೊತ್ತಗೆಗಳಿಂದ ಪ್ರಶ್ನೆ ಮೂಡಿದ್ದರೆ ಆಯಾ ಪುಸ್ತಕಗಳೆ ಸ್ವಲ್ಪ ಮಟ್ಟಿಗಾದರೂ ಜಪಿಸಿ ಎನ್ನುವ ಅಭಿಪ್ರಾಯದಿಂದ ಕೆಲವಂಶವನ್ನು ಬಿಟ್ಟು ಪ್ರಕಟಿಸಿದ್ದನ್ನು ಹೇಳಿಕೊಂಡಿವೆಯಾದ್ದರಿಂದ ವಿಸ್ತೃತವಾದ ಜಪಕ್ಕೇನೇ ತಾತ್ಪರ್ಯ ಎಂದು ಸಣ್ಣ ಹೊತ್ತಗೆಗಳಿಂದಲೂ ಉತ್ತರ ಸಿಗದಿರದು.

ತಿಳಿಯಬೇಕೆಂದೇ ಪ್ರಶ್ನೆ ಮಾಡಿದವರಿಗೆ ತಿಳುವಳಿಕೆ ನೀಡಲೆಂದೇ ಈ ಹೊತ್ತಗೆ ಹೊರಬಂದಿದೆ. ಹಿಂದಿನವರ ಜಪವನ್ನು ಪ್ರಶ್ನಿಸುವ ಮೊದಲು ನಾವು ನಮಗೆಷ್ಟು ಹಿಂದಿನವರು ಗೊತ್ತು ಎನ್ನುವುದನ್ನು ಮೊದಲು ಯೋಚಿಸಬೇಕು. ಹಿಂದಿನವರ ಜಪ ಸರ್ವಾಂಗಸಂಪೂರ್ಣವಾಗಿತ್ತು. ಅಲ್ಲಿ ನ್ಯೂನತೆಯಿರಲಿಲ್ಲ. ಬೆಳಿಗ್ಗೆ ಬೇಗ ನಾಲ್ಕೂವರೆಗೆ ಅಥವಾ ಐದಕ್ಕೆ ಮಿಂದು



ಬಂದವರು ಮಧ್ಯಾಹ್ನದ ಹತ್ತಿರದವರೆಗೆ ಹನ್ನೊಂದು ಗಂಟೆಯ ತನಕ ಪ್ರಾತಃಸಂಧ್ಯಾವಂದನೆಯನ್ನು ನಡೆಸುತ್ತಿದ್ದರು. ಇದು ಅತಿಶಯೋಕ್ತಿಯಲ್ಲ. ಶಾಸ್ತ್ರದ ಮಾತನ್ನು ಹೊತ್ತು ತಂದ ಮಂದಿ ಇಂದಿಗೂ ಬದುಕಿರುವರು –

**ಋಷಯೋ ದೀರ್ಘಸಂಧ್ಯಾತ್ವಾತ್ ದೀರ್ಘಮಾಯುರವಾಪ್ನುಯುಃ**

**ಪ್ರಜ್ಞಾಂ ಯಶಶ್ಚ ಕೀರ್ತಿಂ ಚ ಬ್ರಹ್ಮವರ್ಚಸಮೇವ ಚ** (ಮಹಾಭಾರತ)

ಬಹಳ ಕಾಲದ ಬದುಕಿಗೆ ದೀರ್ಘಕಾಲದ ಸಂಧ್ಯಾವಂದನೆಯೆ ಕಾರಣ ಎನ್ನುವ ಸತ್ಯ ಇಲ್ಲಿ ಸಾಬೀತಾಗಿದೆ. ಈ ಉದ್ದನೆಯ ಜಪಕ್ಕೆ ಏನು ಪ್ರಮಾಣ ಎನ್ನುವ ಕುತೂಹಲವೂ ಇಂದಿನ ಮನಸ್ಸಿನಲ್ಲಿ ಕೂತಿದೆ. ಒಂದರ ಅನಂತರ ಮತ್ತೊಂದರ ಕ್ರಿಯೆಗೆ ಏನು ಸಂಬಂಧ ಎನ್ನುವ ಯೋಚನೆಯೂ ಮೂಡಿದೆ. ಇವೆಲ್ಲ ಧನಾತ್ಮಕ ಚಿಂತನೆಯೇ ಆಗಿದೆ. ಇದರಿಂದ ಮನುಷ್ಯ ಆರೋಗ್ಯಕರವಾಗಿ ಬೆಳೆಯಲಿದ್ದಾನೆ. ಇಂದಿನ ಯಾಕೆ ಎನ್ನುವ ಪ್ರಪಂಚದಲ್ಲಿ ಜಪವೂ ಸೇರಿದ್ದು ಸಂತೋಷದ ಸಂಗತಿ. ಇದನ್ನು ವೈಜ್ಞಾನಿಕವಾಗಿ ನಡೆಸಬೇಕೆನ್ನುವವರು ಭಾರೀ ಸಂಖ್ಯೆಯಲ್ಲಿದ್ದಾರೆ. ಇವರೆಲ್ಲ ಮೊದಲು ನೋಡಬೇಕಾದ್ದು ನಮ್ಮ ಅಧ್ಯಾತ್ಮ ಸಂಪತ್ತಿನ ನಿಧಿಯಾದ ವೇದಗಳನ್ನು.

ವೇದಭಾಗಗಳಿಂದು ಬ್ರಾಹ್ಮಣ ಆರಣ್ಯಕ ರೂಪದಲ್ಲಿ ತೀರಾ ವಿರಳವಾಗಿ ಉಪಲಬ್ಧವಾಗಿವೆ. ಇದರಿಂದ ಮಂತ್ರಭಾಗಗಳ ವಿನಿಯೋಗವನ್ನು ತಿಳಿಸುವ ವೈದಿಕವಾದ ಆಜ್ಞಾವಾಕ್ಯಗಳು–ವಿಧಿನಿಷೇಧಗಳು ಪೂರ್ತಿ ಸಿಗಲಾರವು. ಆದರೆ ಶ್ರುತಿಯ ಸಂಗಾತಿಯಾದ ಶ್ರುತಿಯ ಸಂಗತಿಗಳನ್ನೇ ಸೇರಿಹಿಡಿದ ಸ್ಮೃತಿಗಳು ಇಂದು ಉಪಲಬ್ಧವಿವೆ. **ಸ್ಮೃತೇಶ್ಚ ಶ್ರುತಿಕಲ್ಪನಮ್** ಎಂದು **ಪೂರ್ವಮೀಮಾಂಸಾವಾರ್ತಿಕದಲ್ಲಿ** ತಿಳಿಸಿದಂತೆ ಸ್ಮೃತಿಯ ಮಾತಿಗೆ ಶ್ರುತಿ ಇತ್ತೆಂದು ಧಾರಾಳವಾಗಿ ಹೇಳಬಹುದು. ಉಪಲಬ್ಧವಿರುವ ಎಲ್ಲ ಸ್ಮೃತಿಗಳೂ ಶ್ರುತಿಸಂವಾದಿಗಳೆಂದೇನೂ ತಿಳಿಯಬಾರದು. ಶ್ರುತಿವಿರೋಧಿ ಸ್ಮೃತಿ ಅಪ್ರಮಾಣವೆಂದೇ **ಮೀಮಾಂಸಾಸೂತ್ರ** –



**ವಿರೋಧೇ ತ್ವನಪೇಕ್ಷ್ಯಂ ಸ್ಯಾದಸತಿ ಹ್ಯನುಮಾನಮ್**

ಋಷಿಗಳು ವೇದವನ್ನು ಕಂಡವರು; ಕಂಡಂತೆ ಬದುಕಿದವರು; ಬದುಕಿನ ಭಾಷ್ಯ ಬರೆದವರು. ಆ ಭಾಷ್ಯವೆ ಸ್ಮೃತಿ.

ಋಷಿಗಳ ಬಗ್ಗೆ ಯಾಸ್ಕರ ನಿರುಕ್ತದ ಮಾತು –

**ಸಾಕ್ಷಾತ್ಕೃತಧರ್ಮಾಣೋ ಹಿ ಋಷಯೋ ಬಭೂವುಃ**

**ತೇ ಅಸಾಕ್ಷಾತ್ಕೃತಧರ್ಮಭ್ಯೋಽವರೇಭ್ಯ**

**ಉಪದೇಶೇನ ಮಂತ್ರಾನ್ ಸಂಪ್ರಾದುಃ**

ಕಂಡ ಋಷಿ ಕಾಣದ ದೂರದ ಶಿಷ್ಯನಿಗೆ ಹೇಳಿದ ಮಾತೇ ಧರ್ಮಶಾಸ್ತ್ರ. ಈ ಶಾಸ್ತ್ರ ಮೊದಲು ಸೂತ್ರವಾಗಿ ಬಂತು. ಇದರಲ್ಲಿ ಸೂಚಿತ ವಿಷಯಗಳೇ ಮುಂದೆ ಸ್ಮೃತಿಗ್ರಂಥವಾಗಿ ಸಂಕಲನ ಸಂಪುಟವಾಗಿ ಹೊರಗೆ ಹುಟ್ಟಿತು. ಇಲ್ಲೆಲ್ಲ ಸಾಂಗೋಪಾಂಗ ಜಪಯಜ್ಞದ ವಿಸ್ತೃತ ಚಿಂತನೆ ಬಂದಿದೆ. ಇದಕ್ಕೂ ಮುಂದೆ ಟೀಕಾಟಿಪ್ಪಣಿಗಳು ಬೆಳೆದವು. ಉದಾಹರಣೆಗೆ – ನಾರದಸ್ಮೃತಿಗೆ ಟೀಕೆ ಬರೆದ ಅಸಹಾಯ, ಮನುಸ್ಮೃತಿಯ ಟೀಕಾಕಾರ ಮೇಧಾತಿಥಿ, ಯಾಜ್ಞವಲ್ಕ್ಯಸ್ಮೃತಿಯ ಟೀಕಾಕಾರ ವಿಶ್ವರೂಪ ಇವರೆಲ್ಲ ಸಾವಿರ ವರುಷದ ಕೆಳಗೆ ಬಂದವರು. ಧರ್ಮಶಾಸ್ತ್ರವನ್ನು ಬೆಳೆಸಿದವರು. ಅನಂತರದ ಕಾಲದಲ್ಲಿ ಮೂಲಗ್ರಂಥವನ್ನೆ ಮರೆಸುವ ಚಿಂತನಕಾರರು ಉದಯಿಸಿದರು. ಯಾಜ್ಞವಲ್ಕ್ಯಸ್ಮೃತಿ ಟೀಕೆ ಮಿತಾಕ್ಷರಾ ಇದರ ಕರ್ತೃ ವಿಜ್ಞಾನೇಶ್ವರ ಪ್ರಸಿದ್ಧಿಗೆ ಬಂದ. ಇವನ ಜೊತೆ ಮನ್ವರ್ಥ ಮುಕ್ತಾವಳಿಯ ಕುಲ್ಲೂಕ ಭಟ್ಟ, ಯಾಜ್ಞವಲ್ಕ್ಯಸ್ಮೃತಿ ಟೀಕಾಕಾರ ಅಪರಾರ್ಕ, ಪರಾಶರಸ್ಮೃತಿ ಟೀಕಾಕಾರ ಮಾಧವಾಚಾರ್ಯ ಬೆಳಕಿಗೆ ಬಂದರು. ಮುಂದೆ ದೇವಣ್ಣಭಟ್ಟನ ಸ್ಮೃತಿಚಂದ್ರಿಕಾ, ಚಂಡೇಶ್ವರನ ಸ್ಮೃತಿರತ್ನಾಕರ, ವಾಚಸ್ಪತಿಮಿಶ್ರನ ಚಿಂತಾಮಣಿ, ಹೇಮಾದ್ರಿಯ ಚತುರ್ವರ್ಗಚಿಂತಾಮಣಿ, ಕಮಲಾಕರ ಭಟ್ಟನ ನಿರ್ಣಯಸಿಂಧು, ಕಾಶೀನಾಥ ಭಟ್ಟನ ಧರ್ಮಸಿಂಧು ಬಂದವು. ಇವೆಲ್ಲ ನೂರಾರು ವರ್ಷದ ಹಿಂದಿನ ಮನೋರಂಗದಲ್ಲಿ, ವಾಕ್ತರಂಗದಲ್ಲಿ ಹರಿದು



ನಿಂತವು. ಆದರೆ ನಾವಿಂದು ಇದ್ಯಾವುದನ್ನೂ ಮೂಸುವುದೇ ಇಲ್ಲ. ಆದರೆ ಪ್ರಶ್ನಿಸದೇ ಬಿಡುವುದಿಲ್ಲ. ಇದುವೇ ನಮ್ಮ ಸಮಸ್ಯೆಯಾಗಿದೆ. ರೋಗಿಗೆ ರೋಗ ತಿಳಿದಿದೆ, ಮದ್ದು ತಿಳಿದಿದೆ. ಆದರೆ ಪಡೆಯಲು ಸೋಮಾರಿತನ ಬಿಡುವುದಿಲ್ಲ ಎಂದಂತಾಗಿದೆ ನಮ್ಮೆಲ್ಲರ ಪಾಡು. ಮೈಮನಗಳ ಕಳ್ಳತನವನ್ನು ಬದಿಗಿಟ್ಟು ಒಮ್ಮೆ ಹೊತ್ತಗೆಗಳ ಹತ್ತಿರ ಕೂತರೂ ಮತ್ತೆ ಸಮಸ್ಯೆ ಸಂಶಯ ಬರಲಾರದು.

ಪ್ರತಿನಿತ್ಯ ಸಂಧ್ಯಾವಂದನೆ ಮಾಡಬೇಕು

**ಅಹರಹಃ ಸಂಧ್ಯಾಮುಪಾಸೀತ** (ತೈತ್ತಿರೀಯ ಬ್ರಾಹ್ಮಣ)

**ಸಂಧೌ ಸಂಧ್ಯಾಮುಪಾಸೀತ**

**ಆಜ್ಯೋತಿಷೋ ದರ್ಶನಾತ್ ಸಂಧಿಃ** (ಛಂದೋಗ)

**ಆ ವಿಶ್ವದೇವಂ ಸತ್ಪತಿಂ ಸೂಕ್ತೈರದ್ಯಾ ವೃಣೀಮಹೇ**

**ಸತ್ಯಸವಂ ಸವಿತಾರಮ್** (ಋಗ್ವೇದ)

ಸಾಧನೆಗೆ ಜಗತ್ತನ್ನೆಲ್ಲಾ ನೀಡಿದ ತಂದೆಯನ್ನು ಒಳ್ಳೆಯ ಮಾತಿನ ಪುನರಾವೃತ್ತಿಯಿಂದ ಎಂದೆಂದೂ ಕರೆವೆನು. ಈತ ಎಲ್ಲರಿಗೂ ದೇವ. ಪ್ರಕೃತಿಗೂ ಪತಿ.

ಇದು ವೇದದ ಅಧಿಕಾರವಾಣಿ.

ಮತ್ತೆ ಸಂಧ್ಯಾಳ ವಂದನೆ ಎಂದಾಗ ಅಕ್ಕಪಕ್ಕದ ಮನೆಯವಳ ಯಾವುದೋ ಉಷೆಯ ಅಥವಾ ನಿಶೆಯ ನೆನಪಾಗಬಾರದೆಂದೇ ವೇದ ಗುಡುಗಿತು. ಸಂಧ್ಯೆ ಎಂದರೆ ಭಗವಂತನೆಂದೇ; ಸಂಧ್ಯಾವಂದನೆ ಭಗವದಾರಾಧನೆ ಎಂದು–

**ಪ್ರಾತರುತ್ಥಾಯಾಥ ಸಂಧ್ಯಾಮುಪಾಸೀತ**

**ಯತ್ಸಂಧ್ಯಾಮುಪಾಸತೇ ಬ್ರಹ್ಮೈವ ತದುಪಾಸತೇ**

ಈ ಭಗವದಾರಾಧನೆಯನ್ನು ಕಾಣುವ ಸೂರ್ಯಪ್ರತೀಕದಲ್ಲಿ ನಡೆಸಬೇಕು –



**ಅಸೌ ವಾ ಆದಿತ್ಯೋ ದೇವಮಧು** (ಐತರೇಯ)

**ಸೂರ್ಯೇ ಸಂಯಮಾತ್** (ಯೋಗಸೂತ್ರ)

**ಸೂರ್ಯೋಽಗ್ನಿಃ ಬ್ರಾಹ್ಮಣೋ ಗಾವಃ ವೈಷ್ಣವಃ ಖಂ ಮರುಜ್ಜಲಮ್**

**ಭೂರಾತ್ಮಾ ಸರ್ವಭೂತಾನಿ ಭದ್ರಪೂಜಾಪದಾನಿ ಮೇ** (ಭಾಗವತ)

**ಅಪ್ಸ್ವಗ್ನೌ ಹೃದಯೇ ಸೂರ್ಯೇ ಸ್ಥಂಡಿಲೇ ಪ್ರತಿಮಾಸು ಚ**

**ಷಟ್ಸ್ವೇತೇಷು ಹರೇಃ ಸಮ್ಯಕ್ ಅರ್ಚನಂ ಮುನಿಭಿಃ ಸ್ಮೃತಮ್** (ಅಗ್ನಿಪುರಾಣ)

**ಲೋಕೇಽಸ್ಮಿನ್ ಮಂಗಳಾನ್ಯಷ್ಟೌ ಬ್ರಾಹ್ಮಣೋ ಗೌರ್ಹುತಾಶನಃ**

**ಹಿರಣ್ಯಂ ಸರ್ಪಿರಾದಿತ್ಯ ಆಪೋ ರಾಜಾ ತಥಾಽಷ್ಟಮಃ** (ನಾರದ)

**ರೋಚನಂ ಚಂದನಂ ಹೇಮ ಮೃದಂಗಂ ದರ್ಪಣಂ ಮಣಿಮ್**

**ಗುರುಮಗ್ನಿಂ ಚ ಸೂರ್ಯಂ ಚ ಪ್ರಾತಃ ಪಶ್ಯೇತ್ಸದಾ ಬುಧಃ** (ಸ್ಮೃತಿಚಂದ್ರಿಕಾ)

ಆದಿತ್ಯಮಂಡಲ ಮಧ್ಯವರ್ತಿಯಾದವನು ನಾರಾಯಣನೇ ಎಂದು ವೇದಪಂಚರಾತ್ರಗಳು ಹೇಳಿವೆ –

**ಸೂರ್ಯಮಂಡಲಗೋ ವಿಷ್ಣುಃ ಸರ್ವೇಷಾಂ ದೃಷ್ಟವತ್ ಸ್ಥಿತಃ**

**ಅಹಂ ತತ್ತೇಜೋ ರಶ್ಮೀನ್ನಾರಾಯಣಂ ಪುರುಷಮ್**

**ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣಃ**

ಈ ನಾರಾಯಣನನ್ನು ಉದಯದ ಮೊದಲು ಧ್ಯಾನಿಸಬೇಕು, ಜಪಿಸಬೇಕು – **ಉಷಸಿ ಬ್ರಹ್ಮ ಚಿಂತಯೇತ್**

**ಬ್ರಾಹ್ಮೋ ಮುಹೂರ್ತ ಇತ್ಯುಷಃಕಾಲಸ್ಯ ಪ್ರಸಿದ್ಧೇಶ್ಚ**

ಗಾಯತ್ರೀಮಂತ್ರದ ಮೂಲಕ ಚಿಂತನೆ ಸಾಗಬೇಕು –

**ಗಾಯತ್ರೀ ವಾ ಇದಂ ಸರ್ವಮ್**

ಗಾಯತ್ರೀಮಂತ್ರವನ್ನು ಮನುಕುಲಕ್ಕೆ ಪ್ರಣವಾದ್ಯದಲ್ಲಿ ವ್ಯಾಹೃತಿ ತ್ರಯದೊಡನೆ ನೀಡಿದವನು ವಿಶ್ವಾಮಿತ್ರ. ವಿಶ್ವಾಮಿತ್ರಗಾಯತ್ರಿಯಿಂದಲೇ ಆದಿತ್ಯನೊಳಗಿನ ನಾರಾಯಣನನ್ನು ನೆನೆಯಬೇಕು – **ವಿಶ್ವಾಮಿತ್ರಸ್ತು**

ವ್ಯಾಹೃತಿತ್ರಯ ವೇದಮಂತ್ರದ ಸಾರ. ವ್ಯಾಹೃತಿಯ ಸಾರ ಪ್ರಣವ –

**ಪ್ರಜಾಪತಿರ್ಲೋಕಾನಭ್ಯತಪತ್**

**ತೇಭ್ಯೋಽಭಿತಪ್ತೇಭ್ಯಸ್ತ್ರಯೀ ಸಂಪ್ರಾಸ್ರವತ್**

**ತಾಮಭ್ಯತಪತ್**

**ತಸ್ಯಾಸ್ತಪ್ಯಮಾನಾಯಾ ಏತಾನ್ಯಕ್ಷರಾಣಿ ಸಂಪ್ರಾಸ್ರವಂತ ಭೂರ್ಭುವಃಸ್ವರಿತಿ**

**ತಾನ್ಯಭ್ಯತಪತ್**

**ತೇಭ್ಯೋಽಭಿತಪ್ತೇಭ್ಯಃ ಓಂಕಾರಃ ಸಂಪ್ರಾಸ್ರವತ್**

ಪ್ರಣವದ ವ್ಯಾಹೃತಿಯ ವೇದತ್ರಯದ ಗಾಯತ್ರಿಯ ಪುರುಷಸೂಕ್ತದ ಇತಿಹಾಸಪುರಾಣಪಂಚರಾತ್ರಗಳ ಎಲ್ಲದರ ಅರ್ಥ ಒಂದೇ. ಎಲ್ಲವೂ ಭಗವಂತನನ್ನೇ ನಾರಾಯಣನನ್ನೆ ವಿಷ್ಣುವನ್ನೆ ಹೇಳುವವು –

**ಪ್ರಣವಾರ್ಥಾ ವ್ಯಾಹೃತಯೋ ವ್ಯಾಹೃತ್ಯರ್ಥಾ ಋಗಾದಯಃ**

**ಇತಿಹಾಸಪುರಾಣಂ ಚ ಪಂಚರಾತ್ರಂ ಚ ಕೃತ್ಸ್ನಶಃ**

**ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ**

**ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ**

**ಯೋ ದೇವಾನಾಂ ನಾಮಧಾ ಏಕ ಏವ**

**ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಮ್**

**ವಿಷ್ಣುರುಕ್ತಃ ಸರ್ವವೇದೈಃ**

**ಮಾಂ ವಿಧತ್ತೇಽಭಿಧತ್ತೇ ಮಾಮ್**

**ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್**

**ಸ ಸರ್ವನಾಮಾ ಸ ಚ ವಿಶ್ವರೂಪಃ**

**ಸರ್ವೇ ವೇದಾ ಯತ್ಪದಮಾಮನಂತಿ**

**ವೇದೈಶ್ಚ ಸರ್ವೈರಹಮೇವ ವೇದ್ಯಃ**



**ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ**

**ಸರ್ವೇ ಘೋಷಾ ಏಕೈವ ವ್ಯಾಹೃತಿಃ ಪ್ರಾಣ ಏವ**

ಪ್ರಣವ ವ್ಯಾಹೃತಿಗಳ ಜೊತೆಗೆ ಭಗವಂತನ ಪೂರ್ಣ ಚಿಂತನೆ ಮಾಡಬರುವುದರಿಂದ ವಿಶ್ವಾಮಿತ್ರಗಾಯತ್ರೀ ಸಂಧ್ಯಾವಂದನೆಯಲ್ಲಿ ಮಹತ್ವ ಪಡೆಯಿತು. ಈ ಮಂತ್ರಚಿಂತನೆಗೆ ಬಾಹ್ಯಶುದ್ಧಿ ಸ್ನಾನದಿಂದ. ಆಂತರಶುದ್ಧಿ ಆಚಮನಾದಿಗಳಿಂದ. ಇವೆಲ್ಲ ಕ್ರಿಯೆಗಳೂ ನೀರಿನಿಂದ ಆಗಬೇಕಾಗಿದೆ. ನೀರಿನ ಮಾಧ್ಯಮದಲ್ಲಿ ದೇವನ ಉಪಾಸನೆ ಎಂದರೆ ಪ್ರಾಣನ ಮಾಧ್ಯಮದಲ್ಲಿ ಭಗವಂತನ ಚಿಂತನೆ – **ಪ್ರಾಣಸ್ತ್ವಬಭಿಮಾನವಾನ್**

ಮಣ್ಣು ನೀರು ಬೆಂಕಿಯಲ್ಲಿ ಮಣ್ಣಿನಿಂದ ಜಪ ಮಾಡಿದರೆ ಕೊಳೆ ಆಗಲಿದೆ. ಬೆಂಕಿಯಿಂದ ಮಾಡಲಾಗದು. ಮೈಕೈ ಸುಡುತ್ತದೆ. ಅದಕ್ಕಾಗಿ ನೀರಿನಿಂದಲೇ ಜಪದ ಪ್ರಕ್ರಿಯೆ ಅರ್ಘ್ಯದಾನ, ತರ್ಪಣ ಇತ್ಯಾದಿ. ನಮ್ಮ ದೇಹವು ಅರ್ಧ ಮಣ್ಣಿನಿಂದ. ಉಳಿದರ್ಧದಲ್ಲಿ ಕಾಲುಭಾಗ ತೇಜಸ್ಸು. ಉಳಿದ ಭಾಗ ನೀರಿನದ್ದು –

**ಪಾರ್ಥಿವಾನಾಂ ಶರೀರಾಣಾಂ ಅರ್ಧೇನ ಪೃಥಿವೀ ಸ್ಮೃತಾ**

**ಇತರೇಽರ್ಧೇ ತ್ರಿಭಾಗಿನ್ಯ ಆಪಸ್ತೇಜಸ್ತು ಭಾಗತಃ**

ಕುತ್ತಿಗೆಯಿಂದ ಮೇಲೆ ತೈಜಸ, ನಾಭಿಯಿಂದ ಕೆಳಗೆ ಪಾರ್ಥಿವ, ನಡು ನೀರುಮಯ ಎನ್ನಬಹುದೇನೋ!

**ಆಪ** ಎನಿಸುವ ಎಲ್ಲ ಲೋಕಪಾಲಕ ದೇವತೆಗಳೂ ತೀರ್ಥಾಭಿಮಾನಿ ದೇವತೆಗಳೂ ನೀರಿನಲ್ಲಿ ಇರುವ ಮೂಲಕ ನಮ್ಮನ್ನು ಶುಚಿಗೊಳಿಸಿ ಕ್ರಿಯೆಯಲ್ಲಿ ತೊಡಗಿಸಿ ಫಲ ಬರುವಂತೆ ಮಾಡುವರು. ಇದಕ್ಕಾಗಿ ಆಪ್ಯಸೂಕ್ತಾದಿಗಳಿಂದ ಮಾರ್ಜನವನ್ನು ಹೇಳಿದ್ದಾರೆ. ಜತೆಗೆ ದೇವಾದಿಗಳ ತರ್ಪಣವನ್ನೂ ಧನ್ಯವಾದದ ನೆಲೆಯಲ್ಲಿ ತಿಳಿಸಿದ್ದಾರೆ. ನೀರು ಜಡವಲ್ಲ. ಚೇತನ ಎಂಬ ಚಿಂತನೆಯಂತೆ ಆಸನದಲ್ಲಿನ ದರ್ಭೆ–ಅಜಿನ–ವಸ್ತ್ರಗಳೂ ದೇವತೆಗಳಾಗಿ ನಮ್ಮ ಸಾಧನೆಯನ್ನು

ನಡೆಸಿಕೊಡುವರು –

**ದರ್ಭಚರ್ಮಾದಯಶ್ಚಾತೋ ದೇವತಾ ಹ್ಯಭಿಮಾನಿನಃ**

**ನಹ್ಯಚೇತನಕಂ ಕಿಂಚಿತ್ ಫಲದಂ ಸ್ಯಾತ್ಕದಾಚನ**

ಮೀಮಾಂಸಾತ್ರಯಸೂತ್ರಗಳು ಅಭಿಮಾನಿಗಳ ಬಗ್ಗೆ ತಿಳಿಸಿವೆ –

**ದೇವೇಷು ಚರ್ಮಾದಿನಾಮಾನಿ ಸಂವಾದಾದೇಃ**

**ಅಚೇತನಾಸತ್ಯಾಯೋಗ್ಯಾನ್ಯನುಪಾಸ್ಯಾನ್ಯಫಲತ್ವವಿಪರ್ಯಯಾಭ್ಯಾಮ್**

**ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್**

**ಪಯೋಂಬುವಚ್ಚೇತ್ತತ್ರಾಪಿ**

**ಅಂತರ್ಯಾಮಿಬ್ರಾಹ್ಮಣ** ಎಲ್ಲದರೊಳಗಿನ ಭಗವಂತನನ್ನು ಪರಮಾತ್ಮನನ್ನು ಸ್ಪಷ್ಟ ತಿಳಿಸಿದೆ –

**ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರೋ**

**ಯಂ ಪೃಥಿವೀ ನ ವೇದ ಯಸ್ಯ ಪೃಥಿವೀ ಶರೀರಂ**

**ಯಃ ಪೃಥವೀಮಂತರೋ ಯಮಯತಿ ಏಷ ತ ಆತ್ಮಾ ಅಂತರ್ಯಾಮ್ಯಮೃತಃ**

**ಯೋ ಅಪ್ಸು ತಿಷ್ಠನ್ ..... ಯೋऽಗ್ನೌ ತಿಷ್ಠನ್ ... ಯೋऽಂತರಿಕ್ಷೇ .....**

**ಯೋ ವಾಯೌ... ಯೋ ದಿವಿ.... ಯ ಆದಿತ್ಯೇ.... ಯೋ ದಿಕ್ಷು.....**

**ಯಶ್ಚಂದ್ರತಾರಕೇ.... ಯ ಆಕಾಶೇ... ಯಸ್ತಮಸಿ... ಯಸ್ತೇಜಸಿ.....**

**ಯಃ ಸರ್ವೇಷು ಭೂತೇಷು ... ಯಃ ಪ್ರಾಣೇ ..... ಯೋ ವಾಚಿ ....**

**ಯಶ್ಚಕ್ಷುಷಿ.... ಯಃ ಶ್ರೋತ್ರೇ... ಯೋ ಮನಸಿ.... ಯಸ್ತ್ವಚಿ...**

**ಯೋ ವಿಜ್ಞಾನೇ ... ಯೋ ರೇತಸಿ .... ಏಷ ತ ಆತ್ಮಾ ಅಂತರ್ಯಾಮ್ಯಮೃತಃ**

ವೇದಾರ್ಥನಿರ್ಣಯದ ಮೀಮಾಂಸಾ ಸೂತ್ರ ಇಲ್ಲಿದೆ –

**ಕಾರಣತ್ವೇನ ಚಾಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ**

ಅದಕ್ಕಾಗಿಯೇ ಅಂತರ್ಯಾಮಿಯ ಚಿಂತನೆಯಂತೆ ಆಚಮನ ಗಳಲ್ಲಿ ಅಂಗಾಂಗಸ್ಪರ್ಶದಲ್ಲಿ ಕಣ್ಣು–ಕಿವಿ–ಮೂಗೆಲ್ಲ ಆದ ಭಗವಂತನನ್ನು

ನ್ಯಾಸಗೈಯುವುದು –

**ಚಷ್ಟ ಇತ್ಯೇವ ತಚ್ಚಕ್ಷುಃ ಶ್ರವಣಾತ್ ಶ್ರೋತ್ರಮುಚ್ಯತೇ**

**ವಚನಾದೇವ ವಾಗ್ ಬ್ರಹ್ಮ ಸೃಷ್ಟಿಸ್ಥಿತ್ಯಾದಿಕಾರಣಮ್**

ಅಂಗನ್ಯಾಸ ಮಂತ್ರಗಳಿಗೂ ಇದುವೇ ಅರ್ಥ ಹಾಗೂ ಚಿಂತನೆಯ ಕ್ರಮ

**ಸ್ಫುಟತ್ವಾತ್ ಫಡಿತಿ ಪ್ರೋಕ್ತಃ ಕವ ರಕ್ಷಣ ಇತ್ಯತಃ**

**ಕವಚಂ ವರ್ತ್ತತೇ ಯಸ್ಮಾತ್ ಷಡ್ಗುಣತ್ವೇನ ಸರ್ವದಾ**

**ವಷಟ್ ತದ್ಗತ್ವತಸ್ತೇಷಾಂ ವೌಷಡಿತ್ಯೇವ ಕಥ್ಯತೇ**

**ಸ್ವೀಯಂ ಸ್ವೀಕುರುತೇ ಯಸ್ಮಾತ್ ಸ್ವಾಹೇತ್ಯುಕ್ತೋ ಜನಾರ್ದನಃ**

**ನಮಂತ್ಯಸ್ಮಿನ್ ಗುಣಾ ಯಸ್ಮಾತ್ ನಮ ಇತ್ಯೇವ ಕಥ್ಯತೇ**

**ಇತ್ಯಶೇಷಕ್ರಿಯಾನಾಮಶಬ್ದೈರೇಕೋ ಜನಾರ್ದನಃ**

ಸರ್ವಶಬ್ದವಾಚ್ಯತ್ವವನ್ನು ಇನ್ನ್ಯಾರಿಗೂ ಹೇಳಲಿಲ್ಲ; ಹೇಳಬಾರದು. ಬ್ರಹ್ಮಾದಿಗಳು ಯಾರೂ ಸೃಷ್ಟಿಯ ಆದಿಯಲ್ಲಿ ಹೇಳಿಸಿಕೊಳ್ಳಲು ಇರಲಿಲ್ಲ ತಾನೆ

**ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ**

**ವಾಸುದೇವೋಽಗ್ರ ಏವಾಸೀನ್ನ ಬ್ರಹ್ಮಾ ನ ಚ ಶಂಕರಃ**

**ನೇಂದ್ರಸೂರ್ಯೌ ನ ಚ ಗುಹೋ ನ ಸೋಮೋ ನ ವಿನಾಯಕಃ**

**ಆತ್ಮಾ ವಾ ಇದಮೇಕ ಏವಾಗ್ರ ಆಸೀತ್**

**ಆತ್ಮಾ ವಾ ಇದಮಗ್ರ ಆಸೀತ್**

ಭಗವಂತನ ಸಂಕಲ್ಪದಂತೆ ಎಲ್ಲವೂ ನಡೆಯುವುದು. ಅವನ ಪ್ರೀತ್ಯರ್ಥವಾಗಿ ನಿತ್ಯ ಸ್ವಾಧ್ಯಾಯರೂಪವಾದ ಜಪವನ್ನು ನಡೆಸಬೇಕು. ಎಲ್ಲ ದೇವತೆಗಳೂ ಫಲ ನೀಡುವುದು ಭಗವಂತನ ಆದೇಶದಂತೆ –

**ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗ್ಗಿ**

**ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ .....**

**ದ್ಯಾವಾಪೃಥಿವ್ಯೌ ವಿಧೃತೇ ತಿಷ್ಠತಃ......**



**ನಿಮೇಷಾ ಮುಹೂರ್ತಾ ಅಹೋರಾತ್ರಾಣ್ಯರ್ಧಮಾಸಾಃ**

**ಮಾಸಾ ಋತವಃ ಸಂವತ್ಸರಾ ಇತಿ ವಿಧೃತಾಸ್ತಿಷ್ಠಂತಿ**

ದೇಶ, ಕಾಲ, ದ್ರವ್ಯ ಎಲ್ಲವೂ ನಾಶವಿರದ ಭಗವಂತನ ಅಧೀನಗಳೇ. ಆತನನ್ನು ಮರೆತು ಏನು ನಡೆಸಿದರೂ ಅದು ಅವಿನಾಶಿಯಾಗದು. ಅದಕೆಂದೇ ಕಡೆಗೂ ಕೃಷ್ಣಾರ್ಪಣಬುದ್ಧಿಯಿಂದಲೇ ಕ್ರಿಯೆ ಕೊನೆಯಾಗಬೇಕು.

ಆರಂಭದಲ್ಲಿ ಪುಂಡ್ರಧಾರಣೆಯೆ ಭಗವಂತನ ಸ್ಥಿತಿ-ಗತಿಯನ್ನು ಹೇಳಹೊರಟಿದೆ. ಸಪ್ತವಿಧ ಸಾಮೋಪಾಸನೆಯಲ್ಲಿ ಆದಿತ್ಯಜಯವನ್ನು ಹೇಳುವಲ್ಲಿ ಕೇಶವಾದಿಗಳನ್ನು ತಿಳಿಸಿದ್ದಾರೆ –

**ಕೇಶವಾದಿರೂಪೇಣ ಲಲಾಟಾದಿಷು ಸ್ಥಿತೇಃ**

ಹಾಗೆ ಮತ್ತೆ ಮತ್ತೆ ಭಗವದ್‌ವ್ಯೂಹರೂಪಗಳಿಂದ ನಡೆಸಲಾಗುವ ನಿತ್ಯಕ್ರಿಯೆಯನ್ನು ಆದಷ್ಟು ಪ್ರಮಾಣಬದ್ಧವಾಗಿ ಪೂರ್ಣತೆಯತ್ತ ಕೊಂಡೊಯ್ಯಬೇಕೆಂದೇ ಅನೇಕ ಚಿಂತನೆಗಳು ಈ ನಿಟ್ಟಿನಲ್ಲಿ ಸಾಗಿ ಬಂದಿವೆ. ನಮ್ಮ ಶಾಖೆಯವರಿಗಲ್ಲ, ಸಾಮವೇದಿಗಳದ್ದಲ್ಲ ಎಂದೆಲ್ಲ ಹೇಳಿ ತಪ್ಪಿಸಿಕೊಳ್ಳಬೇಡಿ. ಎಲ್ಲಿ ಹೇಳಿದ್ದರೂ ತಪ್ಪಿಲ್ಲದಿದ್ದರೆ ಸೇರಿಸಿಕೊಳ್ಳಿ ಎಂದು ಛಂದೋಗಪರಿಶಿಷ್ಟದ ಪ್ರೀತಿಯ ಕರೆ –

**ಯನ್ನಾಮ್ನಾತಂ ಸ್ವಶಾಖಾಯಾಂ ಪರೋಕ್ತಮವಿರೋಧಿ ಯತ್**

**ವಿದ್ವದ್ಭಿಸ್ತದನುಷ್ಠೇಯಂ ಅಗ್ನಿಹೋತ್ರಾದಿಧರ್ಮವತ್**

ವೇದವ್ಯಾಸರು ಒಂದೇ ಸಂಗತಿಯನ್ನು ಬೇರೆ ಬೇರೆ ರೀತಿಯಲ್ಲಿ ಅಲ್ಲಲ್ಲಿ ಹೇಳಿದ್ದು, ಎಲ್ಲವನ್ನೂ ನಡೆಸಲಾಗದ ಅಶಕ್ತರಾದವರು ಇಷ್ಟಿಷ್ಟಾದರೂ ಮಾಡಲಿ ಎಂಬ ಉದ್ದೇಶದಿಂದ ಎನ್ನುವ ಮಾತನ್ನು ಮಧ್ವಾಚಾರ್ಯರು ಸೂತ್ರಭಾಷ್ಯದಲ್ಲಿ ತಿಳಿಸಿದ್ದಾರೆ –

**ಸರ್ವಕರ್ಮಕೃತೌ ಯಸ್ಮಾದಶಕ್ತಾಃ ಸರ್ವಜಂತವಃ**

**ಶಾಖಾಭೇದಂ ಕರ್ಮಭೇದಂ ವ್ಯಾಸಸ್ತಸ್ಮಾದಚೀಕ್ಲೃಪತ್**



ವಿಶ್ವಾಮಿತ್ರಕಲ್ಪದಲ್ಲಿ ಏಳು ಪರಿಚ್ಛೇದಗಳಲ್ಲಿ ಈಗ ನಡೆಸುವ ಕ್ರಮದಲ್ಲಿಯೇ ಜಪಾನುಷ್ಠಾನವು ತಿಳಿಸಲಾಗಿದೆ. ಗಾಯತ್ರಿಕಲ್ಪದಲ್ಲಿಯೂ ಇದೇ ರೀತಿ ಸಂಧ್ಯಾವಿಧಿ ಸೋಪಸ್ಥಾನವಾಗಿ ಹೇಳಲ್ಪಟ್ಟಿದೆ.

**ಜಪಕರ್ಮ್ಮರಹಸ್ಯಂ ಸರಸ್ವತೀತಂತ್ರೇ ಉಕ್ತಂ** ಎನ್ನುವುದಾಗಿ ಯೋಗಿನೀತಂತ್ರ **ಪ್ರಕಾಶಂಹಿತೆ**ಯಂತು ದೊಡ್ಡ ಸದಾಚಾರಸ್ಮೃತಿಯನ್ನೆ ನಮ್ಮೆದುರು ನೀಡಿ ಜಪಾನುಕ್ರಮದ ಬಗ್ಗೆ ಸ್ಪಷ್ಟ ಉತ್ತರ ಕೊಟ್ಟಿದೆ. ಇದಂತೂ ಮೊದಲ ಬಾರಿಗೆ ಇಲ್ಲಿ ಹಸ್ತಪ್ರತಿಯಿಂದ ಅನಾವರಣಗೊಳ್ಳುತ್ತಿದೆ.

ಸ್ನಾನ

**ಉದ್ಧೃತೇತಿ ಮೃದಾಲಿಪ್ಯ ದ್ವಿಷಡಷ್ಟಷಡಕ್ಷರೈಃ**
**ತ್ರಿರ್ನ್ನಿಮಜ್ಜ್ಯಾಪ್ಯಸೂಕ್ತೇನ ಪ್ರೋಕ್ಷಯಿತ್ವಾ ಪುನಸ್ತತಃ**
**ಮೃದಾಲಿಪ್ಯ ನಿಮಜ್ಯ ತ್ರಿಃ ತ್ರಿರ್ಜ್ಜಪೇದಘಮರ್ಷಣಮ್**
**ಸ್ರಷ್ಟಾರಂ ಸರ್ವಲೋಕಾನಾಂ ಸ್ಮೃತ್ವಾ ನಾರಾಯಣಂ ಪರಮ್**
**ಕೃತ್ವಾ ಸ್ನಾನಂ ಚರೇಚ್ಛಂಖಮುದ್ರಯಾ ಮೂರ್ಧ್ನಿ ಸಂಸ್ಥಿತಮ್**
**ಸರ್ವಾಂಗಸಿದ್ಧಿದಂ ದೇವಂ ಪುಂಸೂಕ್ತೇನಾಭಿಷೇಚಯೇತ್**

ನಿರ್ಮಾಲ್ಯತೀರ್ಥ

**ತತೋ ನಿರ್ಮ್ಮಾಲ್ಯತೀರ್ಥಂ ಚ ಮೂರ್ಧ್ನಿ ಧೃತ್ವಾ ಪಿಬೇದಪಿ**

ಆಚಮನ

**ಏವಂ ಚತುರ್ವಿಂಶತಿಭಿಃ ಕೇಶವಾದ್ಯೈರ್ಜ್ಜಲಂ ಸ್ಪೃಶೇತ್**

ಪುಂಡ್ರಧಾರಣೆ

**ವಿಷ್ಣೋರ್ನ್ನುಕಂ ಇತಿ ಧ್ಯಾತ್ವಾ ಗೋಪೀಚಂದನಮಾದರಾತ್**
**ಸಂಮರ್ದ್ಯ ಕೇಶವಾದ್ಯೈಶ್ಚ ದ್ವಿಷಣ್ಣಾಮಾನಿ ಧಾರಯೇತ್**

ಪವಿತ್ರಧಾರಣೆ

**ಅನಾಮಿಕಾಯಾಂ ಸೌವರ್ಣ್ಣಪವಿತ್ರಂ ದಕ್ಷಿಣೇ ಕರೇ**

ತುಳಸೀಮಾಲೆ ಧಾರಣೆ

ತುಳಸೀಮಣಿಮಾಲಾಶ್ಚ ಕೌಶೇಯಂ ಚಾಕ್ಷರಾಂತಿಕಮ್

ಉತ್ತರೀಯಧಾರಣೆ

ಉತ್ತರೀಯಂ ತತೋ ಧೃತ್ವಾ ದ್ವಿವಾರಂ ಪುನರಾಚಮೇತ್

ಪ್ರಾಣಾಯಾಮ

ಪ್ರಾಣಾಯಾಮಂ ಚರೇತ್ತಚ್ಚ ತ್ರಿವಿಧಂ ಪರಿಕೀರ್ತಿತಮ್
ಶ್ರೀಭೂದುರ್ಗಾಶ್ಚ ತನ್ನಾಥಾನ್ ಗಿರಂ ವಾಣೀಮಜೇರಣೌ
ಜ್ಞಾತ್ವಾ ಸಂಖ್ಯಾವಿಶೇಷಂ ಚ ಮಂತ್ರೋತ್ಪತ್ತಿಕ್ರಮಂ ತಥಾ
ಓಂಕಾರಾಂತರ್ಗ್ಗತಂ ಸ್ವಾತ್ಮಹೃದಂ ಶ್ವಾಸಪತಿಂ ಪರಮ್
ಧ್ಯಾಯೇನ್ನಾಡೀಂ ಪಿಂಗಳಾಖ್ಯಾಂ ತತ್ರ ಪೂರ್ವೋಕ್ತದೇವತಾಃ
ಪುರುಷಾಣಿ ಹರೇರ್ಧ್ಯಾಯನ್ ರೇಚಕಂ ತು ಸಮಾಚರೇತ್
ಇಳಾ ತತ್ರೋಕ್ತದೇವಾಶ್ಚ ಶ್ರೀರೂಪಾಣಿ ಹರೇಸ್ತಥಾ
ಧ್ಯಾಯನ್ ಸ್ವತಂತ್ರವಶಗಂ ಅಖಿಲಂ ಪೂರಕಂ ಚರೇತ್
ಶರೀರಸ್ಥಾನ್ ಸುರಾನ್ ವಿಷ್ಣುಂ ಸುಷುಮ್ನಾಕಂಜದೇವತಾಃ
ಹರೀರೌ ಹೃದ್ಗತೌ ಸರ್ವಂ ಧ್ಯಾಯನ್ ಕುಂಭಕಮಾಚರೇತ್

ಸಂಕಲ್ಪ–ಮಾರ್ಜನ

ತತಃ ಸಂಕಲ್ಪ್ಯ ಸಂಧ್ಯಾದೌ ಮಾರ್ಜ್ಜನಂ ಕಾರಯೇತ್ಸುಧೀಃ

ಮಂತ್ರಾಚಮನ

ಮಂತ್ರಿತಂ ಸೂರ್ಯಮಂತ್ರೇಣ ಪೀತ್ವಾಂಭಃ ಪುನರಾಚಮೇತ್

ಪುನರ್ಮಾರ್ಜನ

ಪುನಶ್ಚ ಮಾರ್ಜ್ಜನಂ ಕೃತ್ವಾ ಪುನರಾಚಮ್ಯ ಪೂರ್ವವತ್

ಅರ್ಘ್ಯದಾನ

ಪ್ರಾಣಾನಾಯಮ್ಯ ಗಾಯತ್ರ್ಯಾ ರವೇರುದಯತಃ ಪುರಾ



ಅರ್ಘ್ಯಂ ಸೂರ್ಯಸ್ಥಿತಂ ವಿಷ್ಣುಂ ಧ್ಯಾಯನ್ ತ್ರಿಃ ಪರಿಕಲ್ಪಯೇತ್

ಉದ್ಧೃತ್ಯ ಚಕ್ಷುಷ್ಕೋಟ್ಯಂತಮೂರ್ಧ್ವಮಂಭೋ ವಿನಿಕ್ಷಿಪೇತ್

ತದಂಭೋ ವಜ್ರಸದೃಶಂ ಭೂತ್ವಾ ಬ್ರಹ್ಮವರೋದ್ಧತಾನ್

ಹತ್ವಾ ಭೂಮೌ ಪಾತಯತಿ ರವಿಮಂಡಲರೋಧಕಾನ್

ಪುನಃಪುನಸ್ತೇ ವರ್ಧಂತೇ ಪ್ರಾತಃ ಸಾಯಂ ಹತಾ ಅಪಿ

ಅತೋ ನಿತ್ಯಾರ್ಘ್ಯದಾನೇನ ಪ್ರೀಯತೇ ಸೂರ್ಯಗೋ ಹರಿಃ

ತರ್ಪಣ

ಕರನ್ಯಾಸಂ ತತಃ ಕುರ್ಯಾತ್ ಕೇಶವಾದೀಂಶ್ಚ ತರ್ಪಯೇತ್

ಆತ್ಮಪ್ರದಕ್ಷಿಣೆ

ಧ್ಯಾಯನ್ ವಿಷ್ಣುಂ ಮಹಾಭಕ್ತ್ಯಾ ತತಃ ಕುರ್ಯಾತ್ಪ್ರದಕ್ಷಿಣಮ್

ದಿಗ್ಬಂಧ

ತತಃ ಶ್ರೀಹರಿಚಕ್ರೇಣ ಬಹಿರಂತಃಸ್ಥಿತೇನ ಚ

ಧ್ಯಾನೇನಾಂತರ್ಬಹಿರ್ದೈತ್ಯಾನ್ ದೂರೀಕೃತ್ಯಾಸುರೋತ್ತಮಾನ್

ಪ್ರಾರ್ಥನೆ – ಕರಶುದ್ಧಿ – ಗುರುನಮಸ್ಕಾರ

ಪ್ರಾರ್ಥ್ಯ ಕೃತ್ವಾ ಹಸ್ತಶುದ್ಧಿಂ ಗುರೂನ್ನತ್ವಾಽಥ ರೂಪಿಣಮ್

ಪಾಪಪುರುಷವಿಸರ್ಜನ

ಕಲಿಂ ನಾಭಿಸ್ಥಿತಾದ್ವಾಯೋಃ ಶೋಷಯೇದ್ವಾಯುಬೀಜಕಮ್

ಜಪ್ತ್ವಾ ಯಮಿತಿ ಹೃದ್ಯಗ್ನಿಂ ಧ್ಯಾತ್ವಾ ಜಪ್ತ್ವಾಗ್ನಿಬೀಜಕಮ್

ದಗ್ಧ್ವಾ ತಂ ಮೂರ್ಧ್ನಿಗಂ ವಾರಿಪತಿಂ ಜಪ್ತ್ವಾ ವಮಿತ್ಯಪಿ

ಪೀಯೂಷವೃಷ್ಟ್ಯಾ ಸ್ನಾತೋಽಸ್ಮೀತ್ಯೇವಂ ಜ್ಞಾನೀ ವಿಚಿಂತಯೇತ್

ತತ್ವನ್ಯಾಸ – ಮಾತೃಕಾನ್ಯಾಸ

ವೈಷ್ಣವೇಷು ಚ ಮಂತ್ರೇಷು ತತ್ವಾನಾಂ ನ್ಯಸನಂ ಪುರಾ

ಪಶ್ಚಾತ್ತು ಮಾತೃಕಾನ್ಯಾಸಂ ಪೂಜಾಯಾಮನ್ಯಥಾ ಭವೇತ್

ಪ್ರಾಣಾಯಾಮ – ಕರನ್ಯಾಸ

**ಪುನಃ ಪ್ರಾಣಾಯಾಮಪೂರ್ವಂ ಅಂಗುಳೀನ್ಯಾಸಮಾಚರೇತ್**

ಗಾಯತ್ರೀಜಪ

**ಹೃದಿ ಸ್ಥಿತಂ ರವಿಂ ಧ್ಯಾತ್ವಾ ತದ್ಗಂ ನಾರಾಯಣಂ ಪರಮ್**

**ವಿಶ್ವಾಮಿತ್ರಾಖ್ಯಗಾಯತ್ರೀಂ ಸಂಧ್ಯಾಂಗತ್ವೇನ ವೈ ಜಪೇತ್**

**ತತಂ ತದ್ದೇಶಕಾಲೋರುಗುಣೈಃ ಸವಿತುರಸ್ಯ ತು**

**ಸೃಷ್ಟ್ಯಾದಿಕರ್ತುರ್ದೇವಸ್ಯ ತದ್ವರೇಣ್ಯಂ ಸಮಸ್ತಶಃ**

**ಭಾರತಿಜ್ಞಾನದಾನಂ ತತ್ ಧ್ಯೇಯಂ ಜ್ಞಾನಾದಿಸಾಧನಮ್**

**ಜ್ಞಾನಕರ್ಮೇಂದ್ರಿಯವ್ರಾತಂ ಪ್ರೇರಯತ್ವಿತಿ ಚಿಂತಯೇತ್**

**ಓಂನಾಮಾ ಭಗವಾನ್ ವಿಷ್ಣುಃ ಅಖಿಲೋಚ್ಚಗುಣತ್ವತಃ**

**ಓತತ್ತ್ವವಾಚೀ ಹ್ಯೋಂಕಾರೋ ವಕ್ತ್ಯಸೌ ತದ್ಗುಣೋತತಾಮ್**

**ಓಮಶೇಷಗುಣಾಧಾರ ಇತಿ ಪೂರ್ಣ್ಣಗುಣೋ ಹ್ಯಸೌ**

**ಅನಂತಕಲ್ಯಾಣಗುಣೋ ವಿಷ್ಣುರೋಮಿತ್ಯುದಾಹೃತಃ**

**ಭೂಃ ಪೂರ್ಣ್ಣಸ್ತು ಭುವಃ ಶ್ರೀಶಃ ಸಮ್ಯಗ್ ಜ್ಞಾನಾತ್ಮಕಃ ಸುವಃ**

ಇತರ ಮಂತ್ರಜಪ

**ಇತಿ ಜಪ್ತ್ವಾ ತು ಗಾಯತ್ರೀಂ ಮಹಾಮಂತ್ರಾನ್ ಜಪೇತ್ತತಃ**

ದಿಗುಪಸ್ಥಾನ

**ದತ್ವಾ ನತ್ವಾಥ ದೇವಾಂಶ್ಚ ಸಮ್ಯಗೇವಂ ಸಮಾಚರೇತ್**

ಮಾಧ್ಯಾಹ್ನಿಕಜಪ

**ಪುನರ್ಮಾಧ್ಯಾಹ್ನಿಕಸ್ನಾನಂ ಸಂಧ್ಯಾದೀಂಶ್ಚ ಸಮಾಚರೇತ್**

ಬ್ರಹ್ಮಯಜ್ಞ

**ಬ್ರಹ್ಮಯಜ್ಞಂ ಸರ್ವವೇದಶಾಸ್ತ್ರೇಡ್ಯಂ ಸಂಸ್ಮರನ್ ವದೇತ್**

ಶ್ರವಣ – ಪ್ರವಚನ



**ಹರೇಃ ಕಥಾಶ್ಚ ಶೃಣುಯಾತ್ ಭಕ್ತ್ಯಾ ಶಿಷ್ಯೇಭ್ಯ ಆದಿಶೇತ್**

ದೇವಪೂಜೆ

**ಧರ್ಮೇಣೇಜ್ಯಾಸಾಧನಾನಿ ಸಂಪಾದ್ಯ ಹರಿಮರ್ಚಯೇತ್**

**ಪೂಜಾ ಚ ಪೀಠಪೂಜಾ ಚ ಕಲಶಾರ್ಚನಮಾದರಾತ್**

**ಶಂಖಪೂಜಾ ಚ ದೇವಸ್ಯಾವರಣಾನಿ ಪ್ರಪೂಜಯೇತ್**

ಸಾಯಂಸಂಧ್ಯೆ – ಪೂಜೆ

**ಸ್ವಯಂ ಭುಕ್ತ್ವಾ ಹಸ್ತಮುಖಶುದ್ಧಾಚಮನಪೂರ್ವಕಮ್**

**ಕೃತ್ವಾ ತೀರ್ಥಂ ಚ ತುಳಸೀಂ ಗೃಹೀತ್ವಾ ಸಾಯಮಂಜಸಾ**

**ಸಂಧ್ಯಾಂ ಚ ದೇವಪೂಜಾಂ ಚ ಕೃತ್ವಾ ಹರ್ಯರ್ಪಣಂ ಚರೇತ್**

ಇಲ್ಲಿನ ಹಲವಾರು ಪೂರ್ವಾಪರ ವಾಕ್ಯಗಳ ಜತೆಯಲ್ಲಿ ಆಚಾರ್ಯಮಧ್ವರು ಸದಾಚಾರಸ್ಮೃತಿಗ್ರಂಥವನ್ನು ರಚಿಸಿದ್ದಾರೆ. ಆದುದರಿಂದ ಇದು ಹೆಚ್ಚು ಅಧಿಕೃತವಾದ ಸಂಧ್ಯಾಸಮೀಕ್ಷೆ. ಇಲ್ಲಿನ ಪ್ರತಿಯೊಂದೂ ಇಂದಿನ ಜಪಾನುಷ್ಠಾನದಲ್ಲಿ ಸೇರಿದೆ. ನಡುನಡುವೆ ಇನ್ನೂ ವಿವರಣೆಯ ಮಾತುಗಳು ಮೂಲಕೋಶದಲ್ಲಿವೆ (ಅರ್ಘ್ಯದಾನದ ಮೊದಲು ಮತ್ತೊಮ್ಮೆ ಪ್ರಾಣಾಯಾಮ ಮಾತ್ರ ನಾವಿಂದು ಗ್ರಂಥತಃ ಬಿಟ್ಟಿದ್ದೇವೆ ಎಂದೆನಿಸುತ್ತದೆ.) ಕೇಶವಾದಿ ತರ್ಪಣದ ಅನಂತರ ಆತ್ಮಪ್ರದಕ್ಷಿಣೆ ಇಲ್ಲಿನ ಹೇಳಿಕೆ ವ್ಯತ್ಯಾಸವಾಗಿದೆಯೇನೋ? ಏನಿದ್ದರೂ ಈಗ ಚಾಲ್ತಿಯಲ್ಲಿರುವ ಸಂಧ್ಯಾವಂದನೆಯ ಎಲ್ಲ ಕ್ರಿಯೆಗಳಿಗೂ ಬೇರೆ ಬೇರೆ ಗ್ರಂಥ ಗಳಲ್ಲಿ ವಿಧವಿಧದಿಂದ ಸಮಾಧಾನದ ಉತ್ತರಗಳು ಸಿಕ್ಕಿದ್ದರೂ ಪ್ರಕಾಶಸಂಹಿತೆ ಸಮಗ್ರ ಉತ್ತರ ನೀಡುವ ಜತೆಗೆ ಸಂಶಯಗೊಂಡ ಜಾಪಕರನ್ನು ಮತ್ತೆ ಎಬ್ಬಿಸಿ ಪ್ರಯತ್ನಶೀಲರನ್ನಾಗಿಸುವಲ್ಲಿ ಸಫಲವಾಗಿದೆ.

ಎಲ್ಲ ಯಜ್ಞಗಳಲ್ಲಿ ಶ್ರೇಷ್ಠವಾದ ಜಪ ನಮ್ಮ ಯಜ್ಞವಾಗಲಿ –

**ಜಪಯಜ್ಞಾಃ ದ್ವಿಜಾಃ ಸ್ಮೃತಾಃ** (ಬ್ರಹ್ಮಾಂಡ)

**ಆಲಂಭಯಜ್ಞಃ ಕ್ಷತ್ರಸ್ಯ ಹವಿರ್ಯಜ್ಞೋ ವಿಶಾಮಪಿ**



**ಪರಿಚರ್ಯಯಜ್ಞಃ ಶೂದ್ರಃ ಜಪಯಜ್ಞೋ ದ್ವಿಜೋತ್ತಮಃ** (ಮತ್ಸ್ಯಪುರಾಣ)

**ಕ್ಷತ್ರಾ ಆಲಂಭಯಜ್ಞಾಸ್ತು ವೀರ್ಯಯಜ್ಞಾ ವಿಶಃ ಸ್ಮೃತಾಃ**

**ಶೂದ್ರಾ ಪರಿಚಾರಯಜ್ಞಾ ಜಪಯಜ್ಞಾಸ್ತು ಬ್ರಾಹ್ಮಣಾಃ**

**ಶುಶ್ರೂಷಾಜೀವಿನಃ ಶೂದ್ರಾ ವೈಶ್ಯಾ ವಿಪಣಿಜೀವಿನಃ**

**ಅನಿಷ್ಟನಿಗ್ರಹಃ ಕ್ಷತ್ರಾ ವಿಪ್ರಾಃ ಸ್ವಾಧ್ಯಾಯಜೀವಿನಃ**

**ತಪಸಾ ಶೋಭತೇ ವಿಪ್ರೋ ರಾಜನ್ಯಃ ಪಾಲನಾದಿಭಿಃ**

**ಆತಿಥ್ಯೇನ ತಥಾ ವೈಶ್ಯಃ ಶೂದ್ರೋ ದಾಸ್ಯೇನ ಶೋಭತೇ** (ಅನುಶಾಸನ)

**ಜಪನಿಷ್ಠೋ ದ್ವಿಜಃ ಶ್ರೇಷ್ಠಃ ಸರ್ವಯಜ್ಞಫಲಂ ಜಪಾತ್**

**ಸರ್ವೇಷಾಮೇವ ಯಜ್ಞಾನಾಂ ಜಪಯಜ್ಞಃ ಪ್ರಶಸ್ಯತೇ**

**ಆಲಂಭಯಜ್ಞಾನುತ್ಸೃಜ್ಯ ಜಪಹೋಮಪರಾಯಣಾಃ**

**ಧ್ಯಾಯಂತೋ ಮನಸಾ ವಿಷ್ಣುಂ ಗಚ್ಛಂತಿ ಪರಮಾಂ ಗತಿಮ್** (ಮಹಾಭಾರತ)

ನಾವು ಮನುಷ್ಯರು, ಮಾಡುವುದೇ ಕಡಿಮೆ. ಅದನ್ನಾದರೂ ಪೂರ್ಣವನ್ನಾಗಿಸಿಕೊಳ್ಳುವ –

**ಚರಂತಿ ದೇವಾ ವಿಹಿತಂ ಸಮಸ್ತಂ**

**ಅರ್ಧಮೇವ ಮುನಯೋ ದಶಾಂಶತೋ ಮನುಷ್ಯಾಃ**

ಮನುಷ್ಯರಿಗೆ ಆಚಾರಪೂರ್ಣತೆಯೇ ಪ್ರಧಾನ. ಅದಕ್ಕೆ ಧಕ್ಕೆ ಬಾರದಂತೆ ನಮ್ಮ ಇತರ ವೃತ್ತಿಗಳಿರಲಿ.

**ಜ್ಞಾನದಾನಮೇವ ದೇವಾನಾಂ ವಿಹಿತಮ್**

**ತಪ ಏವ ಋಷೀಣಾಂ ಆಚಾರ ಏವ ಮಾನುಷಾಣಾಮ್**

**ತದವಿರೋಧೇನಾನ್ಯಾನಿ ಕರಣೀಯಾನಿ**

ಅಂತಹ ಸದಾಚಾರಶ್ರೇಷ್ಠವಾದ ಸಂಧ್ಯಾವಂದನೆಯನ್ನು ಇಲ್ಲಿ ಚಿಂತಿಸಲಾಗಿದೆ. ತಿಳಿಯದೇ ಮಾಡುವುದೂ, ತಿಳಿದೂ ಮಾಡದಿರುವುದೂ ಎರಡೂ ತಪ್ಪೇ. ಜ್ಞಾನ-ಕರ್ಮಗಳ ಸೇತುವೆ ಇದು. ಕುಮಾರಿಲಭಟ್ಟರ



ಮಾತಿನಂತೆ ಸಾಧಕ ಹಕ್ಕಿಯ ಎತ್ತರ ಜಿಗಿತಕ್ಕೆ ವಿಷ್ಣುಪದದಲ್ಲಿ ಸ್ವಾನಂದವಿಹಾರಕ್ಕೆ ಈ ಎರಡು ರೆಕ್ಕೆ ಅನಿವಾರ್ಯ –

**ಉಭಾಭ್ಯಾಮೇವ ಪಕ್ಷಾಭ್ಯಾಂ ಖೇ ಯಥಾ ಪಕ್ಷಿಣಾಂ ಗತಿಃ**
**ತಥೈವ ಜ್ಞಾನಕರ್ಮಭ್ಯಾಂ ಪ್ರಾಪ್ಯತೇ ಶಾಶ್ವತೀ ಗತಿಃ**

ಅರಿವು ಆಚರಣೆ ಜತೆಗಿದ್ದರೇನೆ ಮುಕ್ತಿ ಎಂದು ವ್ಯಾಸವಾಣಿ –

**ಜ್ಞಾತ್ವಾಜ್ಞಾತ್ವಾ ಚ ಕರ್ಮಾಣಿ ಜನೋ ಯೋಯೋಽನು ತಿಷ್ಠತಿ**
**ವಿದುಷಃ ಕರ್ಮಸಿದ್ಧಿಃ ಸ್ಯಾತ್ ತಥಾ ನಾವಿದುಷೋ ಭವೇತ್**
**ಜ್ಞಾನಂ ಕರ್ಮ ಚ ಸಂಯುಕ್ತಂ ಮುಕ್ತ್ಯರ್ಥಂ ಕಥಿತಂ ಯಥಾ**

ಬಲವುಳ್ಳ ಸಂಪತ್ತುಳ್ಳ ಅರಿವುಳ್ಳ ನಮಗೆ **ಯಜುರ್ವೇದವು** ಹೇಳಿದೆ ನೀನೇ ದೇಹವನ್ನು ಚೆನ್ನಾಗಿಡು.

**ಸ್ವಯಂ ವಾಜಿನ್ ತನ್ವಂ ಕಲ್ಪಯಸ್ವ**

ನಿನಗಾಗಿಯೇ ನೀನೇ ಜಪಿಸು. ನೀನೇ ಆನಂದಪಡು.

**ಸ್ವಯಂ ಯಜಸ್ವ ಸ್ವಯಂ ಜುಷಸ್ವ**

ಇನ್ನೊಬ್ಬರಿಂದಾಗದು. ನೀನೇ ನಡೆಸು. ಸಿದ್ಧನಾಗು.

**ಮಹಿಮಾ ತೇಽನ್ಯೇನ ನ ಸನ್ನಶೇ**

ಅಶನಪಾನದಿಂದ ದೇಹ ದೃಢವಾಗಲಿದೆ ಎನ್ನಲಾಗದು. ಅನ್ನಪಾನವೂ ಹೇಸಿಗೆಯಾಗಲಿದೆ ಜಪಾನುಷ್ಠಾನ ಸರಿಯಾಗಿ ಆಗದಿದ್ದರೆ. ಮೀಯದೇ ತಿಂದವನ ಊಟ ಮಲವಾದಂತೆ ಎಂದು ಪುರಾಣಗಳು –

**ಅಸ್ನಾಯೀ ಚ ಮಲಂ ಭುಂಕ್ತೇ ಅಜಪೀ ಪೂಯಶೋಣಿತಮ್**
**ಅಕೃತ್ವಾ ತರ್ಪಣಂ ನಿತ್ಯಂ ಪಿತೃಹಾ ಚೋಪಜಾಯತೇ**
**ಬ್ರಹ್ಮಹತ್ಯಾಸಮಂ ಪಾಪಂ ದೇವಾನಾಮಪ್ಯಪೂಜನೇ**
**ಸಂಧ್ಯಾಕೃತ್ಯಮಕೃತ್ವಾ ಚ ಸೂರ್ಯಂ ಹಂತಿ ಚ ಪಾಪಕೃತ್** (ಪದ್ಮಪುರಾಣ)
**ಅಹುತ್ವಾ ಚ ಕ್ರಿಮೀನ್ ಭುಂಕ್ತೇ ಅದತ್ವಾ ವಿಷಭೋಜನಮ್** (ವಿಷ್ಣುಪುರಾಣ)



ಮಾಡಿದ್ದು ಕಡಿಮೆಯಿದ್ದರೂ ತಿಳಿದಾಗ ಹೆಚ್ಚಾಗುವುದು. ಹೆಚ್ಚು ಮಾಡಿದ್ದರೂ ಅರಿವು ಇಲ್ಲದಾಗ ವ್ಯರ್ಥವಾಗುವುದು. ಇದು ಮಹಾಭಾರತದ ಆದೇಶ.

**ಅಲ್ಪಮಾತ್ರಂ ಕೃತೋ ಧರ್ಮ್ಮೋ ಭವೇತ್ ಜ್ಞಾನವತಾಂ ಮಹಾನ್**
**ಮಹಾನಪಿ ಕೃತೋ ಧರ್ಮ್ಮೋ ಹ್ಯಜ್ಞಾನಾನ್ನಿಷ್ಫಲೋ ಭವೇತ್**

ಸದಾಚರಣೆಯ ಬಗ್ಗೆ ಕೇಳಿದರೂ, ಇನ್ನೊಬ್ಬರಿಗೆ ಹೇಳಿದರೂ, ಧರ್ಮಕರ್ಮಗಳನ್ನು ನಡೆಸಿದರೂ ಮತ್ತು ಕಂಡರೂ, ಒಳ್ಳೆಯದ್ದನ್ನು ಆಗಲೆಂದು ಆಶಿಸಿದರೂ, ದೇವರ ಲೋಕಕ್ಕೆ ತೆರಳಲಿದೆ ಎಂದು ಧರ್ಮದೇವತೆಗೆ ಶ್ರೀಕೃಷ್ಣನ ಸಂದೇಶ –

**ಧರ್ಮಃ ಶ್ರುತೋ ವಾ ದೃಷ್ಟೋ ವಾ ಕಥಿತೋ ವಾ ಕೃತೋಽಪಿ ವಾ**
**ಅನುಮೋದಿತೋ ವಾ ರಾಜೇಂದ್ರ ನಯತೀಂದ್ರಪದಂ ನರಮ್**

ಹರಿಯ ಮತ್ತು ಜಗದ ಯಥಾರ್ಥ ಅರಿವೇ ಇಲ್ಲಿ ತತ್ವಜ್ಞಾನ ಅನ್ನುವುದಾಗಿ ಹೇಳಲಾಗಿದೆ –

**ಪರಾವರಜ್ಞೋ ಭೂತಾನಾಂ ಜ್ಞಾನವಾನ್ ತತ್ವವಿದ್ಭವೇತ್**

ದಕ್ಷಸ್ಮೃತಿಯಲ್ಲಿ ಸ್ಕಾಂದಪುರಾಣದ ಮಾತು ಹೀಗಿದೆ – ಸಂಧ್ಯಾವಂದನೆ ಮಾಡದವಗೆ ಇತರ ಯಾವ ಕರ್ಮಗಳನ್ನೂ ನಡೆಸುವ ಯೋಗ್ಯತೆಯಿಲ್ಲ. ಹಾಗೊಂದೊಮ್ಮೆ ಬಲಾತ್ಕಾರದಲ್ಲಿ ಸಂಧ್ಯಾವಂದನೆ ಮಾಡದೆ ಹೋಮ ಪೂಜೆ, ಅಡುಗೆ, ಪಾಠ ಇತ್ಯಾದಿಗಳನ್ನು ನಡೆಸಿದರೂ ಫಲ ದೊರೆಯದು –

**ಸಂಧ್ಯಾಹೀನೋಽಶುಚಿರ್ನಿತ್ಯಂ ಅನರ್ಹಃ ಸರ್ವಕರ್ಮ್ಮಸು**
**ಯದನ್ಯತ್ ಕುರುತೇ ಕರ್ಮ ನ ತಸ್ಯ ಫಲಭಾಗ್ ಭವೇತ್**

ಸಂಧ್ಯಾವಂದನೆಯನ್ನು ತಿಳಿಯದೇ ಮಾಡಿದರೂ ಜಪ ಮಾಡದಂತಾಗಿ ವ್ಯರ್ಥ ಜನ್ಮದವನಾಗುವನೆಂದು ಮರೀಚಿ –

**ಸಂಧ್ಯಾ ಯೇನ ನ ವಿಜ್ಞಾತಾ ಸಂಧ್ಯಾ ಯೇನಾನುಪಾಸಿತಾ**



**ಜೀವಮಾನೋ ಭವೇಚ್ಛೂದ್ರೋ ಮೃತಃ ಶ್ವಾ ಚಾಭಿಜಾಯತೇ**

ನೀಡಿದ್ದು ಬಹಳ ಕಡಿಮೆಯಾದರೂ ಆದಷ್ಟು ಆಳ ಹಾಗೂ ವಿಶಾಲವಾಗಿ ಸಮೀಕ್ಷೆಯನ್ನು ನಡೆಸಲಾಗಿದೆ.

ಶ್ರುತಿಯ ಸಂದೇಶದಂತೆ –

**ಬ್ರಹ್ಮಣಾ ತೇ ಬ್ರಹ್ಮಯುಜಾ ಯುನಜ್ಮಿ**

ಭಗವಂತನನ್ನು ಸೇರಿಸುವ ಭಗವಂತನಿಂದ ಕೂಡಿರುವ ವೇದದ ಅರಿವಿನಿಂದ ವೇದೋಕ್ತ ಕರ್ಮತಂತ್ರದಿಂದ ಸಾಧಕನನ್ನು ನಿನ್ನನ್ನು ಸೇರಿಸಿದ್ದೇನೆ.

**ಹರೀ ಸಖಾಯಾ ಸಧಮಾದ ಆಶು**

ಬಹಳ ಹತ್ತಿರವಿರುವ ಪ್ರಿಯಮಿತ್ರನಂತಿರುವ ಬಹುಬೇಗನೆ ವಸ್ತುವಿನೆಡೆಗೆ ಸಾಗಿ ವಿಶ್ವವನ್ನು ಹಿಡಿದಿಡುವ ಕಣ್ಣುಗಳೆರಡನ್ನು ನೀಡಿರುತ್ತೇನೆ.

ಹತ್ತಿರಹತ್ತಿರವಿರುವ ಮಾತಿಗೆ ಮಿತ್ರನಾದ ಎಲ್ಲೆಡೆಯಿಂದ ವಿಷಯ ಹಿಡಿದಿಟ್ಟು ಹರಿಯಬಿಡುವ ಕಿವಿಗಳೆರಡನ್ನು ಪಡೆದಿರುವೆ.

ಒಂದಕ್ಕೊಂದು ಹತ್ತಿರವಾದ ಒಂದಕ್ಕೊಂದು ಮಿತ್ರವಾದ ಒಂದಕ್ಕೊಂದು ಮುಂದೋಡಿ ಪ್ರಪಂಚವನ್ನು ಸೆಳೆಯುವ ಕಣ್ಣು ಕಿವಿಗಳೆರಡನ್ನು ಹೊಂದಿರುವೆ.

ದೇಹದ ಜತೆಗಿರುವ ಜಗತ್ತಿನೆಡೆಗೆ ಧಾವಿಸುವ ಜೀವನಿಗೆ ಆಪ್ತವಾದ ಎಲ್ಲವನ್ನೂ ಎಳೆಯುವ ಜ್ಞಾನೇಂದ್ರಿಯಗಳನ್ನು ಮತ್ತು ಕರ್ಮೇಂದ್ರಿಯಗಳನ್ನು ಹೊತ್ತಿರುವೆ.

**ಸ್ಥಿರಂ ರಥಂ ಸುಖಮಿಂದ್ರಾಧಿ ತಿಷ್ಠನ್**

ಗಟ್ಟಿಮುಟ್ಟಾದ ಸುಖವನ್ನು ತರುವ ಶರೀರರಥವನ್ನು ಪ್ರಪಂಚದೆಡೆಗೆ ಸಾಗುವ ಓ ಜೀವವೇ ಏರಿರುವೆ ಇಂದ್ರಿಯಗಡಣಗಳ ಒಡೆಯನಾದವನು ನೀನು.



ಮಾಡಿದ್ದು ಕಡಿಮೆಯಿದ್ದರೂ ತಿಳಿದಾಗ ಹೆಚ್ಚಾಗುವುದು. ಹೆಚ್ಚು ಮಾಡಿದ್ದರೂ ಅರಿವು ಇಲ್ಲದಾಗ ವ್ಯರ್ಥವಾಗುವುದು. ಇದು ಮಹಾಭಾರತದ ಆದೇಶ.

**ಅಲ್ಪಮಾತ್ರಂ ಕೃತೋ ಧರ್ಮೋ ಭವೇತ್ ಜ್ಞಾನವತಾಂ ಮಹಾನ್**
**ಮಹಾನಪಿ ಕೃತೋ ಧರ್ಮೋ ಹ್ಯಜ್ಞಾನಾನ್ನಿಷ್ಫಲೋ ಭವೇತ್**

ಸದಾಚರಣೆಯ ಬಗ್ಗೆ ಕೇಳಿದರೂ, ಇನ್ನೊಬ್ಬರಿಗೆ ಹೇಳಿದರೂ, ಧರ್ಮಕರ್ಮಗಳನ್ನು ನಡೆಸಿದರೂ ಮತ್ತು ಕಂಡರೂ, ಒಳ್ಳೆಯದ್ದನ್ನು ಆಗಲೆಂದು ಆಶಿಸಿದರೂ, ದೇವರ ಲೋಕಕ್ಕೆ ತೆರಳಲಿದೆ ಎಂದು ಧರ್ಮದೇವತೆಗೆ ಶ್ರೀಕೃಷ್ಣನ ಸಂದೇಶ –

**ಧರ್ಮಃ ಶ್ರುತೋ ವಾ ದೃಷ್ಟೋ ವಾ ಕಥಿತೋ ವಾ ಕೃತೋಽಪಿ ವಾ**
**ಅನುಮೋದಿತೋ ವಾ ರಾಜೇಂದ್ರ ನಯತೀಂದ್ರಪದಂ ನರಮ್**

ಹರಿಯ ಮತ್ತು ಜಗದ ಯಥಾರ್ಥ ಅರಿವೇ ಇಲ್ಲಿ ತತ್ವಜ್ಞಾನ ಅನ್ನುವುದಾಗಿ ಹೇಳಲಾಗಿದೆ –

**ಪರಾವರಜ್ಞೋ ಭೂತಾನಾಂ ಜ್ಞಾನವಾನ್ ತತ್ವವಿದ್ಭವೇತ್**

ದಕ್ಷಸ್ಮೃತಿಯಲ್ಲಿ ಸ್ಕಾಂದಪುರಾಣದ ಮಾತು ಹೀಗಿದೆ – ಸಂಧ್ಯಾವಂದನೆ ಮಾಡದವಗೆ ಇತರ ಯಾವ ಕರ್ಮಗಳನ್ನೂ ನಡೆಸುವ ಯೋಗ್ಯತೆಯಿಲ್ಲ. ಹಾಗೊಂದೊಮ್ಮೆ ಬಲಾತ್ಕಾರದಲ್ಲಿ ಸಂಧ್ಯಾವಂದನೆ ಮಾಡದೆ ಹೋಮ ಪೂಜೆ, ಅಡುಗೆ, ಪಾಠ ಇತ್ಯಾದಿಗಳನ್ನು ನಡೆಸಿದರೂ ಫಲ ದೊರೆಯದು –

**ಸಂಧ್ಯಾಹೀನೋಽಶುಚಿರ್ನಿತ್ಯಂ ಅನರ್ಹಃ ಸರ್ವಕರ್ಮಸು**
**ಯದನ್ಯತ್ ಕುರುತೇ ಕರ್ಮ ನ ತಸ್ಯ ಫಲಭಾಗ್ ಭವೇತ್**

ಸಂಧ್ಯಾವಂದನೆಯನ್ನು ತಿಳಿಯದೇ ಮಾಡಿದರೂ ಜಪ ಮಾಡದಂತಾಗಿ ವ್ಯರ್ಥ ಜನ್ಮದವನಾಗುವನೆಂದು ಮರೀಚಿ –

**ಸಂಧ್ಯಾ ಯೇನ ನ ವಿಜ್ಞಾತಾ ಸಂಧ್ಯಾ ಯೇನಾನುಪಾಸಿತಾ**



**ಜೀವಮಾನೋ ಭವೇಚ್ಛೂದ್ರೋ ಮೃತಃ ಶ್ವಾ ಚಾಭಿಜಾಯತೇ**

ನೀಡಿದ್ದು ಬಹಳ ಕಡಿಮೆಯಾದರೂ ಆದಷ್ಟು ಆಳ ಹಾಗೂ ವಿಶಾಲವಾಗಿ ಸಮೀಕ್ಷೆಯನ್ನು ನಡೆಸಲಾಗಿದೆ.

ಶ್ರುತಿಯ ಸಂದೇಶದಂತೆ –

**ಬ್ರಹ್ಮಣಾ ತೇ ಬ್ರಹ್ಮಯುಜಾ ಯುನಜ್ಮಿ**

ಭಗವಂತನನ್ನು ಸೇರಿಸುವ ಭಗವಂತನಿಂದ ಕೂಡಿರುವ ವೇದದ ಅರಿವಿನಿಂದ ವೇದೋಕ್ತ ಕರ್ಮತಂತ್ರದಿಂದ ಸಾಧಕನನ್ನು ನಿನ್ನನ್ನು ಸೇರಿಸಿದ್ದೇನೆ.

**ಹರೀ ಸಖಾಯಾ ಸಧಮಾದ ಆಶು**

ಬಹಳ ಹತ್ತಿರವಿರುವ ಪ್ರಿಯಮಿತ್ರನಂತಿರುವ ಬಹುಬೇಗನೆ ವಸ್ತುವಿನೆಡೆಗೆ ಸಾಗಿ ವಿಶ್ವವನ್ನು ಹಿಡಿದಿಡುವ ಕಣ್ಣುಗಳೆರಡನ್ನು ನೀಡಿರುತ್ತೇನೆ.

ಹತ್ತಿರಹತ್ತಿರವಿರುವ ಮಾತಿಗೆ ಮಿತ್ರನಾದ ಎಲ್ಲೆಡೆಯಿಂದ ವಿಷಯ ಹಿಡಿದಿಟ್ಟು ಹರಿಯಬಿಡುವ ಕಿವಿಗಳೆರಡನ್ನು ಪಡೆದಿರುವೆ.

ಒಂದಕ್ಕೊಂದು ಹತ್ತಿರವಾದ ಒಂದಕ್ಕೊಂದು ಮಿತ್ರವಾದ ಒಂದಕ್ಕೊಂದು ಮುಂದೋಡಿ ಪ್ರಪಂಚವನ್ನು ಸೆಳೆಯುವ ಕಣ್ಣು ಕಿವಿಗಳೆರಡನ್ನು ಹೊಂದಿರುವೆ.

ದೇಹದ ಜತೆಗಿರುವ ಜಗತ್ತಿನೆಡೆಗೆ ಧಾವಿಸುವ ಜೀವನಿಗೆ ಆಪ್ತವಾದ ಎಲ್ಲವನ್ನೂ ಎಳೆಯುವ ಜ್ಞಾನೇಂದ್ರಿಯಗಳನ್ನು ಮತ್ತು ಕರ್ಮೇಂದ್ರಿಯಗಳನ್ನು ಹೊತ್ತಿರುವೆ.

**ಸ್ಥಿರಂ ರಥಂ ಸುಖಮಿಂದ್ರಾಧಿ ತಿಷ್ಠನ್**

ಗಟ್ಟಿಮುಟ್ಟಾದ ಸುಖವನ್ನು ತರುವ ಶರೀರರಥವನ್ನು ಪ್ರಪಂಚದೆಡೆಗೆ ಸಾಗುವ ಓ ಜೀವವೇ ಏರಿರುವೆ ಇಂದ್ರಿಯಗಡಣಗಳ ಒಡೆಯನಾದವನು ನೀನು.



**ಪ್ರಜಾನನ್ ವಿದ್ವಾನುಪಯಾಹಿ ಸೋಮಮ್**

ಜ್ಞಾನಾನಂದಪೂರ್ಣನಾದ ಭಗವಂತನನ್ನು ತಿಳಿಯುತ್ತ ಅವನೆಡೆಗೆ ಸಾಗಿ ಅವನನ್ನು ಪಡೆಯುವವನಾಗು.

ಅದಕ್ಕಾಗಿ ಇಂದ್ರಿಯಗಳನ್ನು ಮನಸ್ಸಿನ ಹತ್ತಿರ ತಾ. ಮನಸ್ಸನ್ನು ಎತ್ತರದ ದೇವನಲ್ಲಿ ನಿಲ್ಲಿಸು. ಅದರಿಂದ ನೀನು ಎತ್ತರಕ್ಕೆ ಸಾಗು. ಹೊತ್ತಗೆಯ ಹತ್ತಿರ ಕಣ್ಣಿರಲಿ. ಕಂಡವರ ಸನಿಹ ಕಿವಿ ಸಾಗಲಿ. ಸುಖದ ಸಾಮ್ರಾಜ್ಯದೆಡೆಗೆ ಯಾತ್ರೆ ಮುಂದರಿಯಲಿ.

**ಯೇನ ದೇವಾ ಜ್ಯೋತಿಷೋರ್ಧ್ವಾ ಉದಾಯನ್**

**ಯೇನಾದಿತ್ಯಾ ವಸವೋ ಯೇನ ರುದ್ರಾಃ**

**ಯೇನಾಂಗಿರಸೋ ಮಹಿಮಾನಮಾನಶುಃ**

**ತೇನೈತು ಯಜಮಾನಃ ಸ್ವಸ್ತಿ** (ಕಾಠಕಸಂಹಿತೆ, ಮೈತ್ರಾಯಣೀಯಸಂಹಿತೆ)

ಯಾವ ಬೆಳಕನ್ನು ಅವಲಂಬಿಸಿ ಎಲ್ಲ ಬಗೆಯ ದೇವತೆಗಳು ಬೆಳಗಿದರೋ, ಆ ಬೆಳಕೇ ಜಪಿಸುವವನನ್ನೂ ಬೆಳಗಿಸಲಿ.

**ಪ್ರಾಂಚಂ ಯಜ್ಞಂ ಪ್ರಣಯತಾ ಸಖಾಯಃ**

ಮಿತ್ರರೇ ಹಿಂದಿನಿಂದ ಬಂದ ಜಪಯಜ್ಞವನ್ನು ಮುಂದುವರಿಸಿರಿ –

**ವಯಂ ಸೋಮ ವ್ರತೇ ತವ**

ಓ ಸರ್ವಜ್ಞಮೂರುತಿಯೇ ನಾವು ನಿನ್ನ ಸೇವೆಯಲ್ಲಿ.

**ಶೃಣೋತು ದೇವಃ ಸವಿತಾ ಹವಂ ಮೇ**

(ಮೈತ್ರಾಯಣೀಯಸಂಹಿತೆ, ವಾಜಸನೇಯಸಂಹಿತಾ)

ನನ್ನ ಕರೆಯನ್ನು ದೇವರು ಪ್ರೀತಿಯಿಂದ ಕೇಳಲಿ.

**ದಿವಿ ಧಾಃ ಇಮಂ ಯಜ್ಞಂ ಇಮಂ ಯಜ್ಞಂ ದಿವಿ ಧಾಃ**

**ಸ್ವಾಹಾಗ್ನಯೇ ಯಜ್ಞಿಯಾಯ ಶಂ ಯಜುರ್ಭ್ಯಃ** (ಮಾಧ್ಯಂದಿನ ಶ್ರುತಿ)

ಮಾಡಿದ ಜಪವನ್ನು ಬೆಳಕಿಗಿಡು. ಮಾಡಿದ ಜಪವನ್ನು ಅರಿವಿಗೆ



ತಾ. ಜ್ಞಾನದ ಬೆಳಕಿಗೆ ಎಲ್ಲವನ್ನೂ ನೀಡಿರುವೆ. ಸುಖ ಸಿಗಲಿ ಜಪಿಸಿದವರಿಗೆ.

**ಯೋ ರೇವಾನ್ ಯೋ ಅಮೀವಹಾ ವಸುವಿತ್ ಪುಷ್ಟಿವರ್ಧನಃ**
**ಸ ನಃ ಸಿಷಕ್ತು ಯಸ್ತುರಃ** (ಋಗ್ವೇದ)

**ವಿತ್ತವಾನ್ ರೋಗಹಾ ಜ್ಞಾನವೇತ್ತಾಽಸ್ಮಾಭಿಃ ಸಯುಗ್ಭವೇತ್**
**ತುರೋ ವೇಗಾತ್ ಹಯಾನಾಹುಃ** (ಋಗ್ಭಾಷ್ಯ)

ಜಪಸಂಪತ್ತು ಆಪತ್ತುಗಳನ್ನೆಲ್ಲಾ ಹರಿಯುವುದು, ಜ್ಞಾನವನ್ನು ನೀಡುವುದು. ಆರಾಧ್ಯನಿಂದ ಅಡ್ಡಪರಿಣಾಮವಿಲ್ಲದ ಜಪ ಆರಾಧ್ಯನೆಡೆಗೆ ಕೂಡಲೇ ಸಾಗುವುದು.

**ಏತಾ ದೇವಸೇನಾಃ ಸೂರ್ಯಕೇತವಃ ಸಚೇತಸಃ**
**ಅಮಿತ್ರಾನ್ನೋ ಜಯಂತು ಸ್ವಾಹಾ** (ಅಥರ್ವವೇದ)

ನಮ್ಮನ್ನು ದ್ವೇಷಿಸುವ ಅವಿದ್ಯೆ-ಕಾಮ-ಕರ್ಮಗಳನ್ನು ಸಮರ್ಥವಾಗಿ ಸುಟ್ಟುಬಿಡು. ನಮ್ಮನ್ನು ಗೆಲ್ಲಿಸಿಬಿಡು.

**ಯತ್ರ ಯಂತಿ ಸುಕೃತೋ ನಾಽಪಿ ದುಷ್ಕೃತಃ**
**ತತ್ರ ತ್ವಾ ದೇವಃ ಸವಿತಾ ದಧಾತು** (ಮೂರು ವೇದ)

ಒಳ್ಳೆಯದರ ಸಹವಾಸ ಶಾಶ್ವತವಾಗಿ ನನಗಾಗುವಂತೆ ದೇವರು ಅನುಗ್ರಹಿಸಲಿ.

**ಸರ್ವರೋಗಪ್ರಶಾಂತ್ಯೈ ಸ್ಯಾತ್ ವಿಷ್ಣೋರ್ಧ್ಯಾನಂ ಚ ಪೂಜನಮ್**(ಅಗ್ನಿಪುರಾಣ)

ಗಾಯತ್ರೀಮಂತ್ರಜಪವು ಧೀಮಹಿ ಎಂದು ದೇವರ ಧ್ಯಾನವನ್ನು ಹೇಳಿದೆ.

ನಮೋ ನಾರಾಯಣಾಯ ಎನ್ನುವಲ್ಲಿ ನಮಸ್ಕಾರವು ಪೂಜೆಯನ್ನು ಹೇಳಿದೆ.

ಹೀಗೆ ಒಳಗಿನ ಮತ್ತು ಹೊರಗಿನ ಪೂರ್ಣರೂಪದ ಸಮಾರಾಧನೆ ಸಂಧ್ಯಾವಂದನೆ.



ಒಳಗೆ ಸೂರ್ಯನ ಶಕ್ತಿಯ ಸಮಾಹಾರದಿಂದ ಸರ್ವರೂಪಗಳ ಚಿಂತನೆ.

ಹೊರಗೆ ಸರ್ವ ವಸ್ತುಗಳಲ್ಲಿ ಹರಡಿನಿಂತ ನಾರಾಯಣನ ವಿಶ್ವರೂಪದ ಉಪಾಸನೆ.

ಹೀಗೆ ಜ್ಞಾನಕರ್ಮಗಳ ಸಮಾವೇಶ ನಿತ್ಯಜಪದಲ್ಲಿ ಪ್ರತ್ಯಕ್ಷ.

ಇದರಿಂದ ದೈಹಿಕ ಮಾನಸಿಕ ಆರೋಗ್ಯದೊಂದಿಗೆ ಇಹದಲ್ಲಿನ ಜಯ ಮತ್ತು ಪರದಲ್ಲಿನ ಆನಂದ ಸಂಪ್ರಾಪ್ತಿ.

*ಹದಿನಾರು ವರುಷದ ಹಿಂದೆ ಸಂಧ್ಯಾಸಮೀಕ್ಷಾ ಮುದ್ರಣಗೊಂಡಿತ್ತು. ಶ್ರೀವಿದ್ಯಾಮಾನ್ಯತೀರ್ಥರು ಆರಂಭಿಸಿದ ತತ್ವ ಸಂಶೋಧನ ಸಂಸತ್ತಿನಲ್ಲಿ ನಾನಾಗ ಸಂಶೋಧಕನಾಗಿ ಈ ಹೊತ್ತಗೆಯನ್ನು ತಂದಿದ್ದೆ. ನನಗೆ ಶ್ರೀ ಸಗ್ರಿ ರಾಘವೇಂದ್ರ ಉಪಾಧ್ಯಾಯರು ಸಹಾಯ ಮಾಡಿದ್ದರು. ಜಪದ ಅನೇಕ ಮಾಹಿತಿಗಳನ್ನು ನಾನವರಿಗೆ ನೀಡಿದ್ದೆ. ಅದನ್ನು ಬಳಸಿಕೊಂಡು ಮತ್ತಿತರ ವಿಷಯಗಳನ್ನು ಸಂಗ್ರಹಿಸಿಕೊಂಡು ಸಗ್ರಿಯವರು ಸಂಧ್ಯಾವಂದನೆಯ ಪ್ರಮೇಯ ಭಾಗಗಳನ್ನು ಆ ಹೊತ್ತಗೆಯಲ್ಲಿ ನೀಡಿದ್ದರು. ಅಲ್ಲಿನ ಅನೇಕ ವಿಷಯಾಂಶಗಳು ಅನೇಕ ಪತ್ರಿಕೆಗಳಲ್ಲಿ ಅಲ್ಲಲ್ಲಿ ಸಣ್ಣ ಲೇಖನಗಳಾಗಿ ಮುಂದಿನ ವರುಷಗಳಲ್ಲಿ ಮೂಡಿಬಂದವು. ಸಗ್ರಿಯವರಿಂದಲೇ ಕಾಲಾಂತರದಲ್ಲಿ ಜಪದ ಬಗ್ಗೆ ಎರಡು ಹೊತ್ತಗೆಗಳು ಮುದ್ರಿತಗೊಂಡವು. ಹೀಗಾಗಿ ಅಲ್ಲಿನ ವಿಷಯ ಭಾಗಗಳನ್ನು ಅವರ ಒಪ್ಪಿಗೆ ಮೇರೆಗೆ ಹೊರತುಪಡಿಸಿ, ಈಗ ಹೊಸದಾಗಿ ಸಂಧ್ಯಾಸಮೀಕ್ಷಾ ಪುಸ್ತಕವನ್ನು ಎರಡು ಭಾಗಗಳಲ್ಲಿ ಹೊರಗೆ ತಂದಿರುವೆ. ಸಂಕಲ್ಪದ ವಿಷಯದಲ್ಲಿ ಕಣ್ವಸ್ಮೃತಿಯನ್ನು ಅವಲಂಬಿಸಿಕೊಂಡು ಅವರು ಬರೆದಿರುವ ಲೇಖನವೊಂದನ್ನು ಉಳಿಸಿಕೊಂಡಿದ್ದೇನೆ. ಶ್ರೀಯುತ ಸಗ್ರಿಯವರಿಗೆ ವಂದನಪೂರ್ವಕ ಧನ್ಯವಾದಗಳು.*

*ಆಗ ಶ್ರೀ ವಿದ್ಯಾಧೀಶತೀರ್ಥರ ಪಲಿಮಾರು ಶ್ರೀಪಾದರ*



*ಪರ್ಯಾಯ. ಅವರು ಹೊತ್ತಗೆಗೆ ಹಾರೈಕೆಯನ್ನು ನೀಡಿದ್ದಾರೆ. ಪರ್ಯಾಯ ಸಂದೇಶ ಎನ್ನುವ ಶೀರ್ಷಿಕೆಯಲ್ಲಿ ಅದು ಪುಸ್ತಕದ ಆರಂಭದಲ್ಲಿತ್ತು. ಅದನ್ನಿಲ್ಲಿ ಐತಿಹಾಸಿಕ ನೆನಪಲ್ಲಿ ಮರುಮುದ್ರಣಗೊಳಿಸಿದ್ದೇನೆ. ಶ್ರೀಪಾದರಿಗೆ ನತಿತತಿಗಳು.*

ಸಂಧಿ ಅಂದರೆ ಕೂಡುವಿಕೆ. ಇದರ ಪರಿಣಾಮ ಬದಲಾವಣೆ. ಕೂಡಿಸುವ ಕಾಲವನ್ನು ಸಂಧ್ಯಾ ಎನ್ನುತ್ತಾರೆ. ಸಂಧ್ಯೆಯಲ್ಲಿ ಪ್ರಮುಖ ಎರಡು ಬಗೆ – **ಪೂರ್ವಸಂಧ್ಯಾ, ಅಪರಸಂಧ್ಯಾ.** ನಿಶೆ ಕಳೆದು ಇಳೆಯನ್ನು ಬೆಳಗಿಸಲು ಸೂರ್ಯನು ಬರುವ ಉಷಃಕಾಲ ಪೂರ್ವಸಂಧ್ಯಾ. ಸೂರ್ಯನು ಇಳೆ ತ್ಯಜಿಸುವ, ರಜನಿ ಜನಿಸುವ ಕಾಲ ಅಪರಸಂಧ್ಯಾ. ಈ ರೀತಿಯ ಬದಲಾವಣೆಯಿಂದ ಒಳ್ಳೆಯದೂ ಕೆಟ್ಟದೂ ಆಗಬಹುದು. ಅದು ಚರಾಚರ ಪ್ರಪಂಚಕ್ಕೆ ಅಥವಾ ವ್ಯಕ್ತಿಗೆ ಆಗಬಹುದು. ಅಂತಹ ಪ್ರಭಾವವುಳ್ಳ ಕಾಲ ಸಂಧ್ಯಾಕಾಲ.

ಈ ಕಾಲವನ್ನು ಪರಮಾತ್ಮನೂ ಬಿಡಲಿಲ್ಲ. **ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ವಾರ್ಯುಪಸ್ಪೃಶ್ಯ ಮಾಧವಃ** ಎಂದು ಭಾಗವತ ತಿಳಿಸಿದಂತೆ ನಿಯಮಾತೀತನಾದ ಕೃಷ್ಣನೂ ಸಂಧ್ಯೆಯನ್ನು ಬಳಸಿದ್ದಾನೆ. **ಪೂರ್ವಾ ಸಂಧ್ಯಾ ಪ್ರವರ್ತ್ತತೇ । ಉತ್ತಿಷ್ಠ ನರಶಾರ್ದೂಲ ಕರ್ತ್ತವ್ಯಂ ದೈವಮಾಹ್ನಿಕಮ್** ಇದು ವಿಶ್ವಾಮಿತ್ರರು ರಾಮನಲ್ಲಿ ಮಾಡಿದ ಪ್ರಾರ್ಥನೆ. ಸೂರ್ಯನಿಗೆ ನಿದ್ದೆ ಎಚ್ಚರಗಳಿಲ್ಲ. ಆ ವಂಶೋದ್ಭವನಾದ ರಾಮನಿಗೂ ಇಲ್ಲ. ಆದರೂ ಏಳು ಎದ್ದೇಳು. ಯಾಕಾಗಿ? ದೈವಾಹ್ನಿಕಕ್ಕಾಗಿ – ಸಂಧ್ಯಾವಂದನೆಗಾಗಿ. ಏಕೆಂದರೆ **ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ** ಎನ್ನುವಂತೆ ಮಾದರಿ ಆಗಿದ್ದಾರೆ ರಾಮ–ಕೃಷ್ಣರು. ಲಕ್ಷ್ಮೀದೇವಿಯೂ ಈ ಸಂಧಿಯನ್ನು ಬಿಟ್ಟಿಲ್ಲ. ಪ್ರಳಯಕಾಲದ ಕೊನೆಯ ದೇವಮಾನವ ಹನ್ನೆರಡೂವರೆ ವರ್ಷ ಪ್ರಳಯ–ಸೃಷ್ಟಿ ಸಂಧ್ಯಾಕಾಲ. ಆ ಕಾಲದಲ್ಲಿ ಲಕ್ಷ್ಮಿಯು ಭಗವಂತನ ಉತ್ಥಾನಕ್ಕೋಸ್ಕರ ವೈದಿಕ ವಾಙ್ಮಯಗಳಿಂದ ಸ್ತೋತ್ರ ಮಾಡುತ್ತಾಳೆ. ಕಾಣದ ಸೀತೆಯನ್ನು ಕಾಣುವುದಕ್ಕೆ



ಸಂಧ್ಯಾವಂದನೆಗೆ ಬರುವ ಸೀತೆಗಾಗಿ ತ್ವರೆ‌ತೀರಕ್ಕೆ ಹನುಮ ಬಂದ. ಸೀತೆಯು ಸಂಧ್ಯಾಕಾಲಕ್ಕೆ ಪ್ರಾಶಸ್ತ್ಯ ಕೊಡುತ್ತಿದ್ದಳು. ಈ ಪುರಾವೆಗಳಿಂದ ಅಕ್ಷರಳಾದ ಲಕ್ಷ್ಮಿಯೂ ಬಿಡದ ಕಾಲ ಸಂಧ್ಯಾಕಾಲ. **ಸೂರ್ಯೋದಯೇ ಚಾಸ್ತಮಯೇ ಚ ಶಾಯಿನಂ ವಿಮುಂಚತಿ ಶ್ರೀರಪಿ ಚಕ್ರಪಾಣಿನಮ್** ಸಂಧ್ಯಾಕಾಲದಲ್ಲಿ ಮಲಗುವ ಪತಿಯನ್ನಾದರೂ ಬಿಟ್ಟೇನು ಎಂಬಷ್ಟು ಮಹತ್ವ ಕೊಟ್ಟಿದ್ದಾಳೆ. ಈ ಕಾಲಕ್ಕೆ ಹೀಗೆ ಲಕ್ಷ್ಮೀನಾರಾಯಣರೂ ಬ್ರಹ್ಮಾದಿ ದೇವತೆಗಳೂ ಮಹತ್ವ ಕೊಟ್ಟಿದ್ದಾರೆ.

ಈ ಕಾಲದಲ್ಲಿ ನಾವು ನಿಷ್ಕಾಮಕರ್ಮವನ್ನೇ ಮಾಡಬೇಕು. ಸಕಾಮವನ್ನು ಮಾಡಬಾರದು. ಕೆಟ್ಟ ಕಾಮನೆಯನ್ನಂತೂ ಮಾಡಲೇಬಾರದು. ಈ ಕಾಲ ಕಾಮಧೇನುವಿನಂತೆ ಒಳ್ಳೆಯದು ಬಯಸಿದರೆ ಒಳ್ಳೆಯದು, ಕೆಟ್ಟದು ಬಯಸಿದರೆ ಕೆಟ್ಟದು ಕೊಡುತ್ತದೆ. ಇದಕ್ಕೆ ಇತಿಹಾಸಪುರಾಣಗಳ ನಿದರ್ಶನವೂ ಇದೆ. ಈ ಸಂಧ್ಯಾಕಾಲದಲ್ಲಿಯೇ ದಿತಿ ರತಿಸುಖದ ಕೆಟ್ಟ ಕಾಮನೆಯನ್ನು ಮಾಡಿದಳು. ಜ್ಞಾನಿಗಳಾದ ಕಶ್ಯಪರು ಪ್ರತಿಭಟಿಸಿದರೂ ಅವರಿಂದ ತಡೆಯಲಾಗಲಿಲ್ಲ. ಅದರ ಫಲವೇ ಹಿರಣ್ಯಕಶಿಪು ಹಿರಣ್ಯಾಕ್ಷರ ಆವಿರ್ಭಾವ. ಇವರಿಂದ ಜಗತ್ತೇ ತತ್ತರಿಸಿದ ಕಾಲ. ಇದು ಕೆಟ್ಟ ಕಾಮನೆಯ ಫಲ. ಈ ಕಾಲ ದುಷ್ಟರು ವಿಜೃಂಭಿಸುವ ಕಾಲ. ತಾಟಕೆ ಕಾನನ ಪ್ರವೇಶಿಸುವ ಕಾಲದಲ್ಲಿ ಸ್ತ್ರೀನಿಮಿತ್ತವಾಗಿ ರಾಮನಿಂದ ಶೀತಲ ಸಮರ. ಆ ಬಗ್ಗೆ ವಿಶ್ವಾಮಿತ್ರರ ಕಿಡಿದೃಷ್ಟಿ. ಈಕೆ ಮಹಾದುಷ್ಟೆ. ರಾತ್ರಿಯಾಗುತ್ತಿದ್ದಂತೆ ಬಲಿಷ್ಠೆಯಾಗುತ್ತಾಳೆ. ಅಷ್ಟರ ಒಳಗೆ ಸಂಹರಿಸು ಎಂಬ ಕಿವಿಮಾತು ವಿಶ್ವಾಮಿತ್ರರಿಂದ. ಆದ್ದರಿಂದಲೇ ದುಷ್ಟರಿಗೆ ಪ್ರಶಸ್ತಕಾಲ ಇದು. ಚೋರಜಾರರ ಕಾಟವೂ ಈ ಕಾಲದಲ್ಲಿಯೇ. ಈ ಕಾಲದಲ್ಲಿಯೇ ಒಳ್ಳೆಯವರಿಗೂ ದುಷ್ಟಾಲೋಚನೆ ಬರುತ್ತದೆ. ಆದ್ದರಿಂದ ಸಂಧ್ಯಾಕಾಲವನ್ನು ಭಗವದ್ವಂದನೆಗೇ ಮೀಸಲಿಡಬೇಕು. ಆಗ ಬುದ್ಧಿ ಸ್ಥಿರವಾಗಿರುತ್ತದೆ. ಯಾವುದೇ ಲೋಪದೋಷಗಳು ಆಗುವುದಿಲ್ಲ. ವಾಲಿಯೂ ಸಂಧ್ಯೆಗಾಗಿ ಸಮುದ್ರ ಪ್ರವೇಶಿಸಿದ ಕಥೆ ಪ್ರಸಿದ್ಧ. ಪ್ರಾಣಿವರ್ಗಕ್ಕೆ



ಸೇರಿದವರಿಗೂ ಸಂಧ್ಯಾವಂದನೆ ನಿಷಿದ್ಧವಲ್ಲ ಎಂದು ತಿಳಿಯುತ್ತದೆ. ರಾವಣನ ಸಂಧ್ಯಾವಂದನೆಯೂ ಪ್ರಸಿದ್ಧ. ಆದ್ದರಿಂದ ದುಷ್ಟರೂ ಇದರಲ್ಲಿ ಪ್ರವೃತ್ತಿ ಮಾಡುತ್ತಿದ್ದರು. ಕಪಿಗಳಿಗಿಂತ ಮೇಲ್ಮಟ್ಟದಲ್ಲಿರುವ ರಾವಣನಷ್ಟು ದುಷ್ಟರಲ್ಲದ ನಾವ್ಯಾಕೆ ಸಂಧ್ಯಾವಂದನೆ ಬಿಡಬೇಕು? ಅಗ್ನಿಹೋತ್ರಿಗಳು ಸಂಧ್ಯೆಗಾಗಿ ಮುಗಿಬೀಳುತ್ತಾರೆ. ಇಂತಹ ಸುಸಂಧಿಯನ್ನು ಎಂದೆಂದೂ ಕಳೆದುಕೊಳ್ಳಬಾರದು. ನಿತ್ಯ ಸಂಧ್ಯೆಯಲ್ಲಿ ಮಾಡುವ ವಂದನೆ ಕೊನೆಯ ಸಂಧ್ಯೆಗೆ ಪೂರಕ. ಜೀವನದ ಕೊನೆಯ ಕ್ಷಣ ಅದು ಬದುಕಿನ ಅಂತಿಮ ಸಂಧ್ಯೆ. ಈ ಬದುಕಿನ ಸಂಧ್ಯೆಯನ್ನು ವಂದನೆಗಾಗಿ ಬಳಸಿದರೆ ಮುಂದಿನ ಜೀವನ್ಮರಣಗಳು ದುರ್ಲಭ. ಇದನ್ನೇ ಆಚಾರ್ಯಮಧ್ವರು ತಿಳಿಸುತ್ತಾರೆ.
**ಸಂತತಂ ಚಿಂತಯೇನಂತಂ ಅಂತಕಾಲೇ ವಿಶೇಷತಃ**

ಇಂತಹ ಸಂಧ್ಯೆಯ ಸಮೀಕ್ಷೆ ಇಲ್ಲಿ ನಡೆದಿದೆ. ಸಂಧ್ಯಾವಂದನೆಯಲ್ಲಿ ಬರುವ ಆಚಮನ, ಗೋಪಿಮುದ್ರಾಧಾರಣೆ ಇತ್ಯಾದಿ ಸೂಕ್ಷ್ಮಾತಿಸೂಕ್ಷ್ಮ ವಿಷಯಗಳ ಸಮೀಕ್ಷೆ ನಡೆದಿದೆ. ತತ್ವ ಸಂಶೋಧನ ಸಂಸತ್ ಇದರ ನಿರ್ದೇಶಕರಾದ ನಮ್ಮ ಬನ್ನಂಜೆಯವವರು ಈ ಸಮೀಕ್ಷೆಗೆ ಮಾರ್ಗದರ್ಶಕರು, ಹಿತವಚನವಿತ್ತವರೂ ಕೂಡ. ಸಂಗ್ರಹ ಸಗ್ರಿ ಎಂದೇ ಪ್ರಸಿದ್ಧರಾದ ನಿರಂತರ ಚಿಂತನದ ಮೂಲಕ ಅಪಾರ ಬರಹನಿರತರಾದ ಶ್ರೀರಾಘವೇಂದ್ರಾಚಾರ್ಯರ ಅಪೂರ್ವ ಪ್ರಮೇಯಸಂಗ್ರಹವೂ ಇಲ್ಲಿದೆ. ಸದಾ ಅಧ್ಯಯನಶೀಲರೂ ಚತುರ ವಾಗ್ಮಿಗಳೂ ಉತ್ತಮ ಲೇಖಕರೂ ಅಷ್ಟಾವಧಾನಿಗಳೂ ಆದ ಶ್ರೀರಾಮನಾಥ ಆಚಾರ್ಯರು ಈ ಸಂಧ್ಯಾಸಮೀಕ್ಷೆಗೆ ಸಂಪಾದಕರು. ಇವರ ಅಪಾರ ಶ್ರಮ ಇಲ್ಲಿದೆ. ಪ್ರತಿಯೊಂದಕ್ಕೂ ಸೂಕ್ತ ಪ್ರಮಾಣಗಳನ್ನು ನೀಡಿದ್ದಾರೆ. ಇವರ ಸದಾತನ ಅಧ್ಯಯನಕ್ಕೆ ಇದೊಂದು ಅದ್ಭುತ ದರ್ಪಣ. ಗ್ರಹಣ–ಧಾರಣ–ಲೇಖನ–ಪ್ರಸ್ತಾವನಗಳಿಗೆಲ್ಲ ಸುಂದರ ನಿದರ್ಶನ. ಬುದ್ಧಿಶುದ್ಧಿಯ ಸುವರ್ಣಪರೀಕ್ಷೆಗೆ ಇದು ಸಾಣೆಕಲ್ಲು. ಆದ್ದರಿಂದಲೇ ಸಮೀಚೀನವಾಗಿ ಸಮೀಕ್ಷೆ ಹೊರಹೊಮ್ಮಿದೆ.



ಶ್ರೀಮತಿ ಮತ್ತು ಶ್ರೀ ಹೆರ್ಗ ರಾಮಕೃಷ್ಣ ಕೆದ್ಲಾಯರು ದಿವಂಗತರಾದ ಶ್ರೀಮತಿ ಮತ್ತು ಶ್ರೀ ಯು. ಶ್ರೀಕಾಂತ ಆಚಾರ್ಯ ಇವರ ಸ್ಮರಣಾರ್ಥ ಆರ್ಥಿಕವಾಗಿ ಪೂರ್ಣ ಸಹಕಾರವನ್ನು ನೀಡಿದ್ದಾರೆ. ಅವರಿಂದ ಮುಂದೆಯೂ ಇಂತಹ ಸತ್ಕಾರ್ಯ ನಡೆಯುತ್ತಾ ಇರಲಿ. ಚಿತ್ರವಿನ್ಯಾಸದ ಗೋಪ್ಯ ಕಂಪ್ಯೂಟರ್ಸ್‌ನ ಅಕ್ಷರಜೋಡಣೆಯ ನವದುರ್ಗಾ ಲೇಸರ್‌ಟೆಕ್‌ನ, ಪುಸ್ತಕಮುದ್ರಣದ ಪ್ರಕಾಶ ಆಫ್‌ಸೆಟ್‌ನ ಮಿತ್ರರಿಗೆಲ್ಲ ಅಭಿನಂದನೆಗಳು.

ಈ ಕೃತಿಯಲ್ಲಿದ್ದುದನ್ನು ಆಚರಣೆಗೆ ಇಳಿಸುವುದೇ ಕೊಡುವ ನಿಜವಾದ ಬೆಲೆ. ಎಲ್ಲರ ಸಂಧ್ಯೆಯೂ ಸುಸಂಧ್ಯೆಯಾಗಲಿ. ಅಲ್ಲಿ ನಡೆಸುವ ವಂದನೆ ಫಲಪ್ರದವಾಗಲಿ. ಎಲ್ಲರಿಗೂ ಭಗವಂತನ ಅನುಗ್ರಹರಕ್ಷೆ ಇರಲಿ.

**ಇತ್ಯನೇಕ ನಾರಾಯಣಸ್ಮರಣೆಗಳು**

**ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರು**

2002–03 **ಕುಲಪತಿಗಳು, ತತ್ವ ಸಂಶೋಧನ ಸಂಸತ್, ಉಡುಪಿ**

*ತತ್ವ ಸಂಶೋಧನ ಸಂಸತ್ತಿನ ನಿರ್ದೇಶಕರು ಶ್ರೀ ಬನ್ನಂಜೆ ಗೋವಿಂದಾಚಾರ್ಯರು. ಸಂಧ್ಯಾಸಮೀಕ್ಷೆಯ ಮೊದಲ ಮುದ್ರಣಕ್ಕೆ ಅವರು ನೀಡಿದ ನುಡಿಯನ್ನು ಇಲ್ಲಿ ಹಾಗೆಯೇ ಹಾಕಿರುವೆನು. ಗುರುಗಳಿಗೆ ಕೃತಜ್ಞತೆಯೊಡನೆ ವಂದನೆಗಳು.*

ಜಪ ಎಂದರೆ ಸ್ಪಷ್ಟವಾದ ನುಡಿ; ಜಪ ಎಂದರೆ ಮನದೊಳಗೆಯೆ ಆಡುವ ನುಡಿ – **ಜಪ ವ್ಯಕ್ತಾಯಾಂ ವಾಚಿ , ಜಪ ಮಾನಸೇ ಚ**

ನುಡಿ ಎಂದರೆ ಯಾವುದೂ ಆಗಬಹುದು. **ಕರ್ಣೇ ಜಪಃ** ಎಂಬಲ್ಲಿ ಚಾಡಿನುಡಿಯೂ ಜಪವಾಗಿದೆ.

ನಿಜವಾದ ಜಪ ಎಂದರೆ ಮಂತ್ರಪೂತವಾದ ನುಡಿ. ಅಂತರಂಗದ ಸಂಭಾಷಣೆ. ನಮ್ಮೊಳಗಿನ ತತ್ವಾಭಿಮಾನಿಗಳ ಜತೆ ನಮ್ಮ ಅಂತರಾತ್ಮನಾದ



ಭಗವಂತನ ಜತೆ ಸಂಭಾಷಣೆ. ಕೆಲವೊಮ್ಮೆ ನಾವೇ ನಮ್ಮಷ್ಟಕ್ಕೆ ಆಡಿಕೊಳ್ಳುವ ಸ್ವಗತ.

ಸಂಧ್ಯಾಕಾಲದಲ್ಲಿ ಮಾಡುವ ಮುಖ್ಯ ವೈದಿಕಕ್ರಿಯೆ ಸಂಧ್ಯಾವಂದನ ಮತ್ತು ಜಪ.

ಸಂಧ್ಯಾಕಾಲದಲ್ಲಿ ಮಾಡುವ ದೇವತಾವಂದನೆಯೇ ಸಂಧ್ಯಾವಂದನೆ.

ಇಲ್ಲಿ ಬರುವ ವಂದನೆ ಮುಖ್ಯವಾಗಿ ಸ್ತುತಿ. ಅನಂತರ ನಮಸ್ಕಾರ ಕೂಡ.

ಜಪದಲ್ಲೂ ಮೊದಲು ವೇದಾಧಿಕಾರಸಿದ್ಧಿಗಾಗಿ ಗಾಯತ್ರೀಜಪ. ಅನಂತರ ವೈಷ್ಣವದೀಕ್ಷೆಗಾಗಿ ನಾರಾಯಣಾಷ್ಟಾಕ್ಷರ ಜಪ.

ಇವೆರಡು ನಿಯತ ಮಂತ್ರಗಳು. ಉಪದೇಶವಿದ್ದರೆ ಇತರ ಮಂತ್ರಗಳು.

ಈ ಕ್ರಿಯೆಗಳ ಹಿಂದೆ ಇರುವ ಅನುಸಂಧಾನ ಈಗ ಲೋಪಗೊಳ್ಳುತ್ತಿದೆ. ಬರಿಯ ಯಾಂತ್ರಿಕವಾಗಿ ಇವುಗಳನ್ನು ಆಚರಿಸಲಾಗುತ್ತಿದೆ. ಇದರ ಹಿನ್ನೆಲೆ ತಿಳಿಯಬೇಕು; ಉದ್ದೇಶ ತಿಳಿಯಬೇಕು, ಅರ್ಥ ತಿಳಿಯಬೇಕು. ತಿಳಿದು ಮಾಡಬೇಕು. ಆಗಲೇ ಪೂರ್ಣ ಸಾರ್ಥಕ್ಯ.

**ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ**
**ತದೇವ ವೀರ್ಯವತ್ತರಂ ಭವತಿ**

ತಿಳಿದು ನಂಬಬೇಕು. ನಂಬಿ ಮಾಡಬೇಕು. ಇದು ವೇದಕಾಲದ ಋಷಿಗಳ ಅಂಬೋಣ. ತಿಳಿವು ಇರದಾಗ ನಂಬಿಕೆ ಶಿಥಿಲವಾಗುತ್ತದೆ. ನಂಬಿಕೆ ಇರದಾಗ ಕ್ರಿಯೆ ಯಾಂತ್ರಿಕವಾಗುತ್ತದೆ. ಅಥವಾ ಲೋಪವಾಗುತ್ತದೆ.
ಆಚಾರ ಮತ್ತು ಮೂಢಾಚಾರಗಳ ಅಂತರ ತಿಳಿಯದೆ ಹೋಗುತ್ತದೆ. ದೇವತೆಗಳ ಜತೆಗೆ ದೆವ್ವಗಳೂ ಸೇರಿಕೊಳ್ಳುತ್ತವೆ. ಕಾಳಿನ ಜತೆಗೆ ಜೊಳ್ಳೂ ಸೇರಿಕೊಳ್ಳುತ್ತದೆ.

ಅದಕ್ಕಾಗಿ ಆಚರಣೆಯನ್ನು ಜರಡಿ ಹಿಡಿದು ಸಾರಿಸುತ್ತಿರಬೇಕು.



ಪರಂಪರೆಯ ಸತ್ತ್ವ- ಸಾರವನ್ನು ಅರಿತು ಆಚರಿಸಬೇಕು. ಕರ್ಮ ಕುರುಡಾಗಬಾರದು.

ಈ ಗ್ರಂಥದಲ್ಲಿ ಪರಂಪರೆಯಲ್ಲಿ ಮೂಲಶುದ್ಧಿಯನ್ನು ಅರಸುವ, ಕರ್ಮಕಾಂಡದ ಆಧ್ಯಾತ್ಮಮುಖವನ್ನು ಅರಸುವ, ಅರ್ಥವಂತಿಕೆಯನ್ನು ಅರಸುವ ಪ್ರಯತ್ನವನ್ನು ಲೇಖಕರಾದ ವಿದ್ವಾಂಸರು ಪ್ರಾಮಾಣಿಕವಾಗಿ ನಡೆಸಿದ್ದಾರೆ.

ಇಲ್ಲಿ ಉಲ್ಲೇಖಗೊಂಡ ಕೆಲವು ಪ್ರಮಾಣಗಳೂ ಅರ್ವಾಚೀನವಿರಬಹುದು; ಪ್ರಕ್ಷೇಪವಿರಬಹುದು; ಅಶುದ್ಧವಿರಬಹುದು. ಅದು ಒಂದು ಬೇರೆಯೆ ಸಂಶೋಧನಕ್ಷೇತ್ರ. ಅಷ್ಟೆ ಅಲ್ಲ; ಧರ್ಮಶಾಸ್ತ್ರ ಎಂದ ಮಾತ್ರಕ್ಕೆಯೆ ಪ್ರಮಾಣವೇ ಆಗಬೇಕೆಂದಿಲ್ಲ. ವೇದಮೂಲವಲ್ಲದ ಧರ್ಮಶಾಸ್ತ್ರಗಳನ್ನು ಪ್ರಮಾಣವೆಂದು ಒಪ್ಪಲಾಗದು ಎಂದು ಆಚಾರ್ಯ ಮಧ್ವರು ಹೇಳಿದ್ದಾರೆ. ಧರ್ಮಶಾಸ್ತ್ರಗಳಲ್ಲೂ ಸಾತ್ತ್ವಿಕ–ರಾಜಸ–ತಾಮಸ ಪ್ರಭೇದಗಳಿವೆ.

ಈಗ ಉಪಲಬ್ಧವಿರುವ ಧರ್ಮಗ್ರಂಥಗಳಲ್ಲಿ ಸಾತ್ತ್ವಿಕ ಪರಂಪರೆಯಿರುವ ಪ್ರಮಾಣಗಳ ಆಧಾರದಲ್ಲಿ ವಿದ್ವಾಂಸರು ಈ ಪುಸ್ತಕವನ್ನು ಸಿದ್ಧಪಡಿಸಿದ್ದಾರೆ. ಸಂಧ್ಯಾವಂದನೆಯ ಬಗೆಗೆ ಅನೇಕ ಅಪೂರ್ವ ಮಾಹಿತಿಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ಇಷ್ಟು ಮಾತ್ರ ಹೇಳಬಲ್ಲೆ: ನಿತ್ಯಾನುಷ್ಠಾನದ ಬಗೆಗೆ ಇದೊಂದು ವಿಸ್ತೃತವಾದ ವಿವೇಚನೆ. ಈ ಬಗೆಗೆ ಈ ತನಕ ನಡೆಯದ ಒಂದು ಸಾರ್ಥಕ ಪ್ರಯತ್ನ ಇಲ್ಲಿ ನಡೆದಿದೆ.

ಇದನ್ನು ಜನ ಬಳಸಿಕೊಂಡರೆ ಇದನ್ನು ಸಿದ್ಧಪಡಿಸಿದ ವಿದ್ವಾಂಸರಿಗೆ ಒಂದು ಧನ್ಯತೆಯ ಭಾವ. ಇದನ್ನು ಪ್ರಕಾಶಿಸುತ್ತಿರುವ ಸಂಸ್ಥೆಗೆ ಕೂಡ.

– ಡಾ. ಬನ್ನಂಜೆ ಗೋವಿಂದಾಚಾರ್ಯ



ಎಂದಿನಂತೆ ಹೊತ್ತಗೆಗಳ ಲೋಕಾರ್ಪಣದಲ್ಲಿ ಎಲ್ಲ ರೀತಿಯ ಸಹಾಯಗೈದವರು ನನ್ನ ಹಿತಚಿಂತಕರು, ಜ್ಞಾನಪ್ರತಿಗ್ರಹಿಗಳು. ಅವರೆಲ್ಲರಿಗೂ ಅಭಿವಂದನೆಗಳು. ಮುಖ್ಯವಾಗಿ ಮೊದಲ ಪುಸ್ತಕವನ್ನು ಮುದ್ರಣಗೊಳಿಸುವ ಮುಂಚೆ ಒಂದು ವಾರ ಕಾಲ ಪರಿವೀಕ್ಷಣೆಗೈದ ನನ್ನ ತಂದೆ ಶುದ್ಧಜಪದ ಬುದ್ಧಮೂರುತಿ. ಅವರ ಮಾತಿನ ಭರವಸೆಯಲ್ಲಿ ಸಂಧ್ಯಾಸಮೀಕ್ಷೆ ಮೊದಲು ಮುದ್ರಣಗೊಂಡಿತ್ತು. ಎರಡನೆ ಬಾರಿಯ ಮುದ್ರಣದ ಹೊತ್ತಿಗೆ ಅವರು ಹತ್ತಿರವಿಲ್ಲ. ಆದರೂ ಅವರ ಜಪದ ಶಕ್ತಿ ಅವರ ಶಿಷ್ಯರಿಗೆ ಸಿಕ್ಕಿದೆ. ಅದರ ಫಲ ಇದು ಅನ್ನುವುದರಲ್ಲಿ ಎರಡು ಮಾತಿಲ್ಲ. ಮೊದಲ ಮುದ್ರಣದ ಹೊತ್ತಿನಲ್ಲಿಯೇ ಸುತ್ತ ಅನೇಕ ಸಂಗತಿಗಳು ನನ್ನನ್ನು ಮೆತ್ತಿಕೊಂಡಿದ್ದವು. ಆಗ ಪುಸ್ತಕದ ಹರವಿನ ಇಯತ್ತೆ ಬಾಧಿಸುತ್ತಿತ್ತು. ಅದಕೆಂದೇ ಅದರ ಕೆಲವು ಅಂಶಗಳು ಆಗ ಹೊರಗೆ ಉಳಿದವು. ಇಂದು ಮತ್ತೆ ಅವು ಇಲ್ಲಿ ಎರಡು ಭಾಗಗಳಲ್ಲಿ ಪ್ರತ್ಯಕ್ಷಗೊಂಡಿವೆ. ಇನ್ನೂ ನಿಗೂಢವಾಗಿರುವ ಪ್ರಮಾಣಗಳು ಮತ್ತೊಮ್ಮೆ ಮೂರು ಭಾಗಗಳಲ್ಲಿ ಸಂಧ್ಯಾಸಮೀಕ್ಷೆಯಲ್ಲಿ ಬರಬೇಕಿವೆ. ಅದು ಜಪನಿಷ್ಠನ ಸೌಭಾಗ್ಯದಲ್ಲಿ ಸೇರಿದೆ.

ಮೊದಲ ಹೊತ್ತಗೆಯನ್ನು ಎತ್ತಿಹಿಡಿದು ಎಲ್ಲ ಬಗೆಯಿಂದ ಉಪಯೋಗಿಸಿಕೊಂಡ ಎಲ್ಲರಿಗೂ ಮತ್ತೊಮ್ಮೆ ನಮನಗಳು. ಶ್ರೀಯುತ ಕಾಳೆಯವರು ಅನೇಕ ಬಾರಿ ಅನೇಕ ಸಮಯಗಳಿಂದ ಈ ಹೊತ್ತಗೆಯ ಅನಾವರಣಕ್ಕೆ ನನ್ನನ್ನು ಒತ್ತಾಯಿಸಿದ್ದಾರೆ. ಒತ್ತಾಯದೊಡನೆ ಎಲ್ಲ ಬಗೆಯ ಸಹಾಯವನ್ನೂ ಪೂರ್ತಿ ಇತ್ತಿದ್ದಾರೆ. ಜ್ಞಾನಪ್ರಿಯರಾದ ಧಾರವಾಡದ ನಾಗರಾಜ ಶೇಷಾಚಾರ್ ಕಾಳೆಯವರಿಗೆ ಈ ನೆನಪಲ್ಲಿ ಮತ್ತೊಮ್ಮೆ ವಂದನೆಗಳನ್ನು ಸಮರ್ಪಿಸುವೆ.

ಅಂದವಾದ ಮುದ್ರಣದಿಂದ ಎಂದಿನಂತೆ ನಮ್ಮನ್ನು ಮುದಗೊಳಿಸಿದ ಸುಗುಣ ಬಂಧುಗಳಿಗೆ ಅಭಿವಂದನೆಗಳು ಸಂದಿವೆ. ಧನ್ಯವಾದಗಳು.



## ಸಂಪ್ರದಾನಗಳು

ನಾಗಸಮೀಕ್ಷಾ
ಸಂಧ್ಯಾಸಮೀಕ್ಷಾ
ಮುದ್ರಾಸಮೀಕ್ಷಾ
ಕರ್ಮಸಮೀಕ್ಷಾ
ಗ್ರಹಸಮೀಕ್ಷಾ
ಪೂಜಾಸಮೀಕ್ಷಾ
ಜಪಸಮೀಕ್ಷಾ
ದೇವಸಮೀಕ್ಷಾ
ಕೃತಿಸಮೀಕ್ಷಾ
ಪರ್ವಸಮೀಕ್ಷಾ
ರಾಮಾಯಣಸಮೀಕ್ಷಾ
ಅಕ್ಷರ
ಹತ್ತುರೂಪದ
ಪುರಾಣಪ್ರಪಂಚ

## ಸಂಪಾದಿತಗಳು

ಬ್ರಹ್ಮಸೂತ್ರಗಳು
ಮಂತ್ರರಾಮಾಯಣ
ಪರಮಾತ್ಮನಸಾವಿರರೂಪಗಳು
ಪ್ರಾಣಸೂಕ್ತಮ್
ಕರ್ಮಸಿದ್ಧಾಂತಃ

## ಸಹ ಸಂಪಾದಿತಗಳು

ಆಭರಣ
ಧನ್ವಂತರಿ
ಪ್ರಚೋದಯಾತ್
ಉಳಿದಕೃಷ್ಣ
ಬ್ರಹ್ಮರಥ
ಮೈತ್ರ
ಬನ್ನಂಜೆಕೃತಿಸಮೀಕ್ಷಾ
ಬೃಹತೀಸಹಸ್ರಮಂತ್ರಾಃ

## ಅನುವಾದಗಳು

ಶಂಭುಶೈಲೇಶ್ವರಮಹಾತ್ಮ್ಯಮ್
ಗರುಡಪುರಾಣಮ್(ಪ್ರೇತಖಂಡಃ)
ನಾರಾಯಣವರ್ಮ
ಶತಾಪರಾಧಸ್ತೋತ್ರಮ್
ನವಗ್ರಹಸ್ತೋತ್ರಮ್
ಶನಿಕೃತಾ ನರಸಿಂಹಸ್ತುತಿಃ
ಕಾಳೀಯಮರ್ದನಕೃಷ್ಣದಶಕಮ್
ದ್ವಾತ್ರಿಂಶದಪರಾಧಸ್ತೋತ್ರಮ್
ಬಾಲರಕ್ಷಾಸ್ತೋತ್ರಮ್
ಗರ್ಭಸ್ತುತಿಃ
ಆಚಾರ್ಯಗೋವಿಂದಕೃತಾ ನೃಸಿಂಹಸ್ತುತಿಃ
ಅಗ್ನಿಸ್ತುತಿಃ
ಇಂದ್ರಸ್ತುತಿಃ
ದ್ರೌಪದೀಕೃತಾ ಕೃಷ್ಣಸ್ತುತಿಃ
ಧ್ರುವಕೃತಸ್ತೋತ್ರಮ್
ರುಗ್ಮಿಣೀಸ್ವಯಂಬರಪ್ರಕರಣಮ್
ಚಿಂತನಮ್
ದುರ್ಗಾಸ್ತೋತ್ರಮ್
ಗೋಸಮೀಕ್ಷಾ
ವಿಷ್ಣುಸಹಸ್ರರೂಪನಾಮಸ್ತೋತ್ರಮ್
ವಸಿಷ್ಠಕೃತಾ ಸೂರ್ಯಸ್ತುತಿಃ
ಕೃಷ್ಣಾಷ್ಟಕಮ್





# ಸಂಧ್ಯಾವಂದನೆಯ ಮೊದಲು

## ಉತ್ಥಾನ

ಸಕಲತಾಪಹರನಾದ ಹರಿಯನ್ನು ನೆನೆಯುತ್ತಾ ಬೆಳಗೆದ್ದು ಶಾಸ್ತ್ರವಿಧಿಯಂತೆ ಶೌಚಾದಿಗಳನ್ನು ಪೂರೈಸಿ, ಸ್ನಾನ ಮಾಡಿ ಸಂಧ್ಯಾವಂದನೆ ಯನ್ನು ನಡೆಸಲು ಆಚಾರ್ಯಮಧ್ವರು ಸದಾಚಾರಸ್ಮೃತಿಯಲ್ಲಿ ಹೇಳಿರುವರು –

ಸ್ಮೃತ್ವಾ ಹರಿಂ ಸಮುತ್ಥಾಯ ಕೃತಶೌಚೋ ಯಥಾವಿಧಿ
ಧೌತದಂತಃ ಸಮಾಚಮ್ಯ ಸ್ನಾನಂ ಕುರ್ಯಾದ್ವಿಧಾನತಃ
ಉದ್ಧೃತೇತಿ ಮೃದಾऽऽಲಿಪ್ಯ ದ್ವಿಷಡಷ್ಟಷಡಕ್ಷರೈಃ
ತ್ರಿರ್ನಿಮಜ್ಜ್ಯಾऽಪ್ಯಸೂಕ್ತೇನ ಪ್ರೋಕ್ಷಯಿತ್ವಾ ಪುನಸ್ತಥಾ
ಮೃದಾऽऽಲಿಪ್ಯ ನಿಮಜ್ಯ ತ್ರಿಃ ತ್ರಿರ್ಜಪೇದಘಮರ್ಷಣಮ್
ಸ್ರಷ್ಟಾರಂ ಸರ್ವಲೋಕಾನಾಂ ಸ್ಮೃತ್ವಾ ನಾರಾಯಣಂ ಪರಮ್
ಯತಶ್ವಾಸೋ ನಿಮಗ್ನೋऽಪ್ಸು ಪ್ರಣವೇನೋತ್ಥಿತಸ್ತತಃ
ಸಿಂಚೇತ್ ಪುರುಷಸೂಕ್ತೇನ ಸ್ವದೇಹಸ್ಥಂ ಹರಿಂ ಸ್ಮರನ್
ವಸಿತ್ವಾ ವಾಸ ಆಚಮ್ಯ ಪ್ರೋಕ್ಷ್ಯಾऽऽಚಮ್ಯ ಚ ಮಂತ್ರತಃ
ಗಾಯತ್ರ್ಯಾ ಚಾಂಜಲಿಂ ದತ್ವಾ ಧ್ಯಾತ್ವಾ ಸೂರ್ಯಗತಂ ಹರಿಮ್
ಮಂತ್ರತಃ ಪರಿವೃತ್ಯಾऽಥ ಸಮಾಚಮ್ಯ ಸುರಾದಿಕಾನ್
ತರ್ಪಯಿತ್ವಾ ನಿಪೀಡ್ಯಾऽಥ ವಾಸೋ ವಿಸ್ತೀರ್ಯ ಚಾಂಜಸಾ
ಅರ್ಕಮಂಡಲಗಂ ವಿಷ್ಣುಂ ಧ್ಯಾತ್ವೈವ ತ್ರಿಪದೀಂ ಜಪೇತ್
ಸಹಸ್ರಪರಮಾಂ ದೇವೀಂ ಶತಮಧ್ಯಾಂ ದಶಾವರಾಮ್
ಆಸೂರ್ಯದರ್ಶನಾತ್ತಿಷ್ಠೇತ್ ತತಸ್ತೂಪವಿಶೇತ ವಾ
ಪೂರ್ವಾಂ ಸಂಧ್ಯಾಂ ಸನಕ್ಷತ್ರಾಂ ಉತ್ತರಾಂ ಸದಿವಾಕರಾಮ್
ಉತ್ತರಾಮುಪವಿಶ್ಯೈವ ವಾಗ್ಯತಃ ಸರ್ವದಾ ಜಪೇತ್
ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ



**ನಾರಾಯಣಃ ಸರಸಿಜಾಸನಸನ್ನಿವಿಷ್ಟಃ**

**ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ**

**ಹಾರೀ ಹಿರಣ್ಮಯವಪುಃ ಧೃತಶಂಖಚಕ್ರಃ**

**ಗಾಯತ್ರ್ಯಾಸ್ತ್ರಿಗುಣಂ ವಿಷ್ಣುಂ ಧ್ಯಾಯನ್ನಷ್ಟಾಕ್ಷರಂ ಜಪೇತ್**

**ಪ್ರಣಮ್ಯ ದೇವಾನ್ ವಿಪ್ರಾಂಶ್ಚ ಗುರೂಂಶ್ಚ ಹರಿಪಾರ್ಷದಾನ್**

**ಸ್ಮೃತ್ವಾ ಸರ್ವೋತ್ತಮಂ ವಿಷ್ಣುಂ ಸ್ವಾಧ್ಯಾಯೇನಾರ್ಚಯೇದ್ಧರಿಮ್**

ಹತ್ತು ಶ್ಲೋಕಗಳಲ್ಲಿ ನಿತ್ಯವಿಧಿಯನ್ನು ಹೇಳಿದ ಮಧ್ವಾಚಾರ್ಯರು ಸಂಧ್ಯಾವಂದನೆಯ ಮೊದಲು ಸ್ನಾನವನ್ನು ತಿಳಿಸಿದ್ದಾರೆ. ಅದಕ್ಕೂ ಮೊದಲು ಬೆಳಗ್ಗೆ ಎದ್ದ ಮೇಲೆ ಮಲಮೂತ್ರ ವಿಸರ್ಜನದ ಬಳಿಕ ಮೃಜ್ಜಲಶೌಚವನ್ನು ಹೇಳಿದ್ದಾರೆ. ಹಲ್ಲುಜ್ಜಿ ಆಚಮನ ಮಾಡಿ ಸ್ನಾನ ಮಾಡಲು ತಿಳಿಸಿರುವರು. ಮುಳುಗುಸ್ನಾನದಲ್ಲಿಯ ವಿಶೇಷ ನಿಯಮಗಳನ್ನು ಹೇಳುತ್ತಾ ಮುಖ್ಯವಾಗಿ ನಾರಾಯಣ – ವಾಸುದೇವ – ವಿಷ್ಣುಮಂತ್ರಗಳನ್ನು ಜಪಿಸಲು ಹೇಳಿರುವರು. ಒಣಬಟ್ಟೆ ತೊಡಲು ಸೂಚಿಸಿ, ಮುಂದೆ ಸಂಧ್ಯಾವಂದನೆಯ ಈ ಕೆಲವು ಮುಖ್ಯ ಅಂಶಗಳನ್ನು ಉಲ್ಲೇಖಿಸಿದ್ದಾರೆ – ಆಚಮನ, ಮಾರ್ಜನ, ಮಂತ್ರಾಚಮನ, ಅರ್ಘ್ಯಪ್ರದಾನ, ಆತ್ಮಪ್ರದಕ್ಷಿಣೆ, ತರ್ಪಣ, ಗಾಯತ್ರೀಜಪ, ಅಷ್ಟಾಕ್ಷರಜಪ, ದಿಗುಪಸ್ಥಾನ.

ಇದು ಗೃಹಸ್ಥನ ನಿತ್ಯಕರ್ತವ್ಯ ಎಂದು ಕಡೆಯಲ್ಲಿ ಆಚಾರ್ಯರು ತಿಳಿಸುತ್ತಾ ಈ ವಾಕ್ಯಗಳನ್ನೆಲ್ಲ ವೇದವ್ಯಾಸರ ಗ್ರಂಥಗಳಿಂದ ಸಂಗ್ರಹಿಸಿದ್ದೆಂದು ಹೇಳಿರುತ್ತಾರೆ –

**ಏಷ ನಿತ್ಯಸಮಾಚಾರೋ ಗೃಹಿಣೋ ವನಿನಸ್ತಥಾ**

**ಆನಂದತೀರ್ಥಮುನಿನಾ ವ್ಯಾಸವಾಕ್ಯಸಮುದ್ಧೃತಿಃ**

**ಸದಾಚಾರಸ್ಯ ವಿಷಯೇ ಕೃತಾ ಸಂಕ್ಷೇಪತಃ ಶುಭಾ**

## ನಾಮಸ್ಮರಣೆ

ಸಂಧ್ಯಾವಂದನೆಯಲ್ಲಿ ಭಗವಂತನನ್ನು ಮಂತ್ರಗಳಿಂದ ನೆನೆವಂತೆ ಮೊದಲು ಶೌಚಾದಿಗಳಲ್ಲೂ ಭಗವಂತನ ಬಗೆಬಗೆ ನಾಮಗಳನ್ನು ಸ್ಮರಿಸಲು **ಪಂಚರಾತ್ರದಲ್ಲಿಯೂ** ಹೇಳಿದೆ –

**ಶೌಚಕಾಲೇ ಕೇಶವಂ ತು ಮೃದಾ ಶೌಚೇ ತ್ರಿವಿಕ್ರಮಮ್**
**ದಂತಧಾವನಕಾಲೇ ತು ಹರಿರ್ಧ್ಯೇಯೋ ಭುಜಾಷ್ಟಕಃ**
**ಮುಖಪ್ರಕ್ಷಾಳನೇ ಕಾಲೇ ಮಾಧವಂ ಮನಸಾ ಸ್ಮರೇತ್**
**ಗವಾಂ ಕಂಡೂಯನೇ ಕಾಲೇ ಸ್ಮರೇದ್ಗೋವರ್ಧನಂ ಹರಿಮ್**
**ವಾರಾಹಂ ಮೃತ್ತಿಕಾಸ್ನಾನೇ ಉಪೇಂದ್ರಂ ವಸ್ತ್ರಧಾರಣೇ**
**ಕೃಷ್ಣರಾಮೌ ವಾಸುದೇವಂ ತೀರ್ಥಪಾನೇ ತು ಸಂಸ್ಮರೇತ್**

ಮಿಂದು ಮಡಿಯುಟ್ಟ ಬಳಿಕ ನಿರ್ಮಾಲ್ಯತೀರ್ಥವನ್ನು ಪ್ರಾಶನ ಮಾಡಬೇಕು. ಮೂರು ಬಾರಿಯ ಪ್ರಾಶನಕ್ಕೆ ಕೃಷ್ಣ – ರಾಮ – ವಾಸುದೇವರನ್ನು ನೆನೆಯಬೇಕು. ಏಕಾದಶಿಯಂದು ಒಂದು ಬಾರಿ ಮಾತ್ರ ನಿರ್ಮಾಲ್ಯತೀರ್ಥ ಸ್ವೀಕಾರ ಶಾಸ್ತ್ರವಿಹಿತ. ಎಲ್ಲ ತಂತ್ರಗಳೂ ಮಂತ್ರಪೂರ್ವಕವಾಗಿರಲಿ ಎಂದು **ಸ್ಕಾಂದಪುರಾಣದ** ಆದೇಶ –

**ಯಥಾ ಕಾಷ್ಠಮಯೋ ಹಸ್ತೀ ಯಥಾ ಚರ್ಮ್ಮಮಯೋ ಮೃಗಃ**
**ಕಾರ್ಯಾರ್ಥಂ ನೈವ ಸಿಧ್ಯೇತ ತಥಾ ಕರ್ಮ್ಮ ಹ್ಯಮಂತ್ರಕಮ್**
**ಯಥಾ ಭಸ್ಮಹುತಂ ಪಾರ್ಥ ಯಥಾ ತೋಯವಿವರ್ಜ್ಜಿತಮ್**
**ನಿಷ್ಫಲಂ ಜಾಯತೇ ದಾನಂ ತಥಾ ಮಂತ್ರವಿವರ್ಜ್ಜಿತಮ್**

ರಾತ್ರಿ ಪೂರ್ತಿ ಕಳೆಯುವ ಮೂರು ಗಂಟೆಯ ಮೊದಲು ಅಂದರೆ ಒಂದು ಯಾಮ ಮೊದಲು ಎದ್ದು (ಸೂರ್ಯೋದಯ 6 ಗಂಟೆಗಾದರೆ 3 ಗಂಟೆಗೆ ಏಳಬೇಕು) ಕೈಕಾಲು ಮುಖ ತೊಳೆದು ಹರಿ ಸ್ಮರಣೆ ಮಾಡಲು **ಆಚಾರರತ್ನದಲ್ಲಿ** ಸ್ಪಷ್ಟ ತಿಳಿಸಿದ್ದಾರೆ –

**ಉತ್ಥಾಯ ಪಶ್ಚಿಮೇ ಯಾಮೇ ರಾತ್ರಿವಾಸಃ ಪರಿತ್ಯಜೇತ್**



**ಪ್ರಕ್ಷಾಳ್ಯ ಹಸ್ತಪಾದಾಸ್ಯಾನ್ ಉಪಸ್ಪೃಶ್ಯ ಹರಿಂ ಸ್ಮರೇತ್**

ಸೂರ್ಯೋದಯದ ಮೊದಲಿನ, ಹತ್ತಿರದ ಹೊತ್ತು ನಿದ್ದೆಮಾಡುವುದು ಸಾಧಕನ ಪುಣ್ಯಭಾಗ್ಯವನ್ನು ಕಳೆಯುವುದು ಎಂದು **ಸ್ಮೃತಿರತ್ನಾಕರದ** ಅಭಿಪ್ರಾಯ –

**ಬ್ರಾಹ್ಮೇ ಮುಹೂರ್ತೇ ಯಾ ನಿದ್ರಾ ಸಾ ಪುಣ್ಯಕ್ಷಯಕಾರಿಣೀ**

ಉಷಃಕಾಲದಲ್ಲಿ ಮಲಗಿದ್ದರೆ ಆಯುಷ್ಯ ಕ್ಷೀಣಿಸುವುದೆಂದು **ಋಗ್ವೇದವೂ** ಹೇಳಿದೆ – **ಮರ್ತ್ಯಸ್ಯ ದೇವೀ ಜರಯಂತ್ಯಾಯುಃ**

ರಾತ್ರಿಯ ಕಡೆಯ ಕಾಲಾವಧಿಯು ಸುಮಾರಾಗಿ ಮೂರುಗಂಟೆ ಬ್ರಾಹ್ಮಮುಹೂರ್ತ ಎನಿಸಿದೆ ಎಂದು **ಆಚಾರಕಿರಣ** ಹೇಳಿದೆ –

**ರಾತ್ರೇಸ್ತು ಪಶ್ಚಿಮೋ ಯಾಮೋ ಮುಹೂರ್ತೋ ಬ್ರಾಹ್ಮ ಉಚ್ಯತೇ**

**ವಿಷ್ಣುಪುರಾಣವು** ಬ್ರಾಹ್ಮಮುಹೂರ್ತದ ಸಮಯವನ್ನು ಸ್ವಲ್ಪ ಕಡಿಮೆಗೊಳಿಸಿ ಹೇಳಿದೆ –

**ರಾತ್ರೇಃ ಪಶ್ಚಿಮಯಾಮಸ್ಯ ಮೂಹೂರ್ತೋ ಯಸ್ತೃತೀಯಕಃ**
**ಸ ಬ್ರಾಹ್ಮ ಇತಿ ವಿಜ್ಞೇಯೋ ವಿಹಿತಃ ಸ ಪ್ರಬೋಧನೇ**

ದಿವಾಮಾನದ 60 ಘಳಿಗೆಯಲ್ಲಿ 55 ಘಳಿಗೆ ಕಳೆಯಲು ಉಷಃ–ಕಾಲ. 57 ಕಳೆಯಲು ಅರುಣೋದಯಕಾಲ. 58 ಕಳೆಯಲು ಪ್ರಾತಃಕಾಲ. ಅನಂತರ ಸೂರ್ಯೋದಯ ಎಂದು **ಬ್ರಹ್ಮವೈವರ್ತದ** ಮಾತು–

**ಪಂಚಪಂಚ ಉಷಃಕಾಲಃ ಸಪ್ತಪಂಚಾರುಣೋದಯಃ**
**ಅಷ್ಟಪಂಚ ಭವೇತ್ ಪ್ರಾತಃ ಶೇಷಃ ಸೂರ್ಯೋದಯಃ ಸ್ಮೃತಃ**

ಉಷಃಕಾಲಕ್ಕೂ ಬ್ರಾಹ್ಮಮುಹೂರ್ತ ಎನ್ನುವರೆಂದು ಮಧ್ವಾಚಾರ್ಯರು **ಛಾಂದೋಗ್ಯಭಾಷ್ಯದಲ್ಲಿ** ತಿಳಿಸಿರುತ್ತಾರೆ –

**ಬ್ರಾಹ್ಮೋ ಮುಹೂರ್ತ ಇತ್ಯುಷಃಕಾಲಸ್ಯ ಪ್ರಸಿದ್ಧೇಶ್ಚ**

**ವರಾಹಪುರಾಣವು** ಉಷಃಕಾಲದಲ್ಲೆದ್ದು ದೇವರನ್ನು ನೆನೆವಂತೆ ಕರೆಕೊಟ್ಟಿದೆ –



**ಉಷಃಕಾಲೇ ಸಮುತ್ತಿಷ್ಠೇತ್ ಸರ್ವದಾ ವೈಷ್ಣವೋ ನರಃ**

**ಪ್ರಕ್ಷಾಳ್ಯ ಪಾದೌ ಪಾಣೀ ಚ ತತ ಆಚಮ್ಯ ಭಕ್ತಿತಃ**

**ಸುಖಾಸೀನಃ ಸ್ಮರೇನ್ಮೂರ್ತಿಂ ಮದೀಯಾಮಿಷ್ಟದೇವತಾಮ್**

ಮೂರು ಗಂಟೆಗೆ ಅಥವಾ ನಾಲ್ಕು ಗಂಟೆಗೆ ಏಳದಿದ್ದರೂ ನಾಲ್ಕೂವರೆಗಾದರೂ ಎದ್ದು ಹರಿಯ ನೆನೆಯಲು ಬ್ರಾಹ್ಮಮುಹೂರ್ತವನ್ನು **ಸ್ಕಾಂದಪುರಾಣ** ರಾತ್ರಿಯ ಕಡೆಯ ಅರ್ಧಯಾಮ ಎಂದು ತಿಳಿಸಿದೆ –

**ರಜನೀ ಪ್ರಾಂತಯಾಮಾರ್ಧಂ ಬ್ರಾಹ್ಮಃ ಸಮಯ ಉಚ್ಯತೇ**

**ರಾತ್ರೌ ತು ಪಶ್ಚಿಮೇ ಯಾಮೇ ಪಶ್ಚಾದ್ರ್ಧೋ ಬ್ರಾಹ್ಮ ಉಚ್ಯತೇ** (ಕರ್ಮಸಿದ್ಧಾಂತ)

ಬೆಳಿಗ್ಗೆ ಏಳುವ ಮೊದಲು ಹಿಂದಿನ ದಿನ ತಿಂದ ಆಹಾರ ಜೀರ್ಣವಾಗಿರಬೇಕು. ಇದಕ್ಕಾಗಿ ಏಳುವ ಸಮಯವನ್ನು, ರಾತ್ರಿ ಮಲಗುವ ಸಮಯವನ್ನು ಆಹಾರ ಸ್ವೀಕರಿಸುವ ಕಾಲವನ್ನು ಜಪದ ಹೊತ್ತನ್ನು ಸಮರ್ಪಕವಾಗಿಯೇ ತಿಳಿಸಿಕೊಟ್ಟಿದ್ದಾರೆ. ರಾತ್ರಿ ತಡವಾಗಿ ಉಂಡು ಮಲಗಿದರೆ, ಬೆಳಿಗ್ಗೆ ಬೇಗ ಎದ್ದು ಸ್ನಾನಕ್ಕೆ ಅನುಷ್ಠಾನಕ್ಕೆ ತೆರಳಿದರೆ ಅದು ತಪ್ಪೆನಿಸುವುದು. ಆಹಾರ ಜೀರ್ಣಿಸದೆ ಹೊಟ್ಟೆ ಖಾಲಿಯಾಗದೆ ಸ್ನಾನಾದಿಗಳನ್ನು ನಡೆಸುವಂತಿಲ್ಲ ಎನ್ನುವುದಾಗಿ **ನಾರದೀಯಶಿಕ್ಷೆಯ** ಮಾತು –

**ಜೀರ್ಣಾಹಾರಃ ಪ್ರಬುದ್ಧಸ್ಸನ್ ಉಷಸಿ ಬ್ರಹ್ಮ ಚಿಂತಯೇತ್**

ಸದಾಚಾರಸ್ಮೃತಿಯಲ್ಲಿ ಮಧ್ವಾಚಾರ್ಯರು **ಯಾಮಾತ್ ಪರತ ಏವಾಥ ಸ್ವಪೇತ್** ಎನ್ನುವುದಾಗಿ ಸೂರ್ಯಾಸ್ತದ ಮೂರು ಗಂಟೆ ಬಳಿಕ ರಾತ್ರಿ ಮಲಗಲು ಹೇಳಿದ್ದಾರೆ. ಮಲಗುವ ಮುನ್ನ ಘಳಿಗೆ ಸಮಯಕ್ಕಿಂತ ಮೊದಲಾದರೂ ಆಹಾರ ಸೇವಿಸಿರಬೇಕು. 6–30ಕ್ಕೆ ಸೂರ್ಯಾಸ್ತವಾದರೆ ರಾತ್ರಿ 9–30ಕ್ಕೆ ಮಲಗುವುದು. ರಾತ್ರಿ ಆಹಾರ ಸೇವನೆ 9–00. ಬೆಳಿಗ್ಗೆ ಸೂರ್ಯೋದಯ 6–30 ಆದರೆ 3–30ಕ್ಕೆ ಏಳುವುದು. ಸುಮಾರಾಗಿ ರಾತ್ರಿ ನಿದ್ದೆ 6 ಗಂಟೆ. ಅಂದರೆ ನಡುರಾತ್ರಿ ಎರಡು ಯಾಮ ಕಾಲ. ಆಹಾರ ಜೀರ್ಣದ ಸಮಯ ಆರೋಗ್ಯವಂತನಿಗೆ 6 ಗಂಟೆ. ಈ ಲೆಕ್ಕಾಚಾರದಲ್ಲಿ



ಬೆಳಗ್ಗಿನ ಉತ್ಥಾನವನ್ನು ನಡೆಸಬೇಕು. ಹೀಗೆಯೇ ಮೂರು ಹೊತ್ತಿನ ಜಪ-ಪೂಜೆಗಳಿಗೆ ಕಡಿಮೆ ಎಂದರೆ ಹಗಲಿನಲ್ಲಿ 6 ಗಂಟೆ ಸಮಯವನ್ನು ನೀಡಬೇಕು. ಮತ್ತೆ 6 ಗಂಟೆ ಸಮಯ ಇಂದಿನ ಕಾಲದಲ್ಲಿ ತನ್ನ ವೃತ್ತಿಗಾಗಿ. ಉಳಿದ 6 ಗಂಟೆ ಸಮಯವನ್ನು ಜ್ಞಾನಕಾರ್ಯಕ್ಕೆ ಮೀಸಲಿಟ್ಟರೆ ಮುಂದಿನ ಪಯಣ ಸುಗಮ.

**ಅರ್ಚನಾನಾವನೀತದಲ್ಲಿಯೂ** ಇಡೀ ದಿನದ ಕೆಲಸಗಳಲ್ಲಿ ದೇವರನಾಮ ಚಿಂತನೆಯನ್ನು ಹೇಳಿರುವರು. ಏಳುವಾಗಂತೂ ಹರಿ ನಾಮಸ್ಮರಣೆಯನ್ನೇ ತಿಳಿಸಿದ್ದಾರೆ –

**ಉತ್ತಿಷ್ಠನ್ ಚಿಂತಯ ಹರಿಂ ವ್ರಜನ್ ಚಿಂತಯ ಕೇಶವಮ್**

**ಭುಂಜನ್ ಚಿಂತಯ ಗೋವಿಂದಂ ಸ್ವಪನ್ ಚಿಂತಯ ಮಾಧವಮ್**

ಏಳುವಾಗ ಹರಿಯ ಕರೆದರೆ ಪಾಪಪರಿಹಾರವಾಗಲಿದೆ –

**ಶಯನಾದುತ್ಥಿತೋ ಯಸ್ತು ಕೀರ್ತ್ತಯೇನ್ಮಧುಸೂದನಮ್**

**ಕೀರ್ತ್ತನಾಂತೇಽಸ್ಯ ಪಾಪಾನಿ ನಾಶಮಾಯಾಂತ್ಯಶೇಷತಃ** (ಸ್ಕಾಂದಪುರಾಣ)

ಬ್ರಾಹ್ಮಕಾಲದಲ್ಲಿ ನಿದ್ದೆ ಬಿಟ್ಟು ಏಳದಿದ್ದರೆ ಇದ್ದ ಪುಣ್ಯವೂ ನಾಶವೆಂದು **ಸ್ಮೃತಿಚಂದ್ರಿಕಾ** –

**ಬ್ರಾಹ್ಮೇ ಮುಹೂರ್ತ್ತೇ ಯಾ ನಿದ್ರಾ ಸಾ ಪುಣ್ಯಕ್ಷಯಕಾರಿಣೀ**

**ಅತಃ ಪ್ರಬೋಧೋಽಸ್ಮಾತ್** ಎನ್ನುವುದಾಗಿ ವೇದವ್ಯಾಸರು ಭಗವಂತನಿಂದಲೇ ಎಲ್ಲರಿಗೂ ಎಚ್ಚರ ಎನ್ನುವ ಚಿಂತನೆಯನ್ನು ಸೂತ್ರಪ್ರಾಯವಾಗಿ ನೀಡಿದ್ದಾರೆ. ನಮ್ಮ ಶರೀರಕ್ಕೆ ಪೂರ್ಣ ಎಚ್ಚರ ನೀಡಿದ ದೇವರಿಗೆ ಮೊದಲು ಥ್ಯಾಂಕ್ಸ್ ಹೇಳೋಣ.

ಹೀಗೆಯೇ ಎದ್ದಕೂಡಲೇ ಭೂಮಿಯ ವಂದನೆಯ ಮಾತು **ಮಹಾಭಾರತದಲ್ಲಿ** ವಿಹಿತವಾಗಿದೆ –

**ನಮೋಽಸ್ತು ಪ್ರಿಯದತ್ತಾಯೇತ್ಯೇವಂವಾದೀ ದಿನೇದಿನೇ**

**ಭೂಮಿಮಾಕ್ರಮತೇ ಪ್ರಾತಃ ಶಯನಾದುತ್ಥಿತಶ್ಚ ಯಃ**

**ಕಿಂ ಚ ಶ್ರೇಷ್ಠತಮಂ ಶೌಚಂ ತನ್ಮೇ ಬ್ರೂಹಿ ಪಿತಾಮಹ**

ಅತ್ಯಂತ ಪ್ರಶಸ್ತವಾದ ಶೌಚ ಏನೆಂದು ಭೀಷ್ಮನಲ್ಲಿ ಧರ್ಮಜ ಪ್ರಶ್ನಿಸುವನು. **ಶಮಃ ಶೌಚಸ್ಯ ಲಕ್ಷಣಮ್** ಎನ್ನುವುದಾಗಿ ಭೀಷ್ಮನು ಉತ್ತರಿಸುವನು. ಉದ್ಧವನು ಕೃಷ್ಣನಲ್ಲಿ **ಕಃ ಶಮಃ** ಎನ್ನುವುದಾಗಿ ಶಮ ಎಂದರೆ ಏನೆಂದು ಕೇಳಿದ್ದಾನೆ. **ಶಮೋ ಮನ್ನಿಷ್ಠತಾ ಬುದ್ಧೇಃ** ಎಂದು ಕೃಷ್ಣನ ಉತ್ತರ. ತನ್ನಲ್ಲಿ ನೆಲೆಗೊಂಡ ಬುದ್ಧಿಯೇ ಶಮದ ಲಕ್ಷಣ. ಹೀಗೆ ಎಲ್ಲಕ್ಕಿಂತ ಮಡಿಯಾಗಿರುವುದು ಮನಸ್ಸು ಭಗವಂತನಲ್ಲಿ ನೆಲೆಗೊಂಡಾಗ. ಎಲ್ಲದ್ದಕ್ಕೂ ಈ ಶೌಚ ಮೊದಲು ಬೇಕು.

**ಶೌಚಯತ್ನಃ ಸದಾ ಕಾರ್ಯೋ ವೈಷ್ಣವೇನ ವಿಶೇಷತಃ**

**ಆರಾಧ್ಯತೇ ಯತೋ ವಿಷ್ಣುಃ ಸಾಕ್ಷಾತ್ಕೈವಲ್ಯಭಾಜನಃ** (ಬೃ.ಬ್ರಹ್ಮಸಂಹಿತಾ)

ಆಚಾರ್ಯಮಧ್ವರು **ತಂತ್ರಸಾರಸಂಗ್ರಹ**ದಲ್ಲಿ ನಿಯಮದಲ್ಲಿ ಶೌಚವನ್ನು ಮೊದಲನೆಯದಾಗಿ ಉಲ್ಲೇಖಿಸಿದ್ದಾರೆ. **ಆದಿತ್ಯಪುರಾಣವು** ಮೃಜ್ಜಲಶೌಚದಲ್ಲಿ ಸಂಖ್ಯಾವ್ಯತ್ಯಾಸವನ್ನು ರಾತ್ರಿ–ಪಯಣ–ಆರ್ತಭೇದದಿಂದ ತಿಳಿಸಿದೆ. ಸಮರ್ಥನಾದವನು ಶೌಚವನ್ನು ಪೂರ್ತಿ ಪಾಲಿಸಲು ಹೇಳಿದೆ–

**ದಿವಾ ಶೌಚಸ್ಯ ನಿಶ್ಯರ್ಧಂ ಪಥಿ ಪಾದಂ ವಿಧೀಯತೇ**

**ಆರ್ತ್ತಃ ಕುರ್ಯಾದ್ಯಥಾಶಕ್ತಿ ಶಕ್ತಃ ಕುರ್ಯಾದ್ಯಥೋದಿತಮ್**

**ಸ್ಕಾಂದಪುರಾಣವು** ಆಶ್ರಮಗಳ ತಾರತಮ್ಯಕ್ಕನುಗುಣವಾಗಿಯೂ ದುಪ್ಪಟ್ಟು ಶೌಚವನ್ನು ಹೇಳಿದೆ. ಅಶಕ್ತರನ್ನೂ, ಸ್ತ್ರೀಯರನ್ನೂ ಗಮನಿಸಿದೆ –

**ಕ್ರಮಾದ್ವೈಗುಣ್ಯಮೇವಾಸ್ಮಾತ್ ಬ್ರಹ್ಮಚರ್ಯಾದಿಷು ತ್ರಿಷು**

**ದಿವಾ ವಿಹಿತಶೌಚಸ್ಯ ರಾತ್ರಾವರ್ಧಂ ಸಮಾಚರೇತ್**

**ರುಜ್ಯರ್ಧಂ ಚ ತದರ್ಧಂ ಚ ಪಥಿ ಚೌರಾದಿಬಾಧಿತೇ**

**ತದರ್ಧಂ ಯೋಷಿತಾಂ ಚಾಪಿ ಸುಸ್ಥೇ ನ್ಯೂನಂ ನ ಕಾರಯೇತ್**

ಇಲ್ಲಿ ಇನ್ನೊಂದೆಡೆ ಬೇರೆ ಊರಿನಲ್ಲಿನಿಂತಾಗ ಅರ್ಧದಷ್ಟು ಶೌಚವನ್ನು ಹೇಳಿದ್ದಾರೆ. ಮತ್ತುಳಿದ ಕೆಲವು ಶೌಚಾಚರಣೆಯಲ್ಲಿ ಹೆಚ್ಚು–ಕಡಿಮೆ ಇದೆ –



**ಪರಗ್ರಾಮೇ ತದರ್ಧಂ ಚ ಪಥಿ ತಸ್ಯಾರ್ಧಮೇವ ಚ**

**ತದರ್ಧಂ ರೋಗಿಣಾಂ ಚಾಽಪಿ ಸುಸ್ಥೇ ನ್ಯೂನಂ ನ ಕಾರಯೇತ್**

ನಗರಕ್ಕೆ ಬಂದಾಗ ಶೌಚಾಚರಣೆ ತುಂಬಾ ಕಷ್ಟಸಾಧ್ಯ ಎನ್ನುವ ನೆಲೆಯಲ್ಲಿ ಮತ್ತೂ ಕಡಿಮೆ ಶುದ್ಧಿಯ ವಿಚಾರವನ್ನಿಲ್ಲಿ ತಿಳಿಸಲಾಗಿದೆ. ದಾರಿಯ ನಡುವೆ ಪ್ರಯಾಣದ ಸಂದರ್ಭದಲ್ಲಿ ಸಂಸ್ಕಾರ ಕಡಿಮೆ ಇದ್ದವರಿಗೆ ಹೇಳಿದಷ್ಟನ್ನಾದರೂ ಶೌಚವನ್ನು ನಡೆಸಬೇಕು –

**ಸ್ವಗ್ರಾಮೇ ಸರ್ವಮಾಚಾರಂ ಅನ್ಯಗ್ರಾಮೇ ತದರ್ಧಕಮ್**

**ಪಟ್ಟಣೇ ಪಾದಮಾಚಾರಂ ಪಥಿ ಶೂದ್ರವದಾಚರೇತ್**

ಮಲಮೂತ್ರದ ವಿಸರ್ಜನದ ಶೌಚದಲ್ಲಿ ಮೊದಲಿಗೆ ಎಡ ಕೈಕಾಲನ್ನು ತೊಳೆದು ಮತ್ತೆ ಬಲ ಕೈಕಾಲನ್ನು ತೊಳೆಯಬೇಕೆಂದು **ಆಚಾರಾರ್ಕ** ತಿಳಿಸಿದೆ–

**ಶೌಚೇ ತು ವಾಮಪೂರ್ವಂ ಸ್ಯಾತ್ ಅನ್ಯತ್ರ ದಕ್ಷಿಣಂ ಸದಾ**

ಕಾಲುಗಳನ್ನು ಕಾಲ್ಗಂಟಿನವರೆಗೆ ತೊಳೆದುಕೊಳ್ಳಬೇಕು. ಕೈಗಳನ್ನು ಮೊಣಗಂಟಿನವರೆಗೆ ತೊಳೆದುಕೊಳ್ಳಬೇಕು ಎಂದು **ಮಹಾಭಾರತ** –

**ಪ್ರಕ್ಷಾಳ್ಯ ಪಾದಾವಾಜಾನ್ವೋಃ ಹಸ್ತಾವಾಕೂರ್ಪ್ಪರಂ ಪುನಃ**

ಬಲಗೈಯನ್ನು ನಾಭಿಯಿಂದ ಕೆಳಗೆ ತೊಳೆಯಲು – ತಿಕ್ಕಲು ಉಪಯೋಗಿಸಬಾರದು. ಹಾಗೆಯೆ ಎಡಕೈಯನ್ನು ನಾಭಿಯಿಂದ ಮೇಲಿನ ದೇಹದ ಅಂಗಗಳ ಶೌಚಕ್ಕೆ ಬಳಸಬಾರದು ಎಂದು **ದೇವಲರ** ಮಾತು

**ಧರ್ಮವಿದ್ದಕ್ಷಿಣಂ ಹಸ್ತಂ ಅಧಃಶೌಚೇ ನ ಯೋಜಯೇತ್**

**ತಥಾ ಚ ವಾಮಹಸ್ತೇನ ನಾಭೇರೂರ್ಧ್ವಂ ನ ಶೋಧಯೇತ್**

ದುರ್ಗಂಧ ಹೋಗುವವರೆಗೆ ಮೃಜ್ಜಲಗಳಿಂದ ಕೈಕಾಲುಗಳನ್ನು ತೊಳೆಯಬೇಕು ಎನ್ನುವುದು **ಯಾಜ್ಞವಲ್ಕ್ಯರ** ನುಡಿ ಮಾಧವೀಯದಲ್ಲಿದೆ.

**ಗಂಧಲೇಪಕ್ಷಯಕರಂ ಶೌಚಂ ಕುರ್ಯಾದತಂದ್ರಿತಃ**

ಸಾಮಾನ್ಯವಾಗಿ ಏಳರ ವಿಶೇಷತೆಯಲ್ಲಿ ಮೃತ್ತಿಕಾಶೌಚವನ್ನೂ ಕೈಗಳಿಗೆ ಏಳು ಬಾರಿ ನಡೆಸುವಂತೆ **ಶಾತಾತಪರ** ಮಾತು ಇದೆ –



**ಉಭಯೋಃ ಸಪ್ತ ದಾತವ್ಯಾ ಮೃದಃ ಶುದ್ಧಿಮಭೀಪ್ಸತಾ**

ವಿಸರ್ಗದ ಸಮಯದಲ್ಲಿ ಉಪವೀತವನ್ನು ಮಾಲಾಕಾರ ಮಾಡಿಕೊಂಡು ಬಲಕಿವಿಗೆ ಹಾಕಿರಬೇಕು–

**ಧೃತ್ವಾ ಕರ್ಣ್ಣೇ ಯಜ್ಞಸೂತ್ರಂ ತ್ಯಕ್ತ್ವಾ ಮೂತ್ರಪುರೀಷಕಮ್** (ಶೇಷಸಂಹಿತೆ)
**ಪವಿತ್ರಮುಪವೀತಂ ಚ ದಕ್ಷಿಣೇ ಶ್ರವಣೇ ದ್ವಿಜಾಃ**
**ಮಲಮೂತ್ರಪರಿತ್ಯಾಗೇ ಕುರ್ಯಾನ್ನಿಯತಮಾನಸಃ** (ಬೃಹತ್‌ಬ್ರಹ್ಮಸಂಹಿತಾ)

ಚಪ್ಪಾಳೆ ಮೂರು ತಟ್ಟಿ ಸುತ್ತಮುತ್ತಲಿನ ಶಕ್ತಿಗಳು ದೂರ ಸರಿಯುವಂತೆ ಪ್ರಾರ್ಥನೆಗೈದು ಮಲ ವಿಸರ್ಜಿಸಬೇಕೆಂದು **ನಾರದೀಯಪುರಾಣ** –

**ಗಚ್ಛಂತು ಋಷಯೋ ದೇವಾಃ ಪಿಶಾಚಾ ಯೇ ಚ ಗುಹ್ಯಕಾಃ**
**ಪಿತೃಭೂತಗಣಾಃ ಸರ್ವೇ ಕರಿಷ್ಯೇ ಮಲಮೋಚನಮ್**
**ಇತಿ ತಾಲತ್ರಯಂ ದತ್ವಾ ಶಿರಃ ಪ್ರಾವೃತ್ಯ ವಾಸಸಾ**
**ದಕ್ಷಿಣಾಭಿಮುಖಂ ರಾತ್ರೌ ದಿವಾ ಸ್ಥಿತ್ವಾ ಹ್ಯುದಙ್ಮುಖಃ**

ಸ್ನಾನಕ್ಕೆ ತೆರಳುತ್ತಾ ಅಲ್ಲೇ ಎಲ್ಲವನ್ನೂ ಮುಗಿಸುವಂತೆ ನದೀತೀರವನ್ನೆಲ್ಲಾ ಹಾಳುಮಾಡದಂತೆ ಎಚ್ಚರಿಸಿದೆ **ವಾಯುಪುರಾಣ.** ತೀರ್ಥಗಳ ಕ್ಷೇತ್ರಗಳ ಸ್ವಚ್ಛತೆಯನ್ನು ಕಾಪಾಡುವುದು ಮುಖ್ಯಧರ್ಮ –

**ನದೀತೀರೇ ನ ಕರ್ತ್ತವ್ಯಂ ಮಲಮೂತ್ರವಿಸರ್ಜ್ಜನಮ್**

ತ್ರಿಕರಣದಲ್ಲಿ ಕೋಪ–ತಾಪಗಳು ಇದ್ದಲ್ಲಿ ಆತ ಅಶುಚಿ ಎಂದೆ ಮದನರತ್ನ ನಿಂದಿಸಿದೆ – **ದಾನವ್ರತಾನಿ ನಿಯಮಾ ಜ್ಞಾನಂ ಧ್ಯಾನಂ ಹುತಂ ಜಪಃ**

**ಯತ್ನೇನಾಪಿ ಕೃತಂ ಸರ್ವಂ ಕ್ರೋಧಿತಸ್ಯ ವೃಥಾ ಭವೇತ್**

ಆಸ್ತಿಕಬುದ್ಧಿಯಲ್ಲಿ ಶ್ರದ್ಧೆಯಿಂದ ಮಾಡಿದ ಎಲ್ಲ ಕರ್ಮಗಳೂ ಗಡಿಬಿಡಿಯಿಲ್ಲದೆ ಕೋಪತಾಪಗಳಿಗೊಳಗಾಗದೆ ಶುಚಿರ್ಭೂತವಾಗಿ ಮಾಡಲು ಯೋಗ್ಯಗಳೆಂದು **ಮಹಾಭಾರತ** ಶ್ರಾದ್ಧವಿಷಯದಲ್ಲಿ ಎಚ್ಚರಿಕೆ ನೀಡಿದೆ –

**ತ್ರೀಣಿ ಚಾತ್ರ ಪ್ರಶಂಸಂತಿ ಶೌಚಮಕ್ರೋಧಮತ್ವರಾಮ್**



# ದಂತಧಾವನ

ಎದ್ದ ಬಳಿಕ ಮೋರೆ ತೊಳೆದು ಶುಚಿಯಾಗಿ ದೇವರ ನೆನೆದು ಪ್ರಾರ್ಥನೆಯ ಮೂಲಕ ಹಲ್ಲುಜ್ಜುವಂತೆ ಕಾತ್ಯಾಯನರ ಕಾರಿಕೆ –

**ಉತ್ಥಾಯ ನೇತ್ರೇ ಪ್ರಕ್ಷಾಳ್ಯ ಶುಚಿರ್ಭೂತ್ವಾ ಸಮಾಹಿತಃ**
**ಪರಿಜಪ್ಯ ಚ ಮಂತ್ರೇಣ ಭಕ್ಷಯೇದ್ದಂತಧಾವನಮ್**

ಸ್ನಾನದ ಮೊದಲು ಹಲ್ಲುಜ್ಜಬೇಕೆಂದು ಬೃಹತ್‌ಬ್ರಹ್ಮಸಂಹಿತೆಯ ಆದೇಶವಿದೆ. ಸಂಹಿತೆಯಲ್ಲಿ ದಂತಧಾವನದ ಅನೇಕ ಅಂಶಗಳು ಬಂದಿವೆ. ಮುಖ್ಯವಾಗಿ ಅನೇಕ ನಿಷಿದ್ಧ ದಿನಗಳಲ್ಲಿ ಅಮಾದಂದು ಮತ್ತೆ ದಿನತ್ರಯಗಳಲ್ಲಿ ದಂತಧಾವನ ನಡೆಸಬಾರದು –

**ದಂತಧಾವನಿಕಂ ಕರ್ಮ್ಮ ಸ್ನಾನಾತ್ಪೂರ್ವಮಥಾಚರೇತ್**
**ತದಕೃತ್ವಾ ತು ಯಃ ಸ್ನಾತಿ ತಸ್ಯ ಸ್ನಾನಂ ತು ನಿಷ್ಫಲಮ್**

**ನ ಕುರ್ಯಾತ್ ದಂತಕಾಷ್ಠಂ ಚ ವೈಷ್ಣವೋ ದೂಷಿತೇ ದಿನೇ**
**ಶ್ರಾದ್ಧಾಹೇ ಜನ್ಮದಿವಸೇ ವ್ರತೇ ಚೈವೋಪವಾಸಕೇ**
**ದ್ವಾದಶ್ಯಾಂ ರವಿವಾರೇ ಚ ಚಂದ್ರನಾಶೇ ತು ವರ್ಜ್ಜಯೇತ್**
**ನಂದಾಸು ಚ ನವಮ್ಯಾಂ ಚ ದ್ವಾದಶ್ಯಾಂ ಭೌಮವಾಸರೇ**
**ದಂತಕಾಷ್ಠಂ ನ ಕುರ್ವೀತ ಚಾಮಾಯಾಂ ತು ವಿಶೇಷತಃ**

**ಕಾಷ್ಠಾಭಾವದಿನೇ ಶುದ್ಧಿಂ ಕುರ್ಯಾತ್ಪರ್ಣ್ಣಾದಿಭಿರ್ದ್ವಿಜಃ**
**ಅಲಾಭೇ ದಂತಕಾಷ್ಠಾನಾಂ ನಿಷಿದ್ಧಾಯಾಂ ತಿಥೌ ತಥಾ**
**ಅಪಾಂ ದ್ವಾದಶ ಗಂಡೂಷೈಃ ವಿದಧ್ಯಾದ್ದಂತಧಾವನಮ್**

ನಿಷೇಧದಂದು ಹನ್ನೆರಡು ಬಾರಿ ಬಾಯಿ ಮುಕ್ಕಳಿಸಿದರೆ ಸಾಕು –

**ಅಲಾಭೇ ದಂತಕಾಷ್ಠಾನಾಂ ನಿಷಿದ್ಧೇ ವಾಥ ವಾಸರೇ**
**ಗಂಡೂಷಾ ದ್ವಾದಶ ಗ್ರಾಹ್ಯಾ ಮುಖಸ್ಯ ಪರಿಶುದ್ಧಯೇ** (ಸ್ಕಾಂದಪುರಾಣ)

ವ್ಯಾಸರು ಕ್ರಿಯಾನುಸಾರವಾಗಿ ಗಂಡೂಷದ ಲೆಕ್ಕವನ್ನು ನೀಡಿದ್ದಾರೆ –

**ಕುರ್ಯಾದ್ದ್ವಾದಶಗಂಡೂಷಾನ್ ಪುರೀಷೋತ್ಸರ್ಜ್ಜನೇ ಬುಧಃ**



**ಮೂತ್ರೇ ಚತ್ವಾರಿ ಗಂಡೂಷಾನ್ ಭೋಜನಾಂತೇ ತು ಷೋಡಶ**

**ಭಕ್ಷ್ಯಭೋಜ್ಯಾವಸಾನೇ ತು ಗಂಡೂಷೋಽಷ್ಟೌ ವಿಧೀಯತೇ**

ಎದುರು ದೇವತೆಗಳಿದ್ದಾರೆ. ಬಲಗಡೆ ಪಿತೃಗಳಿದ್ದಾರೆ. ಹಿಂದೆ ಋಷಿಗಳು ಇರಲಾಗಿ ಎಡಬದಿಗೆ ಬಾಯಿಮುಕ್ಕಳಿಸಿ ಉಗುಳಬೇಕು –

**ಪುರತೋ ದೇವತಾಸ್ಸರ್ವಾ ದಕ್ಷಿಣೇ ಪಿತರಸ್ತಥಾ**

**ಪೃಷ್ಠತೋ ಋಷಯಸ್ಸರ್ವೇ ವಾಮೇ ಗಂಡೂಷಮಾಚರೇತ್**

ಆಯುಷ್ಕರ್ಮದಂತೆ ದಂತಧಾವನವು ಬೆಳಿಗ್ಗೆಯೇ ಆಗಬೇಕು. ಪೂರ್ವಕ್ಕೆ ಯಾ ಉತ್ತರಕ್ಕೆ ಮುಖ ಮಾಡಿ ಹಲ್ಲುಜ್ಜಬೇಕು –

**ಸಂಸ್ಕಾರಂ ಕೇಶದಂತಾನಾಂ ಪ್ರಾತರೇವ ಸಮಾಚರೇತ್**

**ಪಶ್ಚಿಮೇ ದಕ್ಷಿಣೇ ಚೈವ ನ ಕುರ್ಯಾತ್ ದಂತಧಾವನಮ್** (ಪದ್ಮಪುರಾಣ)

**ಗರ್ಗಾಚಾರ್ಯರು** ಹಲ್ಲುಜ್ಜುವ ದಿಕ್ಕಿನ ಫಲವನ್ನು ಹೇಳುತ್ತಾ ಪೂರ್ವವನ್ನು ಮಾತ್ರ ಸುಫಲವನ್ನಾಗಿ ಹೇಳಿದ್ದಾರೆ –

**ಪ್ರಾಙ್ಮುಖಸ್ಯ ಧೃತಿಃ ಸೌಖ್ಯಂ ಶರೀರಾರೋಗ್ಯಮೇವ ಚ**

**ದಕ್ಷಿಣೇನ ತಥಾ ಕಷ್ಟಂ ಪಶ್ಚಿಮೇನ ಪರಾಜಯಃ**

**ಉತ್ತರೇಣ ಗವಾಂ ನಾಶಂ ಸ್ತ್ರೀಣಾಂ ಪರಿಜನಸ್ಯ ಚ**

ಕಡ್ಡಿಯನ್ನು ತೊಳೆದೇ ಉಪಯೋಗಿಸಬೇಕು. ಹಲ್ಲುಜ್ಜಿದ ಬಳಿಕ ತೊಳೆದೇ ಎಸೆಯಬೇಕು. ಇದೊಂದು ಮುಖ್ಯ ವೈಜ್ಞಾನಿಕ ಪದ್ಧತಿ. ಇಲ್ಲದಲ್ಲಿ ಮನುಷ್ಯನ ವಿಷವು ವಾತಾವರಣಕ್ಕೆ ಮತ್ತು ಅಲ್ಲಿನ ಕ್ರಿಮಿಕೀಟವರ್ಗಕ್ಕೆ ತಗಲುವುದು–

**ದಂತಕಾಷ್ಠಂ ಹೃದಾ ಜಪ್ತಂ ಕ್ಷೀರವೃಕ್ಷಾದಿಸಂಭವಮ್**

**ಸಂಶೋಧ್ಯ ದಂತಾನ್ ಸಂಕ್ಷಿಪ್ಯ ಪ್ರಕ್ಷಾಳ್ಯೈತತ್ ಕ್ಷಿಪೇದ್ಭುವಿ** (ಅಗ್ನಿಪುರಾಣ)

**ಪ್ರಕ್ಷಾಳ್ಯ ಭಕ್ಷಯೇತ್ಕಾಷ್ಠಂ ಪ್ರಕ್ಷಾಳ್ಯೈವ ವಿಸರ್ಜಯೇತ್**

ಹಲ್ಲುಜ್ಜುವಾಗ ವನಸ್ಪತಿಯಲ್ಲಿನ ಪ್ರಾರ್ಥನೆ ನಾರದೀಯದಲ್ಲಿದೆ –

**ಮಂತ್ರೇಣೈವ ತರೋರ್ಗ್ರಾಹ್ಯಂ ದಂತಕಾಷ್ಠಂ ವಿಪಶ್ಚಿತಾ**

**ಆಯುರ್ಬಲಂ ಯಶೋ ವರ್ಚಃ ಪ್ರಜಾಃ ಪಶುವಸೂನಿ ಚ**



**ಬ್ರಹ್ಮ ಪ್ರಜ್ಞಾಂ ಚ ಮೇಧಾಂ ಚ ತ್ವಂ ನೋ ದೇಹಿ ವನಸ್ಪತೇ**

**ಕಾಮದೇವಪದಂ ಜೇಂತಂ ತಥಾ ಸರ್ವಜನಪ್ರಿಯಮ್**

**ಹೃದಂತಃ ಕಾಮಬೀಜಾಢ್ಯಂ ದಂತಾಂಶ್ಚಾನೇನ ಶೋಧಯೇತ್**

**ಜಿಹ್ವೋಲ್ಲೇಖೋ ವಾಗ್ಭವೇನ ಮೂಲೇನ ಕ್ಷಾಳಯೇನ್ಮುಖಮ್**

**ಸ್ಕಾಂದಪುರಾಣವು** ಹಲ್ಲುಜ್ಜಲು **ಆಯುರ್ಬಲಂ** ಮಂತ್ರದ ಜೊತೆಗೆ ಇನ್ನೊಂದು ಮಂತ್ರವನ್ನು ನೀಡಿದೆ. ಮಂತ್ರೋಚ್ಚಾರಣೆಯಿಂದ ಮರದೊಡೆಯ ಚಂದ್ರನ ಅನುಗ್ರಹವಾಗಲಿದೆ ಎಂದಿದೆ –

**ಅನ್ನಾದ್ಯಾಯ ವ್ಯೂಹಧ್ವಂ ಸೋಮೋ ರಾಜಾಯಮಾಗತಮ್**

**ಸ ಮೇ ಮುಖಂ ಪ್ರಮಾರ್ಕ್ಷ್ಯತೇ ಯಶಸಾ ಚ ಭಗೇನ ಚ**

**ಮಂತ್ರಾವೇತೌ ಸಮುಚ್ಚಾರ್ಯ ಯಃಕುರ್ಯಾದ್ದಂತಧಾವನಮ್**

**ವನಸ್ಪತಿಗತಃ ಸೋಮಃ ತಸ್ಯ ನಿತ್ಯಂ ಪ್ರಸೀದತಿ**

ನಾಲಗೆಯನ್ನು ಗೀರುವ ಕಡ್ಡಿಯನ್ನು ಬಿಲ್ಲಿನಂತೆ ಬಗ್ಗಿಸಿರಬೇಕೆಂದೂ ಇಲ್ಲಿ ಹೇಳಲಾಗಿದೆ –

**ಜಿಹ್ವೋಲ್ಲೇಖನಿಕಾಂ ಚಾಪಿ ಕುರ್ಯಾಚ್ಚಾಪಾಕೃತಿಂ ಶುಭಾಮ್**

ಹಲ್ಲುಜ್ಜುವಾಗ ಅಯೋಗ್ಯರನ್ನೆಲ್ಲ ನೋಡಬಾರದು –

**ಪತಿತಾಂತ್ಯಜಪಾಖಂಡಿದೇವಾಜೀವರಜಸ್ವಲಾಃ**

**ಭಿಷಕ್ಪಾತಕಿಚಾಂಡಾಲಾನ್ ನ ಪಶ್ಯೇದ್ದಂತಧಾವನೇ**

ಉಪವಾಸ ವ್ರತದಂದು ಗಂಧತೀರ್ಥದ ಪ್ರಾಶನವಿಲ್ಲದಂತೆ, ಇತರ ದೇವತೆಗಳಿಗೆ ತರ್ಪಣವಿಲ್ಲದಂತೆ, ದಂತಧಾವನವೂ ಇಲ್ಲವೆಂದು **ಗರುಡಪುರಾಣ**–

**ಪುಷ್ಪಾಲಂಕಾರವಸ್ತ್ರಾಣಿ ಧೂಪಗಂಧಾನುಲೇಪನಮ್**

**ಉಪವಾಸೇನ ದುಷ್ಯೇತ್ತು ದಂತಧಾವನಮಂಜನಮ್**

**ಸ್ಕಂದಪುರಾಣದ** ಸಂವಾದ(ಮುದ್ರಿತ ಪಾಠ ಕೆಲವೆಡೆ ತಪ್ಪಿದೆ) –

**ಉಪವಾಸೇನ ದುಷ್ಯೇತ್ತು ದಂತಧಾವನಮಂಜನಮ್**

**ಗಂಧಾಲಂಕಾರಸದ್ವಸ್ತ್ರಪುಷ್ಪಮಾಲಾನುಲೇಪನಮ್**



ಮಾತಿನ ಬಲಕ್ಕಾಗಿ ದಂತಕಾಷ್ಠದ ಬದಲಿಗೆ ಎಲೆಯಿಂದ ಹಲ್ಲುಜ್ಜಲು ವ್ಯಾಸರು ಹೇಳಿದ್ದಾರೆ. ಅಮಾವಾಸ್ಯೆ ಮತ್ತು ಏಕಾದಶಿ ದಂತಧಾವನವಿಲ್ಲ –

**ಅಶೇಷಮಂತ್ರಸಿದ್ಧ್ಯರ್ಥಂ ಮಂತ್ರೋಚ್ಚಾರಣಸಿದ್ಧಯೇ**

**ತೃಣಪರ್ಣೈಃ ಸದಾ ಕುರ್ಯಾತ್ ಅಮಾಮೇಕಾದಶೀಂ ವಿನಾ**

**ಪೈಠೀನಸಿ** ವಾಕ್ಯದಲ್ಲಿ ಹುಲ್ಲು, ಎಲೆ, ನೀರು, ಬೆರಳುಗಳ ಉಪಯೋಗವನ್ನು ಹಲ್ಲುಜ್ಜುವಿಕೆಯಲ್ಲಿ ಹೇಳಲಾಗಿದೆ –

**ತೃಣಪರ್ಣೋದಕೇನಾಂಗುಲ್ಯಾ ವಾ ದಂತಾನ್ ಧಾವಯೇತ್**

ಬೆರಳುಗಳಿಂದ ಹಲ್ಲುಜ್ಜುವುದಾದರೆ ಉಂಗುರಬೆರಳು ಮತ್ತು ಹೆಬ್ಬೆರಳನ್ನು ಮಾತ್ರ ಉಪಯೋಗಿಸಬೇಕು ಎಂದು **ಯಾಜ್ಞವಲ್ಕ್ಯರು** –

**ಮುಕ್ತ್ವಾ ಚಾನಾಮಿಕಾಂಗುಷ್ಠೌ ನ ಕುರ್ಯಾದ್ದಂತಧಾವನಮ್**

ಹೆಬ್ಬೆರಳು ಅಥವಾ ಉಂಗುರಬೆರಳಿನಿಂದ ಮಾತ್ರವೇ ಹಲ್ಲುಜ್ಜಬಹುದು. ಅಥವಾ ಹೆಬ್ಬೆರಳು ಮತ್ತು ಉಂಗುರಬೆರಳುಗಳ ತುದಿಯ ಸಂಪರ್ಕದಿಂದ ಹಲ್ಲುಜ್ಜುವಾಗ ಪಂಚಪ್ರಾಣಮುದ್ರೆಗಳ ವಿನ್ಯಾಸದಲ್ಲಿ ಅಪಾನಮುದ್ರೆಯು ಏರ್ಪಡುವುದು. ಇದು ಬಾಯಿಗೆ ಸಂಬಂಧಿಸಿದೆ. ಮೂಗು–ಪ್ರಾಣ, ಕಣ್ಣು–ವ್ಯಾನ, ನೆತ್ತಿ–ಉದಾನ, ಕಂಠ–ಸಮಾನ.

ಪಾಲಾಶ ಮತ್ತು ಅಶ್ವತ್ಥದ ಕಡ್ಡಿಗಳನ್ನು ಎಂದಿಗೂ ಹಲ್ಲುಜ್ಜಲು ಉಪಯೋಗಿಸಬಾರದು. ಇತರ ಅನೇಕ ಬಗೆಯ ಮರದ ಕಡ್ಡಿಗಳ ಉಪಯೋಗ ದಿಂದ ಒಂದೊಂದಕ್ಕೆ ಒಂದೊಂದು ಬಗೆಯ ಲಾಭವನ್ನು ಪುರಾಣಗಳು ಅಲ್ಲಲ್ಲಿ ಹೇಳಿವೆ. ಅನೇಕ ಲಾಭಗಳನ್ನು ಉತ್ತರಣೆಯೊಂದಕ್ಕೇನೇ ಹೇಳಿದ್ದಾರೆ. (ಇಂದು ಋಷಿಪಂಚಮಿಯ ವ್ರತೋದ್ಯಾಪನೆಯಲ್ಲಿ ಮಾತ್ರವೇ ಇದರ ನಾಟಕೀಯ ಉಪಯೋಗವು ಕಂಡುಬರುವುದು)

**ಅಪಾಮಾರ್ಗ್ಗೇ ಧೃತಿರ್ಮ್ಮೇಧಾ ಪ್ರಜ್ಞಾ ಶಕ್ತಿರ್ವಸು ಶ್ರುತಿಃ**

**ಸುಖಂ ತಥಾ ಯಶೋ ಲಕ್ಷ್ಮೀಃ ಸೌಭಾಗ್ಯಂ ಚೋಪಜಾಯತೇ**

# ಸ್ನಾನ

ನಿತ್ಯಕರ್ಮಗಳಿಗಾಗಿ ಮಾಡುವ ಸ್ನಾನವು ಸೂರ್ಯೋದಯಕ್ಕಿಂತ ಮೊದಲ ಯಾಮದಲ್ಲಿ (ಸುಮಾರಾಗಿ 3 ಗಂಟೆ) ಮಾಡಬಹುದಷ್ಟೇ ಹೊರತು ಅದಕ್ಕೂ ಮೊದಲು ನಡೆಸುವಂತಿಲ್ಲ ಎನ್ನುವುದಾಗಿ ವ್ಯಾಸರ ಮಾತು. ಸೂರ್ಯಾಸ್ತದ ಬಳಿಕ ಒಂದು ಯಾಮದ ನಂತರ ಮಧ್ಯದ ಎರಡು ಯಾಮ ಕಾಲವು ಮಹಾರಾತ್ರಿ ಎಂದು ಕರೆಯಲ್ಪಡುತ್ತದೆ. ಅಂದರೆ ಸೂರ್ಯಾಸ್ತವು ಆರು ಗಂಟೆಗಾದರೆ ಸೂರ್ಯೋದಯವು ಆರು ಗಂಟೆಗಾಗುವುದಾದರೆ ರಾತ್ರಿಯ ನಡುವಿನ ಎರಡು ಯಾಮವು 9ರಿಂದ 3 ಗಂಟೆಯವರೆಗೆ. ಇದು ಮಧ್ಯರಾತ್ರಿ. ಇದು ನಿತ್ಯಕರ್ಮವಾದ ಜಪ-ಪೂಜೆಗೆ, ಅಡುಗೆ-ಅಶನಗಳಿಗೆ ಬೇಕಾದ ಸ್ನಾನ ಸಮಯವಲ್ಲ. ಆ ಸಮಯದಲ್ಲಿ ಗ್ರಹಣ ಆಶೌಚಾದಿ ನಿಮಿತ್ತಗಳಿಗಷ್ಟೇ ಅಥವಾ ಕಾಮ್ಯವ್ರತಕ್ಕಾಗಿಯೊ ಸ್ನಾನ ಮಾಡಬಹುದು.

**ಮಹಾನಿಶಾ ತು ವಿಜ್ಞೇಯಾ ಮಧ್ಯಂ ಯಾಮದ್ವಯಂ ನಿಶಿ**
**ತಸ್ಯಾಂ ಸ್ನಾನಂ ನ ಕುರ್ವೀತ ಕಾಮ್ಯನೈಮಿತ್ತಿಕಾದೃತೇ**

ನಡುರಾತ್ರಿಯ ಸಂಧಿಕಾಲವು ಅಶನಪಾನಕ್ಕೂ ಸಾಮಾನ್ಯದ ಸ್ನಾನಕ್ಕೂ ನಿಷಿದ್ಧ ಎನ್ನುವುದು **ವೀರಮಿತ್ರೋದಯದ** ಮಾತು –

**ಅಪೇಯಂ ಹಿ ಸದಾ ತೋಯಂ ರಾತ್ರೌ ಮಧ್ಯಮಯಾಮಯೋಃ**
**ಸ್ನಾನಂ ಚೈವ ನ ಕರ್ತ್ತವ್ಯಂ ತಥೈವಾಚಮನಕ್ರಿಯಾ** (ಪೈಠೀನಸಿ)

ಅರುಣೋದಯ ಕಾಲದಲ್ಲಿ ಗಂಗೆಯ ವಿಶೇಷ ಸನ್ನಿಧಾನವಿರಲಾಗಿ ಆಗ ಯತಿಗಳು ಸ್ನಾನಗೈಯಬೇಕೆಂದು ಮಧ್ವಾಚಾರ್ಯರು ತಿಳಿಸಿದ್ದಾರೆ. ಇದು ಎಲ್ಲಾ ಆಶ್ರಮದವರಿಗೂ ಅನ್ವಯಿಸುವ ನಿಯಮವೆಂದು **ಸ್ಕಾಂದಪುರಾಣವು** ಸ್ನಾನಾಂಗ ವಿಶೇಷ ಪ್ರಕಾರಗಳನ್ನು ಮಂತ್ರಗಳನ್ನು ತಿಳಿಸುವಲ್ಲಿ ಹೇಳಿದೆ. ಸೂರ್ಯೋದಯಕ್ಕಿಂತ ಮೊದಲ ನಾಲ್ಕು ಗಳಿಗೆ (96 ನಿಮಿಷ) ಅರುಣೋದಯ ಕಾಲ. ಈ ಸಮಯದಲ್ಲಿ ಮಿಂದವನಿಗೆ ಅನೇಕ ಫಲಗಳನ್ನು ಈ ಪುರಾಣ



ಪಟ್ಟಿಮಾಡಿದೆ. ಹೀಗೆ ಮಿಂದವಗೆ ವಿಶೇಷವಾಗಿ ಪ್ರೇತ ಪಿಶಾಚಿಗಳ ಬಾಧೆ ಬರಲಾರದು. ಇದರಿಂದ ಜಪಾದಿಗಳು ಶುದ್ಧವಾಗಲಿವೆ –

**ಪ್ರಾತಃಪ್ರಾತಸ್ತು ಯತ್ಸ್ನಾನಂ ಸಂಜಾತೇ ಚಾರುಣೋದಯೇ**
**ಪ್ರಾಜಾಪತ್ಯಸಮಂ ಪ್ರಾಹುಃ ತನ್ಮಹಾಘವಿಘಾತಕೃತ್**
**ಪ್ರಾತಃಸ್ನಾನಂ ಹರೇತ್ಪಾಪಂ ಅಲಕ್ಷ್ಮೀಂ ಗ್ಲಾನಿಮೇವ ಚ**
**ಅಶುಚಿತ್ವಂ ಚ ದುಃಸ್ವಪ್ನಂ ತುಷ್ಟಿಂ ಪುಷ್ಟಿಂ ಪ್ರಯಚ್ಛತಿ**
**ನೋಪಸರ್ಪಂತಿ ವೈ ದುಷ್ಟಾಃ ಪ್ರಾತಃಸ್ನಾಯಿಜನಂ ಕ್ವಚಿತ್**
**ದೃಷ್ಟಾದೃಷ್ಟಫಲಂ ಯಸ್ಮಾತ್ ಪ್ರಾತಃಸ್ನಾನಂ ಸಮಾಚರೇತ್**

ಹಿಂದಿನ ದಿನದವರೆಗೆ ಮೈಲಿಗೆ ಇದ್ದು ಮರುದಿನ ಸ್ನಾನ ಮಾಡುವುದಿದ್ದರೆ ಸೂರ್ಯೋದಯದ ಬಳಿಕವೇ ಶುದ್ಧಸ್ನಾನವಾಗಲಿದೆ. ದಿನವು ಬದಲಾವಣೆಗೊಳ್ಳುವುದು ಸೂರ್ಯೋದಯವಾದಾಗ. ಶುದ್ಧದಿನದಂದು ಮೊದಲು ಹಾಗೆಯೇ ಮುಳುಗಿ ಎದ್ದು ಮತ್ತೆ ಶಾಸ್ತ್ರವಿಧಿಯಂತೆ ಆಚಮನ ಮಂತ್ರಪಠನಾದಿಗಳೊಂದಿಗೆ ಸ್ನಾನವನ್ನು ನಡೆಸಬೇಕು.

**ತೂಷ್ಣೀಮೇವಾವಗಾಹೇತ ಯದಾ ಸ್ಯಾದಶುಚಿರ್ನರಃ**
**ಆಚಮ್ಯ ಪ್ರಯತಃ ಪಶ್ಚಾತ್ ಸ್ನಾನಂ ವಿಧಿವದಾಚರೇತ್** (ಪರಾಶರ)

ಬೆಳಿಗ್ಗೆ ಎದ್ದ ಕೂಡಲೇ ಗೋವಿಗೆ ನಮಿಸಲಿದೆ. ಇದರಿಂದ ಆತನಿಗೆ ಗೋಲೋಕ ಸಿಗಲಿದೆ ಎಂದು **ಮಹಾಭಾರತ** –

**ನಮಃ ಸರ್ವಸಹಾಭ್ಯಶ್ಚೇತ್ಯಭಿಖ್ಯಾಯ ದಿನೇದಿನೇ**
**ನಮಸ್ಕರೋತಿ ನಿತ್ಯಂ ಗಾಂ ಸ ಸುಖಂ ಯಾತಿ ತತ್ಪಥಮ್**

ಸ್ನಾನದ ಮೊದಲು ಸ್ನಾನಾಂಗವಾಗಿ ಗೋಮಯವನ್ನು ಮೈಗೆಲ್ಲಾ ಹಚ್ಚಿಕೊಂಡರೆ, ಎಲ್ಲ ತೀರ್ಥಗಳಲ್ಲಿ ಮಿಂದಂತೆ, ವರ್ಷಪೂರ್ತಿ ಮಡಿಯಾದಂತೆ–

**ಗೋಮಯೇನ ತು ಯಃ ಸ್ನಾಯಾತ್ ಆಪಾದತಲಮಸ್ತಕಮ್**
**ಸ ಸ್ನಾತಃ ಸರ್ವತೀರ್ಥೇಷು ಪೂತಃ ಸಂವತ್ಸರಂ ಭವೇತ್**



ಗೋಮಯವನ್ನು ಕುರಿತು ಪ್ರಾರ್ಥಿಸುವ ಪರಿ ಇಲ್ಲಿದೆ –

**ಅಗ್ರಮಗ್ರಂ ಚರಂತೀನಾಂ ಓಷಧೀನಾಂ ವನೇವನೇ**

**ತಾಸಾಮೃಷಭಪತ್ನೀನಾಂ ಪವಿತ್ರಂ ಕಾಯಶೋಧನಮ್**

**ತನ್ಮೇ ರೋಗಾಂಶ್ಚ ಶೋಕಾಂಶ್ಚ ನುದ ಗೋಮಯ ಸರ್ವದಾ**

**ಲಕ್ಷ್ಮೀನಿವಾಸಭೂತಾಯ ಗೋಮಯಾಯ ನಮೋ ನಮಃ**

ತಲೆಯಲ್ಲಿ ಗರಿಕೆಯನ್ನು ಇಟ್ಟು ಸ್ನಾನ ಮಾಡುವಾಗ ಹೇಳಿ –

**ಸಹಸ್ರಪರಮಾ ದೇವೀ ಶತಮೂಲಾ ಶತಾಂಕುರಾ**

**ಸರ್ವಂ ಹರತು ಮೇ ಪಾಪಂ ದೂರ್ವಾ ದುಃಸ್ವಪ್ನನಾಶಿನೀ**

ಸ್ನಾನವನ್ನು ಪ್ರತಿನಿತ್ಯ ಬೆಳಿಗ್ಗೆ ನಡೆಸಲೇಬೇಕೆನ್ನುವುದಕ್ಕೆ ಕಾರಣವನ್ನು **ಬೃಹತ್ಪರಾಶರಸ್ಮೃತಿ**ಯು ಹೇಳಿದೆ. ನವದ್ವಾರದ ಈ ದೇಹ ರಾತ್ರಿ ಹಗಲೆನ್ನದೆ ಪ್ರತಿನಿತ್ಯ ಮಲವನ್ನು ಸುರಿಸುತ್ತಲೇ ಇರುವುದು. ಇದರ ಶುದ್ಧಿಗಾಗಿ ಸ್ನಾನ ಕಡ್ಡಾಯ –

**ಅತ್ಯಂತಮಲಿನಃ ಕಾಯೋ ನವಛಿದ್ರಸಮನ್ವಿತಃ**

**ಸ್ರವತ್ಯೇವ ದಿವಾರಾತ್ರೌ ಪ್ರಾತಃ ಸ್ನಾನೇನ ಶುದ್ಧ್ಯತಿ**

ಸ್ನಾನ ಮಾಡದೆ ಜಪ-ಪೂಜಾ-ಹೋಮಾದಿ ಕಾರ್ಯಗಳನ್ನು ಆಚರಿಸಲೇಬಾರದು ಎಂದು ಶಾಸ್ತ್ರದ ಮಾತು.

**ಪೂರ್ವಂ ಸ್ನಾನಂ ಪ್ರಕುರ್ವೀತ ಧೌತದಂತೋಽಂಗಶುದ್ಧಯೇ**

**ಉಭಯೈರಪಿ ಚ ಸ್ನಾನಂ ಮಂತ್ರೈರ್ಮೃದ್ಗ್ರಹಣಾದಿಭಿಃ** (ಭಾಗವತ)

**ಅಸ್ನಾತ್ವಾ ನಾಚರೇತ್ಕರ್ಮ್ಮ ಜಪಹೋಮಾದಿ ಕಿಂಚನ** (ದಕ್ಷ)

**ಅಸ್ನಾನಸ್ಯ ಕ್ರಿಯಾಃ ಸರ್ವಾಃ ಭವಂತಿ ನಿಷ್ಫಲಾ ಯತಃ**

**ಪ್ರಾತಃ ಸಮಾಚರೇತ್ ಸ್ನಾನಂ ತಚ್ಚ ನಿತ್ಯಮುಪಸ್ಥಿತಮ್**

**ಸ್ನಾತೋಽಧಿಕಾರೀ ಭವತಿ ದೈವೇ ಪಿತ್ರ್ಯೇ ಚ ಕರ್ಮ್ಮಣಿ**

**ಪವಿತ್ರಾಣಾಂ ತಥಾ ಜಾಪ್ಯೇ ದಾನೇ ಚ ವಿಧಿನೋದಿತೇ** (ವಿಷ್ಣುಸ್ಮೃತಿ)

**ದೇವದೇವಸ್ಯ ಕರ್ಮ್ಮಾಣಿ ಸ್ನಾನಪೂರ್ವಾಣಿ ಕಾರಯೇತ್** (ಕಪಿಂಜಲಸಂಹಿತಾ)



ಸ್ನಾನಂ ವಿನಾ ತು ಯೋ ಭುಂಕ್ತೇ ಸ ಮಲಾಶೀ ನ ಸಂಶಯಃ

ತಸ್ಮಾತ್ ಸ್ನಾತ್ವಾ ತು ಕೌಂತೇಯ ಸರ್ವಾನ್ ಧರ್ಮಾನ್ ತತಃ ಕುರು (ಶೇಷಧರ್ಮ)

ಪ್ರಾತಃಸ್ನಾನವಿಹೀನಾಶ್ಚ ಬ್ರಾಹ್ಮಣಾ ಜಪವರ್ಜ್ಜಿತಾಃ

ಬ್ರಹ್ಮಯಜ್ಞವಿಹೀನಾಶ್ಚ ತೇ ವೈ ನಿರಯಗಾಮಿನಃ (ಶೇಷಧರ್ಮ)

ಶೌಚಾಚಾರವಿಹೀನಸ್ಯ ಸಮಸ್ತಾ ನಿಷ್ಫಲಾಃ ಕ್ರಿಯಾಃ

ಕೈಂಕರ್ಯಾರ್ಥಂ ಭಗವತೋ ದೇಹಶುದ್ಧಿಂ ಸಮಾಚರೇತ್

ವಸಾಶುಕ್ರಮಸೃಙ್ಮಜ್ಜಾಮೂತ್ರವಿಟ್‌ಕರ್ಣವಿಣ್ಣಖಾಃ

ಶ್ಲೇಷ್ಮಾಶ್ರುದೂಷಿಕಾಃ ಸ್ವೇದಾಃ ದ್ವಾದಶೈತೇ ನೃಣಾಂ ಮಲಾಃ

ತೇಷಾಂ ಚಾಥ ವಿಶುದ್ಧ್ಯರ್ಥಂ ಸ್ನಾನಂ ಮೃದ್ಗೋಮಯಾಂಭಸಾ

ಮಂತ್ರೈಸ್ತೀರ್ಥೋದಕೈಃ ಕುರ್ಯಾತ್ ಪ್ರತ್ಯಹಂ ಭಗವತ್ಪರಃ (ಬೃ.ಬ್ರಹ್ಮಸಂಹಿತಾ)

ಸ್ನಾನಮೂಲಾಃ ಕ್ರಿಯಾಃ ಸರ್ವಾಃ ಸ್ನಾನಂ ಚ ಬಹುಧಾ ಸ್ಮೃತಮ್ (ಪಾದ್ಮಸಂಹಿತಾ)

ಆಪೋ ಹ್ಯಾಯತನಂ ವಿಷ್ಣೋಃ ಸ ಚ ಏವಾಂಭಸಾಂ ಪತಿಃ

ತಸ್ಮಾದಪ್ಸು ಸ್ಮರೇನ್ನಿತ್ಯಂ ನಾರಾಯಣಮಘಾಪಹಮ್

ಸ್ನಾನಕಾಲೇ ವಿಶೇಷೇಣ ಚೋಪಸ್ಥಾಯ ಜಲೇ ಶುಚಿಃ (ಬ್ರಹ್ಮಪುರಾಣ)

ನೀರಿನಲ್ಲಿ ನೆಲೆನಿಂತ ನಾರಾಯಣನ ನೀರಿನೊಡನೆ ಸಂಪರ್ಕ ಪಡೆದಾಗ ನಮ್ಮ ದೇಹದೊಳಗೂ ನಾರಾಯಣನ ಸನ್ನಿಧಿ ಸ್ಫುಟಗೊಳ್ಳಲಿದೆ. ಹೀಗೆ ನಾರಾಯಣಮಯನಾಗಿ ಮಾಡಿದ ಕರ್ಮಗಳೆಲ್ಲ ಸಫಲವಾಗಲಿವೆ. ಅದಕ್ಕಾಗಿ ಸ್ನಾನ ಕಡ್ಡಾಯ ಎನ್ನುವುದಾಗಿ ಸ್ಕಾಂದದ ಕರೆ –

ಕೃತಸ್ನಾನಸ್ಯ ಹಿ ಹರಿಃ ದೇಹಮಾಶ್ರಿತ್ಯ ತಿಷ್ಠತಿ

ಸರ್ವಕ್ರಿಯಾಫಲಂ ಯೇಷು ಸಂಪೂರ್ಣ್ಣಫಲದಂ ಭವೇತ್

ಜಪಕ್ಕೆ ಮನಸ್ಸಿನ ಪ್ರಸನ್ನತೆ ಮುಖ್ಯ. ಅದು ಬೆಳಗ್ಗಿನ ಸ್ನಾನದಿಂದ ಎಂದು ಸ್ಕಾಂದಪುರಾಣ –

ಉತ್ಸಾಹಮೇಧಾಸೌಭಾಗ್ಯರೂಪಸಂಪತ್ಪ್ರವರ್ತ್ತಕಮ್

ಮನಃಪ್ರಸನ್ನತಾಹೇತುಃ ಪ್ರಾತಃಸ್ನಾನಂ ಪ್ರಶಸ್ಯತೇ



**ಪ್ರಸ್ವೇದಲಾಲಾದ್ಯಾಕ್ಲಿನ್ನೋ ನಿದ್ರಾಧೀನೋ ಯತೋ ನರಃ**

**ಪ್ರಾತಃಸ್ನಾನಾತ್ತತೋಽರ್ಹಃ ಸ್ಯಾತ್ ಮಂತ್ರಸ್ತೋತ್ರಜಪಾದಿಷು**

**ಪದ್ಮಪುರಾಣವು** ಅನೇಕ ಕಡೆಯ ಸ್ನಾನವನ್ನು ತಿಳಿಸಿದೆ. ಪಾಪನಿವೃತ್ತಿಗಾಗಿ ಪ್ರಾತಃಸ್ನಾನವನ್ನು ಬಣ್ಣಿಸಿದೆ –

**ನದೇ ನದ್ಯಾಂ ತಥಾ ಕೂಪೇ ಪುಷ್ಕರಿಣ್ಯಾಂ ತಡಾಗಕೇ**

**ಜಲರಾಶೌ ಚ ವಪ್ರೇ ಚ ಘಟಸ್ನಾನಂ ತಥೋತ್ತರಮ್**

**ಕಾರಯೇದ್ವಿಧಿವನ್ಮರ್ತ್ಯಃ ಸರ್ವಪಾಪಕ್ಷಯಾಯ ಚ**

**ಪ್ರಾತಃಸ್ನಾನಂ ಮಹಾಪುಣ್ಯಂ ಸರ್ವಪಾಪಪ್ರಣಾಶನಮ್**

**ಯಃ ಕುರ್ಯಾತ್ಸತತಂ ವಿಪ್ರೋ ವಿಷ್ಣುಲೋಕೇ ಮಹೀಯತೇ**

**ವರಾಹಪುರಾಣವು** ಈ ಸ್ನಾನಘಟ್ಟಗಳ ಸ್ಥಾನಮಾನವನ್ನು ನಿರ್ದೇಶಿಸಿದೆ. ಇದನ್ನು ತಿಳಿದು ಎಲ್ಲಿ ಸ್ನಾನ ಮಾಡಬೇಕೆಂದು ನಿಶ್ಚಯಿಸಬಹುದು –

**ಕೂಪೇ ನದ್ಯಾಂ ತಟಾಕೇ ವಾ ಮಾನುಷೇ ದೇವಖಾತಕೇ**

**ಪ್ರವಾಹೇ ಪುಣ್ಯನದ್ಯಾಂ ವಾ ಯಾ ತು ಸಾ ಸ್ಯಾತ್ಸಮುದ್ರಗಾ**

**ಕ್ರಮಾದ್ದಶಗುಣಂ ಪುಣ್ಯಂ ಏಷು ಸ್ನಾನಾಲ್ಲಭೇನ್ನರಃ**

ನದಿಯಲ್ಲಿ ಮಿಂದರೆ ಉತ್ತಮ ಸ್ನಾನ. ಸರೋವರದಲ್ಲಿ ಮಧ್ಯಮ. ಬಾವಿಯಲ್ಲಿ ಸಾಮಾನ್ಯ. ನಳ್ಳಿಯಲ್ಲಿ ಹಿಡಿದು ಪಾತ್ರೆಯಲ್ಲಿ ತುಂಬಿಸಿ ಸ್ನಾನಮಾಡಿಕೊಂಡರೆ ಅದು ವ್ಯರ್ಥ ಎನಿಸಿದೆ –

**ಉತ್ತಮಂ ತು ನದೀಸ್ನಾನಂ ತಟಾಗೇ ಮಧ್ಯಮಂ ಸ್ಮೃತಮ್**

**ಕೂಪಸ್ನಾನಂ ತು ಸಾಮಾನ್ಯಂ ಭಾಂಡಸ್ನಾನಂ ವೃಥಾವೃಥಾ**

12 ವರ್ಷ ಪ್ರತಿನಿತ್ಯ ತಪ್ಪದೆ ಬಾವಿಸ್ನಾನವನ್ನು ನಡೆಸಿದಲ್ಲಿ, ನದಿ ಮುಂತಾದೆಡೆ ಮುಳುಗದಿದ್ದಲ್ಲಿ ಆತ ಅಸಂಸ್ಕೃತನೆನಿಸುವನೆಂದು **ಮಹಾಭಾರತ** ಎಚ್ಚರಿಸಿದೆ. ಇದರಿಂದಾಗಿ ಸಂಕ್ರಾಂತಿ – ಪರ್ವಕಾಲಗಳಲ್ಲಾದರೂ, ಗ್ರಹಣ –ಹಬ್ಬದ ದಿನಗಳಲ್ಲಾದರೂ ಬಾವಿಗಿಂತ ಮಿಗಿಲಾದ ತಟಾಕಾದಿಗಳಲ್ಲಿ ಮುಳುಗಿ ಮಿಂದರೇನೇ ಶುದ್ಧನೆನಿಸುವನು. ಬ್ರಾಹ್ಮಣ್ಯವನ್ನು ಉಳಿಸಿಕೊಳ್ಳುವನು –



**ಕೂಪಸ್ನಾನಂ ತು ಯೋ ವಿಪ್ರಃ ಕುರ್ಯಾದ್ದ್ವಾದಶವಾರ್ಷಿಕಮ್**

**ಸ ತೇನೈವ ಶರೀರೇಣ ಶೂದ್ರತ್ವಂ ಯಾತ್ಯಸಂಶಯಮ್**

**ಭರದ್ವಾಜರು** ಉತ್ತರೋತ್ತರವಾಗಿ ಪ್ರಶಸ್ತಗಳಾದ ಅನೇಕ ಸ್ನಾನಘಟ್ಟಗಳನ್ನು ಉಲ್ಲೇಖಿಸಿದ್ದಾರೆ –

**ಮಹಾನದೀ ನದಃ ಸ್ರೋತಃ ಸರಃ ತ್ರಿದಶಖಾತಕಾಃ**

**ನಾಲಸ್ತಟಾಕಾಃ ಕುಂಡಂ ಚ ಧಾರಾ ಕೂಪಸ್ತ್ವಮೀ ದಶ**

**ಬಿಲಂ ತಥಾ ಪ್ರಸ್ರವಣಂ ಉದಪಾನಂ ತು ಕೋಟರಃ**

**ಏತೇ ಜಲಾಶಯಾಃ ಖ್ಯಾತಾ ಉತ್ತಮಾದಿವಿಭೇದತಃ**

**ಸ್ನಾನಮೇತೇಷು ಕರ್ತ್ತವ್ಯಂ ನಿತ್ಯನೈಮಿತ್ತಿಕಾದಿಕಮ್**

ನೀರೆಲ್ಲವೂ ನನ್ನ ವಿಭೂತಿರೂಪಗಳು, ನನ್ನ ಸನ್ನಿಧಿಗೆ ಪಾತ್ರಗಳು ನನ್ನ ಸೃಷ್ಟಿ, ನನ್ನ ಪರಿವಾರದವರೆಲ್ಲರ ತಾಣವೆಂಬುದಾಗಿ ಶ್ರೀಕೃಷ್ಣನೇ ಪಾಂಡವನಿಗೆ ಹೇಳಿದ್ದಾನೆ. ಮೀಯುವ ಮೊದಲು ಬೇರೆಡೆ ಕೈಕಾಲುಗಳನ್ನು ತೊಳೆದು ಆಚಮನೆ ಗೈದು ತೀರ್ಥಕ್ಕೆ ಪ್ರದಕ್ಷಿಣೆ ಬಂದು ನಮಿಸಿ ಮೀಯಬೇಕು. ಇದು ಬಾವಿಯಲ್ಲಿ ಸರೋವರದಲ್ಲಿ ಸರಿಯಾಗಿ ನಡೆಸಲು ಬರುತ್ತದೆ. ನದೀತೀರದಲ್ಲಾದರೆ ಇದ್ದಲ್ಲಿಯೇ ಪ್ರದಕ್ಷಿಣೆಗೈಯಬೇಕು. ನದಿಯಲ್ಲಿ ಮಿಂದವ ಮತ್ತೆ ಬೇರೆಡೆ ಸರೋವರದಲ್ಲಿಯೋ, ಬಾವಿಯಲ್ಲಿಯೋ ಮಿಂದರೆ ಮಡಿಯಾಗಲಾರನು. ಹತ್ತಿರದಲ್ಲಿ ಉತ್ತಮವಾದ ಜಲಾಶಯವಿದ್ದಲ್ಲಿ ಕಡಿಮೆ ನೀರಿನ ಆಸರೆಯಲ್ಲಿ ಮೀಯುವುದು ಯೋಗ್ಯವಲ್ಲ. ಹೀಗೆ ವಿಧಿ ತಿಳಿದು ಮಾಡಿದ ಸ್ನಾನ ನಿರ್ಮಲತೆಗೆ ಪೋಷಕ. ಪುರಾಣಗಳಲ್ಲಿ ವಿಶೇಷ ವಿಷಯಗಳಾಗಿ ಅಲ್ಲಲ್ಲಿ ಬಂದ ಈ ಮಾಹಿತಿಗಳು **ಮಹಾಭಾರತದಲ್ಲಿ** ಹೀಗಿವೆ –

**ಸರ್ವದೇವಮಯಾ ಹ್ಯಾಪೋ ಮನ್ಮಯಾಃ ಪಾಂಡುನಂದನ**

**ಪ್ರದಕ್ಷಿಣಂ ಸಮಾವೃತ್ಯ ನಮಸ್ಕುರ್ಯಾತ್ತು ತಜ್ಜಲಮ್**

**ಬಹಿಃ ಪ್ರಕ್ಷಾಳ್ಯ ಪಾದೌ ಚ ದ್ವಿರಾಚಮ್ಯ ಪ್ರಯತ್ನತಃ**

**ಸ್ನಾತ್ವಾ ಯೇನ ವಿಧಾನೇನ ಮುಚ್ಯಂತೇ ಕಿಲ್ಬಿಷಾದ್ದ್ವಿಜಾಃ**



**ನದ್ಯಾಂ ಸ್ನಾತ್ವಾ ನ ಚ ಸ್ನಾಯಾತ್ ಅನ್ಯತ್ರ ದ್ವಿಜಸತ್ತಮ**

**ಸತಿ ಪ್ರಭೂತೇ ಪಯಸಿ ನಾಲ್ಪೇ ಸ್ನಾಯಾತ್ ಕದಾಚನ**

ಸ್ನಾನ ಮಾಡಲು ಅಶಕ್ತನಾದವನು ಒದ್ದೆಬಟ್ಟೆಯಿಂದ ಮೈ ಒರೆಸಿಕೊಳ್ಳಬೇಕು. ಇದು ಕಾಪಿಲಸ್ನಾನ. ಕೈಯಲ್ಲಿ ನೀರನ್ನು ಹಿಡಿದು ಹತ್ತುಬಾರಿ ಗಾಯತ್ರೀ ಮಂತ್ರ ಹೇಳಿ, ದೇಹವನ್ನು ನೀರಿನಿಂದ ಪ್ರೋಕ್ಷಿಸಿಕೊಳ್ಳಬೇಕು. ಇದು ಗಾಯತ್ರೀಸ್ನಾನ. ಮನಸ್ಸಿನಲ್ಲಿ ವಿಷ್ಣುವನ್ನು ಧ್ಯಾನಿಸಬೇಕು. ಇದು ಮಾನಸಸ್ನಾನ.

**ಆರ್ದ್ರೇಣ ವಾಸಸಾ ಚಾಂಗಮಾರ್ಜನಂ ಕಾಪಿಲಂ ಸ್ಮೃತಮ್**

**ಗಾಯತ್ರ್ಯಾ ಜಲಮಾದಾಯ ದಶಕೃತ್ವೋಽಭಿಮಂತ್ರ್ಯ ಚ**

**ಶಿರಶ್ಚಾಂಗಾನಿ ಸರ್ವಾಣಿ ಪ್ರೋಕ್ಷಯೇತ್ತೇನ ವಾರಿಣಾ**

**ಸ್ನಾನಂ ಗಾಯತ್ರಕಂ ನಾಮ ಸರ್ವಪಾಪಪ್ರಣಾಶನಮ್**

**ಚತುರ್ಭುಜಂ ಮಹಾಕಾಯಂ ಶಂಖಚಕ್ರಗದಾಧರಮ್**

**ಧ್ಯಾಯೀತ ಮನಸಾ ವಿಷ್ಣುಂ ಮಾನಸಂ ಸ್ನಾನಮುಚ್ಯತೇ** (ವೃದ್ಧಮನು)

ಪ್ರಾಣಾಯಾಮದೊಂದಿಗೆ ಅಂತರಂಗದಲ್ಲಿನ ಬಿಂಬನ ಚಿಂತನೆಯನ್ನು ಮಾನಸಸ್ನಾನವಾಗಿ **ಶೇಷಸಂಹಿತೆ** ಗುರುತಿಸಿದೆ. ಶೋಷಣ-ದಹನ-ಪ್ಲಾವನವನ್ನು ಆಗ್ನೇಯಸ್ನಾನವನ್ನಾಗಿ ಕರೆದು ಅದರ ಪಾರಮ್ಯವನ್ನು ಬಣ್ಣಿಸಿದೆ. ಸ್ನಾನದಲ್ಲಿ ಮೌನವನ್ನು ಗುರುತಿಸಿದೆ -

**ಬ್ರಾಹ್ಮೇ ಮುಹೂರ್ತೇ ಸಂಪ್ರಾಪ್ತೇ ಮೌನೇನ ವಿಧಿನಾ ಸದಾ**

**ಸ್ನಾನಂ ವಾ ತಪ್ತತೋಯೇನ ದೋಷವೈಷಮ್ಯಸಂಭವೇ**

**ನಾಭೇರಧಸ್ತಾದ್ವಾ ಭೇದಾತ್ ಕ್ಷಾಳಯೇದಾತ್ಮನಸ್ತನುಮ್**

**ತತ್ರಾಪ್ಯಶಕ್ತಶ್ಚೇತ್ಕುರ್ಯಾತ್ ಸ್ನಾನಂ ಮಾನಸಮೇವ ಹಿ**

**ಪ್ರಾಣಾನಾಯಮ್ಯ ಮಾಂ ಧ್ಯಾಯೇತ್ ಹೃದಯಾಂಬುರುಹೇ ಸ್ಥಿತಮ್**

**ಸ್ನಾನಂ ಮಾನಸಮೇತತ್ಸ್ಯಾತ್ ಸ್ನಾತ್ವಾ ಚ ಹರಿಮರ್ಚಯೇತ್**

**ವಾಯ್ವಗ್ನ್ಯಮೃತಬೀಜೈಶ್ಚ ಶೋಷಣಾದಿಕ್ರಮೇಣ ಚ**

**ತದಾಗ್ನೇಯಂ ಭವೇತ್ಸ್ನಾನಂ ಶೋಧನಂ ಪರಮಂ ಸ್ಮೃತಮ್**



ಅಂತಃಶುದ್ಧಿಗೆ ಪುಂಡರೀಕಾಕ್ಷನ ಸ್ಮರಣೆಯನ್ನು **ವಾಮನಪುರಾಣ** ಹೇಳಿದೆ –

**ಅತಿನೀಲಘನಶ್ಯಾಮಂ ನಳಿನಾಯತಲೋಚನಮ್**

**ಸ್ಮರಾಮಿ ಪುಂಡರೀಕಾಕ್ಷಂ ತೇನ ಸ್ನಾತೋ ಭವಾಮ್ಯಹಮ್**

ಶಿವಧ್ಯಾನದಿಂದ ಮನಃಶುದ್ಧಿಯನ್ನು **ಬ್ರಹ್ಮಾಂಡಪುರಾಣ** ತಿಳಿಸಿದೆ–

**ಶಾರದಾಭ್ರಾತಿಶುಭ್ರಾಂಗಂ ಚಂದ್ರಾರ್ಧಮಕುಟೋಜ್ಜ್ವಲಮ್**

**ಸ್ಮರಾಮಿ ತಂ ಮಹಾದೇವಂ ತೇನ ಸ್ನಾತೋ ಭವಾಮ್ಯಹಮ್**

ಬೆಳಗ್ಗೆ ಮತ್ತು ಮಧ್ಯಾಹ್ನ ವಾನಪ್ರಸ್ಥರು, ಗೃಹಸ್ಥರು ಸ್ನಾನ ಮಾಡಬೇಕು. ಯತಿಗಳು ಮೂರು ಹೊತ್ತು ಮೀಯಬೇಕು. ಬ್ರಹ್ಮಚಾರಿಗಳಿಗೆ ಬೆಳಿಗ್ಗೆ ಮಾತ್ರ ಸ್ನಾನ.

**ಪ್ರಾತರ್ಮಧ್ಯಾಹ್ನಯೋಃ ಸ್ನಾನಂ ವಾನಪ್ರಸ್ಥಗೃಹಸ್ಥಯೋಃ**

**ಯತೇಸ್ತ್ರಿಷವಣಂ ಪ್ರೋಕ್ತಂ ಸಕೃದ್ವೈ ಬ್ರಹ್ಮಚಾರಿಣಃ** (ದಕ್ಷ)

ವೇದಗಳು ಹೇಳದ್ದನ್ನು ಜಪಿಸುವುದು ಹೇಗೆ ವ್ಯರ್ಥವೋ ಹಾಗೆಯೆ ಬಿಸಿನೀರಿನಿಂದ ಮಾಡುವ ಸ್ನಾನವೂ ಅಪ್ರಯೋಜಕವೆಂದು **ಯಾಜ್ಞವಲ್ಕ್ಯರ** ಮಾತು (ಆರೋಗ್ಯವಂತರಿಗೆ ಹೇಳಿದ್ದು) –

**ವೃಥಾ ತೂಷ್ಣೋದಕಸ್ನಾನಂ ವೃಥಾ ಜಾಪ್ಯಮವೈದಿಕಮ್**

ದೇವದೇವತೆಗಳ ಮತ್ತು ಪಿತೃಗಳ ಕಾರ್ಯಗಳನ್ನು ನಡೆಸುವಾಗ ತಲೆಗೂ ಸ್ನಾನ ಮಾಡಬೇಕು. ಮುಖದಿಂದ ಕೆಳಗಿನ ಸ್ನಾನ ಪುರುಷರಿಗೆ ವಿಹಿತವಲ್ಲ ಎಂದು **ಮಾರ್ಕಂಡೇಯಪುರಾಣದ** ಮಾತು –

**ಶಿರಃಸ್ನಾತಶ್ಚ ಕುರ್ವೀತ ದೈವಂ ಪಿತ್ರ್ಯಮಥಾಪಿ ವಾ**

ತಲೆಗೂ ಸ್ನಾನ ಮಾಡಲು ಆಗದವನು (ರೋಗ ಅಶಕ್ತಿ ಇತ್ಯಾದಿ ಕಾರಣಗಳಿಂದ) ತಲೆಯನ್ನು ಹೊರತುಪಡಿಸಿ ಮೈಗೆ ಮಾತ್ರ ಸ್ನಾನ ಮಾಡಿದರೂ ಮಡಿ ಎನಿಸುವನು. ದೇವಪಿತೃಕರ್ಮಗಳಿಗೂ ಸೈ ಎನಿಸುವನು –

**ಅಶಿರಸ್ಕಂ ಭವೇತ್ ಸ್ನಾನಂ ಸ್ನಾನಾಶಕ್ತೌ ತು ಕರ್ಮಿಣಾಮ್**

ನದೀಸ್ನಾನದಲ್ಲಿ ಮುಖ್ಯವಾಗಿ ಐದು ಅಂಗಗಳು ಸೇರಿವೆ –



**ಸಂಕಲ್ಪಂ ಸೂಕ್ತಪಠನಂ ಮಾರ್ಜ್ಜನಂ ಚಾಘಮರ್ಷಣಮ್**

**ದೇವಾದಿತರ್ಪ್ಪಣಂ ಪ್ರೋಕ್ತಂ ಸ್ನಾನಂ ಪಂಚಾಂಗಲಕ್ಷಣಮ್**

ಆಚಾರ್ಯಮಧ್ವರು ಅಘಮರ್ಷಣ ಮಂತ್ರ ಚಿಂತನೆಯನ್ನು ಸೂಕ್ಷ್ಮವಾಗಿ **ಸದಾಚಾರಸ್ಮೃತಿ**ಯಲ್ಲಿ ತಿಳಿಸಿದ್ದಾರೆ. ಎಲ್ಲದರ ಸೃಷ್ಟಿಗೆ ಕಾರಣನಾದ ನಾರಾಯಣನನ್ನು ನೀರಿನಲ್ಲಿ ಮುಳುಗಿದಾಗ ನೆನೆಯಬೇಕು ಎಂದು **ವಸಿಷ್ಠ ಸ್ಮೃತಿ**ಯೂ ಹೇಳಿದೆ-

**ಅನಂತಭೋಗಪರ್ಯಂಕಶಯಾನಂ ರಮಯಾ ಸಹ**

**ಧ್ಯಾತ್ವಾ ನಿಮಜ್ಯ ದೇವೇಶಂ ತ್ರಿಃಪಠೇದಘಮರ್ಷಣಮ್**

ಅಶ್ವಮೇಧಯಾಗ ಮುಗಿದು ಅವಭೃಥಸ್ನಾನದಲ್ಲಿ ಪಾಲ್ಗೊಂಡಂತೆ ಅಘಮರ್ಷಣ ಮಂತ್ರಜಪಪೂರ್ವಕವಾದ ಸ್ನಾನ ಎಂದು **ಮಹಾಭಾರತ**ದ ಮಾತು.

**ಅಪಿ ಚಾಪ್ಸು ನಿಮಜ್ಜೇತ ಜಪನ್ ತ್ರಿರಘಮರ್ಷಣಮ್**

**ಯಥಾಶ್ವಮೇಧಾವಭೃಥಃ ತಥಾ ತನ್ಮನುರಬ್ರವೀತ್**

ಸರ್ವಪಾಪ ನಿವೃತ್ತಿಯಲ್ಲಿ ಅಘಮರ್ಷಣಪಠನ ಎನ್ನುವುದಾಗಿ **ಬ್ರಹ್ಮಪುರಾಣ**ದ ಮಾತು –

**ತಥಾಘಮರ್ಷಣಂ ನಾಮ ಸೂಕ್ತಂ ಸರ್ವಾಘನಾಶನಮ್**

**ತಸ್ಮಾದಪ್ಸು ಸ್ಮರೇನ್ನಿತ್ಯಂ ನಾರಾಯಣಮಘಾಪಹಮ್**

ಆಪ್ಯಸೂಕ್ತದಿಂದ ಪ್ರೋಕ್ಷಣೆಯನ್ನು ಹೇಳುತ್ತಾ ಇತರ ವೇದಮಂತ್ರ ಗಳನ್ನೂ ಸ್ನಾನದಲ್ಲಿ ಬಳಸಲು **ಮಹಾಭಾರತ**ದಲ್ಲಿ ತಿಳಿಸಲಾಗಿದೆ. ಶಂಖಸ್ಮೃತಿ ಅದನ್ನು ಹೇಳಿದೆ. ಲಿಂಗಪುರಾಣವೂ ಪವಮಾನಾದಿ ಮಂತ್ರಗಳನ್ನು ಸ್ನಾನದಲ್ಲಿ ತಿಳಿಸಿಕೊಟ್ಟಿದೆ. ಮುಖ್ಯವಾಗಿ ನಿತ್ಯ ಜಪಿಸುವ ಗಾಯತ್ರಿಯನ್ನೇ ಮುಳುಗಿಕೊಂಡು ಜಪಿಸುವಂತೆ **ಮಹಾಭಾರತ** ಇಲ್ಲಿ ತಿಳಿಸಿದೆ. ಇಲ್ಲಿ ಕೃಷ್ಣನ ಸ್ಮರಣೆ ಮಾಡಲು ಆದೇಶವಿದೆ –

**ಸವ್ಯಾಹೃತಿಕಾಂ ಸಪ್ರಣವಾಂ ಗಾಯತ್ರೀಂ ವಾ ತತೋ ಜಪೇತ್**



**ಆಶ್ವಾಸಮೋಕ್ಷಾತ್ ಪ್ರಣವಂ ಜಪೇದ್ವಾ ಮಾಮನುಸ್ಮರನ್**

ಸ್ಕಾಂದಪುರಾಣದಲ್ಲಿ ಮೂರು ಬಾರಿ ಪ್ರಣವದ ಜಪವನ್ನು ಇದಕ್ಕೆ ಸಂವಾದಿಯಾಗಿ ಹೇಳುವಲ್ಲಿ ತಿಳಿಸಲಾಗಿದೆ –

**ಪ್ರಣವೇನ ತತೋ ವಿಪ್ರೋ ಮಹಾವ್ಯಾಹೃತಿಭಿಸ್ತತಃ**
**ಆತ್ಮಾನಂ ಪಾವಯೇದ್ವಿದ್ವಾನ್ ಗಾಯತ್ರ್ಯಾ ಚ ತತಃ ಕೃತೀ**
**ಆಪೋಹಿಷ್ಠೇತಿ ತಿಸೃಭಿಃ ಪ್ರತ್ಯೃಚಂ ಪಾವನಂ ಸ್ಮೃತಮ್**
**ಪ್ರಣವಂ ತ್ರಿರ್ಜಪೇದ್ವಾಪಿ ವಿಷ್ಣುಂ ವಾ ಸಂಸ್ಮರೇತ್ಸುಧೀಃ**

ಮಧ್ವಾಚಾರ್ಯರು ನಿತ್ಯಸಮಾಚಾರದ ಕೃತಿಯಲ್ಲಿ ಸ್ನಾನದ ವಿಷಯದಲ್ಲಿ ಕೊನೆಗೆ ತನ್ನ ದೇಹದಲ್ಲಿ ನೆಲೆನಿಂತ ಪುರುಷನಾರಾಯಣನನ್ನು ಪುರುಷಸೂಕ್ತದಿಂದ ಅಭಿಷೇಕ ನಡೆಸುವಂತೆ ತಿಳಿಸಿದ್ದಾರೆ –

**ಸಿಂಚೇತ್ ಪುರುಷಸೂಕ್ತೇನ ಸ್ವದೇಹಸ್ಥಂ ಹರಿಂ ಸ್ಮರನ್**

ಕೈಗಳಿಂದ ಶಂಖಮುದ್ರೆಯನ್ನು ಮಾಡಿಕೊಂಡು ತನ್ನ ತಲೆಗೆ ನೀರನ್ನು ಹಾಕಿಕೊಳ್ಳುವುದು ಇಲ್ಲಿನ ಪ್ರಯೋಗ –

**ಕೃತ್ವಾ ಸ್ನಾನಂ ಚರೇಚ್ಛಂಖಮುದ್ರಯಾ ಮೂರ್ಧ್ನಿ ಸಂಸ್ಥಿತಮ್**
**ಸರ್ವಾಂಗಸಿದ್ಧಿದಂ ದೇವಂ ಪುಂಸೂಕ್ತೇನಾಭಿಷೇಚಯೇತ್** (ಪ್ರಕಾಶಸಂಹಿತಾ)

**ಶಂಖಮುದ್ರಾಂ ತತಃ ಕೃತ್ವಾ ಪ್ರೋಕ್ಷಯೇದ್ವಾರಿಣಾತ್ಮನಿ**
**ಪೌರುಷೇಣ ತು ಸೂಕ್ತೇನ ಸ್ವದೇಹಸ್ಥಂ ಹರಿಂ ಸ್ಮರನ್** (ದೀಪಿಕಾ)

ಕೈಗಳಿಂದ ಮೀಯುವ ಬಗ್ಗೆ ಅಗ್ನಿಪುರಾಣದ ಮಾತು –

**ಸ್ನಾತ್ವಾಚಮ್ಯ ಮೃದಾ ದೇಹಂ ಮಂತ್ರೈರಾಲಿಪ್ಯ ಕಲ್ಪತೇ**
**ಶಿವತೀರ್ಥೇ ನರಃ ಸ್ನಾಯಾತ್ ಅಘಮರ್ಷಣಪೂರ್ವಕಮ್**
**ಹಸ್ತಾಭಿಷೇಕಂ ಕೃತ್ವಾಽಥ ಪ್ರಾಯಾತ್ಪೂಜಾಗೃಹಂ ಬುಧಃ**

ನೀರಿನಲ್ಲಿ ಅಮೃತಬೀಜವನ್ನು ಬರೆದು ಧೇನುಮುದ್ರೆ ತೋರಿಸಿ ಸುದರ್ಶನಾಸ್ತ್ರಮಂತ್ರದಿಂದ ಚಕ್ರಮುದ್ರೆಯನ್ನೂ ಪ್ರದರ್ಶಿಸಿ ಮೀಯಬೇಕು. ಕೊನೆಗೆ ಕುಂಭಮುದ್ರೆಯಿಂದ ತನ್ನ ತಲೆಯನ್ನು ಅಭಿಷೇಕಗೈಯಬೇಕು –



**ಸಿಂಚೇತ್ಕಂ ಕುಂಭಮುದ್ರಯಾ** (ನಾರದೀಯಪುರಾಣ)

ಕೊನೆಯ ಬಾರಿ ಮುಳುಗೇಳುವಲ್ಲಿ 12 ಬಾರಿ ತಲೆಯ ಮೇಲೆ ನೀರನ್ನು ಹೊಯ್ದುಕೊಳ್ಳುವುದನ್ನು ವಸಿಷ್ಠಸಂಹಿತೆಯು ತಿಳಿಸಿದೆ –

**ಶ್ರೀಸೂರ್ಯಮಂಡಲಾತ್ತೀರ್ಥಂ ಆಕೃಷ್ಯಾಂಕುಶಮುದ್ರಯಾ**
**ವಮಿತ್ಯನೇನ ಶ್ರೀದೇವಂ ಧ್ಯಾಯೇಚ್ಛಕ್ತ್ಯಾ ಜಪನ್ಮನುಮ್**
**ಉನ್ಮಜ್ಯ ಕುಂಭಮುದ್ರಾಂ ಚ ಬದ್ಧ್ವಾ ಸ್ನಾಯಾದ್ದ್ವಿಷಟ್ ತತಃ**

**ಸಚ್ಚರಿತ್ರಸುಧಾನಿಧಿ**ಯಲ್ಲಿ ಮೂರು ಮುಳುಗಿನ ಕಾರಣ ಚಿಂತನೆಯಿದೆ –

**ಅಪ್ರಾಯತ್ಯವಿನಾಶಾಯ ನಿರ್ಮ್ಮಲತ್ವಾಯ ಚಾತ್ಮನಃ**
**ತೃಪ್ತಯೇ ದೇವತಾದೀನಾಂ ತ್ರಿರ್ನ್ನಿಮಜ್ಜನಮಾಚರೇತ್**

ಮೂರು ಮುಳುಗಿಗೆ ಆಚಾರ್ಯಮಧ್ವರು ನೀಡಿದ ಮೂರು ಮಹಾಮಂತ್ರಗಳನ್ನು ಪುರಾಣವೂ ಸ್ಪಷ್ಟಪಡಿಸಿದೆ.

**ದ್ವಾದಶಾಕ್ಷರಮಂತ್ರಂ ಚ ತಥೈವಾಷ್ಟಾಕ್ಷರಂ ಮನುಮ್**
**ವಿಷ್ಣುಮಂತ್ರಂ ಸಮುಚ್ಚಾರ್ಯ ತ್ರಿವಾರಂ ತು ನಿಮಜ್ಜಯೇತ್**

ಮನೆಯಲ್ಲಿ ಬಾವಿಸ್ನಾನ ಮಾಡುವವರು ದೇವರ ಮೂರು ನಾಮಮಂತ್ರ ಹೇಳಿ ಮೂರು ಕೊಡ ನೀರನ್ನಾದರೂ ಸ್ನಾನದ ಕೊನೆಗೆ ತಲೆಗೆ ಹಾಕಿಕೊಳ್ಳಬೇಕು.

ಶುಕ್ಲ–ಕೃಷ್ಣ ಪಕ್ಷಭೇದದಲ್ಲಿ ಕೇಶವಾದಿ ಹನ್ನೆರಡು ನಾಮಗಳಿಂದ ಹನ್ನೆರಡು ಬಾರಿ ಮುಳುಗಿ ಸ್ನಾನ ಮಾಡುವುದನ್ನಿಲ್ಲಿ ಹೇಳಿದ್ದಾರೆ ಇದು ಆಚಮನ, ಪುಂಡ್ರಧಾರಣೆ, ಜಪತರ್ಪಣ ಇವಕ್ಕೆಲ್ಲ ಸಂಬಂಧಿಸಿದಂತೆ ತಿಳಿಯಬಹುದು –

**ಕುರ್ಯಾದ್ದ್ವಾದಶಸ್ನಾನಂ ತು ನಾಮಭಿಃ ಕೇಶವಾದಿಭಿಃ**
**ಸಂಕರ್ಷಣಾದಿಭಿಃ ಕೃಷ್ಣೇ ಸ್ನಾನಂ ಕುರ್ಯಾತ್ಪ್ರಯತ್ನತಃ**

ಇನ್ನೊಬ್ಬರ ಸ್ವಾಮ್ಯದ ನೀರನ್ನು ಉಪಯೋಗಿಸಿಕೊಳ್ಳುವಲ್ಲಿ 5 ಯಾ 7 ಬೊಗಸೆಯಷ್ಟು ಆ ನೀರಿನಲ್ಲಿನ ಮಣ್ಣನ್ನು ಹೊರಗೆ ತೆಗೆದುಹಾಕಬೇಕು. ಇದು ಅವರ ಸೋಂಕಿನಿಂದ ಪರಿಹೃತನಾಗಲು ಎಂದು **ಬೃಹತ್‌ಬ್ರಹ್ಮಸಂಹಿತೆ** –

**ಪಂಚ ವಾ ಸಪ್ತ ವಾ ಪಿಂಡಾನ್ ಸ್ನಾಯಾದುದ್ಧೃತ್ಯ ವಾರಿಣಾ**



**ಅಂಬುಕೃದ್ದುಷ್ಕೃತಾಂಶೇನ ಸ್ನಾನಕರ್ತ್ರಾ ನ ಲಿಪ್ಯತೇ**

ನೀರಿನ ದೇವತೆ ವಿಷ್ಣು ಎನ್ನುವುದು ಪ್ರಸಿದ್ಧ ಎನ್ನುವುದಾಗಿ **ಪದ್ಮಪುರಾಣ**ದ ಮಾತು

**ಜಲಸ್ಯ ದೇವತಾ ವಿಷ್ಣುಃ ಸರ್ವಲೋಕೇಷು ಗೀಯತೇ**

ನಾರಾಯಣನೇ ಜಲರೂಪನಂತೆ ನೀರಿನಲ್ಲಿ ನೆಲೆಗೊಂಡವನೆಂದು ತಿಳಿದು ನಮಿಸಬೇಕೆಂದು **ನಾರದೀಯಪುರಾಣ** ಪ್ರಣಾಮಮಂತ್ರವನ್ನು ಕೊಟ್ಟಿದೆ–

**ಆಧಾರಃ ಸರ್ವಭೂತಾನಾಂ ವಿಷ್ಣೋರತುಲತೇಜಸಃ**

**ತದ್ರೂಪಾಶ್ಚ ತತೋ ಜಾತಾ ಆಪಸ್ತಾಃ ಪ್ರಣಮಾಮ್ಯಹಮ್**

ಸ್ನಾನ ಮಾಡಿ ಜಪಿಸಬೇಕು ಎಂದಾಗ ಜಪಕ್ಕೆ ಶುದ್ಧಿ ತರುವಲ್ಲಿ ಸ್ನಾನವನ್ನು ಕಂಡು ಸ್ನಾನದ ಮೊದಲೆ ತಿಂಡಿ – ಊಟ ತಿಂದು ಮತ್ತೆ ಜಪಕ್ಕಾಗಿ ಸ್ನಾನಮಾಡಿ ಶುದ್ಧರಾದೆವೆಂದು ಭ್ರಮಿಸಿಕೊಳ್ಳುವ ಮಂದಿಗಳುಂಟು. ಊಟ – ತಿಂಡಿಗೂ ಮೊದಲು ಸ್ನಾನ ಆಗಬೇಕು. ಅಷ್ಟೆ ಅಲ್ಲದೆ ಸ್ನಾನವೂ ಏನೂ ತಿನ್ನದೆ ಕುಡಿಯದೆ ಮಾಡಬೇಕಾದ ಒಂದು ಕರ್ಮ ಎನ್ನುವುದನ್ನು ಈ ಮಂದಿ ಕಾಣಬೇಕಾಗಿದೆ.

ಇದನ್ನು **ವರಾಹಪುರಾಣ** ತೋರಿಸಿದೆ–

**ಸ್ನಾನಂ ಸಂಧ್ಯಾ ತರ್ಪಣಾದಿ ಜಪಹೋಮಾಮರಾರ್ಚನಮ್**

**ಉಪವಾಸವತಾ ಕಾರ್ಯಂ ಸಾಯಂ ಸಂಧ್ಯಾಹುತೀರ್ವಿನಾ**

ಸಾಯಂಕಾಲದ ಸಂಧ್ಯೆ, ಅಗ್ನಿಕಾರ್ಯ, ವೈಶ್ವದೇವಾದಿಗಳನ್ನು ಬಿಟ್ಟು ಉಳಿದ ಎಲ್ಲ ದೇವತಾಕಾರ್ಯಗಳನ್ನು ಖಾಲಿಹೊಟ್ಟೆಯಲ್ಲಿಯೇ ನಡೆಸಬೇಕು. ಇಲ್ಲವಾದಲ್ಲಿ ಆ ಕರ್ಮ ಅಮರಪ್ರೀತಿಜನಕವಾಗದೆ ಅಸುರಪ್ರಿಯವೆನಿಸುವುದು.

ದೇಹವನ್ನು ತೊಳೆದುಕೊಳ್ಳುವುದು ಮಲಸ್ನಾನವೆನಿಸಿದೆ. ಮತ್ತೆ ಮುಳುಗಿ ಅಥವಾ ನೀರು ಹೊಯ್ದುಕೊಂಡು ಸ್ನಾನ ಮಾಡುವುದು ವಾರುಣ ಅಥವಾ ಜಲಸ್ನಾನವೆನಿಸುವುದು. ಮಂತ್ರಪೂರ್ವಕವಾಗಿ ಅಭಿಷೇಚನೆ ನಡೆಸಿಕೊಳ್ಳುವುದು ಮಂತ್ರಸ್ನಾನ. ಒಳಗೂ ಶುದ್ಧಿಯಾಗಲು ದೇವರನ್ನು ನೆನೆದುಕೊಳ್ಳುವುದು



ಧ್ಯಾನಸ್ನಾನ. ಹೀಗೆ ಮುಖ್ಯವಾದ ಪಂಚಸ್ನಾನವನ್ನು ವರಾಹಪುರಾಣ ಹೇಳಿದೆ –

**ಮಂತ್ರಸ್ನಾನಂ ಮಲಸ್ನಾನಂ ಧ್ಯಾನಸ್ನಾನಂ ಚ ವಾರುಣಮ್**
**ಪಂಚಮಂ ಚ ಜಲಸ್ನಾನಂ ಇತಿ ಪಂಚವಿಧಂ ಸ್ಮೃತಮ್**

ಮೊದಲ ಬಗೆಯ ಸ್ನಾನವನ್ನು ಎಲ್ಲಿಯೂ ಹೇಗೂ ನಡೆಸಬಹುದು. ಎರಡನೆಯ ಸ್ನಾನ ನಿಜವಾದ ಸ್ನಾನ. ಹೀಗೆ ಸ್ನಾನ ಮಾಡಿದರೂ ಹೆಚ್ಚಿನ ಶುದ್ಧಿಗಾಗಿ ಪ್ರತಿನಿತ್ಯ ಮಂತ್ರಸ್ನಾನ ಮತ್ತು ಧ್ಯಾನಸ್ನಾನವನ್ನು ಮಾಡಲೇಬೇಕು. ಇದರಿಂದ ಬಾಹ್ಯಾಂತರದಲ್ಲಿ ಶುದ್ಧಿಯನ್ನು ಪಡೆಯಬಹುದು.

**ಸ್ನಾತೋಽಪಿ ವಿಧಿವಚ್ಛಕ್ತ್ಯಾ ವಾರುಣೇನ ಜಲೇನ ವಾ**
**ಮಂತ್ರಸ್ನಾನಂ ತಥಾ ಧ್ಯಾನಸ್ನಾನಂ ಕುರ್ಯಾಚ್ಚ ನಿತ್ಯದಾ**
**ಅಧಿಕಾಽಸ್ಯ ಭವೇಚ್ಛುದ್ಧಿಃ ಸ್ನಾನದ್ವಯಸಮುದ್ಭವಾ**

ಹತ್ತಾರು ಗ್ರಂಥಗಳಲ್ಲಿ ಹೇಳಿದ ಬಗೆಬಗೆಯ ಸ್ನಾನಕರ್ಮಗಳನ್ನು ಮಿತ್ರಮಿಶ್ರ ಸಂಗ್ರಹಿಸಿದ್ದಾನೆ. ಮಹಾಭಾರತವು ಶೌಚದ ವಿಷಯದಲ್ಲಿ ಅನೇಕ ಚಿಂತನೆಗಳನ್ನು ನಮ್ಮ ಮುಂದೆ ನೀಡಿದೆ. –

**ಬಾಹ್ಯಮಾಭ್ಯಂತರಂ ಚೇತಿ ದ್ವಿವಿಧಂ ಶೌಚಮಿಷ್ಯತೇ**
**ಮಾನಸಂ ಸುಕೃತಂ ಯತ್ತತ್ ಶೌಚಮಾಭ್ಯಂತರಂ ಸ್ಮೃತಮ್**
**ಸದಾಹಾರವಿಶುದ್ಧಿಶ್ಚ ಕಾಯಪ್ರಕ್ಷಾಳನಂ ಚ ಯತ್**
**ಬಾಹ್ಯಶೌಚಂ ಭವೇದೇತತ್ ತಥೈವಾಚಮನಾದಿನಾ**
**ಮೃಚ್ಚೈವ ಶುದ್ಧದೇಶಸ್ಥಾ ಗೋಶಕೃನ್ಮೂತ್ರಮೇವ ಚ**
**ದ್ರವ್ಯಾಣಿ ಗಂಧಯುಕ್ತಾನಿ ಯಾನಿ ಪುಷ್ಟಿಕರಾಣಿ ಚ**
**ಏತೈಃ ಸಮ್ಮಾರ್ಜ್ಜಯೇತ್ಕಾಯಂ ಅಂಭಸಾ ಚ ಪುನಃಪುನಃ**
**ಅಕ್ಷೋಭ್ಯಂ ಯತ್ಪ್ರಕೀರ್ಣ್ಣಂ ಚ ನಿತ್ಯಸ್ರೋತಂ ಚ ಯಜ್ಜಲಮ್**
**ಪ್ರಾಯಶಸ್ತಾದೃಶೇ ಮಜ್ಜೇತ್ ಅನ್ಯಥಾ ಚ ವಿವರ್ಜ್ಜಯೇತ್**
**ತ್ರಿಸ್ತ್ರಿರಾಚಮನಂ ಶ್ರೇಷ್ಠಂ ನಿಷ್ಫೇನೈರ್ನ್ನಿರ್ಮ್ಮಲೈರ್ಜ್ಜಲೈಃ**
**ತಥಾ ವಿಣ್ಮೂತ್ರಯೋಃ ಶುದ್ಧಿಃ ಅದ್ಭಿರ್ಬಹುಮೃದಾ ಭವೇತ್**



**ತಥೈವ ಜಲಸಂಶುದ್ಧಿಃ ಯತ್ಸಂಶುದ್ಧಂ ತು ಸಂಸ್ಪೃಶೇತ್**

ಶೌಚದ ವಿಷಯದಲ್ಲಿ ಮನಸ್ಸಿನ ಶುದ್ಧಿಯನ್ನು ಇಲ್ಲಿ ಒಳ್ಳೆಯ ಕರ್ಮದಲ್ಲಿ ಅಳವಡಿಸಿಕೊಂಡು ಸಂಪಾದಿಸುವಂತೆ ಹೇಳಲಾಗಿದೆ. ಶುದ್ಧ ಆಹಾರ ಸೇವನೆಯಿಂದ ದೇಹದ ಶೌಚವನ್ನು ಕಾಪಾಡಿಕೊಳ್ಳುವಂತೆ ತಿಳಿಸಿದ್ದಾರೆ. ಆಚಮನೆಯಲ್ಲಿಯೂ ಮೂರು ಬಾರಿಯ ಸಂಗತಿ ಹೇಳಿದ್ದಾರೆ. ಸ್ನಾನದಲ್ಲಿ ಗೋಮೂತ್ರವನ್ನೂ ಬಳಸುವಲ್ಲಿ ಆದೇಶವಿದೆ. ಹಾಗೆಯೇ ಶುದ್ಧಿಕರವಾದ ವಸ್ತುಗಳ ಉಪಯೋಗದಲ್ಲಿ ಅಂದರೆ ಸುಗಂಧದ್ರವ್ಯ(ಸಾಬೂನು, ಶ್ಯಾಂಪೂ)ಗಳ ಬಳಕೆಯಲ್ಲಿ ಶುದ್ಧತೆಯನ್ನು ಮತ್ತು ಗುಣಮಟ್ಟವನ್ನು ಹಾಗೆಯೇ ಆರೋಗ್ಯದೆಡೆಗೆ ಗಮನವನ್ನು ಸೂಚಿಸಿದ್ದಾರೆ. ಹರಿಯುವ ನೀರಿಗೆ ಮತ್ತೆ ಗಲೀಜು ಇಲ್ಲದ ನೀರಿಗೆ ಮುಖ್ಯತೆ ನೀಡಲಾಗಿದೆ. ಕೊಳಕಾದ ನೀರಿನಲ್ಲಿ ಮುಳುಗದಂತೆ ಎಚ್ಚರಿಕೆ ನೀಡಿದ್ದಾರೆ. ಆಚಮನದ ನೀರು ಶುದ್ಧವಾಗಿರುವಂತೆ ಹೇಳಿದ್ದಾರೆ. ಮಲಮೂತ್ರಗಳ ವಿಸರ್ಗದಲ್ಲಿ ಯಥೇಚ್ಛ ಮಣ್ಣು, ನೀರುಗಳ ಬಳಕೆ ಇಲ್ಲಿ ಬಂದಿದೆ. ಮೈಲಿಗೆಯ ನೀರನ್ನು ಮುಟ್ಟದಂತೆಯೂ ಶುದ್ಧಿಯನ್ನು ಕಾಪಾಡಿಕೊಳ್ಳುವಂತೆ ಹೇಳಿದ್ದಾರೆ.

**ಶಕೃತಾ ಭೂಮಿಶುದ್ಧಿಃ ಸ್ಯಾತ್ ಲೌಹಾನಾಂ ಭಸ್ಮನಾ ಸ್ಮೃತಮ್**
**ತಕ್ಷಣಂ ಘರ್ಷಣಂ ಚೈವ ದಾರವಾಣಾಂ ವಿಶೋಧನಮ್**
**ದಹನಂ ಮೃಣ್ಮಯಾನಾಂ ಚ ಮರ್ತ್ಯಾನಾಂ ಕೃಚ್ಛ್ರಧಾರಣಮ್**
**ಶೇಷಾಣಾಂ ದೇವಿ ಸರ್ವೇಷಾಂ ಆತಪೇನ ಜಲೇನ ಚ**
**ಬ್ರಾಹ್ಮಣಾನಾಂ ಚ ವಾಕ್ಯೇನ ಸದಾ ಸಂಶೋಧನಂ ಭವೇತ್**

ಸಾಧಕನಿಗೆ ಅನುಷ್ಠಾನದಲ್ಲಿ ಬರುವ ಸೊತ್ತುಗಳೆಲ್ಲದರ ಶುದ್ಧಿಯ ಪಟ್ಟಿ ಮಹಾಭಾರತದಲ್ಲಿದೆ. ಜಪಕ್ಕೆ ಕುಳಿತುಕೊಳ್ಳುವಲ್ಲಿ ಗೋಮಯದಿಂದ ಶುದ್ಧಿಯನ್ನು ಉಪಯೋಗಿಸುವ ಲೋಹದ ಪಾತ್ರೆಗಳಿಗೆ ಬೂದಿಯಿಂದ ಶುದ್ಧಿಯನ್ನು ಪೀಠ ಮುಂತಾದ ಮರದ ಉಪಕರಣಗಳಿಗೆ ಕೆತ್ತುವ, ತಿಕ್ಕುವ ಕರ್ಮದಿಂದ ಮಡಿವಂತಿಕೆ ಯನ್ನು, ಮಣ್ಣಿನ ಪರಿಕರಗಳಿಗೆ ಸುಡುವ ಮೂಲಕ ಶೋಧನೆಯನ್ನು ಹೇಳಿದ್ದಾರೆ. ವಿಶೇಷವಾಗಿ ಮನುಷ್ಯನ ಶುದ್ಧಿಯು ಹೆಚ್ಚಿನ ಉಪವಾಸದಿಂದ ಎನ್ನುವುದು



ಇಲ್ಲಿ ವಿಶೇಷಾಂಶ. ಮತ್ತೆ ಕೆಲವಕ್ಕೆಲ್ಲಾ ಶುದ್ಧಿಯು ಸೂರ್ಯನ ಬಿಸಿಲು ಬಿದ್ದಾಗ ಮತ್ತು ನೀರಿನಿಂದ ಎನ್ನುವ ಸಾಮಾನ್ಯ ಮಾತಿನಿಂದ ಶೌಚದೆಡೆಗೆ ಹೆಚ್ಚು ಗಮನ ಹರಿಸುವಂತೆ ವ್ಯಾಸರು ಅಪ್ಪಣೆ ಕೊಡಿಸಿದ್ದಾರೆ. ಜ್ಞಾನಿಯಾದವ ಶುದ್ಧವಾಗಿದೆ ಎಂದು ಹೇಳಿದರೂ ಮಡಿಯಾಗುವವನು ಮನುಷ್ಯನು.

ಮಡಿಯ ವಿಷಯದಲ್ಲಿ ಸ್ಕಾಂದಪುರಾಣದ ಮಾತು –

**ನ ಜಲಾಪ್ಲುತದೇಹಸ್ಯ ಸ್ನಾನಮಿತ್ಯಭಿಧೀಯತೇ**
**ಸ ಸ್ನಾತೋ ಯೋ ದಮಸ್ನಾತಃ ಶುಚಿಃ ಶುದ್ಧಮನೋಮಲಃ**
**ನ ಶರೀರಮಲತ್ಯಾಗಾತ್ ನರೋ ಭವತಿ ನಿರ್ಮ್ಮಲಃ**
**ಮಾನಸೇ ತು ಮಲೇ ತ್ಯಕ್ತೇ ಭವತ್ಯಂತಃ ಸುನಿರ್ಮ್ಮಲಃ**
**ಸರ್ವತೀರ್ಥೇಷ್ವಪಿ ಸ್ನಾತಃ ಪಾಪೋ ಮಲಿನ ಏವ ಸಃ**

ತೀರ್ಥದಲ್ಲಿ ಮುಳುಗುವುದು ಶುದ್ಧಿಗೆ ಮಾತ್ರವಲ್ಲದೆ ಪಾಪನಾಶಕ್ಕೂ ಮತ್ತೆ ಪುಣ್ಯವೃದ್ಧಿಗೂ. ಜಪತಪ ಅನುಷ್ಠಾನಕ್ಕೆ ಹತ್ತಿರದ ತೀರ್ಥಸ್ನಾನಕ್ಕಿಂತ ದೂರದ ತೀರ್ಥಸ್ನಾನ ಹೆಚ್ಚು ಪ್ರಶಸ್ತ.

**ತಪೋರ್ಥಂ ಪಾಪನಾಶಾರ್ಥಂ ಶೌಚಾರ್ಥಂ ತೀರ್ಥಗಾಹನಮ್**
**ಸಮೀಪತೀರ್ಥಸ್ನಾನಾತ್ತು ದೂರತೀರ್ಥಂ ಸುಪೂಜಿತಮ್**

ಸ್ನಾನಾಂಗ ಮೃತ್ತಿಕಾಲೇಪಕ್ಕೆ **ಉದ್ಧೃತಾಸಿ** ಮಂತ್ರೋದ್ಧಾರವನ್ನು ಮಧ್ವಾಚಾರ್ಯರು **ಸದಾಚಾರಸ್ಮೃತಿ**ಯಲ್ಲಿ ನಡೆಸಿದ್ದಾರೆ. ಇದು ಅನೇಕ ಕಡೆ ಅನೇಕ ರೀತಿಯಲ್ಲಿ ಬಂದಿದೆ. **ಲಿಂಗಪುರಾಣ**ದಲ್ಲಿ ಫಲಕಥನದೊಡನೆ ಹೀಗಿದೆ –

**ಅನೇನೈವ ವರಾಹೇಣ ಚೋದ್ಧೃತಾಸಿ ವರಪ್ರದೇ**
**ಕೃಷ್ಣೇನಾಕ್ಲಿಷ್ಟಕಾರ್ಯೇಣ ಶತಹಸ್ತೇನ ವಿಷ್ಣುನಾ**
**ಧರಣಿ ತ್ವಂ ಮಹಾಭೋಗೇ ಭೂಮಿಸ್ತ್ವಂ ಧೇನುರವ್ಯಯೇ**
**ಲೋಕಾನಾಂ ಧಾರಿಣೀ ತ್ವಂ ಹಿ ಮೃತ್ತಿಕೇ ಹರ ಪಾತಕಮ್**
**ಮನಸಾ ಕರ್ಮ್ಮಣಾ ವಾಚಾ ವರದೇ ವಾರಿಜೇಕ್ಷಣೇ**
**ತ್ವಯಾ ಹತೇನ ಪಾಪೇನ ಜೀವಾಮಸ್ತ್ವತ್ಪ್ರಸಾದತಃ**



ವರಾಹದಂಷ್ಟ್ರಾಭಿನ್ನಾಯಾಂ ಧರಾಯಾಂ ಮೃತ್ತಿಕಾಂ ದ್ವಿಜಾಃ
ಮಂತ್ರೇಣಾನೇನ ಯೋಽಬಿಭ್ರತ್ ಮೂರ್ಧ್ನಿ ಪಾಪಾತ್ಪ್ರಮುಚ್ಯತೇ
ಆಯುಷ್ಮಾನ್ ಬಲವಾನ್ ಧನ್ಯಃ ಪುತ್ರಪೌತ್ರಸಮನ್ವಿತಃ
ಕ್ರಮಾದ್ಭುವಿ ದಿವಂ ಪ್ರಾಪ್ಯ ಕರ್ಮಾಂತೇ ಮೋದತೇ ಸುರೈಃ

ವರಾಹಪುರಾಣದಲ್ಲಿ ಹೇಳಿದ ಉದ್ಧತಾಸಿ ಮಂತ್ರರಾಶಿಗೆ ಮಹಾನಾರಾಯಣೋಪನಿಷತ್ತು ಮೂಲವಾಗಿದೆ. ಇಲ್ಲಿ ಅಘಮರ್ಷಣಸೂಕ್ತವೂ ಆಪ್ಯಸೂಕ್ತವೂ ಬಂದಿದೆ –

ಉದ್ಧತಾಸಿ ವರಾಹೇಣ ಕೃಷ್ಣೇನ ಶತಬಾಹುನಾ
ಮೃತ್ತಿಕೇ ಹನ ಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಮ್
ಮೃತ್ತಿಕೇ ಬ್ರಹ್ಮದತ್ತಾಸಿ ಕಾಶ್ಯಪೇನಾಭಿಮಂತ್ರಿತಾ
ಮೃತ್ತಿಕೇ ದೇಹಿ ಮೇ ಪುಷ್ಟಿಂ ತ್ವಯಿ ಸರ್ವಂ ಪ್ರತಿಷ್ಠಿತಮ್
ಮೃತ್ತಿಕೇ ಪ್ರತಿಷ್ಠಿತಂ ಸರ್ವಂ ತನ್ಮೇ ನಿರ್ಣುದ ಮೃತ್ತಿಕೇ
ತ್ವಯಾ ಹತೇನ ಪಾಪೇನ ಗಚ್ಛಾಮಿ ಪರಮಾಂ ಗತಿಮ್

ಪದ್ಮಪುರಾಣ ಮಣ್ಣಿನ ಸಣ್ಣ ಪ್ರಾರ್ಥನೆಯನ್ನು ನೀಡಿದೆ. ಮೃತ್ತಿಕೆಯ ಲೇಪನದ ಫಲವನ್ನೂ ಅರುಹಿದೆ. **ಪಾಪಂ ಯನ್ಮಯಾ ಪೂರ್ವಸಂಚಿತಂ** ಎನ್ನುವುದಾಗಿ ಒಂದೆಡೆ ತಿಳಿಸುತ್ತಾ ಜನ್ಮಾಂತರದ ಪಾಪವನ್ನೂ ಪರಿಹರಿಸುವ ಬಗೆಯನ್ನು ಹೇಳಿದೆ –

ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ
ಮೃತ್ತಿಕೇ ಹನ ಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಮ್
ಅನೇನೈವ ತು ಮಂತ್ರೇಣ ಮೃತ್ತಿಕಾಂ ಯಸ್ತನೌ ಕ್ಷಿಪೇತ್
ಸರ್ವಪಾಪಕ್ಷಯಸ್ತಸ್ಯ ಶುಚಿರ್ಭವತಿ ಮಾನವಃ

ತುಳಸಿಯ ಗಿಡದ ಬುಡದ ಮಣ್ಣನ್ನು ಮೆತ್ತಿಕೊಳ್ಳುವಂತೆಯೂ ಹೇಳಲಾಗಿದೆ –

ಆದಾಯ ತುಳಸೀಮೂಲಮೃತ್ತಿಕಾಂ ಮಂತ್ರಸಂಯುತಾಮ್ (ಅತ್ರಿಸ್ಮೃತಿ)



**ತುಲಸೀಮೃದಮಾದಾಯ ಹ್ಯಥವಾ ಶುದ್ಧಮೃತ್ತಿಕಾಮ್** (ಸಂನ್ಯಾಸವಿಧಿ)

ಸ್ನಾನದ ಬಳಿಕ ಮತ್ತೊಬ್ಬರ ಮಲ–ಮೂತ್ರ, ಎಲುಬು ಮುಂತಾದವುಗಳನ್ನೆಲ್ಲಾ ಮೆಟ್ಟಿದರೆ ಮುಟ್ಟಿದರೆ ಬಟ್ಟೆ ತೊಳೆದು ಮತ್ತೆ ಮಿಂದು ಆಚಮನೆಗೈದು ಮಡಿಯಾಗಬೇಕು. ತನ್ನದೇ ರಕ್ತ, ವಾಂತಿ ಮುಂತಾದವುಗಳ ಸ್ಪರ್ಶವಾದರೆ, ತೊಳೆದರೆ ಸಾಕು ಶುದ್ಧನಾಗುವನು.

**ಮನುಷ್ಯಾಸ್ಥಿ ವಸಾಂ ವಿಷ್ಠಾಂ ಆರ್ತವಂ ಮೂತ್ರರೇತಸೀ**
**ಅಜೀರ್ಣ್ಣಂ ಶೋಣಿತಂ ವಾಽಪಿ ಪರಸ್ಯ ಯದಿ ಸಂಸ್ಪೃಶೇತ್**
**ಸ್ನಾತ್ವಾ ಪ್ರಮೃಜ್ಯ ಚೈಲಾದೀನ್ ಆಚಮ್ಯ ಸ ಶುಚಿರ್ಭವೇತ್**
**ತಾನ್ಯೇವ ಸ್ವಾನಿ ಸಂಸ್ಪೃಶ್ಯ ಪುನಃ ಸ್ಯಾತ್ಪರಿಮಾರ್ಜ್ಜನಮ್** (ಬೃಹತ್‌ಬ್ರಹ್ಮಸಂಹಿತಾ)

ಮಾನವ ದೇಹ ಬಹ್ವಂಶ ಪಾರ್ಥಿವ. ನೀರಿಗಿಂತ ತೇಜಸ್ಸಿಗಿಂತ ಹೆಚ್ಚು ಪಾಲು ಮಣ್ಣಿನ ವಿಕಾರ ಮನುಷ್ಯನ ದೇಹದ ರಚನೆ. ಮಣ್ಣಿನ ಮೈಯ ಶುದ್ಧಿ ಎನ್ನುವುದು ಮಣ್ಣಿನಿಂದ ಮಾತ್ರ ಸಾಧ್ಯ. ಬೆಂಕಿಯಿಂದ ಮೈಯನ್ನು ಶುದ್ಧಿಗೊಳಿಸಲಾಗದು. ಹೀಗೆ ದೇಹದ ಶುದ್ಧಿಯಲ್ಲಿ ನೀರಿಗೆ ಅತಿ ಹೆಚ್ಚಿನ ಸ್ಥಾನಮಾನ. ಒಂದೇ ಆಕಾಶವು ಮತ್ತು ಒಂದೇ ಗಾಳಿಯು ದೇಶದ ಪರಿಧಿಯಲ್ಲಿ ಹೆಚ್ಚು ಕಡಿಮೆ ಮೌಲ್ಯವನ್ನು ಪಡೆಯುತ್ತದೆ. ಮಡಿ ಮೈಲಿಗೆಯ ಶುದ್ಧ–ಅಶುದ್ಧತೆಯ ಹೆಸರನ್ನು ಪಡೆಯುತ್ತದೆ. ಗುಣಮಟ್ಟದಲ್ಲಿಯೂ ಏರುಪೇರು ಅನುಭವಕ್ಕೆ ಸಿಗಲಿದೆ. ಉದ್ಯಾನದ ಗಾಳಿ, ಸಮುದ್ರದ ತಡಿಯ ಗಾಳಿ, ಸ್ಮಶಾನದ ಗಾಳಿ, ಮರುಭೂಮಿಯ ಗಾಳಿ ಇಲ್ಲೆಲ್ಲಾ ತಾರತಮ್ಯವಿದೆ. ಅದರಂತೆ ನೀರಿನಲ್ಲಿಯೂ ತರತಮಭಾವವನ್ನು ಗುರುತಿಸಬಹುದು. ಇದಕ್ಕೆ ಅಭಿಮಾನಿದೇವತೆಗಳೂ ಪರಾವರರು ಇದ್ದಾರೆ. ಇದರಿಂದ ಅತ್ಯಂತ ಹೆಚ್ಚಿನ ಗುಣಮಟ್ಟದ ನೀರನ್ನು ಉಪಯೋಗಿಸಿದಾಗ ಅತಿ ಹೆಚ್ಚು ಎತ್ತರದ ದೇವತೆಗಳ ಅನುಗ್ರಹಕ್ಕೆ ಪಾತ್ರರಾಗುವ ಭಾಗ್ಯ ಸಿಗಲಿದೆ. ಬೆಳಿಗ್ಗೆ ಏಳುವುದರಿಂದ ಹಿಡಿದು ರಾತ್ರಿ ಮಲಗುವವರೆಗೂ ಶೌಚ, ಸ್ನಾನ, ಆಚಮನ ಜಪ, ಅರ್ಘ್ಯ, ತರ್ಪಣ, ತೀರ್ಥಪ್ರಾಶನ, ಅಶನ, ಪಾನ ಇಲ್ಲೆಲ್ಲೆಡೆ ನೀರು ಸರಾಗವಾಗಿ ಹರಿಯ ಬೇಕಿದೆ. ಉಪಯೋಗಕ್ಕೆ ಬಂದಿದೆ. ಈ



ನೀರಿನ ಗುಣಮಟ್ಟ ಒಳ್ಳೆಯದಾಗಿದ್ದರೆ ಅದರ ಉಪಯೋಗದಲ್ಲಿ ಫಲಿತಾಂಶವು ಒಳ್ಳೆಯದಾಗಿರುತ್ತದೆ. ಕೆಟ್ಟ ನೀರಿನ ಉಪಯೋಗದಲ್ಲಿ ಕಳಪೆ ಮಟ್ಟದ ನೀರಿನ ವಿನಿಯೋಗದಲ್ಲಿ ಅಡ್ಡಪರಿಣಾಮವೇ ಜಾಸ್ತಿ. ಹಾಗಾಗಿ ಲೌಕಿಕ ಬದುಕಿನಲ್ಲಷ್ಟೇ ಅಲ್ಲದೆ, ಧಾರ್ಮಿಕ ಆಚರಣೆಗಳಲ್ಲೆಲ್ಲಾ ನೀರಿನ ಶುದ್ಧಿಯನ್ನು, ಸ್ವಚ್ಛತೆಯನ್ನು, ಗುಣಮಟ್ಟವನ್ನು ಕಾಪಾಡಿಕೊಳ್ಳಬೇಕು. ಇದರಿಂದ ಫಲಾಫಲಗಳ ಸಾಧ್ಯತೆಯಿದೆ ಎನ್ನುವುದಾಗಿ **ಅನುಶಾಸನದ** ಶಾಸನ –

**ಯಾದೃಶೇನ ತು ತೋಯೇನ ಶುದ್ಧಿಂ ಪ್ರಕುರುತೇ ನರಃ**
**ತಾದೃಗ್ಭವತಿ ತದ್ಧೌತಂ ಉದಕಸ್ಯ ಪ್ರಭಾವತಃ**

ಎಲ್ಲಕ್ಕಿಂತ ಮಿಗಿಲಾದ ನೀರು ಹರಿಪಾದದಿಂದ ಚಿಮ್ಮಿದ ಗಂಗೆ. ಈಕೆ ನೆನೆದಲ್ಲಿ ಬಂದು ಸನ್ನಿಧಾನವನ್ನು ಕೊಡುವ ದೇವತೆ. ದೇವರ ಜಪಕ್ಕಾಗಿ, ಪೂಜೆಗಾಗಿ ಉಪಯೋಗಿಸುವ ನೀರಿನಲ್ಲಿ ಆಕೆ ತನ್ನ ತಂದೆಯ ಸೇವೆಗಾಗಿ ಎನ್ನುವ ನೆಲೆಯಲ್ಲಿ ತಪ್ಪದೆ ಬರುತ್ತಾಳೆ. ದೇವರ ಕೈಂಕರ್ಯಕ್ಕಾಗಿ ಮೀಯುವಲ್ಲಿಯೂ ಆಕೆಯನ್ನು ಹೆಸರೆತ್ತಿ ಕರೆದರೆ ಆಕೆ ನಮ್ಮ ಸ್ನಾನದ ನೀರಿನಲ್ಲಿ ನೆಲೆಗೊಳ್ಳುವಳು. ಸ್ನಾನಕಾಲದಲ್ಲಿ ಗಂಗೆಯನ್ನು ಕರೆಯುವ ಅಷ್ಟನಾಮಗಳು ಇಲ್ಲಿವೆ –

**ನಂದಿನೀ ನಳಿನೀ ಸೀತಾ ಮಾಲತೀ ಚ ಮಲಾಪಹಾ**
**ವಿಷ್ಣುಪಾದಾಬ್ಜಸಂಭೂತಾ ಗಂಗಾ ತ್ರಿಪಥಗಾಮಿನೀ**
**ಭಾಗೀರಥೀ ಭೋಗವತೀ ಜಾಹ್ನವೀ ತ್ರಿದಶೇಶ್ವರೀ**

ಸಾಮಾನ್ಯವಾಗಿ ಪುರಾಣಗಳು ದೇವತೆಗಳ ವಿಶೇಷ ಗುಣಗಳನ್ನು ಬಣ್ಣಿಸುವಲ್ಲಿ ಹೆಚ್ಚಾಗಿ ಎಂಟು ನಾಮಗಳನ್ನು ಉಲ್ಲೇಖಿಸುತ್ತವೆ. ಇದು ಆಯಾ ದೇವತೆಗಳ ಪ್ರಸನ್ನತೆಗಾಗಿ ನಾವು ಮಾಡುವ ಮುಖ್ಯ ಉಪಚಾರಗಳಿಗೆ ಸಂಬಂಧಿಸಿರುವುದು. ಪಂಚೋಪಚಾರಗಳಂತೆ ಅಷ್ಟೋಪಚಾರಗಳು ಈ ನಾಮಗಳಿಂದ ನಡೆಸಲಾಗುವುದು. ಅಷ್ಟಭಾವಪುಷ್ಪಗಳ ಸಮರ್ಪಣೆಗೆ ಇದು ಪ್ರತಿನಿಧಿಯಂತೆ. ಹೀಗೆಯೇ ದ್ವಾದಶ ನಾಮಗಳೂ ಅಲ್ಲಲ್ಲಿ ಹೆಚ್ಚಾಗಿ ಮಹತ್ತರ ಸ್ಥಾನವನ್ನು ಪಡೆದಿರುತ್ತವೆ. ಇವೂ ಉಪಚಾರಗಳ ನೆಲೆಯಲ್ಲಿಯೇ



ಬಂದಿವೆ. ಚರಪ್ರತೀಕಗಳ ಆರಾಧನೆಯಲ್ಲಿ ಇವು ಹೆಚ್ಚಿನ ಪಾತ್ರವನ್ನು ವಹಿಸಿವೆ. ವ್ರತೋಪಚಾರಗಳ ವಿಶೇಷ ಚಿಂತನೆಯು ನನ್ನ **ಪರ್ವಮೀಕ್ಷಾ**ದಲ್ಲಿ ಬಂದಿದೆ. ಉಪಚಾರಗಳ ವಿವರಣೆ **ಮುದ್ರಾಸಮೀಕ್ಷೆ, ಪೂಜಾಸಮೀಕ್ಷೆ, ತಂತ್ರಸಮೀಕ್ಷೆ**ಗಳಲ್ಲಿದೆ.

ಮೂರುವರೆ ಕೋಟಿ ತೀರ್ಥಗಳು ಭೂಮಿಯಲ್ಲಿವೆ. ಇವೆಲ್ಲಾ ಗಂಗಾನದಿಯಲ್ಲಿ ಸನ್ನಿಹಿತವಾಗಿವೆ. ಎಲ್ಲೆಡೆಯ ಆಕೆಯನ್ನು ಕರೆದಾಗ ಆಕೆ ಪ್ರಸನ್ನಳಾಗಿ ನಮ್ಮನ್ನು ದೇವರ ಜಪ–ಪೂಜೆಗೆ ಪವಿತ್ರರನ್ನಾಗಿಸುವಳು ಎಂದು **ಸ್ಕಂದಪುರಾಣ** –

**ತಿಸ್ರಃ ಕೋಟ್ಯೋಽರ್ಧಕೋಟೀ ಚ ತೀರ್ಥಾನಾಂ ವಾಯುರಬ್ರವೀತ್**
**ದಿವಿ ಭುವ್ಯಂತರಿಕ್ಷೇ ಚ ತಾನಿ ತೇ ಸಂತಿ ಜಾಹ್ನವಿ**
**ನಂದಿನೀತ್ಯೇವ ತೇ ನಾಮ ದೇವೇಷು ನಳಿನೀತಿ ಚ**
**ದಕ್ಷಪುತ್ರೀ ಚ ವಿಹಗಾ ವಿಶ್ವಗಾ ಯೋಗಿನಾಂ ಮತಾ**
**ವಿದ್ಯಾಧರಾ ಸುಪ್ರಸನ್ನಾ ತಥಾ ಲೋಕಪ್ರಸಾದಿನೀ**
**ಕ್ಷೇಮಾ ಚ ಜಾಹ್ನವೀ ಚೈವ ಶಾಂತಾ ಶಾಂತಿಪ್ರದಾಯಿನೀ**
**ಏತಾನಿ ಪುಣ್ಯನಾಮಾನಿ ಸ್ನಾನಕಾಲೇ ಸದಾ ಪಠೇತ್**
**ಸದಾ ಸನ್ನಿಹಿತಾ ತತ್ರ ಗಂಗಾ ತ್ರಿಪಥಗಾಮಿನೀ**

ಸಾರ್ಧತ್ರಿಕೋಟಿತೀರ್ಥಳಾದ ಗಂಗೆಗೆ ಇಲ್ಲಿ ಹದಿನೈದು ಹೆಸರುಗಳಿವೆ. ಹೀಗೆ ಆಕೆಯ ಷೋಡಶೋಪಚಾರ ಪೂಜೆಗೆ ಈ ನಾಮಗಳು ಉಪಯುಕ್ತಗಳಾಗುವವು. ಪ್ರತಿನಿತ್ಯ ಮೀಯುವಲ್ಲಿ ತೀರ್ಥದೇವತೆಗಳನ್ನು ಅಂಕುಶಮುದ್ರೆಯಿಂದ ನೀರಿನಲ್ಲಿ ಆವಾಹನೆಗೈದು ಉಪಚಾರಗಳಿಂದ ಪೂಜಿಸಿ ಸ್ನಾನಾದಿಗಳನ್ನು ನಡೆಸಬೇಕೆಂದು ಸ್ನಾನಪ್ರಕರಣಗಳಲ್ಲಿ ತಿಳಿಸಿದ್ದಾರೆ. ಆದರೆ ಆಯಾ ತೀರ್ಥಗಳನ್ನು ನೆನಪಿಸಿಕೊಳ್ಳುವುದರಲ್ಲಿಯೇ, ನಾಮೋಚ್ಚಾರಣೆಯಲ್ಲಿಯೇ **ಗಂಗೇ ಮಾಂ ಪುನೀಹಿ** ಎನ್ನುವ ಕರೆಯಲ್ಲಿಯೇ ನಮ್ಮ ಪ್ರತಿನಿತ್ಯದ ಸ್ನಾನ ಮುಗಿಯುವುದು. ತೀರ್ಥಕ್ಷೇತ್ರಗಳಲ್ಲಾದರೂ ವಿಶೇಷವಾಗಿ ಮೀಯಲು ಹೊರಟಾಗ ಈ ಬಗೆಯ ವಿಶೇಷ ಪೂಜೆಯನ್ನು ನಡೆಸಿದರಾಯಿತು.



# ಒಣಬಟ್ಟೆ ತೊಡುವುದು

**ಸ್ನಾತ್ವಾ ವಿಧಿವದಾಚಮ್ಯ ಶೌಚಾಚಮನಪೂರ್ವಕಮ್**

**ಕೌಪೀನಂ ಕಟಿಸೂತ್ರಂ ಚ ವಸ್ತ್ರಯುಗ್ಮಂ ತು ಧಾರಯೇತ್**

**ಸಭಿದ್ರಾಣ್ಯೂರ್ಧ್ವಪುಂಡ್ರಾಣಿ ಪವಿತ್ರಂ ಚ ದ್ವಿಜೋತ್ತಮಃ (ಶೇಷಸಂಹಿತೆ)**

ಮಿಂದ ಮೇಲೆ ಹಿಂದಿನ ದಿನ ಒಣಹಾಕಿದ ಬಟ್ಟೆಯನ್ನು ತೊಟ್ಟುಕೊಂಡು ಜಪ ನಡೆಸಬೇಕು. ಒದ್ದೆಬಟ್ಟೆಯಲ್ಲಿ ಜಪ ನಡೆಸಬಾರದು. ಬಟ್ಟೆ ಇಲ್ಲದೆ ನಗ್ನನಾಗಿ ಜಪಿಸುವುದೂ ನಿಷಿದ್ಧ. ಕೊಳಕುಬಟ್ಟೆ, ಕಾಷಾಯವಸ್ತ್ರ, ಒದ್ದೆಬಟ್ಟೆ, ದೊಡ್ಡಬಟ್ಟೆ, ಕೆಂಪುಬಟ್ಟೆ, ನೈಲಾನ್‌ಬಟ್ಟೆ, ಹೊಲಿದಬಟ್ಟೆ ಎಲ್ಲವೂ ನಗ್ನತೆಯನ್ನೇ ತಿಳಿಸುವುದು. ಬರಿಯ ಕೌಪೀನದಲ್ಲಿ ಜಪವೂ ನಿಷಿದ್ಧ. ಒಂದು ಬಟ್ಟೆ ಎನಿಸುವುದರಿಂದ.

**ನಗ್ನಃ ಸ್ಯಾನ್ಮಲವದ್ವಾಸಾ ನಗ್ನಃ ಕೌಪೀನಕೇವಲಃ**

**ನಗ್ನಃ ಕಾಷಾಯವಾಸಾಃ ಸ್ಯಾತ್ ನಗ್ನಶ್ಚಾರ್ದ್ರಪಟಃ ಸ್ಮೃತಃ**

**ನಗ್ನೋ ದ್ವಿಗುಣವಸ್ತ್ರಃ ಸ್ಯಾತ್ ನಗ್ನೋ ರಕ್ತಪಟಃ ಸ್ಮೃತಃ**

**ನಗ್ನಸ್ತು ಸ್ನಿಗ್ಧವಸ್ತ್ರಃ ಸ್ಯಾತ್ ನಗ್ನಃ ಸ್ಯೂತಪಟಸ್ತಥಾ (ಭೃಗು)**

ಒದ್ದೆ ಬೈರಾಸವನ್ನೆ ಗಾಳಿಯಲ್ಲಿ ಏಳು ಬಾರಿ ಜಾಡಿಸಿದರೆ ಸ್ವಲ್ಪ ಒಣಗಿದಂತಾಗಿ ಒಣಬಟ್ಟೆಯಂತೆ ಸ್ವೀಕರಿಸಬಹುದು ಎಂದು ಸ್ಮೃತಿರತ್ನಾವಳಿಯಲ್ಲಿ ಆಪದ್ಧರ್ಮವನ್ನು ತಿಳಿಸಲಾಗಿದೆ–

**ಸಪ್ತವಾತಾಹತಂ ವಸ್ತ್ರಂ ಶುಷ್ಕವತ್ಪ್ರತಿಪಾದಿತಮ್**

**ಆರ್ದ್ರಂ ಚಾಪಿ ದ್ವಿಜಾತೀನಾಂ ಆದೃತಂ ಗೌತಮಾದಿಭಿಃ**

ನದೀ ಸರೋವರ ಮುಂತಾದ ಜಲಾಶಯದ ಸನಿಹ ಒದ್ದೆಬಟ್ಟೆಯಿಂದ ಜಪಾದಿಗಳನ್ನು ಮಾಡಬೇಕು. ಆದರೆ ದೇವಾಲಯಾದಿಗಳಲ್ಲಿ ಬಂದು ಜಪಿಸುವಲ್ಲಿ ಒಣಬಟ್ಟೆಯನ್ನು ತೊಡಲು ಹಾರೀತರು ಅಭಿಪ್ರಾಯಪಟ್ಟಿದ್ದಾರೆ –

**ಆರ್ದ್ರವಾಸಾ ಜಲೇ ಕುರ್ಯಾತ್ ತರ್ಪಣಾಚಮನಂ ಜಪಮ್**

**ಶುಷ್ಕವಾಸಾಃ ಸ್ಥಲೇ ಕುರ್ಯಾತ್ ತರ್ಪಣಾಚಮನಂ ಜಪಮ್**



ವಸಿಷ್ಠಸ್ಮೃತಿ ಸಂಗ್ರಹಿಸಿದ **ಬೃಹತ್‌ಬ್ರಹ್ಮಸಂಹಿತೆಯ** ಮಾತು – ಜಲಾಶಯದ ಸನಿಹ ಒಣಬಟ್ಟೆಯನ್ನೂ, ದೇವಾಲಯಾದಿ ಸ್ಥಳಗಳಲ್ಲಿ ಒದ್ದೆಬಟ್ಟೆಯನ್ನೂ ಜಪಹೋಮಾದಿಗಳಲ್ಲಿ ನಿಷೇಧಿಸಿದೆ –

**ಯಜ್ಜಲೇ ಶುಷ್ಕವಸ್ತ್ರೇಣ ಸ್ಥಳೇ ಚೈವಾರ್ದ್ರವಾಸಸಾ**
**ಜಪೋ ಹೋಮಸ್ತಥಾ ದಾನಂ ತತ್ಸರ್ವಂ ನಿಷ್ಫಲಂ ಭವೇತ್**

ಒದ್ದೆಬಟ್ಟೆಯಲ್ಲಿ ಮನೆ–ದೇವಾಲಯಗಳಲ್ಲಿ ಜಪಿಸಿದರೆ ಅದು ರಾಕ್ಷಸರಿಗೆ ಸೇರಿದ್ದೆನಿಸುವುದು ಎಂದು **ಆಪಸ್ತಂಬದಲ್ಲಿ** ತಿಳಿಸಲಾಗಿದೆ –

**ಆರ್ದ್ರವಾಸಾಸ್ತು ಯಃ ಕುರ್ಯಾತ್ ಜಪಹೋಮಪರಿಗ್ರಹಾನ್**
**ಸರ್ವಂ ತದ್ರಾಕ್ಷಸಂ ವಿದ್ಯಾತ್ ಕರ್ಮಜಾತಂ ಚ ಯತ್ಕೃತಮ್**

ಒದ್ದೆಬಟ್ಟೆಯ ನಿಷೇಧದಂತೆ ಕೂತಾಗ ಕಾಲ್ಗಂಟಿಗಿಂತ ಹೊರಗೆ ಕೈಯನ್ನಿಟ್ಟುಕೊಂಡು ಮಾಡಿದ ಅನುಷ್ಠಾನಗಳು ತಪ್ಪೆನಿಸುವವು ಎನ್ನುವುದಾಗಿ **ಲಿಖಿತಸ್ಮೃತಿ** –

**ಆದ್ರವಾಸಾಸ್ತು ಯಃ ಕುರ್ಯಾತ್ ಬಹಿರ್ಜ್ಞಾನು ಚ ಯತ್ಕೃತಮ್**
**ತತ್ಸರ್ವಂ ನಿಷ್ಫಲಂ ಕುರ್ಯಾತ್ ಜಪಹೋಮಪ್ರತಿಗ್ರಹಮ್**

ಒಂದು ಬಟ್ಟೆ ಮಾತ್ರ ಮೈಯಲ್ಲಿದ್ದು ಜಪಿಸುವುದೂ ನಿಷಿದ್ಧ. ಜಪವಷ್ಟೆ ಅಲ್ಲ; ಸ್ನಾನ, ದಾನ, ಹೋಮ, ಓದು, ತರ್ಪಣ, ಊಟವೂ ಒಂದು ಬಟ್ಟೆ ತೊಟ್ಟವನು ಮಾಡಿದಲ್ಲಿ ತಪ್ಪೆನಿಸುವುದು –

**ಸ್ನಾನಂ ದಾನಂ ಜಪಂ ಹೋಮಂ ಸ್ವಾಧ್ಯಾಯಂ ಪಿತೃತರ್ಪಣಮ್**
**ನೈಕವಸ್ತ್ರೋ ದ್ವಿಜಃ ಕುರ್ಯಾತ್ ಶ್ರಾದ್ಧಭೋಜನಸತ್ಕ್ರಿಯಾಃ** (ಯೋಗಿಯಾಜ್ಞವಲ್ಕ್ಯ)

**ಹೋಮದೇವಾರ್ಚನಾದ್ಯಾಸು ಕ್ರಿಯಾಸ್ವಾಚಮನೇ ತಥಾ**
**ನೈಕವಸ್ತ್ರಃ ಪ್ರವರ್ತೇತ ದ್ವಿಜವಾಚನಕೇ ಜಪೇ** (ವಿಷ್ಣುಪುರಾಣ)
**ಏಕವಸ್ತ್ರೋ ನ ಭುಂಜೀತ ನ ಕುರ್ಯಾದ್ದೇವತಾರ್ಚನಮ್** (ಗೋಭಿಲ)
**ಖಂಡವಸ್ತ್ರಾವೃತಸ್ಯೈವ ವಸ್ತ್ರಾರ್ಧಾಲಂಬಿನಸ್ತಥಾ**
**ಉತ್ತರೀಯವ್ಯತೀತಸ್ಯ ಸಮಸ್ತಾಃ ನಿಷ್ಫಲಾಃ ಕ್ರಿಯಾಃ** (ಸುಮಂತು)



**ಪದ್ಮಪುರಾಣವು** ಮೀಯುವಲ್ಲಿಯೂ ಒಂದು ಬಟ್ಟೆಯನ್ನು ನಿಷೇಧಿಸಿದೆ ಮತ್ತೆ ಮೀಯಲು ಇನ್ನೊಬ್ಬರ ಬಟ್ಟೆಯನ್ನು ಉಪಯೋಗಿಸಬಾರದು ಎಂದು ಆದೇಶಿಸಿದೆ–

**ನ ಭುಂಜೀತೈಕವಸ್ತ್ರೇಣ ನ ಸ್ನಾಯಾದೇಕವಾಸಸಾ**

**ನ ಧಾರಯೇತ್ಪರಸ್ಯೈವ ಸ್ನಾನವಸ್ತ್ರಂ ಕದಾಚನಾ**

ಮೇಲುಹೊದಿಕೆಯನ್ನು ಬ್ರಹ್ಮವಸ್ತ್ರದಂತೆ ಹಾಕಿಕೊಳ್ಳಬೇಕೇ ಹೊರತು ಕುತ್ತಿಗೆಗೆ ಸುತ್ತಾಗಿ ತಂದು ಎರಡು ಹೆಗಲನ್ನು ಆವರಿಸಿಕೊಂಡು ಬಂದು ಮೈಯನ್ನು ಮುಚ್ಚುವಂತೆ ಹೊರಬಾರದು.

**ಪ್ರದಕ್ಷಿಣೇ ಪ್ರಣಾಮೇ ಚ ಪೂಜಾಯಾಂ ಹವನೇ ಜಪೇ**

**ನ ಕಂಠಾವೃತವಸ್ತ್ರಃ ಸ್ಯಾತ್ ದರ್ಶನೇ ಗುರುದೇವಯೋಃ** (ಶಾಂಡಿಲ್ಯಸ್ಮೃತಿ)

ಶ್ರಾದ್ಧಕರ್ಮದಲ್ಲಿ ಒದ್ದೆಬಟ್ಟೆ ಮತ್ತು ಒಂದು ಬಟ್ಟೆ ಯೋಗ್ಯವೆನಿಸಿದೆ. ಬೇರೆ ಕರ್ಮಗಳಲ್ಲಿ ಇದು ನಿಷಿದ್ಧ. ಇದರಿಂದ ಕರ್ಮ ನಿಷ್ಫಲ. ಮಿಂದು ಬಂದಾಗ ಮೈ ಒರೆಸಿಕೊಳ್ಳುವಾಗ ಒದ್ದೆಬಟ್ಟೆಯನ್ನು ಕಾಲ ಕೆಳಗಿನಿಂದ ತೆಗೆಯಬಾರದು ಎನ್ನುವುದಾಗಿಯೂ **ಬೃಹತ್ಬ್ರಹ್ಮಸಂಹಿತೆ** ವಿಶೇಷವಾಗಿ ತಿಳಿಸಿದೆ –

**ಪೈತ್ರ್ಯಾದೃತೇ ನಾರ್ದ್ರವಾಸಾ ನೈಕವಾಸಾಃ ಸಮಾಚರೇತ್**

**ನಿಷ್ಫಲಂ ಜಾಯತೇ ಕರ್ಮ್ಮ ಕೃತಂ ಯತ್ತ್ವೇಕವಾಸಸಾ**

**ಆರ್ದ್ರವಸ್ತ್ರಮಧಸ್ತಾತ್ತು ಸ್ನಾತ್ವಾ ನೋತ್ತಾರಯೇದ್ಬುಧಃ**

ಮೈ ಒರೆಸಿಕೊಂಡಾಗ ಒದ್ದೆಬಟ್ಟೆಯನ್ನು ಕಾಲಡಿಯಿಂದ ತೆಗೆದರೆ ಮತ್ತೆ ಸ್ನಾನ ಮಾಡಬೇಕು –

**ಸ್ನಾನಂ ಕೃತ್ವಾರ್ದ್ರವಸ್ತ್ರಂ ತು ಊರ್ಧ್ವಮುತ್ತಾರಯೇದ್ದ್ವಿಜಃ**

**ಆರ್ದ್ರವಸ್ತ್ರಮಧಸ್ತಾಚ್ಚೇತ್ ಪುನಃ ಸ್ನಾನೇನ ಶುದ್ಧ್ಯತಿ** (ಭೃಗು)

ಮೇಲು ಹೊದಿಕೆ ಇಲ್ಲದೆ ಹೋದಲ್ಲಿ ಒಂದು ಯಜ್ಞೋಪವೀತ ಹೆಚ್ಚು ಧಾರಣೆ ಮಾಡಬೇಕು. ಇದರಿಂದ ಒಂದು ಬಟ್ಟೆ ತೊಟ್ಟ ದೋಷವನ್ನು ನೀಗಿಸಿದಂತಾಗುವುದು ಎಂದು **ಆಚಾರರತ್ನ** ಅಭಿಪ್ರಾಯಪಟ್ಟಿದೆ –



**ಯಜ್ಞೋಪವೀತೇ ದ್ವೇ ಧಾರ್ಯೇ ಶ್ರೌತೇ ಸ್ಮಾರ್ತೇ ಚ ಕರ್ಮಣಿ**

**ತೃತೀಯಮುತ್ತರೀಯಾರ್ಥಂ ವಸ್ತ್ರಾಭಾವೇ ತದಿಷ್ಯತೇ**

ಬ್ರಹ್ಮಚಾರಿಗಳಿಗೆ ಯಜ್ಞೋಪವೀತ ಹೆಚ್ಚು ಹಾಕಿಕೊಳ್ಳಲು ಅಧಿಕಾರವಿರದು. ಅವಿವಾಹಿತರು ಒಂದೇ ಉಪವೀತವನ್ನು ಧರಿಸಬೇಕು. ಸಂನ್ಯಾಸ ಸ್ವೀಕರಿಸಿದವರೂ ಉಪವೀತವನ್ನು ಒಂದೇ ಉಪಯೋಗಿಸಬೇಕು –

**ಉಪವೀತಂ ವಟೋರೇಕಂ ದ್ವೇ ತಥೇತರಯೋಃ ಸ್ಮೃತೇ**

**ಏಕಮೇವ ಯತೀನಾಂ ಸ್ಯಾತ್ ಇತಿ ಶಾಸ್ತ್ರವಿನಿಶ್ಚಯಃ** (ದೇವಲ)

ಮಡಿಹಾಕಿದ ಒಣಬಟ್ಟೆಯಿರದಿದ್ದಲ್ಲಿ, ರೇಶ್ಮೆಪಟ್ಟೆಯುಟ್ಟು ಜಪಾದಿಗಳನ್ನು ನಡೆಸಬೇಕು.

**ಸ್ನಾತ್ವೈವಂ ವಾಸಸೀ ಧೌತೇ ಅಕ್ಲಿನ್ನೇ ಪರಿಧಾಪಯೇತ್**

**ಅಭಾವೇ ಧೌತವಸ್ತ್ರಸ್ಯ ಪಟ್ಟಕ್ಷೌಮಾದಿಕಾನಿ ಚ**

**ಕುತಪಂ ಯೋಗಪಟ್ಟಂ ವಾ ವಿವಾಸಾ ಯೇನ ನೋ ಭವೇತ್** (ನಾ.ದೇ)

ಕಪ್ಪು ಮತ್ತು ಕೆಂಪು ಬಟ್ಟೆಯನ್ನು ಒಳ್ಳೆಯ ಕರ್ಮಗಳಿಗೆ ಎಂದೂ ಬಳಸಬಾರದು –

**ನೀಲಂ ರಕ್ತಂ ಚ ಯದ್ವಸ್ತ್ರಂ ದೂರತಃ ಪರಿವರ್ಜಯೇತ್**

ಕಪ್ಪುಬಟ್ಟೆಯನ್ನು ಧರಿಸಿ ಮಾಡಿದ ಎಲ್ಲ ಧರ್ಮಕರ್ಮಗಳು ವ್ಯರ್ಥ ಎಂದು **ಸ್ಕಾಂದಪುರಾಣ** –

**ಸ್ನಾನಂ ದಾನಂ ಜಪೋ ಹೋಮಃ ಸ್ವಾಧ್ಯಾಯಃ ಪಿತೃತರ್ಪಣಮ್**

**ವೃಥಾ ತಸ್ಯ ಮಹಾಯಜ್ಞೋ ನೀಲವಾಸೋ ಬಿಭರ್ತಿ ಯಃ**

ಹೊಲಿದ ಬಟ್ಟೆ, ಸುಟ್ಟ ಬಟ್ಟೆ, ಇಲಿ ಮುಂತಾದ ಕ್ರಿಮಿಕೀಟಗಳಿಂದ ಕಚ್ಚಲ್ಪಟ್ಟ ಬಟ್ಟೆ, ಹರಿದ ಬಟ್ಟೆ, ಇವೆಲ್ಲ ಜಪಾದಿ ಸತ್ಕರ್ಮಗಳಿಗೆ ನಿಷಿದ್ಧ ಎಂದು **ಆಪಸ್ತಂಬದಲ್ಲಿ** ಹೇಳಲಾಗಿದೆ –

**ನ ಸ್ಯೂತೇನ ನ ದಗ್ಧೇನ ಪಾರಕ್ಯೇಣ ವಿಶೇಷತಃ**

**ಮೂಷಕೋತ್ಕೀರ್ಣಜೀರ್ಣೇನ ಕರ್ಮ ಕುರ್ಯಾದ್ವಿಚಕ್ಷಣಃ**



ಕಚ್ಚೆಹಾಕಿ ಬಟ್ಟೆಯನ್ನುಟ್ಟು ಜಪಿಸಬೇಕು. ಇನ್ನೊಂದು ಬಟ್ಟೆಯನ್ನು ಉಪವೀತದಂತೆ ಉತ್ತರೀಯವನ್ನಾಗಿಸಿಕೊಳ್ಳಬೇಕು. ಬತ್ತಲೆಯಾಗಿ ಮಾನಸಜಪವೂ ತಪ್ಪು.

**ಏಕಚ್ಛೋಽನುತ್ತರೀಯಶ್ಚ ನಗ್ನಶ್ಚಾವಸ್ತ್ರ ಏವ ಚ**

**ಶ್ರೌತಂ ಸ್ಮಾರ್ತ್ತಂ ತಥಾ ಕರ್ಮ್ಮ ನ ನಗ್ನಶ್ಚಿಂತಯೇದಪಿ** (ಭೃಗು)

ಸುಟ್ಟಬಟ್ಟೆಯನ್ನು, ತುಂಡುಬಟ್ಟೆಯನ್ನು ಜಪಾದಿಗಳಲ್ಲಿ ಉಪಯೋಗಿಸಬಾರದು. ಅಂಚು (border) ಉಳ್ಳ ಇಡಿ ಬಟ್ಟೆಯನ್ನೇ ಉಡಲು-ತೊಡಲು ಉಪಯೋಗಿಸಬೇಕು ಎಂದು **ಮಾಧವೀಯದಲ್ಲಿ** ಹೇಳಿದೆ–

**ನಗ್ನೋ ಮಲಿನವಸ್ತ್ರಶ್ಚ ನಗ್ನಶ್ಚಾರ್ಧಪಟಃ ಸ್ಮೃತಃ**

**ನಗ್ನಸ್ತು ದಗ್ಧವಸ್ತ್ರಃ ಸ್ಯಾತ್ ನಗ್ನಃ ಸ್ಯೂತಪಟಸ್ತಥಾ**

ಜಪಾದಿಗಳಿಗೆ, ಮಲಗಲು, ಹಾಗೆಯೆ ಪ್ರಯಾಣಕ್ಕೆ ಬೇರೆ ಬೇರೆ ಬಟ್ಟೆಯೆ ಆಗಬೇಕೆಂದು **ಮಹಾಭಾರತ** ತಿಳಿಸಿದೆ –

**ಅನ್ಯದೇವ ಭವೇದ್ವಾಸಃ ಶಯನೀಯೇ ನರಾಧಿಪ**

**ಅನ್ಯದ್ರಥ್ಯಾಸು ದೇವಾನಾಂ ಅರ್ಚ್ಚಾಯಾಮನ್ಯದೇವ ಹಿ**

ಎರಡು ಶುದ್ಧವಾದ ಒಣಬಟ್ಟೆಯನ್ನು ತೊಟ್ಟುಕೊಂಡು ಕಾಲುಗಳೆರಡನ್ನೂ ತೊಳೆದು ಮತ್ತೆ ಜಪಾಂಗ ಪುಂಡ್ರಧಾರಣೆಯನ್ನು ಮತ್ತು ಪಂಚಾಯುಧ ಮುದ್ರಾಧಾರಣೆಯನ್ನು ಮಾಡಿಕೊಳ್ಳಬೇಕೆಂಬ ನಿಯಮವನ್ನು **ವರಾಹ** ಹೇಳಿರುತ್ತಾನೆ –

**ತತೋ ವೈ ವಾಸಸೀ ಶುಕ್ಲೇ ಶುದ್ಧೇ ಚ ಪರಿಧಾರಯೇತ್**

**ಪಾದೌ ಪ್ರಕ್ಷಾಳ್ಯ ಕುರ್ವೀತ ತಿಲಕಾಯುಧಧಾರಣಮ್**

ಬಟ್ಟೆ ತೊಟ್ಟ ಬಳಿಕವೂ ಆಚಮನವನ್ನು **ಯಾಜ್ಞವಲ್ಕ್ಯಸ್ಮೃತಿ** ಹೇಳಿದೆ –

**ಸ್ನಾತ್ವಾ ಪೀತ್ವಾ ಕ್ಷುತೇ ಸುಪ್ತೇ ಭುಕ್ತ್ವಾ ರಥ್ಯೋಪಸರ್ಪಣೇ**

**ಆಚಾಂತಃ ಪುನರಾಚಾಮೇತ್ ವಾಸೋಽಪಿ ಪರಿಧಾಯ ಚ**

ಒಣಗಿದ ಶುದ್ಧ ಬಟ್ಟೆ ತೊಟ್ಟು ಆಚಮನ ಮಾಡಿ ಊರ್ಧ್ವಪುಂಡ್ರ



ಧರಿಸಿ ಪವಿತ್ರಹಸ್ತನಾಗಿ ಸಂಧ್ಯಾವಂದನೆಯ ಆರಂಭವನ್ನು ವಸಿಷ್ಠಸ್ಮೃತಿ ಹೇಳಿದೆ–

**ಆಚ್ಛಾದ್ಯ ಧೌತವಸನಂ ಪುನರಾಚಮನಂ ಚರೇತ್**

**ಧೃತೋರ್ಧ್ವಪುಂಡ್ರದೇಹಸ್ತು ಪವಿತ್ರಕರ ಏವ ಚ**

**ಉಪಾಸೀತ ತತಃ ಸಂಧ್ಯಾಂ ಪ್ರಾಙ್ಮುಖೋದಙ್ಮುಖೋಽಪಿ ವಾ**

**ವರಾಹಪುರಾಣವು** ಬಟ್ಟೆ ತೊಟ್ಟು, ಎರಡು ಬಾರಿ ಆಚಮನೆಗೈದು, ಶಿಖೆ ಕಟ್ಟಿ ಜಪದ ಸಂಕಲ್ಪಕ್ಕೆ ಅನುವಾಗಲು ಕರೆಕೊಟ್ಟಿದೆ –

**ಶುಚಿಃ ಕ್ಷಾಳಿತಪಾದಃ ಸನ್ ಧೌತವಸ್ತ್ರೋ ದ್ವಿರಾಚಮೇತ್**

**ತತೋ ಬದ್ಧಶಿಖೋ ಭೂತ್ವಾ ದೇಶಂ ಕಾಲಂ ಚ ಸಂಸ್ಮರೇತ್**

ತಾನೇ ಹಿಂಡಿ ಒಣಗಲು ಹಾಕಿದ ಬಟ್ಟೆಯನ್ನು ಧರ್ಮಕರ್ಮಗಳಿಗೆ ಬಳಸಬೇಕು. ಮಡಿವಾಳನಿಂದ ಮಡಿಗೈದ ಬಟ್ಟೆಯಾಗದು.

**ಸ್ವಯಂ ಧೌತೇನ ಕರ್ತ್ತವ್ಯಾ ಕ್ರಿಯಾ ಧರ್ಮ್ಯಾ ವಿಪಶ್ಚಿತಾ**

**ನ ತು ನೇಜಕಧೌತೇನ ನಾಹತೇನ ನ ಕುತ್ರಚಿತ್** (ದೇವಲ)

**ರಜಕೈಃ ಕ್ಷಾಳಿತಂ ವಸ್ತ್ರಂ ಅಶುದ್ಧಂ ಕವಯೋ ವಿದುಃ** (ಪದ್ಮಪುರಾಣ)

ಈ ಸೂಕ್ಷ್ಮ ಸಂಗತಿಯನ್ನು ಆಚಾರ್ಯಮಧ್ವರು ತೋರಿಸಿಕೊಟ್ಟಿದ್ದಾರೆ –

**ತರ್ಪಯಿತ್ವಾ ನಿಪೀಡ್ಯಾಥ ವಾಸೋ ವಿಸೃತ್ಯ ಚಾಂಜಸಾ**

ಜಪಕ್ಕೆ ಪ್ರತಿದಿನವೂ ಶುದ್ಧವಾದ ಬೇರೆ ಬೇರೆ ವಸ್ತ್ರ ಆಗಬೇಕೆಂದು **ಲಿಂಗಪುರಾಣ**. ಮೊದಲ ದಿನದ ಬಟ್ಟೆಯನ್ನು ಎರಡನೆಯ ದಿನಕ್ಕೆ ಉಪಯೋಗಿಸುವಂತಿಲ್ಲ –

**ದೇವಕಾರ್ಯೋಪಯುಕ್ತಾನಾಂ ಪ್ರತ್ಯಹಂ ಶೌಚಮಿಷ್ಯತೇ**

**ಇತರೇಷಾಂ ಹಿ ವಸ್ತ್ರಾಣಾಂ ಶೌಚಂ ಕಾರ್ಯಂ ಮಲಾಗಮೇ**

ಇನ್ನೊಬ್ಬರು ತೊಟ್ಟ ಬಟ್ಟೆಯನ್ನಾಗಲೀ, ಉಪವೀತವನ್ನಾಗಲೀ, ಚಪ್ಪಲಿಯನ್ನಾಗಲೀ, ಮಾಲೆಯನ್ನಾಗಲೀ ಧರಿಸಬಾರದು –

**ಉಪಾನಹೌ ಚ ವಾಸಶ್ಚ ಧೃತಮನ್ಯೈರ್ನ ಧಾರಯೇತ್**

**ಉಪವೀತಮಲಂಕಾರಂ ಸ್ರಜಂ ಕಂಠಗಮೇವ ಚ** (ದೀಪಿಕಾ)

# ಶಿಖೆ

ಮಿಂದ ಬಳಿಕ ಮಿಂದ ತಾಣದಲ್ಲೇ ನೀರಿನಿಂದಲೇ ಪುಂಡ್ರಗಳನ್ನು ಹಚ್ಚಿಕೊಂಡು ಜುಟ್ಟನ್ನು ಕಟ್ಟಿಕೊಳ್ಳಬೇಕು ಎಂದು **ಬೃಹತ್‌ಬ್ರಹ್ಮಸಂಹಿತೆ** –

**ಜಲೇ ಜಲೇನ ಪುಂಡ್ರಾಣಿ ಕೃತ್ವಾ ದ್ವಾದಶಸಂಖ್ಯಯಾ**

**ಶಿಖಾಮಾಬಧ್ಯ ಮೂಲೇನ ಗಾಯತ್ರ್ಯಾ ಮೌನಮಾಶ್ರಿತಃ**

ಶಿಖೆಯ ಕೂದಲು ನೂರೆಂಟಾದರೂ ಇರಲೆಂದು **ಬೋಧಾಯನಪ್ರಯೋಗ** –

**ಶತಾನಾಂ ಸಪ್ತತ್ರಿಗುಣಮಷ್ಟೋತ್ತರಮಥಾಪಿ ವಾ**

**ಕೇಶಾನಾಮಪಿ ಸಂಖ್ಯಾಃ ಸ್ಯುಃ ಶಿಖೈಕಾ ಪರಿಕೀರ್ತಿತಾ**

ಪುರುಷೋತ್ತಮತೀರ್ಥರ ಕರ್ಮಸಿದ್ಧಾಂತದಲ್ಲಿ ಶಿಖಾಬಂಧನಕ್ಕೆ ಪ್ರಣವ ಮತ್ತು ಗಾಯತ್ರಿಯನ್ನು ಮಂತ್ರವನ್ನಾಗಿ ತಿಳಿಸಿದ್ದಾರೆ. ಇದಕ್ಕೆ ಅಗ್ನಿಪುರಾಣವು ಸಂವಾದಿಯಾಗಿದೆ. ಪವಿತ್ರಗಂಟನ್ನು ಹಾಕಲು ಹೇಳಿದ್ದಾರೆ. ಹೆಬ್ಬೆರಳು ಮತ್ತು ತೋರುಬೆರಳನ್ನು ಉಪಯೋಗಿಸುವಂತೆಯೂ ತಿಳಿಸಿರುತ್ತಾರೆ. ಶಿಖಾಭಿಮಾನಿನಿಯಾಗಿ ಶಿಖಾರಕ್ಷಣೆಯಲ್ಲಿ ದುರ್ಗೆಯ ಪ್ರಾರ್ಥನೆಯನ್ನಿಲ್ಲಿ ನೀಡಿದ್ದಾರೆ –

**ಸ್ಮೃತ್ವೋಂಕಾರಂ ಚ ಗಾಯತ್ರೀಂ ಶಿಖಾಬಂಧನಮಾಚರೇತ್**

**ಜ್ಞಾನಮುದ್ರಾಮಥಃ ಕೃತ್ವಾ ಕೂರ್ಚವದ್ಗ್ರಂಥಿರಿಷ್ಯತೇ**

**ಊರ್ಧ್ವಕೇಶಿ ವಿರೂಪಾಕ್ಷಿ ಮಾಂಸಶೋಣಿತಭಕ್ಷಣೇ**

**ತಿಷ್ಠ ದೇವಿ ಶಿಖಾಬಂಧೇ ಚಾಮುಂಡೇ ಚಾಪರಾಜಿತೇ**

ಜುಟ್ಟು ಕಟ್ಟಿಕೊಳ್ಳದೇ ಊರ್ಧ್ವಪುಂಡ್ರವಿಲ್ಲದೇ ದರ್ಭೆ ಪವಿತ್ರ ಸಿಕ್ಕಿಸಿಕೊಳ್ಳದೇ ಉಪವೀತವನ್ನು ಬಲಕ್ಕೆ ಹಾಕಿಕೊಳ್ಳದೇ ನಡೆಸಿದ ಕರ್ಮಗಳೆಲ್ಲವೂ ಫಲವೀಯವು. ಬಟ್ಟೆಗಳಿಲ್ಲದೇ ಜಪಿಸಿದರೂ ವ್ಯರ್ಥ. ನಡೆಯುತ್ತಾ, ಮಲಗುತ್ತಾ, ಪಟ್ಟಾಂಗಗೈಯುತ್ತಾ ಜಪಿಸಿದರೂ ಫಲವಿಲ್ಲವೆಂದು **ನಾರಾಯಣಸಂಹಿತೆ** –

**ಅವಿಧಾಯ ಶಿಖಾಬಂಧಂ ಅಕೃತ್ವಾ ಚೋರ್ಧ್ವಪುಂಡ್ರಕಮ್**



ಅಧಾರಯಂಸ್ತತೋ ದರ್ಭಾನ್ ಸೂತ್ರೈರನುಪವೀತಯನ್
ಕುರ್ವನ್ ಕರ್ಮಾಣಿ ಸಫಲಂ ನಾಪ್ನುಯಾತ್ ಪುರುಷಾಧಮಃ
ನಗ್ನೋ ಮುಕ್ತಶಿಖಾಬಂಧೋ ವಾಸಸಾ ನಾವಗುಂಠಿತಃ
ಗಚ್ಛನ್ ಶಯಾನಃ ಪ್ರಲಪನ್ ನ ಜಪಾತ್ ಫಲಮಶ್ನುತೇ

ಉಪವೀತವಿದ್ದು ವೇದಮಂತ್ರಗಳನ್ನು ಜಪಿಸುವಂತೆ ಜುಟ್ಟು ಕಟ್ಟಿಕೊಂಡೇ ಜಪಿಸಬೇಕು. ಇಲ್ಲದಿರೆ ಜಪ ಮಾಡಿದಂತೆಯೇ ಎನಿಸದು ಎನ್ನುವುದಾಗಿ **ಕೂರ್ಮಪುರಾಣ** –

ಸದೋಪವೀತೀ ಚೈವ ಸ್ಯಾತ್ ಸದಾ ಬದ್ಧಶಿಖೋ ದ್ವಿಜಃ
ಅನ್ಯಥಾ ಯತ್ಕೃತಂ ಕರ್ಮ ತದ್ಭವತ್ಯಯಥಾಕೃತಮ್

ಉಡುಪಿಯ ಕೃಷ್ಣ ಮೂರು ಜುಟ್ಟು ಕಟ್ಟಿದವನೆಂದು ಬ್ರಹ್ಮಾಂಡಪುರಾಣದ ರೌಪ್ಯಪೀಠಮಹಿಮೆಯಲ್ಲಿದೆ –

ವಾಮಹಸ್ತೇ ದಾಮಧರಂ ದಕ್ಷೇ ಮಂಥಾನಮಂಡಿತಮ್
ಶಿಖಾಬಂಧತ್ರಯೋಪೇತಂ ಲಂಬಾಲಕವಿಭೂಷಿತಮ್
ಸರ್ವಾಂಗಸುಂದರಂ ಚಾರುಕರ್ಣೋದ್ಭಾಸಿತಕುಂಡಲಮ್
ತ್ರಿರೇಖಕಂಬುಸಂಕಾಶಗ್ರೀವಂ ಕೌಸ್ತುಭಮಂಡಿತಮ್
ವಿಶಾಲೋರಃಸ್ಥಳಸ್ಥೋರುಭೂಷಾತ್ರಿವಳಿಸುಂದರಮ್
ಪುಷ್ಟೋದರಂ ನಿಮ್ನನಾಭಿಂ ಪೀತವಸ್ತ್ರೋಪಶೋಭಿತಮ್
ಕರಿಭೋರುಂ ಸ್ಫುರಜ್ಜಾನುಜಂಘಾಪಾದದ್ವಯಾಂಬುಜಮ್
ನೂಪುರಾಂಗದಸತ್ಕಾಂಚೀಕಂಕಣೈಶ್ಚ ವಿರಾಜಿತಮ್
ಮುದ್ರಿಕಾಹಾರಕೇಯೂರಶ್ರೀವತ್ಸಾಂಕೈರಲಂಕೃತಮ್
ಜಗತ್ಸಮ್ಮೋಹಜನಕಮಂದಹಾಸಮುಖಾಂಬುಜಮ್
ಬಾಲಗೋಪಾಲವಪುಷಂ ಜಗನ್ನಾಥಮಧೋಕ್ಷಜಮ್

ಪ್ರತಿಮೆಯಲ್ಲಿ ಕಿರೀಟಾದಿ ಆಭರಣ–ಅಲಂಕಾರಗಳು ಶಿಲ್ಪಿಯಿಂದಲೇ ಕೆತ್ತಲ್ಪಡಬೇಕು ಎನ್ನುವ ತಂತ್ರಸಾರಸಂಗ್ರಹದ ಮಾತಿಗೆ ಇಲ್ಲಿ ಪ್ರತ್ಯಕ್ಷವಿದೆ.



# ನಿರ್ಮಾಲ್ಯತೀರ್ಥಪ್ರಾಶನ

ಸಂಧ್ಯಾವಂದನೆಯ ಆರಂಭದಲ್ಲಿ ದೇಹದ ಆಂತರ ಪಾವಿತ್ರ್ಯದಲ್ಲಿ ನಿರ್ಮಾಲ್ಯ ತೀರ್ಥಪ್ರಾಶನ ಮಹತ್ತ್ವಪೂರ್ಣವಾದ ಸ್ಥಾನವನ್ನು ಪಡೆದಿದೆ. ತುಳಸಿಯನ್ನು ಮಾತ್ರ ಹಾಕಿದ, ಗಂಧಪುಷ್ಪಪತ್ರೆಗಳನ್ನೆಲ್ಲ ಹಾಕಿರದ ತೀರ್ಥವಿದು. ಪ್ರಾಶನಗೈದರೆ ನೀರು ಕುಡಿದಂತೆ ಎನಿಸುವುದಿಲ್ಲ. ಜಪಾನುಷ್ಠಾನಕ್ಕೆ ಭಂಗ ಬರುವುದಿಲ್ಲ. ಹನ್ನೆರಡು ವರ್ಷ ಉಪವಾಸದ ಫಲವನ್ನೇ ಕೊಡಲಿದೆ ಎಂದು **ಸ್ಕಾಂದಪುರಾಣ** ಹೇಳಿದೆ –

**ವಿಷ್ಣುಪಾದೋದಕಂ ಪುಣ್ಯಂ ಪ್ರಾಶಯೇದ್ಯೋ ದಿನೇದಿನೇ**

**ದ್ವಾದಶಾಬ್ದೋಪವಾಸಸ್ಯ ಫಲಂ ಪ್ರಾಪ್ನೋತ್ಯಸಂಶಯಃ**

ತೀರ್ಥ ಮಾಡಿಕೊಳ್ಳುವಲ್ಲಿ ಪ್ರತಿಮೆಯ ಜೊತೆ ಮುಖ್ಯವಾಗಿ ಸಾಳಗ್ರಾಮ ಇದ್ದಿರಲೇಬೇಕು. ಚಕ್ರಾಣಿಕೆ ಮತ್ತು ವಿಷ್ಣುಪಾದವೂ ಇರಬೇಕು. ದೇವರ ಮೇಲೆ ಮೂಲಮಂತ್ರದಿಂದ ತುಳಸಿಯನ್ನಿಟ್ಟು ಪುರುಷಸೂಕ್ತ ಹೇಳುತ್ತಾ ಶಂಖದಿಂದ ಘಂಟಾಮಣಿಯ ನಾದದೊಡನೆ ಅಭಿಷೇಕಗೈಯಬೇಕು ಎಂದು **ವಾರಾಹದ** ನುಡಿ – **ಸಾಳಗ್ರಾಮೋದ್ಭವೋ ದೇವೋ ದೇವೋ ದ್ವಾರವತೀಭವಃ**

**ತುಳಸೀ ಶಂಖತೋಯಂ ಚ ಪುಂಸೂಕ್ತೇನ ಚ ಮಂತ್ರತಃ**

**ಏತಾನಿ ಪಂಚತೀರ್ಥಾನಿ ಪಂಚಪಾತಕನಾಶನೇ**

ಈ ತೀರ್ಥವನ್ನು ತಲೆಗೂ ಪ್ರೋಕ್ಷಿಸಿಕೊಳ್ಳಬೇಕು. ಇದರಿಂದ ಜಪ ಮಾಡುವವನು ಎಲ್ಲ ತೀರ್ಥಗಳಲ್ಲಿ ಸ್ನಾನ ಮಾಡಿದಂತೆ. ಎಲ್ಲ ಮಂತ್ರಗಳ ಜಪಕ್ಕೂ ದೀಕ್ಷೆ ಪಡೆದಂತೆ –

**ಸ ಸ್ನಾತಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ**

**ಯೋ ವಹೇಚ್ಛಿರಸಾ ನಿತ್ಯಂ ಸಾಳಗ್ರಾಮಶಿಲಾಜಲಮ್** (ವೃದ್ಧಹಾರೀತಸ್ಮೃತಿ)

**ಸಾಳಗ್ರಾಮಶಿಲಾವಾರಿ ಶಿರಸಾ ಧಾರಯೇತ್ತತಃ** (ವಾಯುಪುರಾಣ)

ಜಪದಲ್ಲಿ ಆಗುವ ಮಂತ್ರಗಳ ಉಚ್ಚಾರಣೆಯಲ್ಲಿನ ದೋಷಗಳು



ತೀರ್ಥಪ್ರೋಕ್ಷಣೆಯಿಂದ ನಾಶಗೊಳ್ಳುವವು. ತೀರ್ಥವನ್ನು ಕಣ್ಣುಗಳೆರಡಕ್ಕೂ ಸ್ಪರ್ಶಿಸಿಕೊಳ್ಳಬೇಕು. ಬಾಹ್ಯಶುದ್ಧಿಗೆ ಪ್ರೋಕ್ಷಣೆ, ಆಂತರಶುದ್ಧಿಗೆ ಪ್ರಾಶನ –

**ವಿಷ್ಣುಪಾದೋದಕಂ ಮುಣ್ಯಂ ಪೀತ್ವಾ ಯಸ್ತು ಸ್ವಮಸ್ತಕೇ**
**ಪ್ರಕ್ಷೇಪಣಂ ಪ್ರಕುರ್ವೀತ ಬ್ರಹ್ಮಹತ್ಯಾಂ ವ್ಯಪೋಹತಿ**
**ವಿಷ್ಣೋಃ ಪಾದೋದಕಂ ಪೂರ್ವಂ ಆಸಿಚ್ಯ ಚ ಶಿರೋಮುಖೇ**
**ನೇತ್ರೇ ಚ ತ್ರಿಃ ಪಿಬೇತ್ ಪಶ್ಚಾತ್ ತಾಪತ್ರಯನಿವಾರಣಮ್** (ವರಾಹ)

ಮೊದಲು ತೀರ್ಥಪ್ರಾಶನಗೈದು ಮತ್ತೆ ತಲೆಗೆ ತೀರ್ಥವನ್ನು ಹಾಕಿಕೊಳ್ಳಬೇಕು. ಇದು ವೈಷ್ಣವತ್ವದ ಸಿದ್ಧಿಗೆ ಪೋಷಕ. ಅಂದರೆ ಇದೊಂದು ವೈಷ್ಣವ ದೀಕ್ಷೆ ಎನ್ನುವುದಾಗಿ **ಕೃಷ್ಣಾಮೃತಮಹಾರ್ಣ್ಣವದ** ಮಾತು –

**ಸ್ನಾನಂ ಪಾದೋದಕಂ ವಿಷ್ಣೋಃ ಪಿಬನ್ ಶಿರಸಿ ಧಾರಯೇತ್**
**ಸರ್ವಪಾಪವಿನಿರ್ಮ್ಮುಕ್ತೋ ವೈಷ್ಣವೀಂ ಸಿದ್ಧಿಮಾಪ್ನುಯಾತ್**

ಏಕಾದಶಿಯಂದು ಮತ್ತೆ ದ್ವಾದಶಿಯಂದು ಒಂದು ಬಾರಿ ನಿರ್ಮಾಲ್ಯತೀರ್ಥವನ್ನು ಸ್ವೀಕರಿಸಬೇಕು. ಉಳಿದ ದಿನ ಜಪಾರಂಭಕ್ಕಿಂತ ಮೊದಲು ಮೂರು ಬಾರಿ ಸ್ವೀಕರಿಸಬೇಕು. ಮೂರು ಬಾರಿ ಸ್ವೀಕರಿಸಿದರ ಫಲವನ್ನು **ಪದ್ಮಪುರಾಣ** ಹೇಳಿದೆ –

**ಆದ್ಯಂ ಕಾಯಸ್ಯ ಶುದ್ಧ್ಯರ್ಥಂ ದ್ವಿತೀಯಂ ಧರ್ಮಸಾಧನಮ್**
**ತೃತೀಯಂ ಮೋಕ್ಷದಂ ಪ್ರೋಕ್ತಂ ಏವಂ ತೀರ್ಥಂ ತ್ರಿಧಾ ಪಿಬೇತ್**

ಪ್ರತಿನಿತ್ಯ ಜಪಪೂಜಾನಂತರದಲ್ಲಿ ದೇವರಿಗೆ ಅಭಿಷೇಕಗೈದ ಗಂಧಪುಷ್ಪಾದಿಗಳನ್ನು ಹಾಕಿದ್ದ ತೀರ್ಥವನ್ನೂ ನಿರ್ಮಾಲ್ಯತುಳಸಿಯೊಡನೆ ಮೂರು ಬಾರಿ ಸ್ವೀಕರಿಸಬೇಕು. ಏಕಾದಶಿಯಂದು ಜಪಪೂಜೆಯ ಬಳಿಕ ಗಂಧಪುಷ್ಪಾದಿಗಳನ್ನು ಹಾಕಿರದ ತೀರ್ಥವನ್ನು ಒಂದೇ ಬಾರಿ ಸ್ವೀಕರಿಸಬೇಕು. ಇದರೊಡನೆ ನಿರ್ಮಾಲ್ಯತುಳಸಿಯನ್ನು ತಿನ್ನಬಾರದು ಎಂದು **ಪದ್ಮಪುರಾಣ** –

**ತುಳಸೀಮಿಶ್ರಿತಂ ತೋಯಂ ಏಕಾದಶ್ಯಾಂ ಕದಾಚನ**
**ನ ಗ್ರಾಹ್ಯಂ ವಿಷ್ಣುಭಕ್ತೈಶ್ಚ ವ್ರತಂ ನಶ್ಯೇಚ್ಚ ಪಾರ್ವತಿ**



ನಾರಾಯಣನ ತೀರ್ಥವನ್ನಲ್ಲದೆ ಬೇರೆ ಯಾವ ದೇವತೆಗಳ ತೀರ್ಥವನ್ನಿಲ್ಲಿ ಉಪಯೋಗಿಸುವಂತಿಲ್ಲ. ಹಾಗೆ ತಪ್ಪೆಸಗಿದರೆ ದೇವರ ನಾಶಕ್ಕೆ ಭಾಗಿಯಾದಾನು!

**ಹರೇಃ ಪಾದೋದಕೇಷ್ವನ್ಯದೇವಪಾದೋದಕೇ ತಥಾ**

**ಕರೋತಿ ಸಮತಾಂ ಯೋ ಹಿ ಬ್ರಹ್ಮಹತ್ಯಾಂ ಲಭೇತ್ತು ಸಃ** (ಬ್ರಹ್ಮವೈವರ್ತ)

ನಾರಾಯಣನ ಪಾದೋದಕವೆಂದರೆ ಅಲ್ಲಿ ಗಂಗೆಯ ಸನ್ನಿಧಾನ ನಿತ್ಯ. ಗಂಗೆಯಿರುವಲ್ಲಿ ಮೋಕ್ಷಸಾಧನೆಗೆ ಕಾರಣಗಳಾದ ಎಲ್ಲ ನದೀತೀರ್ಥಗಳು ಮೇಳೈಸಿರುವವು. ಗಂಗೆ ಬರಬೇಕಾದಲ್ಲಿ ದೇವರ ನಿತ್ಯ ಸನ್ನಿಧಾನವಿರುವ ಸಾಳಗ್ರಾಮ ಬೇಕೇಬೇಕು –

**ಗಂಗಾ ಗೋದಾವರೀ ರೇವಾ ನದ್ಯೋ ಮುಕ್ತಿಪ್ರದಾಶ್ಚ ಯಾಃ**

**ನಿವಸಂತಿ ಸತೀರ್ಥಾಸ್ತಾಃ ಸಾಳಗ್ರಾಮಶಿಲಾಜಲೇ**

ಶುದ್ಧಿಗೆ ಪಂಚಗವ್ಯಪ್ರಾಶನ ಮುಖ್ಯ. ಹೀಗೆಂದು ಆಶೌಚ ಶುದ್ಧಿಯ ಸಂದರ್ಭಗಳಲ್ಲಿ ಶುದ್ಧಿಯ ದಿನದಂದು ಜಪಹೋಮಾದಿಗಳ ಮೊದಲು ಪಂಚಗವ್ಯ ಸ್ವೀಕರಿಸುವ ಮಂದಿ ಇದ್ದಾರೆ. ನಿಜವಾಗಿಯೂ ಸಾವಿರಾರು ಪಂಚಗವ್ಯ ಪ್ರಾಶನಗಳಿಗಿಂತ ಮಿಗಿಲಾಗಿ ಶುದ್ಧಿಪ್ರದವಾದ ಸಂಗತಿ ಯೋಗ್ಯರೀತಿಯಿಂದ ತಯಾರಿಸಿದ ಸಾಳಗ್ರಾಮಶಿಲೆಯ ತೀರ್ಥಪ್ರಾಶನ–ನಿರ್ಮಾಲ್ಯತೀರ್ಥ ಸ್ವೀಕಾರ–

**ಯೇ ಪಿಬಂತಿ ಸದಾ ನಿತ್ಯಂ ಸಾಳಗ್ರಾಮಶಿಲಾಜಲಮ್**

**ಪಂಚಗವ್ಯಸಹಸ್ರೈಸ್ತು ಪ್ರಾಶಿತೈಃ ಕಿಂ ಪ್ರಯೋಜನಮ್** (ಪದ್ಮಪುರಾಣ)

ಧರ್ಮಶಾಸ್ತ್ರಕಾರರು ಶುದ್ಧಿಗಾಗಿ, ಪ್ರಾಯಶ್ಚಿತ್ತವಾಗಿ ಹೇಳುವ ಎಲ್ಲ ಬಗೆಯ ಕೃಚ್ಛ್ರಾಚರಣೆಗಿಂತ ಮಿಗಿಲು ತೀರ್ಥಪ್ರಾಶನ –

**ತಪ್ತಕೃಚ್ಛ್ರಾನ್ಮಹಾಕೃಚ್ಛ್ರಾತ್ ಪಂಚಗವ್ಯಾದ್ವಿಶಿಷ್ಯತೇ**

**ಚಾಂದ್ರಾಯಣಾತ್ಸರ್ವಕೃಚ್ಛ್ರಾತ್ ಪರಾಕಾದಪಿ ಸುವ್ರತೇ** (ನಾರದೀಯಪುರಾಣ)

ತೀರ್ಥಪ್ರಾಶನದಿಂದ ಕೃಷ್ಣನೆಡೆಗೆ ಸಾಗಲಿದೆ –

**ಸಾಳಗ್ರಾಮಜಲಂ ಭಕ್ತ್ಯಾ ನಿತ್ಯಮಶ್ನಾತಿ ಯೋ ನರಃ**

**ಜೀವನ್ಮುಕ್ತಃ ಸ ಚ ಭವೇತ್ ಯಾತ್ಯಂತೇ ಕೃಷ್ಣಮಂದಿರಮ್** (ಬ್ರಹ್ಮವೈವರ್ತ)



# ಊರ್ಧ್ವಪುಂಡ್ರಧಾರಣೆ

ಪಂಚಸಂಸ್ಕಾರಗಳಲ್ಲಿ ಒಂದು ಪುಂಡ್ರಧಾರಣೆ–

**ತಾಪಃ ಪುಂಡ್ರಸ್ತಥಾ ನಾಮ ಮಂತ್ರೋ ಯಾಗಸ್ತು ಪಂಚಮಃ**

**ಅಮೀ ಹಿ ಪಂಚಸಂಸ್ಕಾರಾಃ ವೈಷ್ಣವತ್ವಸ್ಯ ಹೇತವಃ**

ಏಕಾದಶಿಯಂತೆ ದೇವರ ಪೂಜೆಯಂತೆ ವಿಷ್ಣುಪ್ರೀತಿಜನಕ ಊರ್ಧ್ವಪುಂಡ್ರಧಾರಣೆ ಎಂದು **ಬೃಹತ್‌ಬ್ರಹ್ಮಸಂಹಿತೆ** –

**ಧಾರಣಂ ಚೋರ್ಧ್ವಪುಂಡ್ರಾಣಾಂ ಏಕಾದಶ್ಯಾಮುಪೋಷಣಮ್**

**ತದೀಯಾನಾಮರ್ಚನಂ ಚ ವೈಷ್ಣವತ್ವಮಿದಂ ಸ್ಮೃತಮ್**

ಅಥರ್ವವೇದ ಮೇಲಕ್ಕೇರಲು ನಮಗೆ ಕರೆಕೊಟ್ಟಿದೆ, ಕೆಳಕ್ಕೆ ಕುಸಿಯದಿರೆಂದು ಎಚ್ಚರಿಸಿದೆ–

**ಉದ್ಯಾನಂ ತೇ ಪುರುಷ ನಾವಯಾನಮ್**

**ಉತ್ಕ್ರಾಮಾತಃ ಪುರುಷ ಮಾವಪತ್ಥಾಃ**

ವಾಧೂಲಸ್ಮೃತಿ ಪುಂಡ್ರಧಾರಣೆಯನ್ನು ಹೇಳುತ್ತ ಊರ್ಧ್ವಗತಿಯನ್ನು ಬಯಸುವವರು ಊರ್ಧ್ವಪುಂಡ್ರವನ್ನು ಧರಿಸಲು ಕರೆಕೊಟ್ಟಿದೆ. **ನಾರದೀಯ ಪುರಾಣವಾಕ್ಯ** ಇದನ್ನು ಸ್ಪಷ್ಟಪಡಿಸಿದೆ–

**ಊರ್ಧ್ವಗತ್ಯಾಂ ಹಿ ಯಸ್ಯೇಚ್ಛಾ ತಸ್ಯೋರ್ಧ್ವಂ ಪುಂಡ್ರಮುಚ್ಯತೇ**

**ಊರ್ಧ್ವಗತ್ಯಾ ತು ದೇವತ್ವಂ ಪ್ರಾಪ್ನೋತೀಹ ನ ಸಂಶಯಃ**

ಅಂತಃಶಕ್ತಿ ಮೇಲ್ಮುಖವಾಗಿ ಹರಿಯುವಂತೆ ಮಾಡಲು ಊರ್ಧ್ವಪುಂಡ್ರ ಧಾರಣೆ ಬೇಕೇಬೇಕು. ವಿಜಯದಾಸರು ಇದನ್ನೆ ಹೇಳಿದ್ದು – ಊರ್ಧ್ವಪುಂಡ್ರ ತಿದ್ದದವಗೆ ಕರ್ಮ ಯಾತಕೆ? ಅದು ನಾಮ ಹಾಕುವುದು ಅಲ್ಲ. ಭಗವಂತನ ನಾಮಗಳಿಂದ ಪುಂಡ್ರ ತಿದ್ದುವುದು ಎನ್ನುವುದನ್ನು ತಿಳಿಯಬೇಕಾಗಿದೆ.

ಭಾಗವತ ಪುರಾಣ ತಿಳಿಸಿದಂತೆ ಪ್ರಾಣಿಗಳು ತಿರ್ಯಗ್ ಸ್ರೋತಸ್ಸುಗಳು– ಅಡ್ಡ ಬೆಳೆಯುವವುಗಳು. ಹಾಗೆಯೆ ಅಡ್ಡಾಡುವವುಗಳು. ಮನುಷ್ಯರು



ಅರ್ವಾಕ್ ಸ್ರೋತಸ್ಸುಗಳು. ಅಂದರೆ ಕೆಳಗೆ ಇಳಿಯುವವರು. ತಮ್ಮ ಶಕ್ತಿಯನ್ನು ದುರುಪಯೋಗಗೊಳಿಸಿ ಬದುಕಿನಲ್ಲಿ ಸೋಲನ್ನೇ ಪಡೆಯುವವರು. ರಾಜಸ-ತಾಮಸ ಭಾವನೆಗಳಿಂದ ಕುಸಿಯುವವರು. ಇವರ ಮೇಲ್ಮುಖವಾದ ಗತಿಗೆ ಈ ಊರ್ಧ್ವಪುಂಡ್ರ ತುಂಬಾ ಸಹಾಯಕವೆನಿಸಿದೆ. ಸಾತ್ತ್ವಿಕ ಭಾವವನ್ನು ಬೆಳೆಸುವಲ್ಲಿ ಇದು ತುಂಬಾ ಕೆಲಸ ಮಾಡಲಿದೆ.

**ತಿರ್ಯಕ್ಪುಂಡ್ರಾದ್ಗತಿಸ್ತಿರ್ಯಕ್ ಊರ್ಧ್ವಪುಂಡ್ರಾತ್ತಥೋರ್ಧ್ವಗಾ** (ಸಂಗ್ರಹ)

ಪೂಜೆಯಲ್ಲಿಯ 32 ಅಪರಾಧಗಳಲ್ಲಿ ಮೊದಲನೆಯದು ತಿರ್ಯಕ್ಪುಂಡ್ರ ಧರಿಸಿ ಪೂಜಿಸುವುದೆಂದು ವರಾಹಪುರಾಣ ತಿಳಿಸಿದೆ. ಮುಖ್ಯವಾಗಿ ಪುಂಡ್ರಧಾರಣೆ ರಕ್ಷಣೆಯನ್ನು ನೀಡಲಿದೆ. ಅದಕೆಂದೆ **ಪಂಚರಾತ್ರ** ಭಗವಂತನ ಕೇಶವಾದಿರೂಪಗಳನ್ನು ಪುಂಡ್ರಧಾರಣೆಯಲ್ಲಿ ನೆನೆಯಲು ತಿಳಿಸಿದೆ-

**ಪುಂಡ್ರಾಣಾಂ ಧಾರಣೇ ಕಾಲೇ ಕೇಶವಾದೀನ್ ಸ್ಮರೇತ್ ಸುಧೀಃ**

ಗೋಪಿಯರೂ ಪೂತನಾಸಂಹಾರದ ಬಳಿಕ ಕೃಷ್ಣನಿಗೆ ರಕ್ಷೆಗಾಗಿ ಭಗವನ್ನಾಮಗಳ ಚಿಂತನೆಯಲ್ಲಿ ಸೆಗಣಿಯಿಂದ ಪುಂಡ್ರ ಹಾಕಿದ್ದಾರೆಂದು **ಭಾಗವತಪುರಾಣ** ಹೇಳಿದೆ –

**ರಕ್ಷಾಂ ಚಕ್ರುಶ್ಚ ಶಕೃತಾ ದ್ವಾದಶಾಂಗೇಷು ನಾಮಭಿಃ**

ದನ ಮೆಟ್ಟಿದ ಮಣ್ಣಿನಿಂದಲೂ ಪುಂಡ್ರಧಾರಣೆಯನ್ನು ಬ್ರಹ್ಮವೈವರ್ತ ಹೇಳಿದೆ –

**ಗೋಷ್ಪದಾಕ್ತಮೃದಾ ಯೋ ಹಿ ತಿಲಕಂ ಕುರುತೇ ನರಃ**

**ತೀರ್ಥಸ್ನಾತೋ ಭವೇತ್ ಸದ್ಯೋ ಜಯಸ್ತಸ್ಯ ಪದೇಪದೇ**

**ಆಚಾರಕಿರಣ**ದಲ್ಲಿ ಪುಂಡ್ರಧಾರಣೆಗೆ ನಾಲ್ಕು ದ್ರವ್ಯಗಳನ್ನು ಹೇಳಿದ್ದಾರೆ-

**ಮೃತ್ತಿಕಾ ಚಂದನಂ ಭಸ್ಮ ತೋಯಂ ಚೈವ ಚತುರ್ಥಕಮ್**

**ಏಭಿರ್ದ್ರವ್ಯೈರ್ಯಥಾಕಾಲಂ ಮೂರ್ಧ್ನಿ ಪುಂಡ್ರಂ ಭವೇತ್ಸದಾ**

ಸಂಗ್ರಹದಲ್ಲಿಯೂ ಇದನ್ನು ಸಂಗ್ರಹಿಸಿದ್ದಾರೆ-

**ಊರ್ಧ್ವಪುಂಡ್ರಂ ದ್ವಿಜಃ ಕುರ್ಯಾತ್ ಭಸ್ಮಮೃದ್ವಾರಿಚಂದನೈಃ**

**ಕರ್ಮಾಂಗಮಿದಮೇವ ಸ್ಯಾತ್ ನಾನ್ಯಥಾ ತು ಕಥಂಚನ**



ಮಣ್ಣು ಗಂಧ ಭಸ್ಮ ನೀರು ಈ ನಾಲ್ಕು ದ್ರವ್ಯಗಳಿಂದ ಯಾವ ಯಾವ ಸಂದರ್ಭಗಳಲ್ಲಿ ಪುಂಡ್ರಧಾರಣೆ ಎನ್ನುವುದನ್ನು **ಆಚಾರರತ್ನ** ಸ್ಪಷ್ಟಪಡಿಸಿದೆ –

**ಸ್ನಾತ್ವಾ ಪುಂಡ್ರಂ ಮೃದಾ ಕುರ್ಯಾತ್ ಹುತ್ವಾ ಚೈವ ತು ಭಸ್ಮನಾ**

**ದೇವಾನಭ್ಯರ್ಚ್ಯ ಗಂಧೇನ ಜಲಮಧ್ಯೇ ಜಲೇನ ತು**

ಜಲಾಶಯದಲ್ಲಿಯೇ ಜಪಾದಿಗಳನ್ನು ನಡೆಸುವಲ್ಲಿ ಮಿಂದ ಕೂಡಲೆ ನೀರಿನಿಂದ ಪುಂಡ್ರಗಳನ್ನು ಧರಿಸಬೇಕು. ಮಿಂದ ಮೇಲೆ ದೇವಾಲಯಾದಿ ಸ್ಥಳಗಳಲ್ಲಿ ಜಪನಡೆಸುವಾಗ ಕೃಷ್ಣ ತುಳಿದ ದ್ವಾರಕೆಯ ಮಣ್ಣು ಗೋಪಿಯಿಂದ ಪುಂಡ್ರಗಳನ್ನು ಧರಿಸಬೇಕು. ಅಗ್ನಿಕಾರ್ಯ–ಔಪಾಸನ ಮುಗಿದ ಮೇಲೆ ಭಸ್ಮದಿಂದಲೂ ಪೂಜೆಯ ಬಳಿಕ ಗಂಧದಿಂದಲೂ ಊರ್ಧ್ವಪುಂಡ್ರಗಳನ್ನು ಧರಿಸಬೇಕು. ಇದರಿಂದಾಗಿ ಭಸ್ಮದಿಂದ ತಿರ್ಯಕ್‌ಪುಂಡ್ರ ಹಾಕಬೇಕೆಂದು ತಿಳಿಯಬಾರದು. ತಿರ್ಯಕ್‌ಪುಂಡ್ರವನ್ನು ವೈದಿಕರಿಗೆ ನಿಷೇಧಿಸಿದ್ದನ್ನು ಈ ಪ್ರಮಾಣದಿಂದಲೇ ತಿಳಿಯಬಹುದು.

**ಗೋಪ್ಯಾ ಪುಂಡ್ರಾಣಿ ಧಾರಯೇತ್**

**ಸಲಿಲೈರ್ವಾಪ್ಯಸೌಕರ್ಯಾತ್**

ನಮಗೆ ಪುಂಡ್ರವನ್ನು ಗೋಪಿಯಿಂದ ಹಾಕಲು ಸರ್ವಥಾ ಅನುಕೂಲ ಇಲ್ಲದಲ್ಲಿ ನೀರಿನಿಂದಲಾದರೂ ಪುಂಡ್ರವನ್ನು ಹಾಕಲೇಬೇಕೆಂಬ ಸಂಗತಿಯನ್ನು **ಯೋಗದೀಪಿಕಾ**ದಲ್ಲಿ ಸೂಚಿಸಲಾಗಿದೆ –

**ಬ್ರಾಹ್ಮಣಾನಾಂ ತು ಸರ್ವೇಷಾಂ ವೈದಿಕಾನಾಮನುತ್ತಮಮ್**

**ಗೋಪೀಚಂದನವಾರಿಭ್ಯಾಂ ಊರ್ಧ್ವಪುಂಡ್ರಂ ವಿಧೀಯತೇ**

ಮುಖ್ಯವಾಗಿ ಮಣ್ಣು ಎಂದರೆ ಗೋಪೀಚಂದನವೇ ಆಗಿದೆ. ತುಳಸೀಗಿಡದ ಬುಡದ ಮಣ್ಣು ಆಗಲಿದೆ.

**ಶ್ರೀಕೃಷ್ಣತುಳಸೀಮೂಲಮೃದಮಾದಾಯ ಭಕ್ತಿಮಾನ್**

**ಧಾರಯೇದೂರ್ಧ್ವಪುಂಡ್ರಾಣಿ ಹರಿಸ್ತತ್ರ ಪ್ರಸೀದತಿ** (ಸ್ಕಾಂದಪುರಾಣ)

ಸಾಮಾನ್ಯವಾಗಿ ಗೋಪಿಯಿಂದ ಹಾಗೂ ನೀರಿನಿಂದ



ಪುಂಡ್ರಧಾರಣೆಯನ್ನು ಪುರಾಣಗಳು ಒತ್ತಿಹೇಳಿವೆ. ಹೋಮಹವನದ ಬಳಿಕ ಭಸ್ಮವನ್ನು ಹುಬ್ಬುಗಳ ಮಧ್ಯೆ, ಕಂಠ, ಬಾಹುಮೂಲಗಳಲ್ಲಿ ಮಾತ್ರ ಧರಿಸುವರು. ಗಂಧವನ್ನು ಮೈಗೆ ಹಚ್ಚಿಕೊಳ್ಳುವರು. ಪಂಚಪಾಪಗಳಿಂದ ಬಿಡುಗಡೆಯನ್ನೀವ ಶಕ್ತಿ ಗೋಪೀಚಂದನಕ್ಕಿದೆ. ಅದರಿಂದ ಪುಂಡ್ರಧಾರಣೆ ನಡೆಸಲು **ಪದ್ಮಪುರಾಣ** ಹೇಳಿದೆ –

**ಗೋಪೀಚಂದನಲಿಪ್ತಾಂಗೋ ಮುಚ್ಯತೇ ಬ್ರಹ್ಮಹತ್ಯಯಾ**

**ತಿಲಕಂ ಕುರುತೇ ಯಸ್ತು ಗೋಪೀಚಂದನಸಂಭವಮ್**

**ಮದ್ಯಪಾನಾದಿದೋಷೈಸ್ತು ಮುಚ್ಯತೇ ನಾತ್ರ ಸಂಶಯಃ**

ಗೋಪಿಚಂದನವನ್ನು ತೇಯುವ ಮೊದಲು ಹೇಳುವ ಪ್ರಾರ್ಥನೆಯನ್ನು **ಕರ್ಮಸಿದ್ಧಾಂತದಲ್ಲಿ** ನೀಡಿದ್ದಾರೆ

**ಮೃತ್ತಿಕೇ ಧಾರಯಿಷ್ಯಾಮಿ ಭಕ್ತ್ಯಾ ತ್ವಾಂ ಕೇಶವಪ್ರಿಯೇ**

**ತ್ವಯಾ ಸ್ಪೃಷ್ಟೋ ಗಮಿಷ್ಯಾಮಿ ವಿಷ್ಣುಲೋಕಂ ಸನಾತನಮ್**

ಇನ್ನೂ ಅನೇಕ ಶ್ರುತಿಸ್ಮೃತಿಗಳು ಊರ್ಧ್ವಪುಂಡ್ರ ಧಾರಣೆಯನ್ನು ಬಹಳ ರೀತಿಯಿಂದ ಬಣ್ಣಿಸಿವೆ –

**ಧೃತೋರ್ಧ್ವಪುಂಡ್ರೋ ಹೃದಿ ಚಕ್ರಧಾರೀ**

**ವಿಷ್ಣುಂ ಪರಂ ಧ್ಯಾಯತಿ ಯೋ ಮಹಾತ್ಮಾ**

**ವರೇಣ ಮಂತ್ರೇಣ ಸದಾ ಹೃದಿಸ್ಥಂ**

**ಪರಾತ್ಪರಂ ಯಾತಿ ವಿಶುದ್ಧಚೇತಾಃ** (ಕಠವಲ್ಲೀ)

**ಯೇ ಕಂಠಲಗ್ನತುಳಸೀನಳಿನಾಕ್ಷಮಾಲಾಃ**

**ಯೇ ಬಾಹುಮೂಲಪರಿಚಿಹ್ನಿತಶಂಖಚಕ್ರಾಃ**

**ಯೇ ವಾ ಲಲಾಟಫಲಕೇ ಲಸದೂರ್ಧ್ವಪುಂಡ್ರಾಃ**

**ತೇ ವೈಷ್ಣವಾಃ ಭುವನಮಾಶು ಪವಿತ್ರಯಂತಿ** (ಪಾದ್ಮಪುರಾಣ)

**ದ್ವಿರೇಖಮೂರ್ಧ್ವಪುಂಡ್ರಂ ಭವತಿ**

**ತಪ್ತಂ ಚಕ್ರಂ ದ್ವಿಭುಜೇ ಧಾರಯತಿ**



ಈ ಮಾಧ್ಯಂದಿನ ಶ್ರುತಿ ಹನ್ನೆರಡನೆಯ ಖಂಡದಿ

ತಪ್ತಚಕ್ರಧಾರಣವ ನಿರ್ಣೈಸಿತು (ವಾದಿರಾಜರ ತತ್ವಸಾರ)

ಜಪೇ ಹೋಮೇ ತಥಾ ದಾನೇ ಸ್ವಾಧ್ಯಾಯೇ ಪಿತೃಕರ್ಮ್ಮಣಿ

ತತ್ಸರ್ವಂ ನಶ್ಯತಿ ಕ್ಷಿಪ್ರಂ ಊರ್ಧ್ವಪುಂಡ್ರಂ ವಿನಾ ಕೃತಮ್ (ಹೇಮಾದ್ರಿ)

ಶ್ರಾದ್ಧೋ ಹೋಮಸ್ತಥಾ ದಾನಂ ಸ್ವಾಧ್ಯಾಯಃ ಪಿತೃತರ್ಪ್ಪಣಮ್

ಭಸ್ಮೀಭವತಿ ತತ್ಸರ್ವಂ ಊರ್ಧ್ವಪುಂಡ್ರಂ ವಿನಾ ಕೃತಮ್ (ವೃದ್ಧಹಾರೀತಸ್ಮೃತಿ)

ಊರ್ಧ್ವಪುಂಡ್ರಂ ತು ಸರ್ವೇಷಾಂ ನ ನಿಷಿದ್ಧಂ ಕಥಂಚನ (ಬೃಹತ್ಪರಾಶರಸಂಹಿತಾ)

ಯಜ್ಞೋ ದಾನಂ ಜಪೋ ಹೋಮಃ ಸ್ವಾಧ್ಯಾಯಃ ಪಿತೃಕರ್ಮ್ಮ ಚ

ವೃಥಾ ಭವತಿ ವಿಪ್ರೇಂದ್ರಾ ಊರ್ಧ್ವಪುಂಡ್ರಂ ವಿನಾ ಕೃತಮ್ (ಬೃಹನ್ನಾರದೀಯ)

ಯಜ್ಞೋ ದಾನಂ ತಪೋ ಹೋಮಃ ಸ್ವಾಧ್ಯಾಯಃ ಪಿತೃತರ್ಪ್ಪಣಮ್

ವ್ಯರ್ಥಂ ಭವತಿ ತತ್ಸರ್ವಂ ಊರ್ಧ್ವಪುಂಡ್ರಂ ವಿನಾ ಕೃತಮ್ (ಸ್ಕಾಂದಪುರಾಣ)

ಧೃತೋರ್ಧ್ವಪುಂಡ್ರಃ ಪರಮೇಶಿತಾರಂ

ನಾರಾಯಣಂ ಸಾಂಖ್ಯಯೋಗಾದಿಗಮ್ಯಮ್

ಜ್ಞಾತ್ವಾ ವಿಮುಚ್ಯೇತ ನರಃ ಸಮಸ್ತೈಃ

ಸಂಸಾರಭಾರೈರಿಹ ಚೈತಿ ವಿಷ್ಣುಮ್ (ಮಹೋಪನಿಷತ್)

ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋಽಥವಾ ಯತಿಃ

ಅವಶ್ಯಂ ಧಾರಯೇತ್ ಪುಣ್ಯಂ ಊರ್ಧ್ವಪುಂಡ್ರಂ ಸುಶೋಭನಮ್ (ಬ್ರಹ್ಮಾಂಡ)

ಬ್ರಾಹ್ಮಣಾನಾಂ ತು ಸರ್ವೇಷಾಂ ವೈದಿಕಾನಾಮನುತ್ತಮಮ್

ಗೋಪೀಚಂದನವಾರಿಭ್ಯಾಂ ಊರ್ಧ್ವಪುಂಡ್ರಂ ವಿಧೀಯತೇ (ಬೃಹತ್‌ಬ್ರಹ್ಮಸಂಹಿತಾ)

ಮತ್ಪ್ರೀತ್ಯರ್ಥಂ ಶುಭಾರ್ಥಂ ವಾ ರಕ್ಷಾರ್ಥಂ ಚತುರಾನನ

ಮದ್ಭಕ್ತೋ ಧಾರಯೇನ್ನಿತ್ಯಂ ಊರ್ಧ್ವಪುಂಡ್ರಮತಂದ್ರಿತಃ (ಬ್ರಹ್ಮಾಂಡ)

ಸ್ವಾಧ್ಯಾಯೇ ಭೋಜನೇ ಚೈವ ಹೋಮಮಂಗಳಕರ್ಮಣಿ

ಊರ್ಧ್ವಪುಂಡ್ರಧರೋ ಭೂತ್ವಾ ರಕ್ಷಸಾಂ ಚಾಪನುತ್ತಯೇ (ಸಂಗ್ರಹ)

ಹೋಮಪೂಜಾದಿಸಮಯೇ ಸಾಯಂಪ್ರಾತಃ ಸಮಾಹಿತಃ

ಸಂಧ್ಯಾಸಮೀಕ್ಷಾ



ಊರ್ಧ್ವಪುಂಡ್ರಧರೋ ವಿಪ್ರೋ ಭವೇಚ್ಛುದ್ಧೋ ನಚಾನ್ಯಥಾ (ಬೋಧಾಯನ)

ನಿತ್ಯನೈಮಿತ್ತಿಕಂ ಚೈವ ಲೌಕಿಕಂ ಕರ್ಮ್ಮ ವೈದಿಕಮ್

ಊರ್ಧ್ವಪುಂಡ್ರಾಂಕಿತಂ ಕುರ್ಯಾತ್ ತತ್ತತ್ಫಲಮವಾಪ್ನುಯಾತ್ (ನಾರದೀಯ)

ಊರ್ಧ್ವಂ ಚ ತಿಲಕಂ ಕುರ್ಯಾತ್ ದೈವೇ ಪಿತ್ರ್ಯೇ ಚ ಕರ್ಮ್ಮಣಿ (ವೃದ್ಧಪರಾಶರ)

ಊರ್ಧ್ವಪುಂಡ್ರಧರಃ ಕುರ್ಯಾತ್ ತಸ್ಯ ಪುಣ್ಯಮನಂತಕಮ್

ದ್ವಾರವತ್ಯಾಂ ಪ್ರಯಾಗೇ ಚ ಸಾಳಗ್ರಾಮಾಚಲೇ ತಥಾ

ವೆಂಕಟಾದ್ರೌ ಚ ಸಿಂಹಾದ್ರೌ ತಥಾ ನಾರಾಯಣಾಚಲೇ

ನೈಮಿಷೇ ಸರಯೂತೀರೇ ಕೂರ್ಮ್ಮೇ ವೇದಾಚಲೇ ತಥಾ

ಗೃಹೀತ್ವಾ ಮತ್ತಿಕಾಂ ರಮ್ಯಾಂ ಲಲಾಟೇ ಧಾರಯೇತ್ತಥಾ

ಆದಾಯ ಪರಯಾ ಭಕ್ತ್ಯಾ ವೈಕುಂಠಾಖ್ಯಹ್ರದಾನ್ಮೃದಮ್

ಧಾರಯೇದೂರ್ಧ್ವಪುಂಡ್ರಾಣಿ ಹರಿಸಾಲೋಕ್ಯಸಿದ್ಧಯೇ

ಶ್ರೀಕೃಷ್ಣತುಳಸೀಮೂಲೇ ಮೃದಮಾದಾಯ ಭಕ್ತಿಮಾನ್

ಧಾರಯೇದೂರ್ಧ್ವಪುಂಡ್ರಾಣಿ ಹರಿಸ್ತಸ್ಯ ಪ್ರಸೀದತಿ

ದ್ವಾರವತ್ಯಾಂ ಶುಭೇ ರಮ್ಯೇ ವಾಸುದೇವಹ್ರದೇ ತಥಾ

ತತ್ರೋದ್ಭವಾಂ ಮೃದಂ ಶುಭ್ರಾಂ ಆದಾಯ ದ್ವಿಜಸತ್ತಮಃ

ಧಾರಯೇದೂರ್ಧ್ವಪುಂಡ್ರಾಣಿ ಸರ್ವಕಾಮಫಲಾಪ್ತಯೇ

ಆದಾಯ ಪರಯಾ ಭಕ್ತ್ಯಾ ಗಂಗಾತೀರೋದ್ಭವಾಂ ಮೃದಮ್

ತಯಾ ಧೃತೋರ್ಧ್ವಪುಂಡ್ರೇಣ ಸರ್ವಯಜ್ಞಫಲಂ ಲಭೇತ್

ವಿಷ್ಣೋಃ ಸ್ನಾತೋದಕಂ ಯತ್ರ ಪ್ರವಾಹಯತಿ ನಿತ್ಯಶಃ

ಪುಂಡ್ರಾಣಾಂ ಧಾರಣಾರ್ಥಾಯ ಗೃಹ್ಣೀಯಾತ್ತತ್ರಸ್ಥಮೃತ್ತಿಕಾಮ್ (ಪದ್ಮಪುರಾಣ)

ಧಾರಯೇತ್ಪ್ರಯತಃ ಸಮ್ಯಕ್ ಊರ್ಧ್ವಪುಂಡ್ರಂ ಪ್ರಯತ್ನತಃ (ಆಗ್ನಿವೈಶ್ಯ)

ಮೃದಮಾದಾಯ ಕೃಷ್ಣಾಯಾಃ ತುಳಸ್ಯಾ ಮೂಲಸಂಭವಾಮ್

ಧಾರಯೇದೂರ್ಧ್ವಪುಂಡ್ರಾಣಿ ತ್ರಿಸಂಧ್ಯಾಸು ದ್ವಿಜೋತ್ತಮಃ (ಪರಾಶರ)

ಯತ್ರ ದಿವ್ಯಂ ಹರಿಕ್ಷೇತ್ರಂ ತತ್ರೈವ ಮೃದಮಾಹರೇತ್ (ಅತ್ರಿಸ್ಮೃತಿ)



ಆದಾಯ ಪರಯಾ ಭಕ್ತ್ಯಾ ವಿಷ್ಣೋರಾಯತನಾನ್ಮೃದಮ್
ಬಿಭೃಯಾದೂರ್ಧ್ವಪುಂಡ್ರಾಣಿ ಲಲಾಟಾದಿಷು ಚ ಕ್ರಮಾತ್ (ಶಾಂಡಿಲ್ಯ)
ತ್ರಿಸಂಧ್ಯಾಸು ಮೃದಾ ಚೈವ ಯಾಗಕಾಲೇ ವಿಶೇಷತಃ
ಶ್ರದ್ಧಾಳುರೂರ್ಧ್ವಪುಂಡ್ರಂ ತು ಬಿಭೃಯಾದ್ದ್ವಿಜಸತ್ತಮಃ (ಹಾರೀತ)
ಚಂದನೇನ ಮೃದಾ ವಾಽಪಿ ಮಂತ್ರಪೂತೇನ ಭಸ್ಮನಾ
ಧಾರಯೇದೂರ್ಧ್ವಪುಂಡ್ರಾಣಿ ನಾಮಭಿಃ ಕೇಶವಾದಿಭಿಃ
ಧಾರಣಾದೂರ್ಧ್ವಪುಂಡ್ರಸ್ಯ ಶರೀರಂ ಮಂದಿರಂ ಹರೇಃ
ತಸ್ಮಾತ್ತತ್ಸತತಂ ಧಾರ್ಯಂ ಊರ್ಧ್ವಪುಂಡ್ರಂ ದ್ವಿಜೋತ್ತಮೈಃ
ಮಹೋಪನಿಷದಿ ಪ್ರೋಕ್ತಂ ಊರ್ಧ್ವಪುಂಡ್ರಂ ಪರಂ ಶುಭಮ್
ಅಥರ್ವಶಿರಸಿ ಪ್ರೋಕ್ತಂ ಊರ್ಧ್ವಪುಂಡ್ರವಿಧಿಂ ದ್ವಿಜಾಃ (ವಾಧೂಲಸ್ಮೃತಿ)
ಊರ್ಧ್ವಪುಂಡ್ರವಿಹೀನಂ ಯತ್ ಸಂಧ್ಯಾಕರ್ಮಾದಿಕಂ ಚರೇತ್
ತತ್ಸರ್ವಂ ರಾಕ್ಷಸೈರ್ನೀತಂ ಜಪಹೋಮಾದಿಕಂ ತಥಾ (ಪರಾಶರಸ್ಮೃತಿ)
ಯಜ್ಞೋ ದಾನಂ ತಪಶ್ಚೈವ ಸ್ವಾಧ್ಯಾಯಃ ಪಿತೃತರ್ಪಣಮ್
ವ್ಯರ್ಥಂ ಭವತಿ ತತ್ಸರ್ವಂ ಊರ್ಧ್ವಪುಂಡ್ರಂ ವಿನಾ ಕೃತಮ್ (ಕೃ.ಮ.)

ದ್ವಾರಕೆಯಲ್ಲಿನ ಕೃಷ್ಣನಾಡಿದ ದೇಶದ ಬಿಳಿಮಣ್ಣು ಗೋಪೀಚಂದನ ಪುಂಡ್ರಧಾರಣೆಗೆ ಪ್ರಶಸ್ತ. ಇದು ಎಲ್ಲ ಜನರನ್ನೂ ಶುದ್ಧಿಗೊಳಿಸುವುದು ಎಂದು ಬೃಹತ್‌ಬ್ರಹ್ಮಸಂಹಿತೆ –

ತತ್ರತ್ಯಾ ಮೃತ್ತಿಕಾಽದ್ಯಾಪಿ ಗೋಪೀಚಂದನಸಂಜ್ಞಿತಾ
ಪುನಾತಿ ಸಕಲಾನ್ ಲೋಕಾನ್ ಊರ್ಧ್ವಪುಂಡ್ರೇಣ ಧಾರಿತಾ

ಗರುಡನು ಶ್ವೇತದ್ವೀಪದಿಂದ ಬಿಳಿಮಣ್ಣನ್ನು ತಂದಿರುವ ಇತಿಹಾಸವನ್ನು ಸಂಹಿತೆ ಬಹಿರಂಗಪಡಿಸಿದೆ –

ಪುಂಡ್ರಾರ್ಥಂ ಶ್ವೇತದ್ರವ್ಯಂ ಹಿ ಸಮಾನೀತಂ ಗರುತ್ಮತಾ
ಶ್ವೇತದ್ವೀಪಾನ್ಮಹಾಭಾಗ ಮಲಯಾದ್ರೌ ನಿವೇಶಿತಮ್
ಮಲಯಾದ್ರಿಸಮುದ್ಭೂತಾಂ ಮೃದಮಾದಾಯ ವೈಷ್ಣವಃ



> ಕರೋತಿ ಚೋರ್ಧ್ವಪುಂಡ್ರಾಣಿ ಸ ಊರ್ಧ್ವಪದಮಶ್ನುತೇ
> ಸ್ನಾನೇ ದಾನೇ ಪ್ರಯಾಣೇ ಚ ಶ್ರಾದ್ಧೇ ಪರ್ವಣಿ ಮಂಗಳೇ
> ಹೋಮೇ ಸುರಾರ್ಚನೇ ಪುಣ್ಯಾ ಶ್ವೇತದ್ವೀಪಾಮಲಾ ಮಹೀ

ದ್ವಾರಕೆಯಲ್ಲಿ ಹಳದಿ ಬಣ್ಣದ ಗೋಪಿಯು ವೈಕುಂಠದಿಂದ ತರಲ್ಪಟ್ಟಿದೆ ಎಂದು ಆ ಸಂಹಿತೆಯು ತಿಳಿಸುತ್ತಾ ಗೋಪೀಚಂದನದ ಅರ್ಥವಿವರಣೆಯನ್ನು ಕೊಟ್ಟಿದೆ. ಧಾರಣೆಯ ಕ್ರಮವನ್ನೂ, ಮಂತ್ರಗಳನ್ನೂ ಬಣ್ಣಿಸಿದೆ. ನೆತ್ತಿಯ ಪುಂಡ್ರವೂ ಇಲ್ಲಿದೆ –

> ಶ್ರೀಗೋಪೀಚಂದನಂ ನಾಮ ಪೀತದ್ರವ್ಯಂ ಮಹಾಮುನೇ
> ವೈಕುಂಠಲೋಕಾದಾನೀತಂ ದ್ವಾರಕಾಯಾಂ ಪ್ರತಿಷ್ಠಿತಮ್
> ಸರ್ವೇಷಾಂ ಗೋಪನಾದ್ಗೋಪೋ ವಾಸುದೇವೋऽಹಮೇವ ಹಿ
> ಅನಂತಾಃ ಶಕ್ತಯೋ ಗೋಪ್ಯೋ ಮದೀಯಾ ಏವ ನಾರದ
> ಮದಂಗಲೇಪಿತಂ ಪುಣ್ಯಂ ವೈಕುಂಠೇ ಕುಂಕುಮಾನ್ವಿತಮ್
> ಗೋಪೀಭಿಃ ಕ್ಷಾಳಿತಂ ತಸ್ಮಾತ್ ಗೋಪೀಚಂದನಮುಚ್ಯತೇ
> ಮದಂಗಲೇಪನಂ ಪುಣ್ಯಂ ಚಕ್ರತೀರ್ಥೇ ಪ್ರತಿಷ್ಠಿತಮ್
> ಪೀತಂ ಚಕ್ರಸಮಾಯುಕ್ತಂ ಚಂದನಂ ಮುಕ್ತಿದಂ ಧನಮ್
> ಮದಂಗಲೇಪನಂ ಪುಣ್ಯಂ ಧೃತ್ವಾ ಕರತಲೇ ಪುನಃ
> ಸಂಪ್ರೋಕ್ಷ್ಯ ವಿಷ್ಣುಗಾಯತ್ರ್ಯಾ ದ್ವಾದಶಾರ್ಣೇನ ವಾ ಪುನಃ
> ವಿಷ್ಣೋರ್ನಾಮ ಪಠನ್ ಪಾಣೌ ಮರ್ದಯೇದ್ಭಕ್ತಿಮಾನ್ನರಃ
> ಧಾರಯೇದೂರ್ಧ್ವಪುಂಡ್ರಾಣಿ ಲಲಾಟಾದಿಸ್ಥಳೇಷು ಚ
> ಲಲಾಟೋದರಹೃತ್ಕಂಠಕುಕ್ಷಿಬಾಹ್ವಂಸಕೇಷು ಚ
> ಕುಕ್ಷಿಬಾಹ್ವಂಸದೇಶೇಷು ವಾಮಭಾಗೇಷು ನಿತ್ಯದಾ
> ಪೃಷ್ಠಗ್ರೀವಾಬ್ರಹ್ಮರಂಧ್ರೇ ಪುಂಡ್ರಾಣಿ ವಿನಿವೇಶಯೇತ್
> ಕೇಶವಾದಿಮಹಾಮಂತ್ರೈಃ ದೇವಾಸ್ತತ್ರ ಸ ಏವ ಹಿ
> ಪ್ರಣವಾದ್ಯಾ ನಮೋಂತಾಶ್ಚ ಮಂತ್ರಾ ದ್ವಾದಶಸಂಖ್ಯಯಾ



ಬಣ್ಣ ಬೇರೆಯಾದಂತೆ ಫಲಭೇದವನ್ನು ಪದ್ಮಪುರಾಣ ಊರ್ಧ್ವಪುಂಡ್ರಮಹಿಮೆಯ ಪ್ರಕರಣದಲ್ಲಿ ಹೇಳಿದೆ. ಇಲ್ಲಿ ಬಿಳಿಗೆ ಬೆಲೆ ಹೆಚ್ಚು ನೀಡಿದೆ –

**ಶ್ಯಾಮಂ ಶಾಂತಿಕರಂ ಪ್ರೋಕ್ತಂ ರಕ್ತಂ ವಶ್ಯಕರಂ ತಥಾ**

**ಶ್ರೀಕರಂ ಪೀತಮಿತ್ಯಾಹುಃ ಶ್ವೇತಂ ಮೋಕ್ಷಕರಂ ಶುಭಮ್**

**ಸ ಸ್ನಾತಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ**

**ಧಾರಯೇದೂರ್ಧ್ವಪುಂಡ್ರಂ ಯೋ ಮೃದಾ ಶುಭ್ರೇಣ ವೈಷ್ಣವಃ**

ಊರ್ಧ್ವಪುಂಡ್ರದೊಡನೆ ನಡೆಸಿದ ಕರ್ಮಗಳಿಗೆ ಕೋಟಿ ಪಾಲು ಫಲವನ್ನು ನೀಡುವೆನೆಂದು ನಾರಾಯಣನೇ ಹೇಳಿದ್ದಾನೆ. ಊರ್ಧ್ವಪುಂಡ್ರಧಾರಕನನ್ನು ಯಾವುದೇ ದುಷ್ಟಶಕ್ತಿಗಳು ತನ್ನ ಅನುಗ್ರಹದಿಂದ ಪೀಡಿಸಲಾರವು ಎಂದೂ ಭಗವಂತನು ಅಭಯವನ್ನು ನೀಡಿದ್ದಾನೆ –

**ಯೋ ಮೃತ್ತಿಕಾಂ ದ್ವಾರವತೀಸಮುದ್ಭವಾಂ**

**ಕರೇ ಸಮಾದಾಯ ಲಲಾಟಪಟ್ಟೇ**

**ಕರೋತಿ ನಿತ್ಯಂ ಪುರುಷೋರ್ಧ್ವಪುಂಡ್ರಂ**

**ಕ್ರಿಯಾಫಲಂ ಕೋಟಿಗುಣಂ ತದಾ ಭವೇತ್**

**ಗ್ರಹಾ ನ ಪೀಡಂತಿ ನ ರಕ್ಷಸಾಂ ಗಣಾಃ**

**ಯಕ್ಷಃಪಿಶಾಚೋರಗಭೂತನಾಯಕಾಃ**

**ಲಲಾಟಪಟ್ಟೇ ಸುತ ಗೋಪಿಚಂದನಂ**

**ಸಂತಿಷ್ಠತೇ ಯಸ್ಯ ಮಮ ಪ್ರಸಾದಾತ್** (ಸ್ಕಾಂದಪುರಾಣ)

ಗೋಪಿಯಂತೆ ಶ್ರೀಕೂರ್ಮ, ಸಿಂಹಾದ್ರಿ, ಪ್ರಯಾಗ ಮುಂತಾದ ಕ್ಷೇತ್ರಗಳ ಪವಿತ್ರ ಮಣ್ಣು ಪುಂಡ್ರಧಾರಣೆಗೆ ಯೋಗ್ಯವೆನಿಸಿದೆ –

**ಶ್ರೀರಂಗೇ ದ್ವಾರಕಾಯಾಂ ಚ ಶ್ರೀಕೂರ್ಮೇ ಚ ತಥಾ ಸ್ಥಿತಾಮ್**

**ಸಿಂಹಾದ್ರೌ ಚ ಪ್ರಯಾಗೇ ಚ ವಾರಾಹೇ ತುಳಸೀವನೇ**

**ಗೃಹೀತ್ವಾ ಮೃತ್ತಿಕಾಂ ಭಕ್ತ್ಯಾ ಸಾಳಗ್ರಾಮಜಲೈಃ ಸಹ**



**ಗಾಯತ್ರೀಮೂಲಮಂತ್ರಾಭ್ಯಾಂ ತ್ರಿವಾರಮಭಿಮಂತ್ರ್ಯ ಚ**

**ತಯೋರ್ಧ್ವಪುಂಡ್ರಂ ಧೃತ್ವಾಂಗೇ ವಿಷ್ಣೋಃ ಸಾಯುಜ್ಯಮಾಪ್ನುಯಾತ್**

ಈ ವಾಕ್ಯಗಳು ಮೃತ್ತಿಕೆಯಲ್ಲಿ ಪ್ರಭೇದವನ್ನು ಹೇಳಹೋದರೂ ಮುಖ್ಯವಾಗಿ ಪುಂಡ್ರಧಾರಣೆಯಲ್ಲಿಯ ಕೆಲವು ಸೂಕ್ಷ್ಮ ವಿಷಯಗಳನ್ನು ತಿಳಿಸಿವೆ. ನಿರ್ಮಾಲ್ಯತೀರ್ಥದಿಂದ ಗೋಪಿಯನ್ನು ತೇಯಬೇಕು. ಗಾಯತ್ರೀಮಂತ್ರ ಪ್ರಣವ ಹಾಗೂ ಅಷ್ಟಾಕ್ಷರಮಂತ್ರಗಳನ್ನು ಮೂರು ಮೂರು ಬಾರಿ ಹೇಳಿ ತೇಯಬೇಕು. ಇದರಿಂದ ವಿಶೇಷವಾಗಿ ಸಾಧಕನಲ್ಲಿ ಭಗವತ್ಸನ್ನಿಧಾನ ಏರ್ಪಡುವುದು. ಜತೆಗೆ ನಾರಾಯಣ ನಾಮಕವಚವಾಗಿ ಇದು ಪರಿಣಮಿಸಿ ರಕ್ಷೆಯನ್ನು ನೀಡುವುದು.

ಗೋಪೀಚಂದನವೆ ನಿನಗೆ ನಮನವು ಎನ್ನುವ ಪುರಾಣಮಂತ್ರವನ್ನೂ ಇಲ್ಲಿ ಪಠಿಸಬೇಕಾಗಿದೆ–

**ದ್ವಾರಕಾಕ್ಷೇತ್ರಸಂಭೂತೇ ಸರ್ವಪಾಪಹರೇ ಶುಭೇ**

**ಕೃಷ್ಣಮಾತಃ ನಮಸ್ತುಭ್ಯಂ ಗೋಪೀಚಂದನ ತೇ ನಮಃ**

ದ್ವಾರಕದೊಡೆಯನ ನೆನಪಿಗಾಗಿ **ಮಹಾಭಾರತ**ದಲ್ಲಿಯ ದ್ರೌಪದೀ ಪ್ರಾರ್ಥನೆಯನ್ನು ಇಲ್ಲಿ ಹೇಳಬೇಕು –

**ಶಂಖಚಕ್ರಗದಾಪಾಣೇ ದ್ವಾರಕಾನಿಲಯಾಚ್ಯುತ**

**ಗೋವಿಂದ ಪುಂಡರೀಕಾಕ್ಷ ರಕ್ಷ ಮಾಂ ಶರಣಾಗತಾ(ತ)ಮ್**

**ವರಾಹಪುರಾಣ**ದಲ್ಲಿನ ಮಂತ್ರ –

**ಮೃತ್ತಿಕೇ ಧಾರಯಿಷ್ಯಾಮಿ ಭಕ್ತ್ಯಾ ತ್ವಾಂ ಕೇಶವಪ್ರಿಯೇ**

**ತ್ವಯಾ ಸ್ಪೃಷ್ಟೋ ಗಮಿಷ್ಯಾಮಿ ವಿಷ್ಣುಲೋಕಂ ಸನಾತನಮ್**

ಕೇಶವಾದಿ ದ್ವಾದಶನಾಮಗಳಿಂದ 12 ಊರ್ಧ್ವಪುಂಡ್ರಗಳ ಧಾರಣೆಯನ್ನು ಸುಮಾರಾಗಿ ಎಲ್ಲಾ ಧರ್ಮಶಾಸ್ತ್ರಗಳೂ ಸ್ಥೂಲವಾಗಿ ತಿಳಿಸಿವೆ. **ನಾರದೀಯಪುರಾಣ**ದಲ್ಲಿ ನೆತ್ತಿಯ ಪುಂಡ್ರವೊಂದನ್ನು ಹದಿಮೂರನೆಯದಾಗಿ ತಿಳಿಸಿದ್ದಾರೆ –

**ತ್ರಯೋದಶಮಥೋ ಮೂರ್ಧ್ನಿ ಧಾರಯೇದೂರ್ಧ್ವಪುಂಡ್ರಕಮ್**



**ಯೋಗದೀಪಿಕಾದಲ್ಲಿ** ಆದ್ಯಂತಗಳಲ್ಲಿ ನೆತ್ತಿಯಲ್ಲಿ ವಾಸುದೇವ ನಾಮದಿಂದ ಹಾಕಲಿರುವ ಪುಂಡ್ರಗಳನ್ನೂ ತಿಳಿಸಲಾಗಿದೆ.

**ಮೂರ್ಧನ್ಯಾದ್ಯಂತಯೋರಪಿ । ತನ್ಮನುಃ ದ್ವಾದಶಾರ್ಣ್ಣಸ್ಸ್ಯಾತ್**

ಶ್ರೀವೈಷ್ಣವಾಹ್ನಿಕ ಗ್ರಂಥದಲ್ಲೂ ನೆತ್ತಿಯ ಮೇಲೆ ದ್ವಾದಶನಾಮಗಳ ಮೊದಲು ಪ್ರಣವದಿಂದ ಪುಂಡ್ರಧಾರಣೆಯನ್ನು ಹೇಳಿದ್ದಾರೆ. ಜತೆಗೆ ಎದೆಯ ಎಡ-ಬಲಭಾಗಗಳಲ್ಲೂ ಪುಂಡ್ರಗಳನ್ನು ಧರಿಸಲು ಸಂನ್ಯಾಸವಿಧಿಯಲ್ಲಿ ತಿಳಿಸಲಾಗಿದೆ. ಕಡೆಗೆ ವಾಸುದೇವಮಂತ್ರದಿಂದ ಪುಂಡ್ರಧಾರಣೆಯನ್ನೂ ತಿಳಿಸಿದ್ದಾರೆ.

**ಮೂರ್ಧ್ನಿ ಮೂಲೇನ ಮಂತ್ರೇಣ ಶೇಷಂ ದ್ವಾದಶನಾಮಭಿಃ**
**ಸ್ಥಾನೇಷ್ವೇಷು ದ್ವಿಜಃ ಕುರ್ಯಾತ್ ನಮೋಂತೈಃ ಪ್ರಣವೇನ ಚ**
**ಸಂಕರ್ಷಣಾದಿಭಿಃ ಕೃಷ್ಣೇ ಶುಕ್ಲೇ ಚೇತ್ಕೇಶವಾದಿಭಿಃ**

ಬ್ರಹ್ಮಾಂಡಪುರಾಣದ ಈ ಮಾತು ಶುಕ್ಲ-ಕೃಷ್ಣಪಕ್ಷಭೇದದಲ್ಲಿ ಕೇಶವಾದಿ ನಾಮಗಳಿಂದ ಹಾಗೂ ಸಂಕರ್ಷಣಾದಿನಾಮಗಳಿಂದ ಪುಂಡ್ರಧಾರಣೆಯ ವ್ಯವಸ್ಥೆಯನ್ನು ಮಾಡಿದೆ. ಕರ್ಮಸಿದ್ಧಾಂತದಲ್ಲಿ ಹೀಗೆ ಸಂಗ್ರಹಿಸಲಾಗಿದೆ –

**ಲಲಾಟಮಧ್ಯೋದರಹೃದ್ಗಳೇಷು ಪಾರ್ಶ್ವೇ ಭುಜೇ ಕರ್ಣ್ಣಮೂಲೇ ಚ ದಕ್ಷೇ**
**ತದ್ವದ್ವಾಮೇ ಪೃಷ್ಠಮಧ್ಯೇ ಚ ಮೂರ್ಧ್ನಿ ಶುಕ್ಲೇ ನ್ಯಸೇತ್ ಕೇಶವಾದೀನಿ ತೇಷು**
**ಸಂಕರ್ಷಣಾದೀನ್ಯಥ ಕೃಷ್ಣಪಕ್ಷೇ ನಾಮಾನಿ ವಿಷ್ಣೋಃ ಬ್ರಾಹ್ಮಣೋ ದ್ವಾದಶೈವಮ್**

**ಲಲಾಟೇ ಕೇಶವಂ ವಿದ್ಯಾನ್ನಾರಾಯಣಮಥೋದರೇ**
**ಮಾಧವಂ ಹೃದಿ ವಿನ್ಯಸ್ಯ ಗೋವಿಂದಃ ಕಂಠಕೂಪಕೇ**
**ಉದರೇ ದಕ್ಷಿಣೇ ಪಾರ್ಶ್ವೇ ವಿಷ್ಣುರಿತ್ಯಭಿಧೀಯತೇ**
**ತತ್ಪಾರ್ಶ್ವೇ ಬಾಹುಮಧ್ಯೇ ತು ಮಧುಸೂದನಮೇವ ಚ**
**ತ್ರಿವಿಕ್ರಮಂ ಕಂಠದೇಶೇ ವಾಮೇ ಕುಕ್ಷೌ ತು ವಾಮನಮ್**
**ಶ್ರೀಧರಂ ಬಾಹುಕೇ ವಾಮೇ ಹೃಷೀಕೇಶಂ ತು ಕಂಠಕೇ**
**ಪೃಷ್ಠೇ ತು ಪದ್ಮನಾಭಂ ಚ ಕಕುದ್ದಾಮೋದರಂ ಸ್ಮರೇತ್**
**ದ್ವಾದಶೈತಾನಿ ನಾಮಾನಿ ವಾಸುದೇವಂ ತು ಮೂರ್ಧನಿ**



ಬ್ರಹ್ಮಾಂಡಪುರಾಣದಲ್ಲಿ ಹೇಳಿದಂತೆ ಪುಂಡ್ರಧಾರಣೆಯ ಮಾತುಗಳಿವು **ಹಾರೀತಸ್ಮೃತಿ**ಯಲ್ಲಿ ಸಂಗ್ರಹಿಸಲ್ಪಟ್ಟಿವೆ. ನಡುನಡುವೆ ಸ್ಥಾನಶಬ್ದಗಳು ಬೇರೆ ಇವೆ. ಕೊನೆಗೆ **ತತ್ಪ್ರಕ್ಷಾಳಿತತೋಯೇನ ವಾಸುದೇವೇತಿ ಮೂರ್ಧನಿ** ಎನ್ನುವುದಾಗಿ ಕೈತೊಳೆದ ಗೋಪಿನೀರನ್ನು ತಲೆಗೆ ಹಾಕಿಕೊಳ್ಳುವಂತೆ ಹೇಳಲಾಗಿದೆ. ಇದು ಪುರಾಣದ ಆಶಯಕ್ಕೆ ವಿರುದ್ಧವಾಗಿದೆ. ವಾಸುದೇವ ನಾಮದಿಂದ ನೆತ್ತಿಗೆ ಪುಂಡ್ರವನ್ನೇ ಧರಿಸಲು ಹೇಳಿದ್ದನ್ನು ತಪ್ಪಾಗಿ ಸಂಗ್ರಹಿಸಲಾಗಿದೆ. **ವರಾಹಪುರಾಣದಲ್ಲಿ** –

**ಲಲಾಟೋದರಹೃತ್ಕಂಠೇ ಜಠರೇ ಪಾರ್ಶ್ವಯೋರಪಿ**
**ಭುಜದ್ವಂದ್ವೇ ಸಯುಗ್ಮೇ ಚ ಪೃಷ್ಠೇ ಚ ಗಲಪೃಷ್ಠಕೇ**
**ಕೇಶವಾದೀನಿ ನಾಮಾನಿ ದ್ವಾದಶಾಂಗೇಷು ದ್ವಾದಶ**
**ವಾಸುದೇವೇತಿ ತನ್ಮೂರ್ಧ್ನಿ ಧಾರಯಂತಿ ನಮೋಽಸ್ತ್ವಿತಿ**

**ನಾರದೀಯಪುರಾಣದಲ್ಲಿ** –

**ಲಲಾಟೇ ಪ್ರಥಮಂ ವಿದ್ಯಾತ್ ದ್ವಿತೀಯಮುದರೇ ತಥಾ**
**ಹೃದಯೇ ತು ತೃತೀಯಂ ಸ್ಯಾತ್ ಕಂಠೇ ಚೈವ ಚತುರ್ಥಕಮ್**
**ಕುಕ್ಷೌ ದಕ್ಷಿಣಪಾರ್ಶ್ವೇ ತು ಪಂಚಮಂ ಸ್ಯಾದ್ವಿಧಾನತಃ**
**ಷಷ್ಠಂ ದಕ್ಷಿಣಬಾಹೌ ಸ್ಯಾತ್ ಸಪ್ತಮಂ ಕಂಠಪಾರ್ಶ್ವಕೇ**
**ಕುಕ್ಷೌ ವಾಮಪ್ರದೇಶೇ ಸ್ಯಾತ್ ಅಷ್ಟಮಂ ನವಮಂ ಸ್ಮೃತಮ್**
**ವಾಮಬಾಹೌ ತು ತತ್ಪಾರ್ಶ್ವೇ ಕಂಠೇ ತು ದಶಮಂ ಸ್ಮೃತಮ್**
**ಏಕಾದಶಂ ಪೃಷ್ಠಭಾಗೇ ದ್ವಾದಶಂ ಕಕುದಿ ಸ್ಮೃತಮ್**
**ತ್ರಯೋದಶಮಥೋ ಮೂರ್ಧ್ನಿ ಧಾರಯೇದೂರ್ಧ್ವಪುಂಡ್ರಕಮ್**

ಪುಂಡ್ರಗಳನ್ನು ಹಚ್ಚಿಕೊಳ್ಳುವಾಗ ದೇವರ ರೂಪನಾಮಗಳನ್ನು ಹೇಳುವಾಗ ಆಯಾ ರೂಪಗಳು ಅಲ್ಲಲ್ಲಿನ ಪುಂಡ್ರಗಳಲ್ಲಿ ನೆಲೆಗೊಳ್ಳುತ್ತಾರೆ ಎನ್ನುವುದಾಗಿ **ಬೃಹತ್‌ಬ್ರಹ್ಮಸಂಹಿತೆ** ಹೇಳಿದೆ. ಅಲ್ಲಿ ಕೇಶವಾದಿಗಳ ಹನ್ನೆರಡು ರೂಪಗಳ ಬಣ್ಣ–ಆಯುಧಗಳ ಚಿಂತನೆಗಳನ್ನು ಕೊಡಲಾಗಿದೆ. ಆಯುಧಗಳಲ್ಲಿ



ಕತ್ತಿ-ಬಿಲ್ಲು-ಹಲಾದಿಗಳೂ ಕ{ಲೆತಿವೆ. ತಲೆಯ ಮೇಲೆ ವಾಸುದೇವನಾಮದಿಂದ ಪುಂಡ್ರಧಾರಣೆಯನ್ನೂ ಇಲ್ಲಿ ಹೇಳಲಾಗಿದೆ.

**ಶ್ರೀವತ್ಸ ಶಾಸನಾದ್ವಿಷ್ಣೋಃ ನಾಮತಃ ಕೇಶವಾದಯಃ**
**ಆವಿರ್ಭವಂತಿ ಪುಂಡ್ರೇಷು ನಾತ್ರ ಸಂದೇಹಭಾಗ್ಭವೇತ್**
**ವಾಸುದೇವಂ ಚ ಶಿರಸಿ ಚಿಂತಯೇದುಕ್ತಲಕ್ಷಣಮ್**
**ಸಹಸ್ರದಳಮಧ್ಯಸ್ಥಂ ಕೋಟಿಸೂರ್ಯಸಮಪ್ರಭಮ್**
**ಚತುರ್ಬ್ಬಾಹುಂ ಶ್ರಿಯಾ ಯುಕ್ತಂ ಸ್ಫುರನ್ಮಕರಕುಂಡಲಮ್**
**ಏವಂ ಧ್ಯಾತ್ವಾ ಮೃದಾ ಕುರ್ಯಾತ್ ಊರ್ಧ್ವಪುಂಡ್ರಾಣಿ ವೈಷ್ಣವಃ**

ಪುಂಡ್ರಗಳ ಆಕಾರ ವಿಶೇಷಗಳನ್ನು ಹೀಗೆ ಸಂಗ್ರಹಿಸಲಾಗಿದೆ –

**ಹೃದಯೇ ಕಮಲಾಕಾರಂ ಉದರೇ ದೀಪವಲ್ಲಿಖೇತ್**
**ವೇಣುಪತ್ರಸಮಾಕಾರಂ ಬಾಹ್ವೋರ್ಮ್ಮಧ್ಯೇ ಲಿಖೇತ್ಸುಧೀಃ**
**ಅಧಃಪೃಷ್ಠೇ ಕಂಠದೇಶೇ ಲಿಖೇಜ್ಜಂಬೂಫಲಾಕೃತಿ**
**ನಿಟಲೇ ಬಾಹುವಚ್ಚೈವ ಪುಂಡ್ರಧಾರಣಮಿಷ್ಯತೇ**

ಕಮಲದ ಆಕಾರವೆಂದರೆ ಮೊಗ್ಗುಕಮಲದಂತೆ ಎನ್ನುವ ನೆಲೆಯಲ್ಲಿದೆ ಈ ಸ್ಪಷ್ಟನೆಗಳು–

**ಮೃದಾ ಗೋಪಿಕಯಾ ಚೋರ್ಧ್ವಪುಂಡ್ರಂ ಕುರ್ಯಾತ್ಸಮಾಹಿತಃ**
**ಕೇ ಲಲಾಟೇ ಚ ಬಾಹೌ ಚ ಹೃದಯೇ ಕಂಠ ಏವ ಚ**
**ನಾಸಿಕಾಮೂಲಮಾರಭ್ಯ ತ್ವಾಕೇಶಾಂತಂ ಪ್ರಕಲ್ಪಯೇತ್**
**ದಂಡಾಕಾರಂ ಲಲಾಟೇ ತು ಹೃದಯೇ ಪದ್ಮಕುಡ್ಮಲಮ್**
**ವೇಣುಪತ್ರಾಕೃತಿಂ ಬಾಹ್ವೋಃ ಅನ್ಯಾನ್ ದೀಪಾಕೃತೀನ್ನ್ಯಸೇತ್**

ಪದ್ಮಪುರಾಣದಲ್ಲಿ ಅಶ್ವತ್ಥದ ಎಲೆಯ ಆಕಾರಕ್ಕೆ ಬಿದಿರಿನ ಎಲೆಯ ಆಕಾರಕ್ಕೆ ಮತ್ತು ಕಮಲದ ಮೊಗ್ಗಿನ ಆಕಾರಕ್ಕೆ ಮೋಕ್ಷವನ್ನೀವ ಫಲವನ್ನು ಹೇಳಿದೆ. ಮುಖ್ಯವಾಗಿ ದಂಡಾಕಾರದಲ್ಲಿಯೇ ಇರುವಂತೆ ಭಗವಂತನ ಹೆಜ್ಜೆಯ ಆಕಾರಕ್ಕೆ ಹೋಲುವಂತೆ ಊರ್ಧ್ವಪುಂಡ್ರವನ್ನು ಧರಿಸಲು ಕರೆಕೊಟ್ಟಿದೆ –



**ಅಶ್ವತ್ಥಪತ್ರಸಂಕಾಶೋ ವೇಣುಪತ್ರಾಕೃತಿಸ್ತಥಾ**

**ಪದ್ಮಕುಡ್ಮಲಸಂಕಾಶೋ ಮೋಕ್ಷದಂ ತ್ರಿತಯಂ ಸ್ಮೃತಮ್**

**ಮಹಾಭಾಗವತಃ ಶುದ್ಧಃ ಪುಂಡ್ರಂ ಹರಿಪದಾಕೃತಿಮ್**

**ದಂಡಾಕಾರಂ ತು ವಾ ದೇವಿ ಧಾರಯೇದೂರ್ಧ್ವಪುಂಡ್ರಕಮ್**

ಅಳತೆ ಆಕಾರ ತಪ್ಪಿದ ಹದಿನೇಳು ಬಗೆಯ ವಿಕೃತ ಪುಂಡ್ರಗಳಿಗಿಲ್ಲ ಸ್ಥಾನಮಾನ ಎಂದು ಪದ್ಮಪುರಾಣದ ಮಾತು –

**ವರ್ತ್ತುಲಂ ತಿರ್ಯಗಾಚ್ಛಿದ್ರಂ ಹ್ರಸ್ವಂ ದೀರ್ಘಂ ತತಂ ತನುಮ್**

**ವಕ್ರಂ ವಿರೂಪಂ ವಕ್ರಾಗ್ರಂ ಛಿನ್ನಮೂಲಂ ಪದಚ್ಯುತಮ್**

**ಅಶುಭಂ ರೂಕ್ಷಮಾರಕ್ತಂ ತಥಾನಂಗುಲಿಕಲ್ಪಿತಮ್**

**ವಿಗಂಧಮವಸಹ್ಯಂ ಚ ಪುಂಡ್ರಮಾಹುರನರ್ಥಕಮ್**

**ಆಹ್ನಿಕಕೌಸ್ತುಭವು** ಪಂಚಸಂಸ್ಕಾರದಲ್ಲಿ ಹೇಳಿದಂತೆ ಆಕಾರದುಷ್ಟವಾದ ಪುಂಡ್ರಗಳನ್ನೂ ಅನರ್ಥಕಗಳೆಂದು ಗುರುತಿಸಿದೆ –

**ಶೂರ್ಪ್ಪಾಕಾರಂ ಪಟಾಕಾರಂ ಪತಾಕಾಕಾರಮೇವ ಚ**

**ಅಚ್ಛಿದ್ರಂ ಛಿನ್ನಮೂಲಂ ಚ ನಖನಿರ್ಮ್ಮಿತಮೇವ ಚ**

**ಅನೇಕಾಂಗುಲಿವಿಸ್ತಾರಂ ಪುಂಡ್ರಮಾಹುರನರ್ಥಕಮ್**

ಬ್ರಹ್ಮಾಂಡಪುರಾಣವು ಮತ್ಸ್ಯ ಕೂರ್ಮ ಶಂಖಗಳ ಆಕಾರವಿಶೇಷವನ್ನು ಹೆಚ್ಚಿಗೆ ತಿಳಿಸಿದೆ–

**ವರ್ತ್ತಿದೀಪಾಕೃತಿಂ ವಾಪಿ ವೇಣುಪತ್ರಾಕೃತಿಂ ತಥಾ**

**ಪದ್ಮಸ್ಯ ಮುಕುಳಾಕಾರಂ ತಥೈವ ಕುಮುದಸ್ಯ ಚ**

**ಮತ್ಸ್ಯಕೂರ್ಮ್ಮಾಕೃತಿಂ ವಾಪಿ ಶಂಖಾಕಾರಮತಃ ಪರಮ್**

ಮೊಗ್ಗುಪದ್ಮ, ದೀಪ, ವೇಣುಪತ್ರ ಇವುಗಳ ಆಕಾರದಲ್ಲಿ ಪುಂಡ್ರಗಳ ಸ್ಥಾನಗಳು ಪ್ರಮಾಣಾಂತರಗಳಿಂದ ತಿಳಿಯಲ್ಪಟ್ಟರೂ ಮತ್ಸ್ಯಕೂರ್ಮಶಂಖಾಕಾರಗಳ ಪುಂಡ್ರಗಳು ಯಾವುದಿರಬೇಕೆಂದು ಸರಿಯಾಗಿ ತಿಳಿಯೆವು. ಸ್ಕಾಂದಪುರಾಣವು ಪುಣ್ಯವೃದ್ಧಿಗೆ ಮತ್ತು ಪಾಪಕ್ಷಯಕ್ಕೆ



ಮತ್ಸ್ಯಕೂರ್ಮಗಳನ್ನು ಶಂಖಚಕ್ರಪದ್ಮಗಳಂತೆ ಮುದ್ರಿಸಿಕೊಳ್ಳುವುದನ್ನು ಹೇಳಿದೆ–

**ಶಂಖಂ ಚ ಪದ್ಮಂ ಚ ಯಥಾ ರಥಾಂಗಂ**

**ಮತ್ಸ್ಯಂ ಚ ಕೂರ್ಮಂ ರಚಿತಂ ಸ್ವದೇಹೇ**

**ಕರೋತಿ ನಿತ್ಯಂ ಸುಕೃತಸ್ಯ ವೃದ್ಧಿಂ**

**ಪಾಪಕ್ಷಯಂ ಜನ್ಮಶತಾರ್ಜಿತಸ್ಯ**

ಪಂಚಸಂಸ್ಕಾರಸಂಗ್ರಹದಲ್ಲಿ ಹೃದಯದ ಪುಂಡ್ರವನ್ನು ವಿಕಲ್ಪವಾಗಿ ಹೇಳಿದಂತೆ ಕಾಣುವುದು.

ನಾಮಚಿಂತನೆಯ ಜೊತೆ ಪುಂಡ್ರಧಾರಣೆಯನ್ನು ಧರಿಸಲು ಪಾದ್ಮದಲ್ಲಿ ಹೇಳಲಾಗಿದೆ. ಬ್ರಹ್ಮಾಂಡಪುರಾಣದಂತೆ 12 ಪುಂಡ್ರಗಳಿಗೆ ಪ್ರಮಾಣಗಳಿದ್ದು ಸ್ಥಾನಶಬ್ದ ಪರ್ಯಾಯದಲ್ಲಿ ಬಂದಿವೆ –

**ತತಃ ಪುಂಡ್ರಾಣಿ ತನ್ಮೂರ್ತೀಃ ಧ್ಯಾತ್ವಾ ಮಂತ್ರೇಣ ಧಾರಯೇತ್**

ಈ ವಾಕ್ಯಕ್ಕೆ **ಪಂಚಸಂಸ್ಕಾರಸಂಗ್ರಹ**ದಲ್ಲಿ ಆಚಾರ್ಯಮಧ್ವರ ನಾಮಸ್ತೋತ್ರವನ್ನು ವ್ಯಾಖ್ಯಾನವಾಗಿ ನೀಡಲಾಗಿದೆ–

**ಕೇಶವ ಕೇಶವ ಶಾಸಕ ವಂದೇ........ಪರಸ್ಮಾತ್**

ಬಲಕೈಯಿಂದ ಪುಂಡ್ರಧಾರಣೆಯನ್ನು ನಡೆಸಲಿದೆ.

**ದಕ್ಷಿಣಃ ಪಾರಗಃ ಕರಃ** ಎನ್ನುವುದು ಕರ್ಮತಂತ್ರಗಳ ಒಕ್ಕೊರಳ ಕರೆ.

ಯಾಗಭೂಮಿ ಪೂರ್ವೋತ್ತರ ದಿಕ್ಕಿನಲ್ಲಿ ಇರಬೇಕೆಂದು ತಿಳಿಸುತ್ತಾ **ಷಡ್ವಿಂಶಬ್ರಾಹ್ಮಣ**ದಲ್ಲಿ ಬಲಕೈಯಂತೆ ಎನ್ನುವುದಾಗಿ ಉಪಮೆಯಾಗಿ ದಿಕ್ಸೂಚನೆ ಬಂದಿದೆ –

**ಪ್ರಾಗುದಕ್ಪ್ರವಣಂ ದೇವಯಜನಮ್**

**ಯಥಾವೈ ದಕ್ಷಿಣಃ ಪಾಣಿಃ**

| ಮುಂದ್ರಸ್ಥಾನ | ಆಕಾರ | ಅಳತೆ | (ಶುಕ್ಲಪಕ್ಷ) ನಾಮ – ಓಂಕಾರ ಸಂಪುಟದಲ್ಲಿ – ನಾಮ (ಕೃಷ್ಣಪಕ್ಷ) | |
|---|---|---|---|---|
| ನೆತ್ತಿ | ಬಿದಿರಿನ ಎಲೆ | 4" | ವಾಸುದೇವಾಯ ನಮಃ | ವಾಸುದೇವಾಯ ನಮಃ |
| ಹಣೆ | ಬಿದಿರಿನ ಎಲೆ | 4" | ಕೇಶವಾಯ ನಮಃ | ಸಂಕರ್ಷಣಾಯ ನಮಃ |
| ಹೊಟ್ಟೆ (ಮಧ್ಯ) | ದೀಪಶಿಖೆ | 8" | ನಾರಾಯಣಾಯ ನಮಃ | ವಾಸುದೇವಾಯ ನಮಃ |
| ಎದೆ | ಕಮಲ ಹೂ | 8" | ಮಾಧವಾಯ ನಮಃ | ಪ್ರದ್ಯುಮ್ನಾಯ ನಮಃ |
| ಕುತ್ತಿಗೆ (ಎದುರು) | ಜಂಬೂಫಲ | 4" | ಗೋವಿಂದಾಯ ನಮಃ | ಅನಿರುದ್ಧಾಯ ನಮಃ |
| ಹೊಟ್ಟೆ (ಬಲ) | ದೀಪಶಿಖೆ | 8" | ವಿಷ್ಣವೇ ನಮಃ | ಪುರುಷೋತ್ತಮಾಯ ನಮಃ |
| ತೋಳು (ಬಲ) | ಬಿದಿರಿನ ಎಲೆ | 8" | ಮಧುಸೂದನಾಯ ನಮಃ | ಅಧೋಕ್ಷಜಾಯ ನಮಃ |
| ಕುತ್ತಿಗೆ (ಬಲ) | ಜಂಬೂಫಲ | 4" | ತ್ರಿವಿಕ್ರಮಾಯ ನಮಃ | ನಾರಸಿಂಹಾಯ ನಮಃ |
| ಹೊಟ್ಟೆ (ಎಡ) | ದೀಪಶಿಖೆ | 8" | ವಾಮನಾಯ ನಮಃ | ಅಚ್ಯುತಾಯ ನಮಃ |
| ತೋಳು (ಎಡ) | ಬಿದಿರಿನ ಎಲೆ | 8" | ಶ್ರೀಧರಾಯ ನಮಃ | ಜನಾರ್ದನಾಯ ನಮಃ |
| ಕುತ್ತಿಗೆ (ಎಡ) | ಜಂಬೂಫಲ | 4" | ಹೃಷೀಕೇಶಾಯ ನಮಃ | ಉಪೇಂದ್ರಾಯ ನಮಃ |
| ಬೆನ್ನು (ಕೆಳಗೆ) | ಜಂಬೂಫಲ | 8" | ಪದ್ಮನಾಭಾಯ ನಮಃ | ಹರಯೇ ನಮಃ |
| ಕುತ್ತಿಗೆ (ಹಿಂದೆ) | ಜಂಬೂಫಲ | 4" | ದಾಮೋದರಾಯ ನಮಃ | ಕೃಷ್ಣಾಯ ನಮಃ |
| ನೆತ್ತಿ | ಬಿದಿರಿನ ಎಲೆ | 4" | ವಾಸುದೇವಾಯ ನಮಃ | ವಾಸುದೇವಾಯ ನಮಃ |
| ಸ್ತನದ ಮೇಲೆ (ಬಲ) | ಉದ್ದ ಉರುಟು | 2" | ಶ್ರೀವತ್ಸಾಯ ನಮಃ | ಶ್ರೀವತ್ಸಾಯ ನಮಃ |
| ಸ್ತನದ ಮೇಲೆ (ಎಡ) | ಉರುಟು | 1" | ಕೌಸ್ತುಭಾಯ ನಮಃ | ಕೌಸ್ತುಭಾಯ ನಮಃ |



ಪುಂಡ್ರಗಳ ಅಳತೆಯನ್ನು ದೇಹಕ್ಕೆ ಸರಿಯಾಗಿ ಪುರಾಣಗಳು ಬೇರೆಬೇರೆ ರೀತಿಯಾಗಿ ಹೇಳಿವೆ –

**ಲಲಾಟೇ ಕಂಠದೇಶೇ ಚ ಸ್ಕಂಧಯೋಶ್ಚ ತ್ರಿಕೇ ತಥಾ**
**ಚತುರಂಗುಲಮಾನಾನಿ ಪಂಚ ಪುಂಡ್ರಾಣಿ ಧಾರಯೇತ್**
**ಉದರೇ ಪಾರ್ಶ್ವಯೋಶ್ಚೈವ ಹೃದಯೇ ಪಶ್ಚಿಮೇ ತಥಾ**
**ಬಾಹ್ವೋರ್ಮಧ್ಯೇ ಚ ಸಪ್ತ ಸ್ಯುಃ ಪುಂಡ್ರಾಣ್ಯಷ್ಟಾಂಗುಲಾನಿ ವೈ**
**ದಶಾಂಗುಲಪ್ರಮಾಣಂ ತು ಉತ್ತಮೋತ್ತಮಮುಚ್ಯತೇ**
**ನವಾಂಗುಲಂ ತು ಮಧ್ಯಂ ಸ್ಯಾತ್ ಅಷ್ಟಾಂಗುಲಮತಃ ಪರಮ್**
**ಸಪ್ತಷಟ್‌ಪಂಚಭಿಃ ಪುಂಡ್ರಂ ಮಧ್ಯಮಂ ತ್ರಿವಿಧಂ ಸ್ಮೃತಮ್**
**ಚತುಸ್ತ್ರಿದ್ವ್ಯಂಗುಲೈಃ ಪುಂಡ್ರಂ ಕನಿಷ್ಠಂ ತ್ರಿವಿಧಂ ಭವೇತ್**

**ಬ್ರಹ್ಮಾಂಡಪುರಾಣದ** ಈ ಮಾತು ಎಲ್ಲ ಪುಂಡ್ರಗಳಿಗೂ ಅನ್ವಯಿಸುವಂತೆ ಅಳತೆಯ ಪ್ರಭೇದಗಳನ್ನು ತಿಳಿಸಿದೆ. ಹತ್ತಂಗುಲ ಉದ್ದವಾದ ಪುಂಡ್ರಗಳು ತುಂಬಾ ಪ್ರಶಸ್ತ ಎಂದಿದೆ. ಆದರೆ ಆ ರೀತಿಯ ಉದ್ದನೆಯ ಮೈಕಟ್ಟು ಪಡೆದವರಿಗೆ ಮಾತ್ರ ಹತ್ತಂಗುಲದ ಪುಂಡ್ರಗಳನ್ನು ಧರಿಸಲು ಭಾಗ್ಯ ದೊರಕುವುದು. ಅದರಂತೆ 9 ಹಾಗೂ 8 ಇಂಚು ಉದ್ದದ ಪುಂಡ್ರಗಳೂ ಉತ್ತಮ ಪಕ್ಷದಲ್ಲಿ ಮಧ್ಯಮ ಹಾಗೂ ಅಧಮ ಪ್ರಮಾಣಗಳಾಗಿವೆ. ಇವು ಶಾರೀರಿಕವಾಗಿ ಅವಕಾಶವನ್ನು ಪಡೆಯಲಾರವು.

ಮಧ್ಯಮ ರೀತಿಯ ಊರ್ಧ್ವಪುಂಡ್ರಗಳು 7–6–5 ಅಂಗುಲಗಳ ಉದ್ದನೆಯವುಗಳು. ಈ ಪ್ರಮಾಣದಲ್ಲಿ ದ್ವಾದಶಪುಂಡ್ರಗಳನ್ನು ಸ್ಥಾನವ್ಯತ್ಯಾಸಗಳಲ್ಲಿ ಧರಿಸಬಹುದಾಗಿದೆ. ಕಡೆಯ ಪಕ್ಷ 4–3–2 ಅಂಗುಲ ಉದ್ದದ ಪುಂಡ್ರಗಳನ್ನಾದರೂ ಧರಿಸಕೊಳ್ಳಬೇಕೆಂದು ಪುರಾಣ ಅಭಿಪ್ರಾಯಪಟ್ಟಿದೆ.

ಕುತ್ತಿಗೆಯಲ್ಲಿಯ 4 ಪುಂಡ್ರಗಳನ್ನು 2 ಅಂಗುಲಗಳಲ್ಲಿ, ಬೆನ್ನು ತೋಳು ಹಾಗೂ ಹೊಟ್ಟೆಯಲ್ಲಿನ 6 ಪುಂಡ್ರಗಳನ್ನು 4 ಅಂಗುಲಗಳಲ್ಲಿ ಹಣೆಯ



ಹಾಗೂ ಎದೆಯ ಪುಂಡ್ರಗಳನ್ನು 3 ಅಂಗುಲಗಳಲ್ಲಿ ಧರಿಸಿದರೆ ಪುರಾಣ ಹೇಳಿದ ಕಡೆಯ ಪಕ್ಷವನ್ನಾದರೂ ಆಶ್ರಯಿಸಿದಂತಾಗಲಿದೆ. **ಪದ್ಮಪುರಾಣವು** ಒಂದೆಡೆ ಸಮಷ್ಟಿಪುಂಡ್ರಗಳ ಅಳತೆಯನ್ನು ಸುಮಾರಾಗಿ ಬ್ರಹ್ಮಾಂಡದಂತೆ ಹೇಳಿದ್ದರೂ, ಇನ್ನೊಂದೆಡೆ ಸ್ಥಾನಭೇದದಲ್ಲಿ ಪುಂಡ್ರಗಳ ಅಳತೆಯಲ್ಲಿ ಒಂದು ವ್ಯವಸ್ಥೆಯನ್ನು ನೀಡಿದೆ–

**ಚತುರಂಗುಲದೀರ್ಘಃ ಸ್ಯಾತ್ ಲಲಾಟೇ ತೂರ್ಧ್ವಪುಂಡ್ರಕಃ**
**ದಶಾಂಗುಲಸ್ತೂದರೇ ಸ್ಯಾತ್ ವಕ್ಷಃ ಸಪ್ತಾಂಗುಲಃ ಸ್ಮೃತಃ**
**ಚತುರಂಗುಲಃ ಕಂಠದೇಶೇ ಪಾರ್ಶ್ವಯೋಸ್ತು ದಶಾಂಗುಲಃ**
**ಅಷ್ಟಾಂಗುಲಸ್ತು ಬಾಹ್ವೋಃ ಸ್ಯಾತ್ ಅಂಸಯೋಃ ಚತುರಂಗುಲಃ**
**ಊರ್ಧ್ವಾಧೋಭಾಗಯೋಃ ಪೃಷ್ಠೇ ಮೂರ್ಧ್ನಿ ಚ ದ್ವ್ಯಂಗುಲಃ ಸ್ಮೃತಃ**
**ದಕ್ಷಸ್ತನೋರ್ಧ್ವಭಾಗೇ ಸ್ಯಾತ್ ಶ್ರೀವತ್ಸಂ ತು ಷಡಂಗುಲಮ್**

ಆಚಾರ್ಯಮಧ್ವರ ಪೂರ್ವಾಶ್ರಮ ತಮ್ಮರಾದ ವಿಷ್ಣುತೀರ್ಥರು ಸಂನ್ಯಾಸವಿಧಿಯಲ್ಲಿ ಬಲ–ಎಡ ಸ್ತನಗಳ ಸನಿಹ ಶ್ರೀವತ್ಸ ಹಾಗೂ ಕೌಸ್ತುಭಾಕಾರದ ಪುಂಡ್ರಗಳನ್ನು ಧರಿಸಲು ಹೇಳಿರುತ್ತಾರೆ. ಅಲ್ಲಿಯ ಮಂತ್ರಗಳನ್ನೂ ತಿಳಿಸಿದ್ದಾರೆ – **ಶ್ರೀವತ್ಸಾಯ ನಮಃ** ಮತ್ತು **ಕೌಸ್ತುಭಾಯ ನಮಃ**.

**ವಾಸುದೇವಃ ಕೇಶವಶ್ಚ ಸನಾರಾಯಣಮಾಧವಃ**
**ಗೋವಿಂದಶ್ಚೈವ ವಿಷ್ಣುಶ್ಚ ಮಧುಹಂತೃತ್ರಿವಿಕ್ರಮೌ**
**ವಾಮನಃ ಶ್ರೀಧರಶ್ಚೈವ ಹೃಷೀಕೇಶೋಽಬ್ಜನಾಮಕಃ**
**ದಾಮೋದರಶ್ಚ ಶ್ರೀವತ್ಸಃ ಚತುರ್ಥ್ಯಂತಾಶ್ಚ ಸರ್ವಶಃ**
**ನಮೋಂತಾ ಕೌಸ್ತುಭಾಯೇತಿ ಸವ್ಯಸ್ತನಮುಪೈವ ವಾ**

ಬ್ರಹ್ಮಾಂಡಪುರಾಣದಲ್ಲಿ ಶ್ರೀವತ್ಸಧಾರಣೆಯ ಮಾತು ಬಂದಿದೆ –

**ಶ್ರೀವತ್ಸಂ ದಕ್ಷಿಣೋರಸ್ಕೇ ವಿನ್ಯಸೇತ್ ಪದ್ಮಮೇವ ಚ**

ಶ್ರೀವತ್ಸವು ಸ್ಫಟಿಕದಂತೆ ಬಿಳಿ. ಕೌಸ್ತುಭವು ಪದ್ಮರಾಗದಂತೆ ಕೆಂಪು ಎಂದು **ಈಶ್ವರಸಂಹಿತೆ** –



**ಸ್ಫಟಿಕಾದ್ರಿಪ್ರತೀಕಾಶಂ ಶ್ರೀವತ್ಸಮಥ ಭಾವಯೇತ್**

**ಪದ್ಮರಾಗಾಚಲಾಕಾರಂ ಕೌಸ್ತುಭಂ ರತ್ನನಾಯಕಮ್**

**ಕೌಸ್ತುಭವ್ಯಪದೇಶೇನ ಸ್ವಾತ್ಮಜ್ಯೋತಿರ್ಬಿಭರ್ತ್ಯಜಃ**

**ತತ್ಪ್ರಭಾ ವ್ಯಾಪಿನೀ ಸಾಕ್ಷಾತ್ ಶ್ರೀವತ್ಸಮುರಸಾ ಪ್ರಭುಃ** (ಭಾಗವತ)

ಪುಂಡ್ರಧಾರಣೆಗೆ ದೇವರ ನಾಮವನ್ನು ಹೇಳುವಾಗ ಆರಂಭದಲ್ಲಿ ಓಂಕಾರವನ್ನು ನಾಮದ ಬಳಿಕ ನಮಃ ಶಬ್ದವನ್ನು ಬಳಸಬೇಕೆಂದು ಎಲ್ಲೆಡೆ ತಿಳಿಸಿದ್ದಾರೆ. ನಮಃ ಶಬ್ದವು ತ್ಯಾಗಾರ್ಥದಲ್ಲಿ ಇರಲಾಗಿ ನಾವು ನಮ್ಮನ್ನು ಆ ದೇವರಿಗೆ ಸಮರ್ಪಿಸುವಂತೆ ತಿಳಿಸಿಕೊಡಲಾಗಿದೆ. **ವೃದ್ಧಹಾರೀತಸ್ಮೃತಿಯಲ್ಲಿ** ಹೇಳಿದಂತೆ ದೇವರಿಗೆ ನಮ್ಮ ಸಮರ್ಪಣೆಯಿಂದ ನಾವು ದೇವರ ದಾಸರೆಂದು ತಿಳಿಸಿಕೊಟ್ಟಂತೆ. ಭಗವಂತ ನಮ್ಮ ಸ್ವಾಮಿಯಾಗಿದ್ದಾನೆ ಎನ್ನುವುದರ ಮೂಲಕ ಜೀವನ ಅಸ್ವಾತಂತ್ರ್ಯ ಮತ್ತು ದೇವರ ಸ್ವಾತಂತ್ರ್ಯ ಸ್ಪಷ್ಟವಾಗುವುದು. ಹೀಗಾಗಿ ಎಲ್ಲ ಮಂತ್ರಗಳು ಹೀಗಿದ್ದರೇನೇ ಮನುಷ್ಯನಿಗೆ ಉಪಯೋಗವನ್ನು ನೀಡಲಿವೆ ಎನ್ನುವ ಫಲಕಥನವೂ ಅಲ್ಲಿದೆ –

**ಮಕಾರೇಣ ಸ್ವತಂತ್ರಃ ಸ್ಯಾತ್ ನಕಾರಃ ತನ್ನಿಷಿದ್ಧ್ಯತಿ**

**ತಸ್ಮಾಚ್ಚ ನಮ ಇತ್ಯತ್ರ ಸ್ವಾತಂತ್ರ್ಯಮಪನೋದತಿ**

**ತಸ್ಮಾತ್ತು ನಮಸಾ ಯುಕ್ತಾಃ ಸರ್ವೇ ಮಂತ್ರಾಶ್ಚ ಪಾರ್ಥಿವ**

**ಸರ್ವಸಿದ್ಧಿಪ್ರದಾ ನೄಣಾಂ ಭವಂತ್ಯತ್ರ ನ ಸಂಶಯಃ**

**ದಾಸ್ಯಮೇವ ಹಿ ಜೀವಾನಾಂ ಪ್ರೋಚ್ಯತೇ ನಮಸೈವ ತು**

ಹೆಬ್ಬೆರಳು ಬಿಟ್ಟು ಉಳಿದ ಬೆರಳುಗಳಿಂದ ಪುಂಡ್ರಧಾರಣೆಯು **ಸಚ್ಚರಿತ್ರಸುಧಾನಿಧಿಯಲ್ಲಿ** ವಿಹಿತವಾಗಿದೆ–

**ಪ್ರಣವಾದ್ಯೈಃ ಚತುರ್ಥ್ಯಂತ್ಯೈಃ ನಾಮಭಿಃ ಕೇಶವಾದಿಭಿಃ**

**ನಮೋಽನ್ವಿತೈರಂಗುಲೀಭಿಃ ನ್ಯಸ್ಯಾಂಗುಷ್ಠವಿವರ್ಜಿತೈಃ**

**ಬ್ರಹ್ಮಾಂಡಪುರಾಣವು** ಕಿರುಬೆರಳು ಬಿಟ್ಟು ಉಳಿದ ಬೆರಳುಗಳಿಂದ ಪುಂಡ್ರಧಾರಣೆ ಮಾಡಿದಲ್ಲಿನ ಫಲವಿಶೇಷವನ್ನು ತಿಳಿಸಿದೆ–



**ಅಂಗುಷ್ಠಃ ಪುಷ್ಟಿದಃ ಪ್ರೋಕ್ತೋ ಮಧ್ಯಮಾಯುಷ್ಕರೀ ತಥಾ**

**ಅನಾಮಿಕಾಽನ್ನದಾ ನಿತ್ಯಂ ಮುಕ್ತಿದಾ ತರ್ಜನೀ ಸ್ಮೃತಾ**

ಸ್ಕಾಂದಪುರಾಣದಲ್ಲಿ **ಅನಾಮಿಕಾ ಶಾಂತಿದೋಕ್ತಾ** ಎಂದಿದೆ. ಭರದ್ವಾಜಸಂಹಿತೆಯಲ್ಲಿ ಐದು ಬೆರಳಿಗೂ ವಿಶೇಷವಾದ ಫಲಕಥನ ಇದೆ.

**ಊರ್ಧ್ವಪುಂಡ್ರವಿಧೌ ಮೋಕ್ಷಂ ಅಂಗುಷ್ಠಂ ತರ್ಜನೀ ಶ್ರಿಯಮ್**

**ಮಧ್ಯಮಾ ಪಶುಪುತ್ರಾದಿ ಮೋಕ್ಷೈಶ್ವರ್ಯಮನಾಮಿಕಾ**

**ವಶ್ಯಂ ಕನಿಷ್ಠಿಕಾ ಕುರ್ಯಾತ್ ನ ಚಾನ್ಯೇನ ವಿಧೀಯತೇ**

ಹಣೆಯ ಪುಂಡ್ರವನ್ನು ನಡುಬೆರಳಿನಿಂದ ಧರಿಸಿ ಉಳಿದ ಪುಂಡ್ರಗಳನ್ನು ತೋರು ಬೆರಳಿನಿಂದ ಹಾಕುವುದು ಹೆಚ್ಚು ಶಾಸ್ತ್ರೀಯವಾಗಿದೆ.

ಹಣೆಯ ಪುಂಡ್ರವನ್ನು ನಡು ಖಾಲಿಯಿರುವಂತೆ ಹಾಕಬೇಕು. ಅಲ್ಲಿ ಲಕ್ಷ್ಮೀನಾರಾಯಣರು ನಿತ್ಯ ಸನ್ನಿಹಿತರಾಗಿರುವರು. ಅದು ಅವರ ವಿಹಾರಸ್ಥಾನ ಎನಿಸಿದೆ. ಭಗವಂತನ ಪಾದದಂತೆ ಆ ಪುಂಡ್ರ ಕಾಣುವುದು –

**ವಿಮಲಾನ್ಯೂರ್ಧ್ವಪುಂಡ್ರಾಣಿ ಸಾಂತರಾಳಾನಿ ಯೋ ನರಃ**

**ಕರೋತಿ ವಿಮಲಂ ತತ್ರ ಮಂದಿರಂ ಮೇ ಕರೋತಿ ಸಃ**

**ಊರ್ಧ್ವಪುಂಡ್ರಸ್ಯ ಮಧ್ಯೇ ತು ವಿಶಾಲೇಽತಿಮನೋಹರೇ**

**ಲಕ್ಷ್ಮ್ಯಾ ಸಾರ್ಧಂ ಸಮಾಸೀನೋ ರಮೇಽಹಂ ತತ್ರ ನಿರ್ವೃತಃ** (ಬ್ರಹ್ಮಾಂಡ)

**ಊರ್ಧ್ವಪುಂಡ್ರಸ್ಯ ಮಧ್ಯೇ ತು ವಿಶಾಲೇ ಸುಮನೋಹರೇ**

**ಲಕ್ಷ್ಮ್ಯಾ ಸಾರ್ಧಂ ಸಮಾಸೀನೋ ದೇವದೇವೋ ಜನಾರ್ದನಃ** (ಪದ್ಮಪುರಾಣ)

**ಭಾವಯಂತ್ಯಪರೇ ಭಕ್ತಾಃ ಪುಂಡ್ರಂ ತು ಹರಿಮಂದಿರಮ್**

**ಲಕ್ಷ್ಮೀನಾರಾಯಣಂ ತತ್ರ ಬುದ್ಧ್ವಾ ಧ್ಯಾಯಂತಿ ನಿತ್ಯಶಃ** (ಬೃಹತ್‌ಬ್ರಹ್ಮಸಂಹಿತಾ)

**ಊರ್ಧ್ವಪುಂಡ್ರಸ್ಯ ಮಧ್ಯೇ ತು ಲಲಾಟೇ ಸುಮನೋಹರೇ**

**ಲಕ್ಷ್ಮ್ಯಾ ಸಹ ಸಮಾಸೀನೋ ರಮತೇ ತತ್ರ ವೈ ಹರಿಃ** (ವೃದ್ಧಹಾರೀತಸ್ಮೃತಿ)

**ಊರ್ಧ್ವಪುಂಡ್ರಸ್ಯ ಮಧ್ಯೇ ತು ವಿಶಾಲೇ ಸುಮನೋಹರೇ**

**ಸಾಂತರಾಳೇ ಸಮಾಸೀನೋ ಹರಿಸ್ತತ್ರ ಶ್ರಿಯಾ ಸಹ** (ಪದ್ಮಪುರಾಣ)



ದ್ವಾರಾವತೀಸಮುದ್ಭೂತಚಂದನೇನಾಂಕನಂ ದ್ವಿಜಾಃ

ಸಾಂತರಾಳಂ ಪ್ರಕುರ್ವೀತ ಪುಂಡ್ರಂ ಹರಿಪದಾಕೃತಿಮ್ (ಹಾರೀತ)

ಸಾಂತರಾಳಂ ಪ್ರಕುರ್ವಂತಿ ಪುಂಡ್ರಂ ಹರಿಪದಾಕೃತಿಮ್

ಏಕಾಂತಿನೋ ಮಹಾಭಾಗಾಃ ಸರ್ವಭೂತಹಿತೇ ರತಾಃ

ಮಧ್ಯಚ್ಛಿದ್ರೇಣ ಸಂಯುಕ್ತಂ ತದ್ಧಿ ವೈ ಮಂದಿರಂ ಹರೇಃ (ಸ್ಕಾಂದಪುರಾಣ)

ಸಾಂತರಾಳಂ ಪ್ರಕುರ್ವಂತಿ ಪುಂಡ್ರಂ ಹರಿಪದಾಕೃತಿಮ್

ಏಕಾಂತಿನೋ ಮಹಾಭಾಗಾಃ ಸರ್ವಭೂತಹಿತೇ ರತಾಃ

ಹರೇಃ ಪದಾಕೃತಿ ಧಾರ್ಯಂ ಊರ್ಧ್ವಪುಂಡ್ರಂ ವಿಧಾನತಃ

ಮಧ್ಯಚ್ಛಿದ್ರೇಣ ಸಂಯುಕ್ತಂ ತದ್ಧಿ ವೈ ಮಂದಿರಂ ಹರೇಃ (ಪದ್ಮಪುರಾಣ)

ಊರ್ಧ್ವಪುಂಡ್ರಂ ಸಾಂತರಾಳಂ ತೇಷಾಮೇವ ವಿಶೇಷತಃ (ವಾರಾಹಪುರಾಣ)

ತಿಲಕೇ ದಕ್ಷಿಣೇ ಬ್ರಹ್ಮಾ ಇತರೇ ಚ ಸದಾಶಿವಃ

ಮಧ್ಯೇ ವಿಷ್ಣುಃ ಶ್ರಿಯಾ ಯುಕ್ತಃ ಸಚ್ಛಿದ್ರಂ ಹರಿಮಂದಿರಮ್

ಹಣೆಯ ಪುಂಡ್ರವು ಮೂಗಿನ ಬುಡದಿಂದ ಅಂದರೆ ಹುಬ್ಬುಗಳ ನಡುವೆ ಸ್ವಲ್ಪ ಕೆಳಗಿನಿಂದ ಆರಂಭಗೊಳ್ಳುವುದನ್ನು ಸ್ಪಷ್ಟಪಡಿಸಲಾಗಿದೆ–

ನಾಸಿಕಾಮೂಲಮಾರಭ್ಯ ಲಲಾಟಾಂತಂ ತು ವಿನ್ಯಸೇತ್

ಅಂಗುಲಂ ದ್ವ್ಯಂಗುಲಂ ವಾಪಿ ಮಧ್ಯೇ ಛಿದ್ರಂ ಪ್ರಕಲ್ಪಯೇತ್

ಕೇಶವಾದ್ಯೈರ್ನ್ನಮೋಂತೈಶ್ಚ ಪ್ರಣವಾದ್ಯೈರನುಕ್ರಮಾತ್ (ವೃದ್ಧಹಾರೀತಸ್ಮೃತಿ)

ಆರಭ್ಯ ನಾಸಿಕಾಮೂಲಂ ಲಲಾಟೇ ತು ಲಿಖೇನ್ಮೃದಾ

ಸಮಾರಭ್ಯ ಭ್ರುವೋರ್ಮ್ಮಧ್ಯಂ ಅಂತರಾಳಂ ಪ್ರಕಲ್ಪಯೇತ್ (ಪದ್ಮಪುರಾಣ)

ವಿಷ್ಣುರಹಸ್ಯದಲ್ಲಿ ವಿಸ್ತಾರವಾಗಿ ಎಲ್ಲರಿಗೂ ವೈಷ್ಣವ ಆಚರಣೆಗಳನ್ನು ಹೇಳಲಾಗಿದೆ. ಅಲ್ಲಿ ಪುಂಡ್ರಧಾರಣೆಯ ಮಾತು –

ವಿಪ್ರಕ್ಷತ್ರಿಯವಿಟ್ ಶೂದ್ರಾ ವಿಷ್ಣುಭಕ್ತಿಪರಾಯಣಾಃ

ಲಲಾಟೇಽನ್ಯೇಽಪಿ ಕುರ್ವೀರನ್ ಪುಂಡ್ರಂ ಹರಿಪದಾಕೃತಿ

ನಾಸಾಗ್ರಾತ್ಕೇಶಪರ್ಯಂತಂ ತನ್ಮಧ್ಯೇ ಹರಿಮಂದಿರಮ್



**ಅತೋಽನ್ಯತಿಲಕಂ ನೃಣಾಂ ವಿಷ್ಣುವಿದ್ವೇಷಕಾರಣಮ್**

ಸಾಯಂಕಾಲದಲ್ಲಿಯೂ ಮತ್ತೆ ಜಪ-ಪೂಜಾದಿಗಳಾರಂಭದಲ್ಲಿ ಪುಂಡ್ರಧಾರಣೆಯನ್ನು ಸರಿಯಾಗಿಯೇ ನಡೆಸಬೇಕೆಂದು ಬ್ರಹ್ಮಾಂಡಪುರಾಣವು ತಿಳಿಸಿಕೊಟ್ಟಿದೆ–

**ಪೂಜಾಕಾಲೇ ಚ ಹೋಮೇ ಚ ಸಾಯಂಕಾಲೇ ಸಮಾಹಿತಃ**

**ನಾಮಾನ್ಯುಚ್ಚಾರ್ಯ ವಿಧಿನಾ ಧಾರಯೇದೂರ್ಧ್ವಪುಂಡ್ರಕಮ್**

ಮೂರೂ ಹೊತ್ತಿನ ಜಪದಲ್ಲಿಯೂ ಊರ್ಧ್ವಪುಂಡ್ರಧಾರಣೆ ವಿಹಿತ. ದೇಹದಲ್ಲಿ ಪುಂಡ್ರವು ನಿಧಾನವಾಗಿ ಅಳಿಸಲ್ಪಡುವುದರಿಂದ ಸ್ನಾನ ಮಾಡಲಿ ಮಾಡದಿರಲಿ ಸಂಧ್ಯಾಂಗವಾಗಿ ಪುಂಡ್ರಧಾರಣೆ ಕಡ್ಡಾಯ –

**ತ್ರಿಸಂಧ್ಯಾಸು ಮೃದಾ ವಿಪ್ರೋ ಯಾಗಕಾಲೇ ವಿಶೇಷತಃ**

**ಶ್ರದ್ಧಾಳೂರೂರ್ಧ್ವಪುಂಡ್ರಂ ತು ಬಿಭೃಯಾದ್ ದ್ವಿಜಸತ್ತಮ** (ಹಾರೀತಸ್ಮೃತಿ)

ನನ್ನ ಪ್ರಸಾದಕ್ಕಾಗಿ, ಸುಖ ಪಡೆಯಲು, ರಕ್ಷೆಗಾಗಿ, ತೊಂದರೆಯನ್ನು ದೂರಗೊಳಿಸಲು – ಹೀಗೆ 4 ಕಾರಣಕ್ಕೆ ಊರ್ಧ್ವಪುಂಡ್ರವನ್ನು ಹಚ್ಚಬೇಕೆಂದು ನಾರಾಯಣನು ಚತುರ್ಮುಖನಿಗೆ ಹೇಳುವನು –

**ಮತ್ಪ್ರಿಯಾರ್ಥಂ ಶುಭಾರ್ಥಂ ವಾ ರಕ್ಷಾರ್ಥಂ ಚತುರಾನನ**

**ಮತ್ಪೂಜಾಹೋಮಕೇ ಚೈವ ಸಾಯಂಪ್ರಾತಃ ಸಮಾಹಿತಃ**

**ಮದ್ಭಕ್ತೋ ಧಾರಯೇನ್ನಿತ್ಯಂ ಊರ್ಧ್ವಪುಂಡ್ರಂ ಭಯಾಪಹಮ್**

(ಸ್ಕಾಂದಪುರಾಣ)

ಎಲ್ಲ ಜಾತಿಯವರಿಗೂ ಊರ್ಧ್ವಪುಂಡ್ರಧಾರಣೆ ಶಾಸ್ತ್ರದಲ್ಲಿ ಹೇಳಲಾಗಿದೆ. ಪುಂಡ್ರಧರಿಸಿದ ವ್ಯಕ್ತಿಯನ್ನು ಕಂಡರೆ ಪಾಪನಿವೃತ್ತಿಯನ್ನು ಪುರಾಣಗಳು ತಿಳಿಸಿವೆ –

**ಸರ್ವವರ್ಣೇಷು ಮದ್ಭಕ್ತಾಃ ಕುರ್ವೀರನ್ನೂರ್ಧ್ವಪುಂಡ್ರಕಮ್** (ಬ್ರಹ್ಮಾಂಡ)

**ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾ ಯದಿವೇತರಃ**

**ಶಂಖಮುದ್ರಾಂಕಿತತನುಃ ತುಳಸೀಮಂಜರೀಧರಃ**



ದ್ವಾರಾವತೀಸಮುದ್ಭೂತಚಂದನೇನಾಂಕನಂ ದ್ವಿಜಾಃ
ಸಾಂತರಾಳಂ ಪ್ರಕುರ್ವೀತ ಪುಂಡ್ರಂ ಹರಿಪದಾಕೃತಿಮ್ (ಹಾರೀತ)
ಸಾಂತರಾಳಂ ಪ್ರಕುರ್ವಂತಿ ಪುಂಡ್ರಂ ಹರಿಪದಾಕೃತಿಮ್
ಏಕಾಂತಿನೋ ಮಹಾಭಾಗಾಃ ಸರ್ವಭೂತಹಿತೇ ರತಾಃ
ಮಧ್ಯಚ್ಛಿದ್ರೇಣ ಸಂಯುಕ್ತಂ ತದ್ಧಿ ವೈ ಮಂದಿರಂ ಹರೇಃ (ಸ್ಕಾಂದಪುರಾಣ)
ಸಾಂತರಾಳಂ ಪ್ರಕುರ್ವಂತಿ ಪುಂಡ್ರಂ ಹರಿಪದಾಕೃತಿಮ್
ಏಕಾಂತಿನೋ ಮಹಾಭಾಗಾಃ ಸರ್ವಭೂತಹಿತೇ ರತಾಃ
ಹರೇಃ ಪದಾಕೃತಿ ಧಾರ್ಯಂ ಊರ್ಧ್ವಪುಂಡ್ರಂ ವಿಧಾನತಃ
ಮಧ್ಯಚ್ಛಿದ್ರೇಣ ಸಂಯುಕ್ತಂ ತದ್ಧಿ ವೈ ಮಂದಿರಂ ಹರೇಃ (ಪದ್ಮಪುರಾಣ)
ಊರ್ಧ್ವಪುಂಡ್ರಂ ಸಾಂತರಾಳಂ ತೇಷಾಮೇವ ವಿಶೇಷತಃ (ವಾರಾಹಪುರಾಣ)
ತಿಲಕೇ ದಕ್ಷಿಣೇ ಬ್ರಹ್ಮಾ ಇತರೇ ಚ ಸದಾಶಿವಃ
ಮಧ್ಯೇ ವಿಷ್ಣುಃ ಶ್ರಿಯಾ ಯುಕ್ತಃ ಸಚ್ಛಿದ್ರಂ ಹರಿಮಂದಿರಮ್

ಹಣೆಯ ಪುಂಡ್ರವು ಮೂಗಿನ ಬುಡದಿಂದ ಅಂದರೆ ಹುಬ್ಬುಗಳ ನಡುವೆ ಸ್ವಲ್ಪ ಕೆಳಗಿನಿಂದ ಆರಂಭಗೊಳ್ಳುವುದನ್ನು ಸ್ಪಷ್ಟಪಡಿಸಲಾಗಿದೆ-

ನಾಸಿಕಾಮೂಲಮಾರಭ್ಯ ಲಲಾಟಾಂತಂ ತು ವಿನ್ಯಸೇತ್
ಅಂಗುಲಂ ದ್ವ್ಯಂಗುಲಂ ವಾಪಿ ಮಧ್ಯೇ ಛಿದ್ರಂ ಪ್ರಕಲ್ಪಯೇತ್
ಕೇಶವಾದ್ಯೈರ್ನಾಮೋಂತೈಶ್ಚ ಪ್ರಣವಾದ್ಯೈರನುಕ್ರಮಾತ್ (ವೃದ್ಧಹಾರೀತಸ್ಮೃತಿ)
ಆರಭ್ಯ ನಾಸಿಕಾಮೂಲಂ ಲಲಾಟೇ ತು ಲಿಖೇನ್ಮೃದಾ
ಸಮಾರಭ್ಯ ಭ್ರುವೋರ್ಮಧ್ಯಂ ಅಂತರಾಳಂ ಪ್ರಕಲ್ಪಯೇತ್ (ಪದ್ಮಪುರಾಣ)

ವಿಷ್ಣುರಹಸ್ಯದಲ್ಲಿ ವಿಸ್ತಾರವಾಗಿ ಎಲ್ಲರಿಗೂ ವೈಷ್ಣವ ಆಚರಣೆಗಳನ್ನು ಹೇಳಲಾಗಿದೆ. ಅಲ್ಲಿ ಪುಂಡ್ರಧಾರಣೆಯ ಮಾತು –

ವಿಪ್ರಕ್ಷತ್ರಿಯವಿಟ್‌ಶೂದ್ರಾ ವಿಷ್ಣುಭಕ್ತಿಪರಾಯಣಾಃ
ಲಲಾಟೇಽನ್ಯೇಽಪಿ ಕುರ್ವೀರನ್ ಪುಂಡ್ರಂ ಹರಿಪದಾಕೃತಿ
ನಾಸಾಗ್ರಾತ್ಕೇಶಪರ್ಯಂತಂ ತನ್ಮಧ್ಯೇ ಹರಿಮಂದಿರಮ್



**ಅತೋಽನ್ಯತಿಲಕಂ ನೃಣಾಂ ವಿಷ್ಣುವಿದ್ವೇಷಕಾರಣಮ್**

ಸಾಯಂಕಾಲದಲ್ಲಿಯೂ ಮತ್ತೆ ಜಪ-ಪೂಜಾದಿಗಳಾರಂಭದಲ್ಲಿ ಪುಂಡ್ರಧಾರಣೆಯನ್ನು ಸರಿಯಾಗಿಯೇ ನಡೆಸಬೇಕೆಂದು ಬ್ರಹ್ಮಾಂಡಪುರಾಣವು ತಿಳಿಸಿಕೊಟ್ಟಿದೆ-

**ಪೂಜಾಕಾಲೇ ಚ ಹೋಮೇ ಚ ಸಾಯಂಕಾಲೇ ಸಮಾಹಿತಃ**

**ನಾಮಾನ್ಯುಚ್ಚಾರ್ಯ ವಿಧಿನಾ ಧಾರಯೇದೂರ್ಧ್ವಪುಂಡ್ರಕಮ್**

ಮೂರೂ ಹೊತ್ತಿನ ಜಪದಲ್ಲಿಯೂ ಊರ್ಧ್ವಪುಂಡ್ರಧಾರಣೆ ವಿಹಿತ. ದೇಹದಲ್ಲಿ ಪುಂಡ್ರವು ನಿಧಾನವಾಗಿ ಅಳಿಸಲ್ಪಡುವುದರಿಂದ ಸ್ನಾನ ಮಾಡಲಿ ಮಾಡದಿರಲಿ ಸಂಧ್ಯಾಂಗವಾಗಿ ಪುಂಡ್ರಧಾರಣೆ ಕಡ್ಡಾಯ –

**ತ್ರಿಸಂಧ್ಯಾಸು ಮೃದಾ ವಿಪ್ರೋ ಯಾಗಕಾಲೇ ವಿಶೇಷತಃ**

**ಶ್ರದ್ಧಾಳೂರೂರ್ಧ್ವಪುಂಡ್ರಂ ತು ಬಿಭೃಯಾದ್ ದ್ವಿಜಸತ್ತಮ** (ಹಾರೀತಸ್ಮೃತಿ)

ನನ್ನ ಪ್ರಸಾದಕ್ಕಾಗಿ, ಸುಖ ಪಡೆಯಲು, ರಕ್ಷೆಗಾಗಿ, ತೊಂದರೆಯನ್ನು ದೂರಗೊಳಿಸಲು – ಹೀಗೆ 4 ಕಾರಣಕ್ಕೆ ಊರ್ಧ್ವಪುಂಡ್ರವನ್ನು ಹಚ್ಚಬೇಕೆಂದು ನಾರಾಯಣನು ಚತುರ್ಮುಖನಿಗೆ ಹೇಳುವನು –

**ಮತ್ಪ್ರಿಯಾರ್ಥಂ ಶುಭಾರ್ಥಂ ವಾ ರಕ್ಷಾರ್ಥಂ ಚತುರಾನನ**

**ಮತ್ಪೂಜಾಹೋಮಕೇ ಚೈವ ಸಾಯಂಪ್ರಾತಃ ಸಮಾಹಿತಃ**

**ಮದ್ಭಕ್ತೋ ಧಾರಯೇನ್ನಿತ್ಯಂ ಊರ್ಧ್ವಪುಂಡ್ರಂ ಭಯಾಪಹಮ್**

(ಸ್ಕಾಂದಪುರಾಣ)

ಎಲ್ಲ ಜಾತಿಯವರಿಗೂ ಊರ್ಧ್ವಪುಂಡ್ರಧಾರಣೆ ಶಾಸ್ತ್ರದಲ್ಲಿ ಹೇಳಲಾಗಿದೆ. ಪುಂಡ್ರಧರಿಸಿದ ವ್ಯಕ್ತಿಯನ್ನು ಕಂಡರೆ ಪಾಪನಿವೃತ್ತಿಯನ್ನು ಪುರಾಣಗಳು ತಿಳಿಸಿವೆ –

**ಸರ್ವವರ್ಣೇಷು ಮದ್ಭಕ್ತಾಃ ಕುರ್ವೀರನ್ನೂರ್ಧ್ವಪುಂಡ್ರಕಮ್** (ಬ್ರಹ್ಮಾಂಡ)

**ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾ ಯದಿವೇತರಃ**

**ಶಂಖಮುದ್ರಾಂಕಿತತನುಃ ತುಳಸೀಮಂಜರೀಧರಃ**



**ಗೋಪೀಚಂದನಲಿಪ್ತಾಂಗೋ ದೃಷ್ಟಶ್ಚೇತ್ತದಘಂ ಕುತಃ** (ಕಾಶೀಖಂಡ)

ಸಾಮಾನ್ಯವಾಗಿ ಪಿತೃಕಾರ್ಯಗಳಂದು ಊರ್ಧ್ವಪುಂಡ್ರ ಧರಿಸದೆ ಕರ್ಮಗಳನ್ನು ನಡೆಸುವುದನ್ನು ಕೆಲವೆಡೆ ಕಾಣಬಹುದು. ಅದಕ್ಕವರು ಪ್ರಮಾಣವನ್ನು ನೀಡುತ್ತಾರೆ–

**ವಾಮಹಸ್ತೇ ತು ದರ್ಭಾಂಸ್ತು ಗೃಹೇ ರಂಗಾವಲಿಂ ತಥಾ**
**ಲಲಾಟೇ ತಿಲಕಂ ದೃಷ್ಟ್ವಾ ನಿರಾಶಾಃ ಪಿತರೋ ಗತಾಃ**

**ಹೇಮಾದ್ರಿ**ಯಲ್ಲಿ ಈ ವಿಷಯವನ್ನು ಚಿಂತನೆ ಮಾಡಿ ಒಂದು ನಿರ್ಣಯವನ್ನು ನೀಡಲಾಗಿದೆ. ಹಣೆಯಲ್ಲಿ ಗಂಧದಿಂದ ಹಾಕಿದ ಊರ್ಧ್ವಪುಂಡ್ರವನ್ನು ಮಾತ್ರವೆ ನಿಷೇಧಿಸಲಾಗಿದೆ. **ಆಶ್ವಲಾಯನ**ದ ಮಾತು ಹಾಗೆಯೇ ಇದೆ –

**ಪ್ರಾಕ್‌ಪಿಂಡದಾನಾತ್ ಗಂಧಾದ್ಯೈಃ ನಾಲಂಕುರ್ಯಾತ್ ಸ್ವವಿಗ್ರಹಮ್**

ಗೋಪೀಚಂದನದಿಂದ ಊರ್ಧ್ವಪುಂಡ್ರ ಹಾಕಿಕೊಂಡೇ ಪಿತೃಕಾರ್ಯ ನಡೆಸಬೇಕು. ಅಷ್ಟೆ ಅಲ್ಲದೆ ತಿರ್ಯಕ್‌ಪುಂಡ್ರ ತಪ್ಪು ಎಂದು ತಿಳಿಸಲು ಪುಂಡ್ರಧಾರಣೆ ನಿಷೇಧಿಸಿರುವುದು ಎಂಬ ಅಭಿಪ್ರಾಯವನ್ನು **ವೃದ್ಧಪರಾಶರ**ರು ನೀಡಿರುತ್ತಾರೆ–

**ಊರ್ಧ್ವಂ ಚ ತಿಲಕಂ ಕುರ್ಯಾತ್ ನ ಕುರ್ಯಾದ್ವೈ ತ್ರಿಪುಂಡ್ರಕಮ್**
**ನಿರಾಶಾಃ ಪಿತರೋ ಯಾಂತಿ ದೃಷ್ಟ್ವಾ ಚೈವ ತ್ರಿಪುಂಡ್ರಕಮ್**

ಆಚಾರರತ್ನದಲ್ಲಿ ಸತ್ಯವ್ರತಸ್ಮೃತಿ, ಚಂದ್ರೋದಯ, ಪಂಚಾಯತನ ಸಾರ, ಸೂತಸಂಹಿತೆ, ಶ್ರಾದ್ಧದೀಪಕಲಿಕಾ, ವಿಶ್ವಾದರ್ಶ, ಶ್ರಾದ್ಧಕಾಶಿಕಾ, ಬೃಹನ್ನಾರದೀಯ ಮುಂತಾದ ಅನೇಕಗ್ರಂಥಗಳ ಮಾತಿನಿಂದ ಪುಂಡ್ರದ ಬಗ್ಗೆ ವಿಮರ್ಶೆ ನಡೆಸಲಾಗಿದೆ. ಊರ್ಧ್ವಪುಂಡ್ರವನ್ನೇ ವಿಧಿಸಲಾಗಿದೆ.

**ಶ್ರಾದ್ಧೇ ಯಜ್ಞೇ ಜಪೇ ಹೋಮೇ ವೈಶ್ವದೇವೇ ಸುರಾರ್ಚನೇ**
**ಧೃತೋರ್ಧ್ವಪುಂಡ್ರಪೂತಾತ್ಮಾ ಮೃತ್ಯುಂ ಜಯತಿ ಮಾನವಃ** (ಕಾತ್ಯಾಯನ)

ದೇವರ ಪರಿವಾರದವರ ಮತ್ತು ದ್ವಾರಪಾಲರ ಲಕ್ಷಣವನ್ನು



ತಿಳಿಸುವಲ್ಲಿ **ಈಶ್ವರಸಂಹಿತೆಯು** ಪುಂಡ್ರಗಳನ್ನು ಧರಿಸಿರುವಂತೆ ಹೇಳಿದೆ. ಹೀಗೆಯೇ ದೇವಭಕ್ತರು ಎಲ್ಲರೂ ಪುಂಡ್ರಧಾರಣೆ ನಡೆಸುವಂತೆ ಇಲ್ಲಿ ಆದೇಶ ಏದೆ –

**ಶ್ವೇತಮೃತ್ಕಲ್ಪಿತೇನೈವ ಹ್ಯೂರ್ಧ್ವಪುಂಡ್ರೇಣ ಭೂಷಿತಾಃ**
**ಲಲಾಟಸ್ಥೇನ ಸರ್ವೇಽಪಿ ಕುಮುದಾದಿಗಣಾಧಿಪಾಃ**
**ಏವಮನ್ಯೇಽಪಿ ಭೂತಾದ್ಯಾಃ ಸರ್ವೇ ಪಾರಿಷದಾ ದ್ವಿಜಾಃ**
**ಏವಮಾವೃತಿದೇವಾಶ್ಚ ದ್ವಾರಸ್ಥಾಶ್ಚ ತಥೈವ ಹಿ**
**ಏವಂ ತದೀಯಾ ವಿಪ್ರಾಶ್ಚ ಕ್ಷತ್ರವಿಟ್ಶೂದ್ರಜಾತಯಃ**
**ಮೃದೈವ ವಾ ಚಂದನೇನ ಕಲ್ಪಿತೈರೂರ್ಧ್ವಪುಂಡ್ರಕೈಃ**
**ದ್ವಾದಶೈಶ್ಚ ಚತುರ್ಭಿರ್ವಾ ಭೂಷಿತಾಃ ಸ್ಯುಃ ಸದಾ ದ್ವಿಜಾಃ**

ನಾಲ್ಕಾರು ರೀತಿಯಲ್ಲಿ ತಿಲಕವನ್ನು ಸ್ಮೃತಿ ತಿಳಿಸಿದೆ. ಧರ್ಮವನ್ನು ಎತ್ತಿಹಿಡಿಯುವ ತಿಲಕವನ್ನೆ ಧರಿಸಬೇಕು. ತಾನೂ ಅಭಿವೃದ್ಧಿಯನ್ನು ಪಡೆಯಬೇಕು –

**ವೇಣುಪತ್ರದಳಾಕಾರಂ ವೈಷ್ಣವಂ ತಿಲಕಂ ಸ್ಮೃತಮ್**
**ಅರ್ಧಚಂದ್ರಂ ತಥಾ ಶೈವಂ ಶಾಕ್ತೇಯಂ ತಿರ್ಯಗುಚ್ಯತೇ**
**ಚತುಷ್ಕೋಣಮತಿಸ್ಪಷ್ಟಂ ವಿಕರಾಳಮುದಾಹೃತಮ್**
**ಪೈಶಾಚಂ ಬಿಂದುಸಂಯುಕ್ತಂ ತಿಲಕಂ ಧರ್ಮನಾಶನಮ್**

ಹಣೆ, ಎದೆ ಮತ್ತು ತೋಳುಗಳಲ್ಲಿ ಕ್ಷತ್ರಿಯರು ನಾಲ್ಕು ಪುಂಡ್ರಗಳನ್ನು ಧರಿಸಬೇಕು. ವೈಶ್ಯರು ಎದೆ ಹಾಗೂ ಹಣೆಯಲ್ಲಿ ಪುಂಡ್ರಗಳೆರಡನ್ನು ಧರಿಸ ಬೇಕು. ಹಣೆಯಲ್ಲಿ ಎಲ್ಲರೂ ಧರಿಸಬೇಕೆಂದು ಪದ್ಮಪುರಾಣ ಸಾಮಾನ್ಯವಾದ ಹೇಳಿಕೆಯನ್ನು ನೀಡಿದೆ. –

**ಊರ್ಧ್ವಪುಂಡ್ರಂ ಲಲಾಟೇ ತು ಸರ್ವೇಷಾಂ ಪ್ರಥಮಂ ಸ್ಮೃತಮ್**

**ಸ್ಕಾಂದಪುರಾಣದ** ಊರ್ಧ್ವಪುಂಡ್ರಸ್ತೋತ್ರದಲ್ಲಿ ಕ್ರಮವೂ ಇದೆ –

**ಗೋಪೀಚಂದನ ಪಾಪಘ್ನ ವಿಷ್ಣುದೇಹಸಮುದ್ಭವ**



**ಚಕ್ರಾಂಕಿತ ನಮಸ್ತುಭ್ಯಂ ಧಾರಣಾನ್ಮುಕ್ತಿದೋ ಭವ**
**ಸಂಧ್ಯಾದಿಕರ್ಮಾಣ್ಯಖಿಲಾನಿ ಸಂಘಸಂಧಾರಣಾರ್ಥಂ ತು ಫಲಾನಿ ಸದ್ಯಃ**
**ಪಾಪಕ್ಷಯಂ ಮೋಕ್ಷಕರಂ ಕರೇಣ ದ್ವಾರಾವತಿ ತ್ವಾಂ ಶರಣಂ ಪ್ರಪದ್ಯೇ**
**ವಾಮಹಸ್ತೇ ಜಲಂ ಕ್ಷಿಪ್ತ್ವಾ ಗಾಯತ್ರ್ಯಾ ಚಾಭಿಮಂತ್ರಿತಮ್**
**ಅತೋ ದೇವೇತಿ ಮಂತ್ರೇಣ ಮರ್ದಯೇದ್ಗೋಪಿಚಂದನಮ್**
**ತ್ರೀಣಿ ಪದಾ ನಮಸ್ಕೃತ್ಯ ತದ್ವಿಷ್ಣೋರಿತಿ ಧಾರಯೇತ್**

ಮುಖ್ಯವಾಗಿ ವಿಷ್ಣುಸೂಕ್ತ ಪಠನವನ್ನಿಲ್ಲಿ ತಿಳಿಸಲಾಗಿದೆ. ವಿಷ್ಣುಷಡಕ್ಷರ ಮಂತ್ರವನ್ನಾದರೂ ಹೇಳಬೇಕು. ವಿಷ್ಣುಮಂತ್ರಪಠನವನ್ನು ಶ್ರೀವೈಷ್ಣವಾಹ್ನಿಕಪದ್ಧತಿಯಲ್ಲಿ ಹೇಳಲಾಗಿದೆ.

ಊರ್ಧ್ವಪುಂಡ್ರ ಇಲ್ಲದ ಮುಖ, ದೇಹ ಅಮಂಗಳವೆಂದು ಪುರಾಣಗಳು ಮತ್ತೆ ಮತ್ತೆ ಹೇಳಿವೆ-

**ಸರ್ವೇ ಭವಂತಿ ವಿಫಲಾ ಊರ್ಧ್ವಪುಂಡ್ರಂ ವಿನಾ ಕೃತಾಃ**
**ದ್ರಷ್ಟವ್ಯಂ ನಾಸ್ಯ ಗಾತ್ರಂ ತತ್ ಸ್ಮಶಾನಸದೃಶಂ ಸ್ಮೃತಮ್** (ಭಾರ್ಗವಸ್ಮೃತಿ)

**ಪದ್ಮಪುರಾಣವು** ಐದು ರೀತಿಯಲ್ಲಿ ಊರ್ಧ್ವಪುಂಡ್ರಧಾರಣೆಯನ್ನು ತಿಳಿಸಿದೆ. ಇದರಿಂದ ಎಲ್ಲ ಬಯಕೆಗಳ ಲಾಭವನ್ನು ಹೇಳಿದೆ. ಸ್ನಾನದ ಆರಂಭದಲ್ಲಿ ತುಳಸಿಯ ಮೃತ್ತಿಕೆಯಿಂದ, ಮಿಂದ ಬಳಿಕ ಗೋಪಿಯಿಂದ, ಮಧ್ಯಾಹ್ನ ಪೂಜೆಯ ಅನಂತರದಲ್ಲಿ ದೇವರ ಗಂಧದಿಂದ, ಮತ್ತೆ ದೇವರ ಧೂಪಶೇಷಅಂಗಾರದಿಂದ, ಕೊನೆಗೆ ಹೋಮದ ಬಳಿಕ ಹುತಭಸ್ಮದಿಂದ – ಹೀಗೆ ಐದು ಬಾರಿ ಐದರಿಂದ ದಿನನಿತ್ಯ ಪುಂಡ್ರಧಾರಣೆ. ಏಕಾದಶಿಯಂದು ಗಂಧದಿಂದ ಮತ್ತು ಹುತಭಸ್ಮದಿಂದ ಪುಂಡ್ರಧಾರಣೆ ಇಲ್ಲವಾಗಿ ಮೂರರಿಂದ ಮಾತ್ರವೇ ಪುಂಡ್ರಧಾರಣೆ ಹೇಳಲಾಗಿದೆ –

**ಧಾರಯೇದೂರ್ಧ್ವಪುಂಡ್ರಾಣಿ ಸರ್ವಕಾಮಫಲಾಪ್ತಯೇ**
**ಗೋಪೀಚಂದನಪುಂಡ್ರಂ ತು ತುಳಸೀಮೂಲಮೃತ್ತಿಕಾಮ್**
**ದೇವಪ್ರಸಾದಗಂಧಂ ಚ ದೇವಸ್ಯಾಂಗಾರಧೂಪಕಮ್**



**ಹುತಶೇಷಂ ತಥಾ ಭಸ್ಮ ಇತ್ಯೇತತ್ಪಂಚಪುಂಡ್ರಕಮ್**

**ತ್ರಿಪುಂಡ್ರಂ ಪಂಚಪುಂಡ್ರಂ ವಾ ಧಾರಯೇದ್ದ್ವಿಜಸತ್ತಮಃ**

ಆಚಾರ್ಯಮಧ್ವರು **ಕೃಷ್ಣಾಮೃತಮಹಾರ್ಣವ**ದಲ್ಲಿ ಊರ್ಧ್ವಪುಂಡ್ರ ಧಾರಣೆಯ ಬಗ್ಗೆ ಕೆಲವು ಪುರಾಣವಚನಗಳನ್ನು ಸಂಗ್ರಹಿಸಿರುತ್ತಾರೆ. ಅಲ್ಲಿನ ಅಭಿಪ್ರಾಯವನ್ನು ಚಿಂತನೆಯನ್ನೂ ಶ್ರೀ ಬನ್ನಂಜೆ ಗೋವಿಂದಾಚಾರ್ಯರು ನಡೆಸಿರುವುದನ್ನು ಚಿಂತಕ ಸಾಧಕರಿಗಾಗಿ ಇಲ್ಲಿ ನೀಡಲಾಗಿದೆ–

ಪುರಾಣದಲ್ಲಿ ಎರಡೂ ಬಗೆಯ ವಚನಗಳಿವೆ. ಕೆಲವು ತಿರ್ಯಕ್ ಪುಂಡ್ರ ಧರಿಸಬೇಕು ಎನ್ನುತ್ತವೆ; ಕೆಲವು ಊರ್ಧ್ವಪುಂಡ್ರ ಧರಿಸಬೇಕು ಎನ್ನುತ್ತವೆ. ಕೆಲವು ತಿರ್ಯಕ್ ಪುಂಡ್ರ ಧರಿಸಬಾರದು ಎನ್ನುತ್ತವೆ; ಕೆಲವು ಊರ್ಧ್ವಪುಂಡ್ರ ಧರಿಸಬಾರದು ಎನ್ನುತ್ತವೆ!! ಹಾಗಿದ್ದರೆ ಸಾಧಕ ಏನು ಮಾಡಬೇಕು? ಅಡ್ಡನಾಮವೋ? ಉದ್ದನಾಮವೋ? ಪ್ರಮಾಣವಚನಗಳ ವಿರೋಧವನ್ನು ಪರಿಹರಿಸಲು ದಾರಿ ಏನು?

ಇದಕ್ಕೆ ಆಚಾರ್ಯಮಧ್ವರು ತಿರ್ಯಕ್ ಪುಂಡ್ರವನ್ನು ನಿಷೇಧಿಸುವ ಮತ್ತು ಊರ್ಧ್ವಪುಂಡ್ರವನ್ನು ವಿಧಿಸುವ ಪ್ರಮಾಣಗಳನ್ನು ಉಲ್ಲೇಖಿಸಿದ್ದಾರೆ. ಇದರ ಅರ್ಥ ಪ್ರಬಲಪ್ರಮಾಣಸಿದ್ಧವಾದ ಈ ವಚನಗಳಿಗೆ ಅನುಸಾರವಾಗಿ ತಿರ್ಯಕ್ ಪುಂಡ್ರಪರವಾದ ವಚನಗಳನ್ನು ಅನ್ಯಥಾ ಯೋಜಿಸಬೇಕು ಎಂದು.

ಏಕೆ ಹೀಗೆ? ತಿರ್ಯಕ್ ಪುಂಡ್ರದ ಪ್ರಮಾಣಗಳಿಗೆ ಅನುಸಾರವಾಗಿ ಊರ್ಧ್ವಪುಂಡ್ರದ ಪ್ರಮಾಣಗಳನ್ನೆ ಏಕೆ ಅನ್ಯಥಾ ಕೂಡಿಸಬಾರದು? ಈ ಪ್ರಶ್ನೆಗೆ ಉತ್ತರ ಸಿಗಬೇಕಾಗಿದ್ದರೆ ಪುಂಡ್ರಧಾರಣದ ಉದ್ದೇಶವನ್ನು ಮೊದಲು ತಿಳಿಯಬೇಕು. ಪುಂಡ್ರವನ್ನು ಏಕೆ ಧರಿಸಬೇಕು ಎನ್ನುವುದು ಮೊದಲ ಪ್ರಶ್ನೆ. ಹೇಗೆ ಧರಿಸಬೇಕು? ಅಡ್ಡವೋ.. ನೇರವೋ.. ಎನ್ನುವುದು ಅನಂತರದ ಮಾತು.

ನಾವು ಯಾವ ಸಂಪ್ರದಾಯದವರು ಎನ್ನುವುದನ್ನು ಸೂಚಿಸುವುದಕ್ಕಾಗಿ ದೇಹದಲ್ಲಿ ಧರಿಸುವ ಚಿಹ್ನೆಯನ್ನು ಪುಂಡ್ರ ಎನ್ನುತ್ತಾರೆ. ಅಡ್ಡವಾಗಿ ಧರಿಸುವ



ಚಿಹ್ನೆಯನ್ನು ತಿರ್ಯಕ್ ಪುಂಡ್ರವೆನ್ನುತ್ತಾರೆ. ನೇರ ಧರಿಸುವುದು ಊರ್ಧ್ವಪುಂಡ್ರ. ಇದು ರೂಢಿಯ ಅರ್ಥ. ಇದರ ಯೋಗಾರ್ಥ ಸುಂದರವಾಗಿದೆ. ಪುಂಡ ಎಂದರೆ ಸಂಸ್ಕೃತದಲ್ಲೂ ಪುಂಡತನವೆಂದೇ ಅರ್ಥ–**ಪುಡಿ ಹಿಂಸಾಗತ್ಯೋಃ** ಪುಂಡತನವನ್ನು ತೊಲಗಿಸಿ ಶಿಸ್ತಿಗೊಳಪಡಿಸುವಂಥದು ಪುಂಡ್ರ. **ಪುಂಡಂ ರಾಹಯತೀತಿ ಪುಂಡ್ರಮ್**. ಒಂದು ಸಂಪ್ರದಾಯಬದ್ಧತೆಯ, ಒಂದು ಶಿಸ್ತಿಗೊಳಪಡುವುದರ ಸಂಕೇತವೇ ಪುಂಡ್ರ.

ಬಹಳ ಮಂದಿ ತಿಳಿದುಕೊಂಡಿದ್ದಾರೆ – ಅಡ್ಡನಾಮ ಶೈವರ ಸಂಕೇತ ಮತ್ತು ಉದ್ದನಾಮ ವೈಷ್ಣವರ ಸಂಕೇತ ಎಂದು. ಇದು ತಪ್ಪು ಕಲ್ಪನೆ.

ಅಡ್ಡನಾಮ ಅಥವಾ ತಿರ್ಯಕ್‌ಪುಂಡ್ರ ಶೈವಧರ್ಮದ ಸಂಕೇತ ಹೌದು; ಆದರೆ ಉದ್ದನಾಮ ಅಥವಾ ಊರ್ಧ್ವಪುಂಡ್ರ ವೈಷ್ಣವರ / ಮಾಧ್ವರ ಸಂಕೇತ ಅಲ್ಲ. ಊರ್ಧ್ವಪುಂಡ್ರ ವೈದಿಕಧರ್ಮದ ಬದ್ಧತೆಯ ಸಂಕೇತ.

ಶಾರದಾತಿಲಕಕ್ಕೆ ವ್ಯಾಖ್ಯಾನ ಬರೆದ ರಾಘವಭಟ್ಟನೆಂಬ ವಿದ್ವಾಂಸ ಹೇಳುತ್ತಾನೆ – **ವೇದಾಧಿಕಾರಸಿದ್ಧ್ಯರ್ಥಮೂರ್ಧ್ವಪುಂಡ್ರಧಾರಣಮ್ । ತತಃ ಸ್ವಮತಚಿಹ್ನಧಾರಣಮ್**. ಅವನ ಪ್ರಕಾರ ಊರ್ಧ್ವಪುಂಡ್ರ ವೈಷ್ಣವರ ಚಿಹ್ನೆ ಅಲ್ಲ. ಸಮಸ್ತ ವೈದಿಕರ ಚಿಹ್ನೆ. ಶೈವರೂ ವೇದಾಧಿಕಾರ ಸಿದ್ಧಿಗಾಗಿ ಊರ್ಧ್ವಪುಂಡ್ರ ಧರಿಸಬೇಕು. ಅದರ ಮೇಲೆ ಮತಚಿಹ್ನೆಯಾಗಿ ತ್ರಿಪುಂಡ್ರ ಧರಿಸಬೇಕು.

ಆದ್ದರಿಂದಲೇ ಇವತ್ತಿಗೂ ಸ್ಮಾರ್ತರು ಉಪನಯನದಂದು ಗಾಯತ್ರೀ ಉಪದೇಶ ಮಾಡುವಾಗ ವಟುವಿಗೆ ಊರ್ಧ್ವಪುಂಡ್ರ ಹಚ್ಚುತ್ತಾರೆ.

ಇದರಿಂದ ತಿಳಿಯುವ ಸಂಗತಿ – ತ್ರಿಪುಂಡ್ರ ಅಥವಾ ತಿರ್ಯಕ್ ಪುಂಡ್ರ ಮತೀಯ ಚಿಹ್ನೆ; ಆದರೆ ಊರ್ಧ್ವಪುಂಡ್ರ ಮತೀಯ ಚಿಹ್ನೆ ಅಲ್ಲ; ವೈದಿಕತ್ವದ ಚಿಹ್ನೆ.

ಆದ್ದರಿಂದ ಪುರಾಣಗಳಲ್ಲಿ ಬಂದ ತಿರ್ಯಕ್ ಪುಂಡ್ರದ ಉಲ್ಲೇಖ ಆಯಾ ದರ್ಶನಗಳ ಸಂಪ್ರದಾಯದ ತಟಸ್ಥ ನಿರೂಪಣೆ ಮಾತ್ರ. ಇದನ್ನೇ ದರ್ಶನಭಾಷೆ ಎಂದು ಕರೆಯುತ್ತಾರೆ. ಊರ್ಧ್ವಪುಂಡ್ರ ವೈದಿಕಧರ್ಮವಾದ್ದ



ರಿಂದ ಆ ಉಲ್ಲೇಖದಲ್ಲಿ ಪುರಾಣಗಳಿಗೆ ತಾತ್ಪರ್ಯವಿದೆ. ಇದನ್ನೆ ಸಮಾಧಿಭಾಷೆ ಎನ್ನುತ್ತಾರೆ.

ಊರ್ಧ್ವಪುಂಡ್ರ ಏಕೆ ವೈದಿಕ ಚಿಹ್ನೆ? ಏಕೆಂದರೆ ಇದು ಅಧ್ಯಾತ್ಮಸಾಧನೆಯ ಚಿಹ್ನೆ. ಈ ಮಾತನ್ನು ವಿಷ್ಣುತೀರ್ಥರು ಸೂಚಿಸಿದ್ದಾರೆ –

**ಬ್ರಹ್ಮನಾಡೀಕ್ರಮೇಣ ತು**

ಹೊರಗೆ ನಾವು ಧರಿಸುವ ಪುಂಡ್ರ ಒಳಗಿನ ಶಕ್ತಿಸಂಚಾರದ ಸಂಕೇತ. ಮೂಲಾಧಾರದಿಂದ ಕುಂಡಲಿನೀಶಕ್ತಿ ಜಾಗೃತವಾಗಿ ಸಹಸ್ರಾರದಲ್ಲಿ ಹೆಡೆಯರಳಿ ನಿಲ್ಲುವುದರ ಸಂಕೇತವೆ ಊರ್ಧ್ವಪುಂಡ್ರ.

ನಾಭಿಯಿಂದ ಹೃದಯಕಮಲದ ತನಕ ಇಡಾ, ಪಿಂಗಳಾ ಮತ್ತು ಸುಷುಮ್ನಾ ಎಂಬ ಮೂರು ನಾಡಿಗಳನ್ನು ಊರ್ಧ್ವಮುಖವಾಗಿ ಜಾಗೃತಗೊಳಿಸುವ ಪ್ರಕ್ರಿಯೆಯ ಸಂಕೇತವೇ ಹೊಟ್ಟೆಯ ಮೂರು ಪುಂಡ್ರಗಳು. ಹೃದಯ ಕಮಲದ ವಿಕಾಸದ ಸಂಕೇತವೆ ಎದೆಯಲ್ಲಿ ಕಮಲದ ಆಕಾರದ ಪುಂಡ್ರ. ಹೃದಯದ ಅನಾಹತಚಕ್ರದಿಂದ ಕಂಠದ ವಿಶುದ್ಧಿಚಕ್ರದತ್ತ ಪಯಣ. ಅದರ ಸಂಕೇತವಾಗಿ ಕಂಠದ ನಾಕು ದಿಕ್ಕುಗಳಲ್ಲು ನಾಕು ಪುಂಡ್ರಗಳು. ಅಂಗೈಯ ಮೂಲಕ ನಿರಂತರ ಹರಿಯುತ್ತಿರುವ ಪ್ರಾಣಶಕ್ತಿಯನ್ನು ಊರ್ಧ್ವಮುಖಗೊಳಿಸುವುದಕ್ಕಾಗಿ ಎರಡೂ ತೋಳುಗಳ ತುದಿಯಲ್ಲು ಎರಡು ಪುಂಡ್ರಗಳು. ಹೀಗೆ ಮೇಲಕ್ಕೆ ಹರಿದು ಬಂದ ಶಕ್ತಿ ಆಜ್ಞಾಚಕ್ರದ ಕೇಂದ್ರವಾದ ಭ್ರೂಮಧ್ಯದಿಂದ ನೆತ್ತಿಯ ಮೇಲಣ ಸಹಸ್ರಾರಕ್ಕೆ ಏರಲು ಹಣೆಯ ಪುಂಡ್ರ. ಕುಂಡಲಿನೀ ಶಕ್ತಿಯನ್ನು ಮೂಲದಿಂದಲೆ ಜಾಗೃತಗೊಳಿಸಲು ಬೆನ್ನಹಿಂದೆ ಕಶೇರುಕೆಯ ಮೂಲದಲ್ಲಿ ಒಂದು ಪುಂಡ್ರ.

ಇವು ದ್ವಾದಶ ಪುಂಡ್ರಗಳು. ಎಲ್ಲವೂ ಊರ್ಧ್ವಮುಖವಾಗಿರಬೇಕು. ಅದಕ್ಕೆಂದೆ ಊರ್ಧ್ವಪುಂಡ್ರಗಳು. ಈ ಹನ್ನೆರಡು ನಾಮಗಳ ಮೊದಲು ಮತ್ತು ಕೊನೆಯಲ್ಲಿ ನೆತ್ತಿಯ ಮೇಲೆ ಸಹಸ್ರಾರದ ಬಾಗಿಲನ್ನು ಜಾಗೃತಗೊಳಿಸಲು ಎರಡು ನಾಮಗಳಿಂದ ಸಂಪುಟೀಕರಣ.



ಹನ್ನೆರಡು ಪುಂಡ್ರಗಳಿಗೆ ಕೇಶವಾದಿ ದ್ವಾದಶಮೂರ್ತಿಗಳ ಮಂತ್ರ- **ಕೇಶವಾಯ ನಮಃ** ಇತ್ಯಾದಿ.

**ಓಂ ನಮೋ ಭಗವತೇ ವಾಸುದೇವಾಯ** ಎನ್ನುವ ದ್ವಾದಶಾಕ್ಷರ ಮಂತ್ರದಿಂದ ಆದ್ಯಂತಗಳಲ್ಲಿ ನೆತ್ತಿಯಲ್ಲಿ ಪುಂಡ್ರಧಾರಣ.

ಹೀಗೆ ಇದು ವೈದಿಕವಾದ ಅಧ್ಯಾತ್ಮದ ಸಾಧನೆಗೆ, ಅಂತರಂಗದ ಶಕ್ತಿಕೇಂದ್ರಗಳ ಜಾಗೃತಿಗೆ ಪೂರಕವಾದ ಪುಂಡ್ರಗಳಾದ್ದರಿಂದ ವೈದಿಕಪುಂಡ್ರಗಳು. ಒಳಗೆ ಶಕ್ತಿ ಊರ್ಧ್ವಮುಖವಾದಾಗ ಹೊರಗೆ ಅದಕ್ಕೆ ವಿರುದ್ಧ ದೆಸೆಯಲ್ಲಿ ತಿರ್ಯಕ್ ಪುಂಡ್ರವನ್ನು ಧರಿಸಿದರೆ, ಅದು ಅಂತರಂಗದ ಗತಿಗೆ ಪ್ರತಿರೋಧಿಯಾಗುವುದರಿಂದ ತಿರ್ಯಕ್ ಪುಂಡ್ರ ಅಥವಾ ತ್ರಿಪುಂಡ್ರ ಅವೈದಿಕ.

ಇದು ವಿಷ್ಣುತೀರ್ಥರು ಸೂಚಿಸಿದ ಪುಂಡ್ರರಹಸ್ಯ. ಪುರಾಣಗಳು ತಿರ್ಯಕ್ ಪುಂಡ್ರವನ್ನು ನಿಷೇಧಿಸಿದ್ದು ಇದಕ್ಕಾಗಿ; ಊರ್ಧ್ವಪುಂಡ್ರವನ್ನು ಪ್ರಶಂಸಿಸಿದ್ದು ಇದಕ್ಕಾಗಿ. ಇದು ಪುರಾಣಗಳ ಅಂತರಂಗ. ಇದರಲ್ಲಿ ಯಾವುದೇ ಮತದ ಬಗೆಗೆ ದ್ವೇಷಭಾವನೆಯಿಲ್ಲ. ಈ ಸಾಧನೆಯ ರಹಸ್ಯ ತಿಳಿದರೆ ತಿರ್ಯಕ್ ಪುಂಡ್ರಧಾರಿಗಳೂ ಊರ್ಧ್ವಪುಂಡ್ರವನ್ನೆ ಧರಿಸಿಯಾರು. ಬಾಹ್ಯ ಆವೇಶಗಳನ್ನು ತೊರೆದು ಅಂತರಂಗದ ಸಾಧನೆಗೆ ಅಣಿಯಾಗುವ ಸತ್ಯಾನ್ವೇಷಣೆಗಳಿಗೆ ಇದು ಆಚಾರ್ಯರ ಹೃದಯದ ಕರೆ. ಗೋಪಿಯ ಒಂದು ತುಂಡು ದಾನದಿಂದಲೇ ವಿಶೇಷ ಫಲವನ್ನು ತಿಳಿಸುತ್ತಾ ಗೋಪಿ ಹಚ್ಚಿಕೊಂಡವನು ಯಾರನ್ನಾದರೂ ಕಂಡರೂ ಆತನು ಪರಿಶುದ್ಧನಾಗುವುದರಲ್ಲಿ ಸಂಶಯವಿಲ್ಲ ಎನ್ನುವ ವ್ಯಾಸರ ಮಾತನ್ನು **ಕೃಷ್ಣಾಮೃತಮಹಾರ್ಣವ**ದಲ್ಲಿ ಮಧ್ವಾಚಾರ್ಯರು ಸಾದರಪಡಿಸಿದ್ದಾರೆ

**ಗೋಪೀಚಂದನಲಿಪ್ತಾಂಗೋ ಯಂ ಯಂ ಪಶ್ಯತಿ ಚಕ್ಷುಷಾ**
**ತಂ ತಂ ಶುದ್ಧಂ ವಿಜಾನೀಯಾತ್ ನಾತ್ರ ಕಾರ್ಯಾ ವಿಚಾರಣಾ**



# ಪಂಚಮುದ್ರೆ

ಸಾಮಾಜಿಕವಾಗಿ ಕೆಲವು ಸಂಸ್ಥೆಗಳಲ್ಲಿ ಸೇವೆಯ ಸಮಯದಲ್ಲಿ ಅಲ್ಲಿಯ ನಿಯಮದಂತೆ ಗುರುತುಚೀಟಿಯನ್ನೋ ಬಣ್ಣದ ಅಂಗಿಯನ್ನೋ ಟೊಪ್ಪಿ ಟೈಯನ್ನೋ ಬ್ಯಾಡ್ಜನ್ನೋ ಹಾಕುವುದನ್ನು ಕಾಣಬಹುದು. ಅದರಂತೆ ಜಪತಪಾನುಷ್ಠಾನಗಳಲ್ಲಿ ವಿಷ್ಣುಸಂಬಂಧಿಯಾದ ತನ್ನನ್ನು ಶಂಖಚಕ್ರಚಿಹ್ನೆಗಳಿಂದ ಅಲಂಕೃತನನ್ನಾಗಿಸಿಕೊಳ್ಳಬೇಕು. ವಾರ್ಷಿಕವಾಗಿ ತಪ್ತಮುದ್ರಾಧಾರಣೆ ಈ ಸೊಬಗನ್ನು ವಿಧಿಯನ್ನು ನೀಡಿದ್ದರೆ ನಿತ್ಯದಲ್ಲಿ ಗೋಪೀಚಂದನದಿಂದ ಶಂಖಚಕ್ರಾದಿಗಳ ಧಾರಣೆಯನ್ನು ಶಾಸ್ತ್ರಕಾರರು ತಿಳಿಸಿದ್ದಾರೆ.

**ಮುದ್ರಾಣಾಂ ಧಾರಣಂ ದೇವಿ ದ್ವಿವಿಧಂ ಪರಿಕೀರ್ತಿತಮ್**

**ತಾಪಯಿತ್ವಾ ಮೃದಾ ಚೈವ ಬ್ರಾಹ್ಮಣಸ್ಯ ವಿಶೇಷತಃ** (ವರಾಹಪುರಾಣ)

ತಪ್ತಮುದ್ರಾಧಾರಣೆಗೆ ಕೆಲವು ಪ್ರಮಾಣಗಳು ಇಲ್ಲಿವೆ –

**ಅತಪ್ತ ತನೂರ್ನ ತದಾಮೋ ಅಶ್ನುತೇ**

**ಶೃತಾಸ ಇದ್ವಹಂತಃ ತತ್ಸಮಾಶತ** (ಋಗ್ವೇದ)

**ಸಹೋವಾಚ ಯಾಜ್ಞವಲ್ಕ್ಯಃ । ತಸ್ಮಾತ್ತುಮಾನಾತ್ಮಹಿತಾಯ ಹರಿಂ ಭಜೇತ್**

**ಸುಶ್ಲೋಕಮೌಲೇರ್ವರ್ತ್ಮಾಣ್ಯಗ್ನಿನಾ ಸಂದಧತ ಇತಿ** (ಶತಪಥಬ್ರಾಹ್ಮಣ)

**ಪ್ರತದ್ವಿಷ್ಣೋ ಅಬ್ಜಚಕ್ರೇ ಸುತಪ್ತೇ**

**ಜನ್ಮಾಂಬೋಧೀ ತರ್ತ್ತವೇ ಚರ್ಷಣೀಂದ್ರಾಃ**

**ಮೂಲೇ ಬಾಹ್ವೋರ್ದಧತೇಽನ್ಯೇ ಪುರಾಣಾ**

**ಲಿಂಗಾನ್ಯಂಗೇ ತಪ್ತಾಯುಧಾನ್ಯರ್ಪಯಂತೇ** (ಸಾಮವೇದ)

**ಶಂಖಚಕ್ರಾಂಕನಂ ಕುರ್ಯಾತ್ ಬ್ರಾಹ್ಮಣೋ ಬಾಹುಮೂಲಯೋಃ**

**ಹುತಾಗ್ನಿನೈವ ಸಂತಪ್ಯ ಸರ್ವಪಾಪಾಪನುತ್ತಯೇ**

**ಅಗ್ನಿತಪ್ತಂ ಪವಿತ್ರಂ ಚ ಧ್ಯಾತ್ವಾ ವೈ ಭುಜಮೂಲಯೋಃ**

**ತ್ಯಕ್ತ್ವಾ ಯಮಪುರಂ ಘೋರಂ ಯಾತಿ ವಿಷ್ಣೋಃ ಪರಂ ಪದಮ್**

**ಅಗ್ನಿತಪ್ತೇನ ಚಕ್ರೇಣ ಬ್ರಾಹ್ಮಣೋ ಬಾಹುಮೂಲಯೋಃ**



ಅಂಕಯಿತ್ವಾ ಜಪನ್ಮಂತ್ರಂ ಸಂಸಾರಾನ್ಮೋಕ್ಷಮಶ್ನುತೇ
ಸುದರ್ಶನಂ ಧಾರಯಿತ್ವಾ ವಹ್ನಿತಪ್ತಂ ದ್ವಿಜೋತ್ತಮಃ
ತಾಪನೀಯವಿಧಾನೇನ ಪಂಚಕರ್ಮ್ಮಸು ಯೋಜಯೇತ್
ಹುತಾಗ್ನಿತಪ್ತಚಕ್ರೇಣ ಶರೀರಂ ಯಸ್ಯ ಚಿಹ್ನಿತಮ್
ತಸ್ಯ ತೀರ್ಥಾನಿ ಯಜ್ಞಾಶ್ಚ ವಸಂತಿ ನಾತ್ರ ಸಂಶಯಃ
ಶಂಖಚಕ್ರಗದಾಖಡ್ಗಶಾರ್ಙ್ಗಾದನ್ಯೈರ್ಹರೇರಪಿ
ನ ಲಕ್ಷಣೈರ್ದ್ದಹೇದಂಗಂ ನಾನ್ಯದಗ್ಧೋಽರ್ಹತಿ ಕ್ರಿಯಾಮ್
ಅಗ್ನಿಹೋತ್ರಂ ಯಥಾ ನಿತ್ಯಂ ವೇದಸ್ಯಾಧ್ಯಯನಂ ಯಥಾ
ಬ್ರಾಹ್ಮಣಸ್ಯ ತಥೈವೇದಂ ತಪ್ತಚಕ್ರಾದಿಧಾರಣಮ್ (ಪದ್ಮಪುರಾಣ)

ದಕ್ಷಿಣೇ ತು ಭುಜೇ ವಿಪ್ರೋ ಬಿಭೃಯಾದ್ವೈ ಸುದರ್ಶನಮ್
ಸವ್ಯೇ ತು ಶಂಖಂ ಬಿಭೃಯಾದಿತಿ ಬ್ರಹ್ಮವಿದೋ ವಿದುಃ (ಮಹೋಪನಿಷತ್)

ಧೃತೋರ್ಧ್ವಪುಂಡ್ರಃ ಕೃತಚಕ್ರಧಾರೀ (ಕಠವಲ್ಲೀ)
ಏಭಿರ್ವಯಮುರುಕ್ರಮಸ್ಯ ಚಿಹ್ನೈರಂಕಿತಾ ಲೋಕೇ ಸುಭಗಾ ಅಭೂಮ
(ಆಥರ್ವಣ)

ದೇವಾಸೋ ಯತ್ರ ವಿತನೇನ ಬಾಹುನಾ
ಸುದರ್ಶನೇನ ಪ್ರಯತಾಃ ಸ್ವರ್ಗ್ಗಮಾಯನ್
ಯೇನಾಂಕಿತಾ ಮನವೋ ಲೋಕಸೃಷ್ಟಿಂ
ವಿತನ್ವತೇ ಬ್ರಾಹ್ಮಣಾಸ್ತದ್ವಹಂತಿ (ಅಥರ್ವಪರಿಶಿಷ್ಟ)
ಚಕ್ರಂ ಬಿಭರ್ತ್ತಿ ವಪುಷಾಽಭಿತಪ್ತಂ
ಬಲಂ ದೇವಾನಾಮಮೃತಸ್ಯ ವಿಷ್ಣೋಃ
ಸ ಏತಿ ನಾಕಂ ದುರಿತಂ ವಿಧೂಯ
ಪ್ರಯಂತಿ ಯದ್ಯತಯೋ ವೀತರಾಗಾಃ (ಋಗ್ವೇದಖಿಲ)
ಸಹಸ್ರಾರೇಣ ನೇಮಿನಾ ತಪ್ತತನುಃ
ಬ್ರಹ್ಮಣಃ ಸಾಯುಜ್ಯಂ ಸಲೋಕತಾಮಾಪ್ನೋತಿ (ಮೈತ್ರಾಯಣೀಯಶಾಖಾ)



**ನಿಚಿಕ್ಷೇಪ ಸುಷಣಂ ಭಿದ್ಯಮಾನಂ ಮಧ್ಯೇ ಬಾಹುಮದಧತ್ಸುದರ್ಶನಮ್**

**ವಿಷ್ಣೋರಿದಂ ಭೂರಿದಂ ಭೂರಿತೇಜಃ ಪ್ರಧರ್ಷತಿ ದಿವಾನಕ್ತಂ ಬಿಭ್ಯಯುಸ್ತಜ್ಜನಾಸಃ**

(ಬೃಹದಾರಣ್ಯಕ)

**ಅಗ್ನಿನೈವ ತು ಸಂಯುಕ್ತಂ ಚಕ್ರಮಾದಾಯ ವೈ ದ್ವಿಜಃ**

**ದಾಹಯೇತ್ಸರ್ವವರ್ಣಾನಾಂ ಹರಿಸಾಲೋಕ್ಯಸಿದ್ಧಯೇ** (ಗರುಡಪುರಾಣ)

**ದ್ವಾದಶಾರಂ ತು ಷಟ್ಕೋಣಂ ವಲಯತ್ರಯಸಂಯುತಮ್**

**ಹರೇಃ ಸುದರ್ಶನಂ ತಪ್ತಂ ಧಾರಯೇತ್ತದ್ವಿಚಕ್ಷಣಃ** (ನಾರದಪಂಚರಾತ್ರ)

**ಹರಿಭಕ್ತಿವಿಲಾಸವು** ಪದ್ಮಪುರಾಣದಲ್ಲಿ ಬಂದಿರುವ ಹದಿನಾರು ರೀತಿಯ ವಿಷ್ಣುಭಕ್ತಿಯನ್ನು ತಿಳಿಸಿಕೊಡುವಲ್ಲಿ 1 ಮುದ್ರಾಧಾರಣೆ 2 ಊರ್ಧ್ವಪುಂಡ್ರಧಾರಣೆ 3 ನಾರಾಯಣಮಂತ್ರಸ್ವೀಕಾರದೀಕ್ಷೆ 4 ನಾರಾಯಣಜಪ 5 ಸೂರ್ಯಪ್ರತೀಕದಲ್ಲಿನ ನಾರಾಯಣಧ್ಯಾನ ಮತ್ತು 6 ತೀರ್ಥಪ್ರಾಶನ – ಈ ಆರು ಅಂಶಗಳನ್ನು ಆರಂಭದಲ್ಲಿಯೇ ಗುರುತಿಸಿದೆ. ಇವು ನಿತ್ಯಜಪದಲ್ಲಿವೆ.

**ಆದ್ಯಂ ತು ವೈಷ್ಣವಂ ಪ್ರೋಕ್ತಂ ಶಂಖಚಕ್ರಾಂಕನಂ ಹರೇಃ**

**ಧಾರಣಂ ಚೋರ್ಧ್ವಪುಂಡ್ರಾಣಾಂ ತನ್ಮಂತ್ರಾಣಾಂ ಪರಿಗ್ರಹಃ**

**ಅರ್ಚನಂ ಚ ಜಪೋ ಧ್ಯಾನಂ ತನ್ನಾಮಸ್ಮರಣಂ ತಥಾ**

**ಕೀರ್ತನಂ ಶ್ರವಣಂ ಚೈವ ವಂದನಂ ಪಾದಸೇವನಮ್**

**ತತ್ಪಾದೋದಕಸೇವಾ ಚ ....**

ಶಂಖಚಕ್ರಗಳ ಜತೆಗೆ ಗದಾಪದ್ಮಗಳ ಧಾರಣೆಯೂ ಚತುರ್ವಿಧ ಪುರುಷಾರ್ಥಪ್ರಾಪ್ತಿಯನ್ನು ಪ್ರತಿನಿಧಿಸಿದೆ. ನಾರಾಯಣನಾಮ ಮುದ್ರಾಧಾರಣೆಯಿಂದ ದೇಹ ಪವಿತ್ರವಾಗಿ ನಾರಾಯಣ ನಾಮೋಚ್ಚಾರಣೆಗೆ ನಾರಾಯಣನ ಪೂಜಾದಿಗಳಿಗೆ ಯೋಗ್ಯವೆನಿಸುವುದು.

ಮಗುವಿಗೆ ಹುಟ್ಟಿದ ಐದನೆಯ ದಿನದಲ್ಲಿ ಪಂಚ ಆಯುಧ – ಆಭರಣಗಳ ಧಾರಣೆಯನ್ನು ಸೂರ್ಯಸಿದ್ಧಾಂತದಲ್ಲಿ ಹೇಳಿದ್ದಾರೆ. ಖಡ್ಗಪದ್ಮಾದಿ ಇತರ ಭಗವದಾಯುಧಧಾರಣೆಗಳನ್ನೂ ಶಾಸ್ತ್ರಕಾರರು ಅಲ್ಲಲ್ಲಿ ತಿಳಿಸಿಕೊಟ್ಟಿದ್ದರೂ



ಪ್ರಧಾನವಾಗಿ ವಿಷ್ಣುವಿನ ಶಂಖಚಕ್ರಗದಾಪದ್ಮಕತ್ತಿಬಿಲ್ಲುಗಳನ್ನು ನಿತ್ಯದಲ್ಲಿಯೂ ಧರಿಸುವುದು ಮುಖ್ಯವೆನಿಸಿದೆ. ಅನೇಕ ದೀಕ್ಷೆಗಳಲ್ಲಿ ಇದು ಬಾಹ್ಯದೀಕ್ಷೆಯೆಂದು ವಿಷ್ಣುರಹಸ್ಯದ ಮಾತು –

ನಾಮಚಿಹ್ನಾದಿನಾ ದೇಹೇ ವಹ್ನಿನಾ ವಾ ಮೃದಾಂಕನಮ್
ಸಾ ಬಾಹ್ಯಾ ಪ್ರೋಚ್ಯತೇ ದೀಕ್ಷಾ ಹ್ಯಜ್ಞಾನಾಂ ಜ್ಞಾನಿನಾಮಪಿ

ಉಳಿದ ದೀಕ್ಷೆಯಲ್ಲಿ ಮುಖ್ಯವಾಗಿ ಮಂತ್ರದೀಕ್ಷೆ ಅಂದರೆ ಮಂತ್ರೋಪದೇಶ. ಇದರ ಬಗ್ಗೆಯೂ ತಂತ್ರತಿಲಕದಲ್ಲಿ ಸ್ಪಷ್ಟತೆಯಿದೆ –

ಶಿಷ್ಯೇಚ್ಛಾಮಂತ್ರತತ್ತ್ವಜ್ಞೋ ಮೇಧಾವೀ ನಿಯತಃ ಶುಚಿಃ
ಗುರುಃ ಶಿಷ್ಯಂ ಸಮಾಲೋಕ್ಯ ಭಕ್ತಿಯುಕ್ತಸ್ಯ ದೀಕ್ಷಯೇತ್
ಚಾಕ್ಷುಷೀ ಸ್ಪರ್ಶದೀಕ್ಷಾ ಚ ಮಂತ್ರದೀಕ್ಷಾ ಚ ಭಾಷಿಕಾ
ಶಾಸ್ತ್ರೀ ಚ ಯೋಗದೀಕ್ಷಾ ಚ ಹೌತ್ರೀತ್ಯಾದಿರನೇಕಧಾ
ಚಕ್ಷುರ್ನ್ನಿಮೀಲ್ಯ ಯತ್ತತ್ತ್ವಂ ಧ್ಯಾತ್ವಾ ಶಿಷ್ಯಂ ಸಮೀಕ್ಷಯೇತ್
ಪಾಪಬಂಧವಿಮೋಕ್ಷಾಯ ದೀಕ್ಷೇಯಂ ಚಾಕ್ಷುಷೀ ಸ್ಮೃತಾ
ತಪ್ತಾಭ್ಯಾಂ ಶಂಖಚಕ್ರಾಭ್ಯಾಂ ಅಂಕನಂ ಬಾಹುಮೂಲಯೋಃ
ಹಸ್ತಂ ನಿಧಾಯ ಶಿರಸಿ ಸ್ಪರ್ಶದೀಕ್ಷಾ ಉದಾಹೃತಾ
ತತ್ತ್ವೇ ಚಿತ್ತಂ ಸಮಾಧಾಯ ದ್ಯೋತಿತೇ ಸ್ವರತೇಜಸಾ
ಗುರುರುಚ್ಚಾರಯೇನ್ಮಂತ್ರಂ ಮಂತ್ರದೀಕ್ಷಾ ಹ್ಯುದಾಹೃತಾ
ಉಚ್ಚರೇನ್ಮನಸಾ ಮಂತ್ರಾನ್ ಸಾ ದೀಕ್ಷಾ ಭಾಷಿಕಾ ಸ್ಮೃತಾ

ಮುದ್ರೆ ಧರಿಸದೆ ನಿತ್ಯ ಮಾಡಿದ ಕರ್ಮ ನಿಷ್ಫಲವೆಂದು ವಾಸಿಷ್ಠಸ್ಮೃತಿ ಪದ್ಮಪುರಾಣದ ವಚನವನ್ನು ಸಾರಿದೆ–

ಅಧೃತ್ವಾ ವಿಧಿವಚ್ಚಕ್ರಂ ಯದಿ ಕರ್ಮ್ಮ ಸಮಾಚರೇತ್
ನಿಷ್ಫಲಂ ತು ಭವೇತ್ತಸ್ಯ ಇಷ್ಟಾಪೂರ್ತ್ತಂ ದ್ವಿಜೋತ್ತಮಃ

ಕರ್ಮಾಧಿಕಾರಸಿದ್ಧಿಗೆ ಚಕ್ರಾದಿಧಾರಣೆಯನ್ನು ಪದ್ಮಪುರಾಣ ಹೇಳಿದೆ–

ಶ್ರೌತಸ್ಮಾರ್ತಾದಿಸಿದ್ಧ್ಯರ್ಥಂ ಮಂತ್ರಸಿದ್ಧ್ಯೈ ತಥೈವ ಚ



**ಹರೇಃ ಪೂಜಾಧಿಕಾರಾರ್ಥಂ ಚಕ್ರಂ ಧಾರ್ಯಂ ವಿಧಾನತಃ**

ಭಗವದಾಯುಧಧಾರಣೆಗಳಿಂದ ಪಾಪಬುದ್ಧಿ ಬಾರದು. ಪಾಪ ನಿರ್ಮುಕ್ತನೂ ಆಗುವವನು ಎಂಬಲ್ಲಿ **ಬೃಹನ್ನಾರದೀಯಪುರಾಣ** ಚಕ್ರಾದಿಗಳನ್ನು ಗೋಪೀಚಂದನದಿಂದ ಧರಿಸುವಂತೆ ಹೇಳಿದೆ –

**ಶಂಖಚಕ್ರಾದಿಕಂ ಧಾರ್ಯಂ ಗೋಪೀಚಂದನಮೃತ್ಸ್ನಯಾ**

**ನಾರಾಯಣಾಯುಧೈಃ ಸಮ್ಯಕ್ ಚಿಹ್ನಿತೋ ಯಸ್ಯ ವಿಗ್ರಹಃ**

**ಪಾಪಕೋಟಿಯುತಸ್ಯಾಪಿ ತಸ್ಯ ಕಿಂ ಕುರುತೇ ಯಮಃ**

ವಿಶೇಷವಾದ ವಿಷ್ಣುಸಾನ್ನಿಧ್ಯಕ್ಕೆ ವೈಷ್ಣವತ್ವ ಸಂಪಾದನೆಗೆ ಮುದ್ರಾಧಾರಣೆ ಮುಖ್ಯವೆಂದು ಶಾಸ್ತ್ರಗಳು ಹೇಳಿವೆ. **ಮಹಾಸಂಹಿತೆ**ಯಲ್ಲಿನ ಮಾತಿನಿಂದ ಆಚಾರ್ಯ ಮಧ್ವರು ಆಯುಧಗಳ ಲಕ್ಷಣವನ್ನು ಬಹಿರಂಗಗೊಳಿಸಿದ್ದಾರೆ. ಚಕ್ರ – ಸಾವಿರ ಅರಗಳು,. ಶಂಖ – ನೂರು ಆವರ್ತ. ಗದೆ – ಎಂಟು ಭುಜ. ಪದ್ಮ – ಸಾವಿರ ಎಸಳು.

**ದ್ವಾತ್ರಿಂಶಲ್ಲಕ್ಷಣೈಃ ಸಮ್ಯಕ್ ಯುಕ್ತಾ ವಾಯುತ್ವಯೋಗ್ಯಕಾಃ**

**ಸಹಸ್ರಾರೇಣ ಚಕ್ರೇಣ ಚಿಹ್ನಿತಾ ದಕ್ಷಿಣೇ ಕರೇ**

**ಗದಯಾಽಷ್ಟಾಶ್ರಯಾ ಚೈವ ಶತಾವರ್ತೇನ ಕಂಬುನಾ**

**ವಾಮೇ ಕರೇ ತಥಾಽಬ್ಜೇನ ಸಹಸ್ರದಳಶೋಭಿನಾ** (ಬೃಹದಾರಣ್ಯಕಭಾಷ್ಯ)

ಎಲ್ಲೆಡೆಯ ಮುದ್ರಾಧಾರಣೆಯ ಮಾತುಗಳು ಇಲ್ಲಿವೆ –

**ಶ್ರೀಕೃಷ್ಣಚಕ್ರಾಂಕವಿಹೀನಗಾತ್ರಃ**

**ಶ್ಮಶಾನತುಲ್ಯಃ ಪುರುಷೋಽಥ ನಾರೀ** (ನಾರದೀಯಪುರಾಣ)

**ಪ್ರತಪ್ತಶಂಖಚಕ್ರಾಭ್ಯಾಂ ಅಂಕಿತಃ ಪಂಕ್ತಿಪಾವನಃ** (ಸೌಪರ್ಣ)

**ಅಂಕಯೇಚ್ಛಂಖಚಕ್ರಾಭ್ಯಾಂ ನಾಮ ಕುರ್ಯಾಚ್ಚ ವೈಷ್ಣವಮ್** (ಶಾಂಡಿಲ್ಯಸ್ಮೃತಿ)

**ಶಂಖಚಕ್ರಾಂಕಿತೇ ನಿತ್ಯಂ ಭುಜಯುಗ್ಮೇ ವಸುಂಧರೇ** (ವರಾಹ)

**ವೇದೋಕ್ತಂ ಕರ್ಮ್ಮ ಕುರ್ವಂತಿ ತದ್ಭಕ್ತಾನ್ ವಿದ್ಧಿ ವೈಷ್ಣವಾನ್**

**ಶಂಕಚಕ್ರಾಂಕಿತಾ ಯೇ ಚಾಪ್ಯೂರ್ಧ್ವಪುಂಡ್ರಧರಾಶ್ಚ ಯೇ** (ಭವಿಷ್ಯೋತ್ತರ)



ಏಕಾದಶ್ಯುಪವಾಸಶ್ಚ ಶಂಖಚಕ್ರಾದಿಧಾರಣಮ್

ತುಳಸ್ಯಾ ಪೂಜನಂ ವಿಷ್ಣೋಃ ತ್ರಿತಯಂ ವೈಷ್ಣವಂ ಸ್ಮೃತಮ್ (ವೃ.ಹಾ)

ಚಕ್ರಾಂಕಿತಶರೀರೇ ವೈ ಸರ್ವೇ ದೇವಾಃ ಸವಾಸವಾಃ

ಹರಿಶ್ಚಾಪಿ ಶ್ರಿಯಾ ಸಾಕಂ ವಸಂತಿ ಪರಯಾ ಮುದಾ (ಬ್ರಹ್ಮವೈವರ್ತ)

ಸಂಸ್ಕಾರಾಣಾಂ ಚ ಸರ್ವೇಷಾಂ ಆದ್ಯಂ ಚಕ್ರಾದಿಧಾರಣಮ್ (ಹಾರೀತ)

ದ್ವಿವಿಧಂ ವೈಷ್ಣವಂ ಪ್ರೋಕ್ತಂ ಬಾಹ್ಯಮಾಭ್ಯಂತರಂ ತಥಾ

ಶಂಖಚಕ್ರಾದಿಭಿರ್ಬಾಹ್ಯಂ ಆಂತರಂ ಮುಕ್ತರಾಗತಾ (ಬ್ರಹ್ಮಪುರಾಣ)

ವೈಷ್ಣವೋ ದ್ವಿವಿಧಃ ಪ್ರೋಕ್ತೋ ಬಾಹ್ಯಮಾಭ್ಯಂತರಸ್ತಥಾ

ಶಂಖಚಕ್ರಾದಿಕಂ ಬಾಹ್ಯಂ ಆಂತರಂ ವೀತರಾಗತಾ (ಶೇಷಸಂಹಿತಾ)

ಯಜ್ಞೋಪವೀತವದ್ಧಾರ್ಯಾಃ ಶಂಖಚಕ್ರಾದಯಸ್ಸದಾ

ಬ್ರಾಹ್ಮಣಸ್ಯ ವಿಶೇಷೇಣ ವೈಷ್ಣವಸ್ಯ ವಿಶೇಷತಃ (ವಾಮನ)

ಚಕ್ರಾದಿಧಾರಣಂ ಪುಣ್ಯಂ ವಿಷ್ಣುಸಂಬಂಧವೇದನಮ್ (ಮಾರ್ಕಂಡೇಯ)

ಚಕ್ರಾಂಕಿತಃ ಸದಾ ತಿಷ್ಠೇತ್ ಮದ್ಭಕ್ತಃ ಪಾಂಡುನಂದನ (ಮಹಾಭಾರತ)

ಚಕ್ರಂ ವಾ ಶಂಖಚಕ್ರೇ ವಾ ತಥಾ ಪಂಚಾಯುಧಾನಿ ವಾ

ಧಾರಯಿತ್ವಾಽಥ ವಿಪ್ರೋ ವೈ ಬ್ರಹ್ಮಕರ್ಮ್ಮ ಸಮಾರಭೇತ್ (ನೃಸಿಂಹಪ್ರಾಸಾದ)

ತಸ್ಮಾತ್ಸುದರ್ಶನಂ ಚಕ್ರಂ ವಿಧಿನಾ ಧಾರಯೇದ್ದ್ವಿಜಃ

ಕರ್ಮ್ಮಸಿದ್ಧ್ಯೈ ವಿಶೇಷೇಣ ತದ್ದಾಸ್ಯೈಕಫಲಾಪ್ತಯೇ (ಅತ್ರಿಸ್ಮೃತಿ)

ಗೋಪೀಚಂದನತೋ ನಿತ್ಯಂ ಶಂಖಚಕ್ರಗದಾದಿಕಮ್

ಧೃತ್ವಾ ಕರ್ಮ್ಮಾಣಿ ಕುರ್ವೀತ ಅನ್ಯಥಾ ನಿಷ್ಫಲಂ ಭವೇತ್ (ಯಮಸ್ಮೃತಿ)

ಗೋಪೀಚಂದನತೋ ನಿತ್ಯಂ ಲಾಂಛಿತೋ ಯಸ್ಯ ವಿಗ್ರಹಃ

ಶಂಖಚಕ್ರಗದಾಪದ್ಮೈಃ ದೇಹೇ ತಸ್ಯ ಸದಾ ಹರಿಃ

ವಿಧಿನಾ ಶಂಖಚಕ್ರಾದಿಧಾರಣಂ ಚೋರ್ಧ್ವಪುಂಡ್ರಕಮ್ (ವಾರಾಹ)

ಕೃಷ್ಣನಾಮಾಂಕಿತಾಂ ಮುದ್ರಾಂ ಅಷ್ಟಾಕ್ಷರಸಮನ್ವಿತಾಮ್

ಶಂಖಾಯುಧಾನಿ ಸಂಯುಜ್ಯ ಕವಚಂ ಯಸ್ಯ ವೈಷ್ಣವಮ್ (ಸ್ಕಾಂದ)



ಚಕ್ರಾದಿಧಾರಣಾದ್ಬ್ರಹ್ಮನ್ ವಿಷ್ಣೋರ್ಲ್ಲೋಕೇ ಮಹೀಯತೇ (ಗಾರುಡ)

ಅಶ್ವಮೇಧಸಹಸ್ರಸ್ಯ ವಾಜಪೇಯಶತಸ್ಯ ಚ

ಯತ್ಫಲಂ ಶ್ರೂಯತೇ ತಚ್ಚ ಮದೀಯಾಯುಧಧಾರಣಾತ್ (ವಿಹಗೇಶ್ವರಸಂಹಿತಾ)

ಬ್ರಹ್ಮೇಂದ್ರದೇವತಾಃ ಸರ್ವಾಃ ವಿಷ್ಣುಮುದ್ರಾಸಮಾಶ್ರಯಾತ್

ಸರ್ವತೋ ವಿಜಯಂ ಪ್ರಾಪ್ತಾಃ (ಪಾದ್ಮ)

ಅನಿಷ್ಟಾನಾಂ ನಿವೃತ್ತ್ಯರ್ಥಂ ಏಕಾಂತ್ಯಾಯ ಜಗತ್ಪತೇಃ

ಸಿದ್ಧ್ಯರ್ಥಂ ಕರ್ಮಣಾಂ ಚೈವ ಕಾರ್ಯಂ ಚಕ್ರಾದಿಲಾಂಛನಮ್ (ಭರದ್ವಾಜಸಂಹಿತಾ)

ಸರ್ವಪಾಪವಿನಾಶಂ ಹಿ ರಥಾಂಗಸ್ಯ ಹಿ ಧಾರಣಮ್

ಸರ್ವಕಲ್ಯಾಣಮಿಹ ಚ ಪಶ್ಚಾತ್ಸಂಸಾರನಾಶನಮ್ (ಸನತ್ಕುಮಾರಸಂಹಿತಾ)

ಕಲೌ ನಾರದ ತಿಲಕಂ ಗೋಪೀಚಂದನಸಂಭವಮ್

ಯೇ ಕುರ್ವಂತಿ ನರಶ್ರೇಷ್ಠಾ ನ ತೇಷಾಂ ದುರ್ಗ್ಗತಿಃ ಕ್ವಚಿತ್

ಶಂಖಂ ಚೈವ ತಥಾ ಚಕ್ರಂ ದಕ್ಷಿಣೇ ಚಾಪಸವ್ಯಕೇ

ಹಸ್ತೇ ಧೃತ್ವಾ ವಿಶೇಷೇಣ ಮಹಾಪಾಪೈಃ ಪ್ರಮುಚ್ಯತೇ

ಊರ್ಧ್ವಪುಂಡ್ರಮೃಜುಂ ಸೌಮ್ಯಂ ಸಚಿಹ್ನಂ ಧಾರಯೇದ್ಯದಿ

ಸ ಚಂಡಾಲೋಽಪಿ ಶುದ್ಧಾತ್ಮಾ ಪೂಜ್ಯ ಏವ ಸದಾ ದ್ವಿಜೈಃ

ವಿಧಿನಾ ವೈಷ್ಣವಂ ಚಕ್ರಂ ಧಾರ್ಯಂ ಹಿ ಶ್ರುತಿಚೋದನಾತ್

ತಸ್ಮಾದ್ವೈ ವಿಧಿವದ್ಧಾರ್ಯಾಃ ಶಂಖಚಕ್ರಾದಿಹೇತಯಃ (ಪದ್ಮಪುರಾಣ)

ಯೇನ ದೇವಾಃ ಪವಿತ್ರೇಣ ಆತ್ಮಾನಂ ಪುನತೇ ಸದಾ

ತೇನ ಸಹಸ್ರಧಾರೇಣ ಪಾವಮಾನ್ಯಃ ಪುನಂತು ಮಾಮ್ (ಶ್ರುತಿ)

ಚಕ್ರಾದಿಧಾರಣಂ ಪುಂಸಾಂ ಪರಸಂಬಂಧವೇದನಮ್ (ಕೂರ್ಮಪುರಾಣ)

ಕೃಷ್ಣಚಕ್ರಾಂಕಿತಂ ಗಾತ್ರಂ ಪವಿತ್ರಮಿತಿ ವೈ ಶ್ರುತಿಃ

ಶಂಖಚಕ್ರಧರೋ ನಿತ್ಯಮೇಕದಂಡೀ ಚ ಭಿಕ್ಷುಕಃ

ಕಾಷಾಯವಸನೋ ನಿತ್ಯಂ ಸ ಹಂಸಃ ಸ ಉದಾಹೃತಃ (ಕಪಿಂಜಲಸಂಹಿತಾ)

ಚಕ್ರಾಂಕಿತಶರೀರಸ್ಯ ಗೃಹೇ ಮುಕ್ತಿಃ ಪ್ರಕೀರ್ತ್ತಿತಾ



ಕಪೋಲೇ ಶಂಖಚಕ್ರೇ ದ್ವೇ ಧಾರ್ಯೇ ವಿಷ್ಣೋಃ ಸದಾಯುಧೈಃ (ಸ್ಕಾಂದ)

ಚಕ್ರಾದಿ ಧಾರಯೇದ್ವಿಪ್ರೋ ಲಲಾಟೇ ಮಸ್ತಕೇ ಭುಜೇ

ಪಾತಕಾದಿವಿಶುದ್ಧ್ಯರ್ಥಂ ಭವರೋಗಪ್ರಶಾಂತಯೇ (ಆದಿತ್ಯಪುರಾಣ)

ಸಂವತ್ಸರೇಣ ಯತ್ಪಾಪಂ ಮನಸಾ ಕರ್ಮ್ಮಣಾ ಕೃತಮ್

ತತ್ಸರ್ವಂ ನಶ್ಯತೇ ತೇಷಾಂ ಸಕೃಚ್ಚಕ್ರಾಂಕದರ್ಶನಾತ್

ಸುದರ್ಶನೇನ ಯಸ್ಯಾಂಗಂ ಲಾಂಛಿತಂ ತು ಭವೇತ್ಸದಾ

ದೇಹೇ ತಸ್ಯ ಭವೇನ್ನಿತ್ಯಂ ಶ್ರಿಯಾ ಸಹ ಹರಿಃ ಸ್ವಯಮ್

ಆಯುಧೈರ್ವೈಷ್ಣವೈಃ ಸರ್ವೈಃ ತಾಪಿತೈಃ ಸ್ವತನುಂ ಯದಿ

ಚಿಹ್ನಯೇದ್ವೈಷ್ಣವೋ ಯಸ್ತು ಸ ಯಾತಿ ಪರಮಾಂಗತಿಮ್ (ಬ್ರಹ್ಮಾಂಡ)

ಮದ್ಭಕ್ತೋ ಧಾರಯೇನ್ನಿತ್ಯಂ ಊರ್ಧ್ವಪುಂಡ್ರಂ ವಿನಾ ತು ತತ್

ಯತ್ಕರ್ಮ್ಮ ಕುರುತೇ ತಸ್ಯ ತತ್ಸರ್ವಂ ನಿಷ್ಫಲಂ ಭವೇತ್

ಅಂಕನಂ ಶಂಖಚಕ್ರಾಭ್ಯಾಂ ತುಳಸೀದಳಭಕ್ಷಣಮ್

ಯಃ ಕುರ್ಯಾತ್ ನಿಯತೋ ಭಕ್ತ್ಯಾ ಸ ಯಾತಿ ಪರಮಾಂ ಗತಿಮ್

ನಾನ್ಯದೇವಂ ನಮಸ್ಕುರ್ಯಾತ್ ನಾನ್ಯದೇವಗೃಹಂ ವಿಶೇತ್

ಚಕ್ರಾಂಕಿತಃ ಸದಾ ತಿಷ್ಠೇತ್ ಮದ್ಭಕ್ತಃ ಪಾಂಡುನಂದನ (ಸತ್ಯವ್ರತ)

ದದ್ಯಾದ್ಗೋಭೂಹಿರಣ್ಯಾದಿ ಚಕ್ರಾಂಕಿತಭುಜಾಯ ವೈ

ಯದ್ದತ್ತಂ ಚಕ್ರಹೀನಾಯ ತತ್ಸರ್ವಮಸುರಾಯ ವೈ (ಸಂಗ್ರಹ)

ಪಾದ್ಮೋತ್ತರಖಂಡದಲ್ಲಿ ಋಷಿಗಳಿಗೆ ಶಿವನ ಮಾತು ಹೀಗಿದೆ – ನನ್ನ ತಂದೆ ಚತುರ್ಮುಖನಿಗೆ ನಾರಾಯಣನು ಅಷ್ಟಾಕ್ಷರ ಮಂತ್ರವನ್ನು ಉಪದೇಶಿಸುವ ಮೊದಲು ವೈಷ್ಣವದೀಕ್ಷೆಯಾಗಿ ಚಕ್ರಾದಿಮುದ್ರಾಧಾರಣೆಯನ್ನು ನಡೆಸಿರುತ್ತಾನೆ. ಹಾಗೆ ನನಗೂ ನನ್ನ ಅಪ್ಪ ವಿಧ್ಯುಕ್ತವಾಗಿ ದೀಕ್ಷೆಯನ್ನು ಮಂತ್ರೋಪದೇಶವನ್ನು ಮಾಡಿರುವನು. ನೀವೂ ಮುದ್ರೆಯನ್ನು ಧರಿಸಿರಿ. ನಾರಾಯಣನನ್ನು ನೆನೆಯಿರಿ –

ಏವಮುಕ್ತ್ವಾ ವಿಧಾತಾರಂ ದೇವದೇವೋ ಹರಿಃ ಪಿತಾ

ಸ್ವಚಕ್ರೇಣಾಂಕಯಿತ್ವಾ ತು ತಸ್ಮೈ ಮಂತ್ರಂ ದದೌ ಸ್ವಯಮ್



ಸರ್ವಲೋಕೇಶ್ವರೋ ದೇವೋ ಬ್ರಹ್ಮಾ ಮಮ ಪಿತಾ ಪ್ರಭುಃ
ಮಮಾಪಿ ವಿಧಿವನ್ಮಂತ್ರಂ ಸ ದದೌ ಮುನಿಸತ್ತಮಾಃ
ತಸ್ಮಾದ್ಯೂಯಂ ಮುನಿಶ್ರೇಷ್ಠಾಃ ಧಾರಯಿತ್ವಾ ಸುದರ್ಶನಮ್
ನಾರಾಯಣಪದದ್ವಂದ್ವಂ ಗಚ್ಛಧ್ವಂ ಶರಣಂ ದ್ವಿಜಾಃ

ಸ್ಕಾಂದಪುರಾಣದಲ್ಲಿ ಹೇಳಿದಂತೆ ವರಾಹಪುರಾಣದಲ್ಲಿ ವೈಷ್ಣವದೀಕ್ಷೆಯ ಅಂಗವಾಗಿ ನಡೆಸುವ ತಪ್ತಮುದ್ರಾಧಾರಣೆಯ ವಿಧಿಯನ್ನು ವಿವರವಾಗಿಯೇ ನೀಡಿದ್ದಾರೆ. ಇದು ಮುದ್ರಾಹೋಮವೆನಿಸಿದೆ. ಇದು ರಕ್ಷೆಗಾಗಿ ಮಾಡುವ ಸುದರ್ಶನ ಹೋಮವಲ್ಲ. ದೀಕ್ಷೆಗಾಗಿ ಮಾಡುವ ಆಯುಧ ಹೋಮ. ಅಂದರೆ ವಿಷ್ಣುಹೇತಿ ಹೋಮ. ಇಲ್ಲಿ ಚಕ್ರಹೋಮ ಎಂದು ಕರೆದಿದ್ದಾರೆ. ಅದರ ಕೆಲವು ಪ್ರಯೋಗಪದ್ಧತಿಗಳು ಇಲ್ಲಿವೆ –

ಸ್ವಗೃಹ್ಯೋಕ್ತವಿಧಾನೇನ ವಹ್ನಿಮಾದಾಯ ವೈ ಬುಧಃ
ಚಕ್ರಾದ್ಯಾಯುಧಮಂತ್ರೇಣ ಜುಹುಯಾತ್ ಷೋಡಶಾಹುತೀಃ
ಮೂಲಮಂತ್ರೇಣ ಸೂಕ್ತೇನ ಪೌರುಷೇಣ ತತಃ ಪರಮ್
ಜಾತವೇದಸಮಂತ್ರೇಣ ಪಶ್ಚಾದಷ್ಟೋತ್ತರಂ ಶತಮ್
ಹುತ್ವಾ ಮಹಾವ್ಯಾಹೃತಿಭಿಃ ಚಕ್ರಾದೀನ್ ತತ್ರ ತಾಪಯೇತ್
ಸಹ್ಯಾನ್ ಸುತಪ್ತಾನ್ ಗುರುಣಾ ಮಂತ್ರವದ್ಧಾರಯೇದ್ಬುಧಃ

ಪದ್ಮಪುರಾಣದಲ್ಲಿ –

ಸ್ನಾಪ್ಯ ಪಂಚಾಮೃತೈಃ ಶುದ್ಧೈಃ ಅರ್ಚಯೇತ್ಪುರತೋ ಮಮ
ತಸ್ಮಿನ್ನಗ್ನೌ ಕ್ಷಿಪೇಚ್ಚಕ್ರಂ ಶಂಖಂ ಚ ದ್ವಿಜಸತ್ತಮಃ
ಷಡಕ್ಷರೇಣ ಜುಹುಯಾತ್ ಆಜ್ಯಂ ವಿಂಶತಿಸಂಖ್ಯಯಾ
ಪ್ರತಪ್ತಂ ಚಕ್ರಮಾದಾಯ ಮಂತ್ರೇಣೈವಾಂಕಯೇದ್ಗುರುಃ

ಪುರಾಣಗಳಲ್ಲಿ ಬಂದಂತೆಯೇ ಅನೇಕ ಸಂಹಿತೆಗಳಲ್ಲಿಯೂ ಈ ಬಗೆಯ ಹೋಮಪದ್ಧತಿಯು ಬಹಳವಾಗಿಯೇ ಬಂದಿವೆ.

ತದ್ಧಾರಣವಿಧಿಂ ವಕ್ಷ್ಯೇ ಮಹಾಪಾತಕನಾಶನಮ್



ಚಕ್ರಂ ಶಂಖಂ ಸಮಾರಾಧ್ಯ ಗಂಧಪುಷ್ಪಾದಿಭಿಃ ಶುಭೈಃ

ಅನವದ್ಯಂ ಚ ನೈವೇದ್ಯಂ ವಿನಿವೇದ್ಯ ಸ್ವಶಕ್ತಿತಃ

ತತಃ ಪಾವಕಮಭ್ಯರ್ಚ್ಯ ಜುಹುಯಾದ್ವೈಷ್ಣವಾಹುತೀಃ

ವೇದಾದಿಭಿಸ್ತಥಾ ಮಂತ್ರೈಃ ಸ್ರುಚೈವ ಜುಹುಯಾತ್ ಘೃತಮ್

ಚಕ್ರಂ ಚ ಪಾಂಚಜನ್ಯಂ ಚ ತಸ್ಮಿನ್ನಗ್ನೌ ವಿನಿಕ್ಷಿಪೇತ್

ಅಗ್ನಿನೈವ ತು ಸಂಯುಕ್ತಂ ಚಕ್ರಮಾದಾಯ ಮಾಮಕಮ್

ದಕ್ಷಿಣಂ ಬಾಹುಮೂಲಂ ಚ ದಹೇದ್ವಿಗತಸಾಧ್ವಸಃ

ಅಥವಾಽನ್ಯೇನ ಕೇನಾಪಿ ವೈಷ್ಣವೇನ ಮಹಾತ್ಮನಾ (ವಿಹಗೇಶ್ವರಸಂಹಿತಾ)

ತೇಷು ತಾಪವಿಧಾನಂ ತು ಶೃಣುಷ್ವ ಕಮಲೇಕ್ಷಣೇ

ಅಷ್ಟಾಕ್ಷರೇಣ ಮಂತ್ರೇಣ ಗಾಯತ್ರ್ಯಾ ವಿಷ್ಣುಪೂರ್ವಯಾ

ತದ್ವಿಷ್ಣೋರಿತಿ ಮಂತ್ರೇಣ ಶತಮಷ್ಟೋತ್ತರಂ ಘೃತೈಃ

ಜುಹುಯಾಚ್ಚ ತತೋ ವಹ್ನೌ ಪೀಠಂ ಸಂಕಲ್ಪ್ಯ ದೇಶಿಕಃ

ಮಂತ್ರಾಭ್ಯಾಂ ಶಂಖಚಕ್ರಾಭ್ಯಾಂ ಪವಿತ್ರಂ ತೇತಿ ಮಂತ್ರತಃ

ನ ತೇ ವಿಷ್ಣೋ ಋಚಾ ಚಾಪಿ ಶತಮಷ್ಟೋತ್ತರಂ ತು ವಾ

ಅಷ್ಟಾವಿಂಶತಿವಾರಾನ್ವಾ ಘೃತೇನ ಜುಹುಯಾದ್ರಮೇ

ಸೂಕ್ತೇನ ಪೌರುಷೇಣಾಪಿ ಚರುಣಾ ಷೋಡಶಾಹುತೀಃ

ತತಶ್ಚಕ್ರಂ ಚ ಶಂಖಂ ಚ ತಾಪಯಿತ್ವಾ ಯಥಾಕ್ರಮಮ್

ಭಗವಂತಂ ಪುರಾ ಧ್ಯಾತ್ವಾ ತತೋ ಗುರುಪರಂಪರಾಮ್

ತತಶ್ಚಕ್ರಂ ಚ ಶಂಖಂ ಚ ತನ್ಮಂತ್ರಾಭ್ಯಾಂ ಚ ತಾಪಯೇತ್

ಅಂಕಯೇಚ್ಚಕ್ರರಾಜೇನ ಹ್ಯೂರ್ಧ್ವಭಾಗೇ ಗುರೂತ್ತಮಃ

ತತೋ ವಾಮೇಽಪಿ ಶಂಖೇನ ಹ್ಯಂಕಯೇನ್ಮಂತ್ರಮುಚ್ಚರನ್

ತತಶ್ಚಕ್ರಂ ಚ ಶಂಖಂ ಚ ಪಯಸಾಪ್ಯಭಿಷೇಚಯೇತ್

ಗುಡಾನ್ನಾದೀನಿ ಭಕ್ಷ್ಯಾಣಿ ಭೋಜ್ಯಾನಿ ವಿನಿವೇದಯೇತ್

ತತಸ್ತು ಮೂಲಮಂತ್ರೇಣ ಹುತ್ವಾ ಪೂರ್ಣಾಹುತಿಂ ಗುರುಃ (ಶ್ರೀಪ್ರಶ್ನಸಂಹಿತಾ)



**ವಿಷ್ಣೋರ್ನ್ನು ಕೇತಿ ಮಂತ್ರೇಣ ತಾಪಯಿತ್ವಾ ಸುದರ್ಶನಮ್**

**ಚರಣಂ ಪವಿತ್ರಮಿತಿ ಚ ತದ್ದ್ವಾಭ್ಯಾಮಭಿಮಂತ್ರಯೇತ್**

**ಪವಿತ್ರಂ ತೇ ವಿತತಮಿತಿ ಮುದ್ರಯೇದ್ದಕ್ಷಿಣೇ ಭುಜೇ** (ಸನಕಸ್ಮೃತಿ)

ಅಲ್ಲಿ ಹೋಮಮಧ್ಯದಲ್ಲಿಯೇ ಮುದ್ರಾಧಾರಣೆಯನ್ನು ತಿಳಿಸಿ ಸ್ವಿಷ್ಟಕೃದಾದಿಮುಂದೆ ಬ್ರಾಹ್ಮಣಭೋಜನಗಳನ್ನು ವಿಧಿಸಿದ್ದಾರೆ –

**ಹೋಮಶೇಷಂ ಸಮಾಪ್ಯಾಥ ವೈಷ್ಣವಾನ್ ಭೋಜಯೇತ್ತತಃ** (ಹಾರೀತ)

ಇದು ಏಕಾದಶಿಯಂದು ಅಲ್ಲ ಎನ್ನುವುದಕ್ಕೆ ಕಾಲವನ್ನೂ ಇಲ್ಲಿ ಪ್ರಮಾಣಗಳು ಕಲೆಹಾಕಿವೆ. ಸಂಸ್ಕಾರಕಾಲವನ್ನೂ ತಿಳಿಸಿವೆ –

**ಆಷಾಢೇ ಕಾರ್ತ್ತಿಕೇ ಮಾಸೇ ವೈಶಾಖೇ ಮಾರ್ಗ್ಗಶೀರ್ಷಕೇ**

**ಪುಷ್ಟಿಚಂದ್ರೇ ತಿಥೌ ತತ್ರ ದಶಮ್ಯಾದೌ ವಿಶೇಷತಃ**

**ಧಾರಯೇತ್ ತಪ್ತಚಕ್ರಂ ಚ ದಕ್ಷಿಣೇ ಬಾಹುಮೂಲಕೇ**

**ಸ್ತನೇ ಚ ಜಠರೇ ಚೈವ ದಕ್ಷೇ ಶಂಖಂ ತು ಸವ್ಯತಃ**

**ಭುಜಮೂಲೇ ಸ್ತನೇ ಚೈವ ಧಾರಯೇತ್ ಪಂಚಮುದ್ರಿಕಾಃ**

**ನಾಮಕರ್ಮ್ಮಣಿ ಬಾಲಾನಾಂ ತಥೋಪನಯನೇಽಪಿ ಚ**

**ದೀಕ್ಷಾಕಾಲೇ ಸ ವಿಜ್ಞೇಯಃ ಪಿತುಃ ಕುಲಗುರೋರಪಿ**

**ದೀಕ್ಷಾಂ ಗೃಹ್ಣೀತ ಯತ್ನೇನ ವಿಷ್ಣುಪ್ರೀಣನಹೇತವೇ**

**ಪಶುಪುತ್ರಾದಿಕಂ ಸರ್ವಂ ಗೃಹೋಪಕರಣಾನಿ ಚ**

**ಅಂಕಯೇತ್ ಶಂಖಚಕ್ರಾಭ್ಯಾಂ ನಾಮ ಕುರ್ಯಾಚ್ಚ ವೈಷ್ಣವಮ್** (ಮನು)

ಇದು ಎಲ್ಲರಿಗೂ ಶುಭದಾಯಕ –

**ಚಕ್ರಶಂಖಾಂಕಕವಚಂ ಶರೀರೇ ಯಸ್ಯ ತಿಷ್ಠತಿ**

**ನಾಶುಭಂ ವಿದ್ಯತೇ ತಸ್ಯ ಗೃಹಪುತ್ರಾದಿಕಸ್ಯ ಚ**

ಕೇವಲ ಜಪಾದಿ ಅನುಷ್ಠಾನ ನಿರತನಷ್ಟೆ ಚಕ್ರಾದಿಧಾರಣೆ ಮಾಡುವುದಲ್ಲ. ಮನೆಯ ಎಲ್ಲರೂ ಶಂಖಚಂಕ್ರಾಂಕಿತರಾಗಬೇಕು. ಮನೆಯ ದನಕರುಗಳೂ ಗೋಡೆ ಕಂಬಗಳೂ ಸಹ ಭಗವಧಾಯುಧ ಚಿಹ್ನಿತಗಳಾಗಿರಬೇಕೆಂದು



ಪಂಚರಾತ್ರ (ಪರಮೇಶ್ವರಸಂಹಿತಾ) ಪುರಾಣಗಳು (ಅಗ್ನಿ, ಬ್ರಹ್ಮಾಂಡ, ಪದ್ಮ) ಅಭಿಪ್ರಾಯಪಟ್ಟಿವೆ–

**ಲಾಂಛಿತವ್ಯೋ ಯಥಾಯೋಗ್ಯಂ ಶಂಖಚಕ್ರಾದಿಲಕ್ಷಣೈಃ**

**ವಿಷ್ಣುಚಕ್ರಾಂಕಿತಂ ಕುರ್ಯಾತ್ ಆತ್ಮನೋ ಬಾಹುಮೂಲಯೋಃ**

**ಕಳತ್ರಾಪತ್ಯಭೃತ್ಯೇಷು ಪಶ್ವಾದಿಷು ಚ ಸಂಪದಿ**

**ಚಕ್ರಾದ್ಯೈರಂಕಯೇದ್ದಾತ್ರಂ ಆತ್ಮೀಯಸ್ಯಾಖಿಲಸ್ಯ ಚ**

ಎಲ್ಲ ಜಾತಿಯವರಿಗೂ ಸ್ತ್ರೀಯರಿಗೂ ಶಂಖಚಕ್ರಾದಿಗಳ ಧಾರಣೆಯಲ್ಲಿ ಅಧಿಕಾರವಿದೆ–

**ಶಂಖಚಕ್ರಾಂಕನಂ ಕುರ್ಯಾತ್ ಆತ್ಮನೋ ಬಾಹುಮೂಲಯೋಃ**

**ಸರ್ವಾಶ್ರಮೇಷು ವಸತಾಂ ಸ್ತ್ರೀಣಾಂ ಚ ಶ್ರುತಿಚೋದನಾತ್** (ವಸಿಷ್ಠಸ್ಮೃತಿ)

**ಕರ್ಮಾಧಿಕಾರಸಿದ್ಧ್ಯರ್ಥಂ ಮಂತ್ರದೀಕ್ಷಾವಿಧೌ ತಥಾ**

**ಉದ್ವಾಹಸಮಯೇ ಸ್ತ್ರೀಣಾಂ ಪುಂಸಾಂ ಚೈವೋಪನಾಯನೇ**

**ಚಕ್ರಸ್ಯ ಧಾರಣಂ ಪ್ರೋಕ್ತಂ ಮಂತ್ರೈಃ ಪಂಚಾಯುಧಾನಿ ಚ** (ಪರಾಶರಸಂಹಿತಾ)

**ಚತುರ್ಣ್ಣಾಮಪಿ ಸಾಮಾನ್ಯಂ ವಿಷ್ಣೋಶ್ಚಕ್ರಸ್ಯ ಧಾರಣಮ್** (ಹಾರೀತ)

ಭಗವದಾಯುಧ ಧರಿಸದವರು ಅಸುರರೆಂದು ಶ್ರುತಿವಾಕ್ಯವಿದೆ ಎಂದು ಹಾರೀತರು ತಿಳಿಸುವರು–

**ಅನಾಯುಧಾಸೋ ಅಸುರಾ ಅದೇವಾ ಇತಿ ವೈ ಶ್ರುತಿಃ**

ವಿಷ್ಣುರಹಸ್ಯದಲ್ಲಿ ಹಯಗ್ರೀವರೂಪನಾದ ಭಗವಂತನಿಂದ ಚತುರ್ಮುಖನಿಗೆ ಹೇಳಲ್ಪಟ್ಟ ಮಾತುಗಳಲ್ಲಿ ವೈಷ್ಣವದೀಕ್ಷೆಯ ವಿಷಯ ವಿಸ್ತಾರವಾಗಿ ಬಂದಿದೆ. ಪಂಚರಾತ್ರಸಂಹಿತೆಯ ವಕ್ತೃ ತಾನೆಂದು ಭಗವಂತನು ಅಲ್ಲಿ ಹೇಳಿದ್ದಾನೆ. ಎಲ್ಲರಿಗೂ ವೈಷ್ಣವಚಿಹ್ನೆಯ ಧಾರಣೆಯನ್ನು ಹೇಳಿದ್ದಾನೆ. ಅಲ್ಲಿನ ಕೆಲವು ಮಾತುಗಳು ಪುಂಡ್ರಧಾರಣೆಯ ವಿಷಯದಲ್ಲಿ ದೀಕ್ಷೆಯ ವ್ಯಾಪ್ತಿಯಲ್ಲಿ ಮುದ್ರಾಧಾರಣೆಯ ಸಂದರ್ಭದಲ್ಲಿ ಬಂದಿರುವವುಗಳು –

**ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾಽಹಂ ಸ್ವಯಮೇವ ಹಿ**



ದೀಕ್ಷಾ ಹಿ ದ್ವಿವಿಧಾ ಪ್ರೋಕ್ತಾ ಬಾಹ್ಯಾಭ್ಯಂತರಭೇದತಃ
ಜ್ಞಾನಿನಾಮುಭಯಂ ತತ್ರ ಬಾಹ್ಯೋ ವಾಜ್ಞಾನಿನಾಂ ಭವೇತ್

ಅಯಂ ಸರ್ವೇಷ್ಟದಾತಾ ಮೇ ಸರ್ವಾನಿಷ್ಟನಿವಾರಕಃ
ಸರ್ವೋತ್ಕೃಷ್ಟೋಽಯಮೇವೈಕಃ ತದೀಯೋಽಹಂ ಸ ಮೇ ಪತಿಃ
ಇತಿ ಜ್ಞಾನಂ ನಿಶ್ಚಿತಂ ಯತ್ ಸಾ ದೀಕ್ಷಾಭ್ಯಂತರಾ ಮತಾ

ನಾಮಚಿಹ್ನಾದಿನಾ ದೇಹೇ ವಹ್ನಿನಾ ವಾ ಮೃದಾಂಕನಮ್
ಸಾ ಬಾಹ್ಯಾ ಪ್ರೋಚ್ಯತೇ ದೀಕ್ಷಾ ಹ್ಯಜ್ಞಾನಾಂ ಜ್ಞಾನಿನಾಮಪಿ
ಶಿಶವಃ ಪಶವೋಂತಾನಿ ಪಾತ್ರಾಣ್ಯಾಭ್ಯಂತರಾಣಿ ಚ
ರಥಧ್ವಜಪತಾಕಾದಿ ಸರ್ವಮಜ್ಞಾನಮುಚ್ಯತೇ
ಏತೇಷಾಂ ಹಿ ಮದೀಯತ್ವಜ್ಞಾಪನಾಯ ಲಿಖೇತ್ತ್ವಯಮ್

ಪಾದ್ಮಪುರಾಣವು ಚಕ್ರಶಂಖಗದಾಮುದ್ರೆಗಳ ಜತೆ ಖಡ್ಗಶಾರ್ಙ್ಗಗಳ ಧಾರಣೆಯನ್ನು ತಿಳಿಸಿದೆ. ಪಂಚಾಯುಧಗಳ ಧಾರಣೆ ಪಂಚರಾತ್ರಕ್ಕೆ ಹೆಚ್ಚು ಸಮ್ಮತವಾದದ್ದು. ಭಾರದ್ವಾಜಸಂಹಿತೆಯಲ್ಲಿ ತೋಳುಗಳಲ್ಲಿ ಶಂಖಚಕ್ರಗಳ ಧಾರಣೆಯನ್ನು ಹೇಳಿ ಹಣೆಯಲ್ಲಿ ಗದಾಚಿಹ್ನೆಯನ್ನು ತಲೆಯಲ್ಲಿ ಶಾರ್ಙ್ಗವನ್ನೂ ಹೃದಯದಲ್ಲಿ ಖಡ್ಗವನ್ನೂ ಧರಿಸಲು ಹೇಳಲಾಗಿದೆ. ರಾಮಾರ್ಚನಚಂದ್ರಿಕಾದಲ್ಲಿ ವಸಿಷ್ಠ-ವ್ಯಾಸಸ್ಮೃತಿಗಳ ಮಾತನ್ನು ಸಂಗ್ರಹಿಸಲಾಗಿದೆ-

ಲಲಾಟೇ ತು ಗದಾ ಧಾರ್ಯಾ ಮೂರ್ಧ್ನಿ ಚಾಪಃ ಶರಸ್ತಥಾ
ನಂದಕಶ್ಚೈವ ಹೃನ್ಮಧ್ಯೇ ಶಂಖಚಕ್ರೇ ಭುಜದ್ವಯೇ

ಪುರಾಣಗಳು ಇದನ್ನು ಸೂಚಿಸಿವೆ-

ಭುಜದ್ವಯೇ ಶಂಖಚಕ್ರೇ ಮೂರ್ಧ್ನಿ ಶಾರ್ಙ್ಗಶರೌ ತಥಾ
ಲಲಾಟೇ ತು ಗದಾ ಧಾರ್ಯಾ ಹೃದಯೇ ಖಡ್ಗಮೇವ ಚ
ಏವಂ ಧಾರ್ಯಾಣಿ ಪಂಚೈವ ವಿಷ್ಣುಭಕ್ತೈರ್ಮುಮುಕ್ಷುಭಿಃ
ಅಥವಾ ಭುಜಯೋಶ್ಚಕ್ರಶಂಖೌ ಚೈವ ಸುಲಕ್ಷಣೌ
ಮೃದಾ ವೈ ಧಾರಣಂ ಕುರ್ಯಾತ್ ಪ್ರತ್ಯಹಂ ಸ್ನಾನತಃ ಪರಮ್



ಸರ್ವಾಯುಧಾನಿ ಚಾಂಗೇಷು ತಿಲಕಾನಾಂ ತಥೋಪರಿ

ಮೂರ್ಧ್ನಿ ಶಾರ್ಙ್ಗಶರೌ ತಥಾ, ಹೃದಯೇ ಖಡ್ಗಮೇವ ಚ (ವರಾಹಪುರಾಣ)

ಲಲಾಟೇ ತು ಗದಾ ಧಾರ್ಯಾ ಮೂರ್ಧ್ನಿ ಚಾಪಂ ಶರಸ್ತಥಾ

ನಂದಕಂ ಚೈವ ಹೃನ್ಮಧ್ಯೇ ಶಂಖಚಕ್ರೇ ಭುಜದ್ವಯೇ (ಸ್ಕಾಂದ)

ತಿಲಕಂ ಚ ತತಃ ಕುರ್ಯಾತ್ ಭಾಲೇ ಸುಷ್ಠು ಗದಾಕೃತಿ

ನಂದಕಂ ಹೃದಯೇ ಶಂಖಚಕ್ರೇ ಚೈವ ಭುಜದ್ವಯೇ

ಶಾರ್ಙ್ಗಬಾಣಂ ಮಸ್ತಕೇ ಚ ವಿನ್ಯಸೇತ್ಕ್ರಮಶಃ ಸುಧೀಃ (ನಾರದೀಯ)

ಧರ್ಮರಾಜ ಮಾಡಿದ ಶ್ರೀಕೃಷ್ಣನ ಸ್ತುತಿಯಲ್ಲಿ ಐದು ಆಯುಧಗಳ ಚಿಂತನೆ –

ಪಂಚಭೂತ ನಮಸ್ತೇಽಸ್ತು ಪಂಚಾಯುಧ ನಮೋನಮಃ (ಮಹಾಭಾರತ)

ಮಹಾಭಾರತದಲ್ಲಿ ವಿಷ್ಣುಸಹಸ್ರರೂಪನಾಮಸ್ತೋತ್ರದ ಬಳಿಕ ಬರುವ ಸ್ತುತಿಯಲ್ಲಿ ಪಂಚಾಯುಧಗಳಿವೆ. ಅದಕ್ಕನುಗುಣವಾಗಿ ಪಂಚಭಗವನ್ನಾಮಗಳಿವೆ, ಅಂದರೆ ಭಗವಂತನ ಐದು ರೂಪಗಳಿವೆ.

ವನಮಾಲೀ ಗದೀ ಶಾರ್ಙ್ಗೀ ಶಂಖೀ ಚಕ್ರೀ ಚ ನಂದಕೀ

ಶ್ರೀಮಾನ್ ನಾರಾಯಣೋ ವಿಷ್ಣುಃ ವಾಸುದೇವೋಽಭಿರಕ್ಷತು

ಭಗವಂತನ ಸಾವಿರರೂಪಗಳಲ್ಲಿ ಈ ಐದು ರೂಪಗಳು ಸಾಲಾಗಿ ಕೊನೆಯಲ್ಲಿ ಬಂದಿವೆ –

ಶಂಖಭೃತ್ ನಂದಕೀ ಚಕ್ರೀ ಶಾರ್ಙ್ಗಧನ್ವಾ ಗದಾಧರಃ

ನಾರದೀಯಪುರಾಣದಲ್ಲಿ ಇವರ ಭಾರ್ಯೆಯರು –

ಚಕ್ರೀ ಜಯಾಯುತಃ ಪಶ್ಚಾತ್ ಗದೀ ದುರ್ಗಾಸಮನ್ವಿತಃ

ಶಾರ್ಙ್ಗೀ ತು ಪ್ರಭಯಾ ಯುಕ್ತಃ ಖಡ್ಗೀ ಯುಕ್ತಸ್ತು ಸತ್ಯಯಾ

ಶಂಖೀ ಚಂಡಾಸಮಾಯುಕ್ತೋ .......

ಬೃಹದ್ಬ್ರಹ್ಮಸಂಹಿತೆಯು ಕ್ಷೀರಾಬ್ಧಿಶಯನನ ಬಣ್ಣನೆಯಲ್ಲಿ –

ಶಂಖಚಕ್ರಗದಾಶಾರ್ಙ್ಗಖಡ್ಗಹಸ್ತೈರ್ವಿಭೂಷಿತಃ

ದಿವ್ಯಭೂಷಾಯುಧಾಕ್ರೀಡಯಾನಪಾರಿಷದೈರ್ವೃತಃ



**ಮಾರ್ಕಂಡೇಯಪುರಾಣದಲ್ಲಿ ಸಪ್ತಮಾತೆಯರಲ್ಲಿ ವೈಷ್ಣವಿಯ** ರೂಪವಿಶೇಷವನ್ನು ಹೇಳುವಾಗ ಈ ಪಂಚಾಯುಧಗಳನ್ನೇ ತಿಳಿಸಿದ್ದಾರೆ.

**ತಥೈವ ವೈಷ್ಣವೀ ಶಕ್ತಿಃ ಗರುಡೋಪರಿ ಸಂಸ್ಥಿತಾ**

**ಶಂಖಚಕ್ರಗದಾಶಾರ್ಙ್ಗಖಡ್ಗಹಸ್ತಾಭ್ಯುಪಾಯಯೌ**

**ಹಾರೀತಸ್ಮೃತಿಯು** ಸ್ಪಷ್ಟವಾಗಿಯೇ ಪಂಚಾಯುಧಧಾರಣೆಯ ಸ್ಥಾನವನ್ನು ತಿಳಿಸಿದೆ. ಇದು ನಿತ್ಯಮಾತ್ರವಲ್ಲದೆ ವಾರ್ಷಿಕವಾಗಿಯೂ ತಪ್ತಮುದ್ರಾಧಾರಣೆಯಲ್ಲಿ ಬಳಸುವಂತೆ ಹೇಳಲ್ಪಟ್ಟಿದೆ. ಮುದ್ರಾಧಾರಣೆಯ ಬಳಿಕ ಆಯುಧಹೋಮವನ್ನು ಪೂರ್ತಿಗೊಳಿಸಿ ಅಂದರೆ ಸ್ವಿಷ್ಟಕೃದಾದಿ ನಡೆಸಿ ಮುಂದೆ ಪೂಜಾಸಮಾಪನ ಕಾಲದಲ್ಲಿ ಆಯುಧಗಳಿಗೂ ಪೂಜೆಯಾಗಿ ವೈಷ್ಣವರನ್ನು ಅಂದರೆ ಅಂದು ವಿಷ್ಣುಹೇತಿಗಳನ್ನು ಧರಿಸಿಕೊಂಡವರನ್ನೆಲ್ಲ ದೇವರ ಪ್ರಸಾದದಿಂದ ಉಣಬಡಿಸಿ ಸಂತೋಷಗೊಳಿಸಬೇಕೆಂದು ಹೇಳಲಾಗಿದೆ. ಸ್ಮೃತಿಯಲ್ಲಿ ವಿಮಲ ಶಬ್ದದಿಂದ ಪವಿತ್ರವನ್ನು ಎಲ್ಲ ಆಯುಧಗಳಲ್ಲಿಯೂ ಪವಿತ್ರನಾಮದ ಚಕ್ರದ ಸನ್ನಿಧಾನವನ್ನು ನೆನಪಿಸಲಾಗಿದೆ

**ದಕ್ಷಿಣೇ ತು ಭುಜೇ ಚಕ್ರಂ ವಾಮಾಂಸೇ ಶಂಖಮೇವ ಚ**

**ಗದಾಂ ಚ ಫಾಲಮಧ್ಯೇ ತು ಹೃದಯೇ ನಂದಕಂ ತಥಾ**

**ಮಸ್ತಕೇ ತು ತಥಾ ಶಾರ್ಙ್ಗಂ ಅಂಕಯೇತ್ ವಿಮಲಂ ತಥಾ**

**ಹೋಮಶೇಷಂ ಸಮಾಪ್ಯಾಥ ವೈಷ್ಣವಾನ್ ಭೋಜಯೇತ್ತತಃ**

**ತತ್ವಕಣಿಕಾದಲ್ಲಿ** ಪಂಚರಾತ್ರವಚನವನ್ನು ಉದ್ಧರಿಸಿ ಭಗವದಾಯುಧ ಧಾರಣೆಯ ಮಹತ್ವವನ್ನು ತಿಳಿಸಲಾಗಿದೆ. ಮುದ್ರೆ ಧರಿಸಿದವನಲ್ಲಿ ಪಾಪಚಿಂತನೆ ಮೂಡದಂತೆ ಪುಣ್ಯಪುರುಷರ ಅನುಗ್ರಹವಾಗುವಂತೆ ಚಿಂತನೆ ನಡೆಸಲಾಗಿದೆ–

**ಜಪಕಾಲೇಽಥವಾ ಚಕ್ರಂ ಶಂಖಾಕೃತಿ ಯಥಾತಥಾ**

**ಶಾರ್ಙ್ಗಖಡ್ಗಗದಾಕಾರಂ ಲಾಂಛನಂ ಲಾಂಛಯೇತ್ಸುಧೀಃ**

**ಶರೀರಾವಯವೇ ಬಾಹ್ವೋಃ ವಕ್ಷೋಭುವಿ ಚತುರ್ಮ್ಮುಖ**

**ಪುರುಷಂ ದೂರತೋ ದೃಷ್ಟ್ವಾ ಭೂತಾದ್ಯಾ ಭಯವಿಹ್ವಲಾಃ**



**ವಿದ್ರವಂತಿ ತಥಾ ಘೋರಾಃ ಪಾಪಾ ವೀಕ್ಷಣಮಾತ್ರತಃ**

**ವಿನಶ್ಯಂತಿ ತಥಾ ಪುಣ್ಯಪುಂಜಾನಿ ಪ್ರವಿಶಂತಿ ಚ**

**ನಾರಾಯಣಸಂಹಿತೆಯ** ಈ ಮಾತಿನಲ್ಲಿ ನಡುವೆ ಪಂಚಮುದ್ರೆಯ ಧಾರಣೆಯ ವ್ಯಕ್ತಿಯ ವಿಷಯ ವ್ಯಾಖ್ಯಾನದಲ್ಲಿ ಬಿಟ್ಟುಹೋಗಿದೆ. ಅದು ಹೀಗಿದೆ–

**ಚಕ್ರಾದಿಪಂಚಭಿರ್ದಿವ್ಯೈಃ ಲಾಂಛಿತಾಂಗಂ ತು ಸಾಧಕಮ್**

ಪುರುಷಂ ಎನ್ನುವುದು ಮುಂದಿನ ಅನ್ವಯದ ಸಾಲು.

ಆಯುಧಗಳನ್ನು ಹಿಡಿಯಲು ಪ್ರಾರ್ಥಿಸುವಲ್ಲಿ ನಾರಾಯಣನಿಗೆ ವಾಯು ಹೇಳುವ ಈ ಮಾತಿನಲ್ಲಿ ಒಂದೊಂದು ಆಯುಧಗಳ ಪ್ರಯೋಜನಗಳು ಮೂಡಿವೆ. ಬಿಲ್ಲುಬಾಣಗಳಿಗೆ ತಾನೇ ಅಭಿಮಾನಿ ಆಗಿರುವುದರಿಂದ ಅದರ ಧಾರಣೆಯ ಬಗ್ಗೆ ಇಲ್ಲಿ ಪ್ರತ್ಯಕ್ಷದ ಮಾತಿಲ್ಲ. ಆಯುಧಪೂಜೆಗೆ ಈ **ವರಾಹಪುರಾಣದ** ಮಾತುಗಳು ಸ್ಮರಣೆಯೋಗ್ಯಗಳು–

**ಅವಿದ್ಯಾವಿಜಯಂ ಚೇಮಂ ಶಂಖರೂಪೇಣ ಧಾರಯ**

**ಅಜ್ಞಾನಚ್ಛೇದನಾರ್ಥಾಯ ಖಡ್ಗಂ ತೇಽಸ್ತು ಸದಾ ಕರೇ**

**ಕಾಲಚಕ್ರಮಯಂ ಘೋರಂ ಚಕ್ರಂ ತದ್ಧಾರಯಾಚ್ಯುತ**

**ಅಧರ್ಮರಾಜಘಾತಾರ್ಥಂ ಗದಾಂ ಧಾರಯ ಕೇಶವ**

**ಮಾಲೇಯಂ ಭೂತಮಾತಾ ತೇ ಕಂಠೇ ತಿಷ್ಠತು ಸರ್ವದಾ**

**ಶ್ರೀವತ್ಸಕೌಸ್ತುಭೌ ಚೇಮೌ ಚಂದ್ರಾದಿತ್ಯೌ ಛಲೇನ ಹ**

ವಾಯುದೇವ ಗದೆಯೆಂಬ ಚಿಂತನೆಯೊಂದಿಗೆ ಆಯುಧಗಳ ಸಾಲುಗಳು **ಭಾಗವತದಲ್ಲಿವೆ**–

**ಓಜಸ್ಸಹೋಬಲಯುತಂ ಮುಖ್ಯತತ್ತ್ವಂ ಗದಾಂ ದಧತ್**

**ಅಪಾಂ ತತ್ತ್ವಂ ದರವರಂ ತೇಜಸ್ತತ್ತ್ವಂ ಸುದರ್ಶನಮ್**

**ನಭೋನಿಭಂ ನಭಸ್ತತ್ತ್ವಂ ಅಸಿಂ ಚರ್ಮ ತಮೋಮಯಮ್**

**ಕಾಲರೂಪಂ ಧನುಃ ಶಾರ್ಙ್ಗಂ ತಥಾ ಕರ್ಮಮಯೇಷುಧೀ**

**ಇಂದ್ರಿಯಾಣಿ ಶರಾನಾಹುಃ .... ಲೀಲಾಕಮಲಮುದ್ವಹನ್**



ಸ್ಕಂದಪುರಾಣವು ಪಂಚಮುದ್ರೆಗಳ ಧಾರಣೆಯಿಂದ ಆಯಾ ಮುದ್ರೆಗೆ ಸಂಬಂಧಿಸಿದಂತೆ ಅನೇಕ ತೀರ್ಥಕ್ಷೇತ್ರಗಳ ದರ್ಶನದ ಮತ್ತು ವಾಸದ ಫಲವನ್ನು ಹೇಳಿದೆ –

**ಶಂಖೋದ್ಧಾರೇ ಚ ಯತ್ಪ್ರೋಕ್ತಂ ವಸತಾಂ ಕೋಟಿಜನ್ಮಭಿಃ**
**ತತ್ಫಲಂ ಲಭತೇ ಶಂಖೇ ಪ್ರತ್ಯಹಂ ದಕ್ಷಿಣೇ ಭುಜೇ**
**ಯತ್ಫಲಂ ಪುಷ್ಕರೇ ಪ್ರೋಕ್ತಂ ಪುಂಡರೀಕಾಕ್ಷದರ್ಶನಾತ್**
**ಶಂಖೋಪರಿ ಕೃತೇ ಪದ್ಮೇ ತತ್ಫಲಂ ಕೋಟಿಸಮ್ಮಿತಮ್**
**ವಾಮೇ ಭುಜೇ ಗದಾ ಯಸ್ಯ ಲಿಖಿತಾ ದೃಶ್ಯತೇ ಕಲೌ**
**ಗದಾಧರೋ ಗಯಾಪುಣ್ಯಂ ಪ್ರತ್ಯಹಂ ತಸ್ಯ ಯಚ್ಛತಿ**
**ಯಚ್ಚಾನಂದಪುರೇ ಪ್ರೋಕ್ತಂ ಚಕ್ರಸ್ವಾಮೀಸಮೀಪತಃ**
**ಗದೇ ಚಕ್ರೇ ಚ ಲಿಖಿತೇ ತತ್ಫಲಂ ಲಿಂಗದರ್ಶನೇ**
**ಮಮಾಯುಧಾಂಕಿತಂ ದೇಹಂ ಗೋಪೀಚಂದನಮೃತ್ಸ್ನಯಾ**
**ಪ್ರಯಾಗಾದಿಷು ತೀರ್ಥೇಷು ಸ ಗತ್ವಾ ಕಿಂ ಕರಿಷ್ಯತಿ**

ಪಂಚಮುದ್ರೆಗಳನ್ನು ಪಂಚಲೋಹಗಳಿಂದ ತಯಾರಿಸುವಂತೆ ಸ್ಕಂದಪುರಾಣವು ಇಲ್ಲಿ ಹೇಳಿದೆ –

**ಸೌವರ್ಣ್ಣಂ ರಾಜತಂ ತಾಮ್ರಂ ಕಾಂಸ್ಯಮಾಯಸಮೇವ ಚ**

ವರಾಹಪುರಾಣವು ಶಂಖಚಕ್ರಗದಾಪದ್ಮನಾರಾಯಣನಾಮಮುದ್ರೆಗಳ ಧಾರಣೆಯ ಸ್ಥಾನವನ್ನೂ ಸಂಖ್ಯೆಯನ್ನೂ ಹೇಳಿದೆ –

**ಏಕಂ ಕಪೋಲೇ ಹೃದಯೇ ತ್ರೀಣಿ ಮಧ್ಯೋದರೇ ತಥಾ**
**ಪಂಚ ಪಾರ್ಶ್ವೇ ದ್ವಯಂ ತ್ರೀಣಿ ದಕ್ಷಿಣಸ್ತನಮಂಡಲೇ**
**ಚಕ್ರದ್ವಯಂ ದಕ್ಷಿಣೇ ತು ಬಾಹೌ ತಿಲಕಮೂರ್ಧನಿ**
**ನ್ಯಸೇದಧಸ್ತಾದೇಕಂ ತು ತಿಲಕೇ ವಾಮಬಾಹುಕೇ**
**ಕರ್ಣ್ಣಮೂಲೇ ತಥಾ ಕಂಠೇ ಏಕಮೇಕಂ ತು ಧಾರಯೇತ್**

19 ಚಕ್ರಮುದ್ರೆಯನ್ನು ಒಟ್ಟು ದೇಹದ 9 ಸ್ಥಾನಗಳಲ್ಲಿ ಧರಿಸಬೇಕು.

1. ಬಲಕೆನ್ನೆ – 1
2. ಎದೆ – 3
3. ಹೊಟ್ಟೆಯ ಮಧ್ಯ – 5
4. ಹೊಟ್ಟೆಯ (ಬಲಬದಿ) – 2
5. ಬಲ ಎದೆಯ ಸನಿಹ (ಸ್ತನ) – 3
6. ಬಲತೋಳಿನ ಪುಂಡ್ರದ ತುದಿಯಲ್ಲಿ – 2
7. ಎಡತೋಳಿನ ಪುಂಡ್ರದ ಬುಡದಲ್ಲಿ – 1
8. ಕುತ್ತಿಗೆಯ ಬಲದಲ್ಲಿ – 1
9. ಕುತ್ತಿಗೆಯಲ್ಲಿ (ಎದುರುಬದಿ) – 1

**ವಾಮೇ ಕಪೋಲೇ ಶಂಖೈಕಂ ದ್ವಯಂ ಪಾರ್ಶ್ವೇ ತ್ರಯಂ ಸ್ತನೇ**
**ಶಂಖದ್ವಯಂ ತಥಾ ಬಾಹ್ವೋಃ ವಿನ್ಯಸೇತ್ ಪುಂಡ್ರಮೂರ್ಧನಿ**
**ಬಾಹೌ ತು ತಿಲಕಾಧಸ್ತಾತ್ ದಕ್ಷಿಣೇ ಶಂಖಮೇಕಕಮ್**
**ಕರ್ಣ್ಣಮೂಲೇ ತಥಾ ವಾಮೇ ಶಂಖಮೇಕಂ ತು ವಿನ್ಯಸೇತ್**

10 ಶಂಖಮುದ್ರೆಗಳನ್ನು ಒಟ್ಟು ದೇಹದ 6 ಸ್ಥಾನಗಳಲ್ಲಿ ಧರಿಸಬೇಕು.

1. ಎಡಕೆನ್ನೆ – 1
2. ಹೊಟ್ಟೆಯ ಎಡಬದಿ – 2
3. ಎದೆಯ ಎಡಬದಿ (ಸ್ತನ) – 3
4. ಎಡತೋಳಿನ ಪುಂಡ್ರದ ತುದಿಯಲ್ಲಿ – 2
5. ಬಲತೋಳಿನ ಪುಂಡ್ರದ ಬುಡಯಲ್ಲಿ – 1
6. ಕುತ್ತಿಗೆಯ ಎಡಬದಿಯಲ್ಲಿ – 1

**ಲಲಾಟೇ ತು ಗದಾ ಧಾರ್ಯಾ ವಾಮಪಾರ್ಶ್ವೇ ತಥಾ ಸ್ತನೇ**
**ಬಾಹುಜೇ ತಿಲಕೇ ದ್ವೇ ತು ಶಂಖಾಧೋಭಾಗಭೇದತಃ**

5 ಗದಾಮುದ್ರೆಗಳನ್ನು ಒಟ್ಟು ದೇಹದ 4 ಸ್ಥಾನಗಳಲ್ಲಿ ಧರಿಸಬೇಕು.

1. ಹಣೆ – 1



| | | | |
|---|---|---|---|
| 2. | ಹೊಟ್ಟೆಯ ಎಡಬದಿ | – | 1 |
| 3. | ಎದೆಯ ಎಡ ಬದಿ (ಸ್ತನ) | – | 1 |
| 4. | ಎಡತೋಳಿನ ಪುಂಡ್ರದ ಎರಡು ಬದಿ | – | 2 |

**ಪದ್ಮಂ ಭಾಗದ್ವಯೇ ವಕ್ಷಸ್ಯಥೋ ಪಾರ್ಶ್ವೇ ತಥಾ ಸ್ತನೇ**

**ಏಕೈಕಂ ದಕ್ಷಿಣೇ ಬಾಹೌ ಚಕ್ರಾಧಸ್ತಾತ್ ದ್ವಯಂ ಲಿಖೇತ್**

6 ಪದ್ಮಮುದ್ರೆಗಳನ್ನು ಒಟ್ಟು ದೇಹದ 4 ಸ್ಥಾನಗಳಲ್ಲಿ ಧರಿಸಬೇಕು.

| | | | |
|---|---|---|---|
| 1. | ಎದೆಯಲ್ಲಿ | – | 2 |
| 2. | ಎದೆಯ ಬಲಬದಿ | – | 1 |
| 3. | ಹೊಟ್ಟೆಯ ಬಲಬದಿ | – | 1 |
| 4. | ಬಲತೋಳಿನ ಪುಂಡ್ರದ ಎರಡುಬದಿ | – | 2 |

**ನಾಮ ಸರ್ವೇಷು ಪುಂಡ್ರೇಷು ಸ್ತನಯೋಶ್ಚ ಕಪೋಲಯೋಃ**

ನಾರಾಯಣಾಷ್ಟಾಕ್ಷರ ಮಂತ್ರ ಕೆತ್ತಲ್ಪಟ್ಟ ಮುದ್ರೆಯನ್ನು ದ್ವಾದಶಪುಂಡ್ರಗಳಲ್ಲೂ ಎದೆಯ ಬಲ–ಎಡ ಬದಿಗಳಲ್ಲೂ, ಕೆನ್ನೆಗಳಲ್ಲೂ, ನೆತ್ತಿಯಲ್ಲೂ ಧರಿಸಬೇಕು. **ಸ್ಕಾಂದಪುರಾಣವೂ** ಇದನ್ನು ತಿಳಿಸಿದೆ –

**ನಾರಾಯಣಂ ಚ ಸರ್ವತ್ರ ಏಕಮೇಕಂ ಕಪೋಲಯೋಃ**

ಒಟ್ಟು 17 ನಾಮಮುದ್ರೆಗಳನ್ನು ದೇಹದ 17 ಸ್ಥಾನಗಳಲ್ಲಿ ಧರಿಸಬೇಕು. ಪಂಚಮುದ್ರಾಧಾರಣೆಯಲ್ಲಿಯೂ ಕೆಲವೆಡೆ ಸಂಖ್ಯೆಗಳಲ್ಲಿ ವ್ಯತ್ಯಾಸವಾಗಿ ಹೇಳಲಾಗಿದೆ. **ಪದ್ಮಪುರಾಣವು** ಪುಂಡ್ರಧಾರಣೆಯೊಡನೆ ಮುದ್ರೆಗಳ ಧಾರಣೆಯನ್ನು ಹೇಳುವಾಗ ಇಲ್ಲಿಗಿಂತ ಎರಡು ಪಾಲು ಹೆಚ್ಚಾಗಿ ಹೇಳಿದೆ–

**ವೈಷ್ಣವಾನಾಂ ಬ್ರಾಹ್ಮಣಾನಾಂ ಕರ್ತವ್ಯಂ ಭೂತಿಮಿಚ್ಛತಾಮ್**

**ದಂಡಾಕಾರಂ ಲಲಾಟೇ ಸ್ಯಾತ್ ಪದ್ಮಾಕಾರಂ ತು ವಕ್ಷಸಿ**

**ವೇಣುಪತ್ರನಿಭಂ ಬಾಹುಮೂಲೇಽನ್ಯದ್ದೀಪಿಕಾಕೃತಿ**

**ಉಚ್ಚೈಶ್ಚಕ್ರಾಣಿ ಚತ್ವಾರಿ ಬಾಹುಮೂಲೇ ತು ದಕ್ಷಿಣೇ**

**ನಾಮಮುದ್ರಾದ್ವಯಂ ನೀಚೈಃ ಶಂಖಮೇಕಂ ತಯೋರಪಿ**



ಮಧ್ಯೇ ತತಃ ಪಾರ್ಶ್ವಯೋಸ್ತು ದ್ವೇದ್ವೇ ಪದ್ಮೇ ಚ ಧಾರಯೇತ್
ವಾಮೇ ಚ ಚತುರಃ ಶಂಖಾನ್ ನಾಮಮುದ್ರೇ ಚ ಪೂರ್ವವತ್
ಚಕ್ರಮೇಕಂ ಗದೇ ದ್ವೇದ್ವೇ ಪಾರ್ಶ್ವಯೋರಿತಿ ಭೇದತಃ
ಲಲಾಟೇ ಚ ಗದಾಮೇಕಾಂ ನಾಮಮುದ್ರಾಂ ತಥಾ ಹೃದಿ
ತ್ರೀಣಿತ್ರೀಣಿ ಚ ಚಕ್ರಾಣಿ ಮಧ್ಯೇ ಶಂಖಾವುಭಾವುಭೌ
ಹೃದಿ ಪಾರ್ಶ್ವೇ ಸ್ತನಾದೂರ್ಧ್ವಂ ಗದಾಪದ್ಮಾನಿ ಬಾಹುವತ್
ತ್ರೀಣಿತ್ರೀಣಿ ಚ ಚಕ್ರಾಣಿ ಕರ್ಣ್ಣಮೂಲದ್ವಯೋರಧಃ
ಏಕಮೇಕಂ ತದನ್ಯೇಷು ತಿಲಕೇಷು ಚ ಧಾರಯೇತ್

ವಸಿಷ್ಠರ ಮಾತು ತೋಳುಗಳಲ್ಲಿ 4 – 4 ನಾರಾಯಣಮುದ್ರೆಯ ಧಾರಣೆಗೆ ಒತ್ತುಕೊಟ್ಟಿದೆ. ಹಾಗೆಯೇ ಕಪೋಲದಲ್ಲಿನ ಶಂಖಚಕ್ರಧಾರಣೆಗೆ ಹೇಳಿಕೆಯಿದೆ –

ಕಂಠೇ ಕುಕ್ಷೌ ದ್ವಯಂ ಧಾರ್ಯಂ ಏಕಮೇಕಂ ಕಪೋಲಯೋಃ
ದಕ್ಷಿಣೇ ತು ಸಹಸ್ರಾರಂ ವಾಮೇ ಶಂಖಂ ಹರೇಃ ಪ್ರಿಯಮ್

ವರಾಹಪುರಾಣವು ಬಿಲ್ಲುಬಾಣಕತ್ತಿಗಳ ಶ್ರೀವತ್ಸಕೌಸ್ತುಭಗಳ ಧಾರಣೆಯನ್ನು ಹೇಳಿದೆ. (ಇಂದು ಮುದ್ರಿತವಾದ ಆ ಶ್ಲೋಕದ ಪಾಠ ಶುದ್ಧವಾಗಿಲ್ಲ)

ಶರಂ ಚಾಪಂ ತಥಾ ಮೂರ್ಧ್ನಿ ಹೃದಯೇ ಖಡ್ಗಮೇವ ಚ
ಸವ್ಯೇ ತು ಕೌಸ್ತುಭಂ ದದ್ಯಾತ್ ಶ್ರೀವತ್ಸಂ ದಕ್ಷಿಣೇ ಸ್ತನೇ

ವಿಷ್ಣುರಹಸ್ಯದಲ್ಲಿ ಮುದ್ರಾಧಾರಣೆಯ ಪ್ರಯೋಗಕ್ರಮ ಬಂದಿದೆ. ಅಲ್ಲಿಯೂ ಬಿಲ್ಲುಕತ್ತಿಗಳ ಶ್ರೀವತ್ಸಕೌಸ್ತುಭಗಳ ಧಾರಣೆಯ ಮಾತುಗಳು ಬಂದಿವೆ. (ಮುದ್ರಿತ ಪಾಠದಲ್ಲಿ ಸ್ಥಾನವ್ಯತ್ಯಾಸಗಳು ಬಹಳಷ್ಟಿವೆ)

ಕಪೋಲೇ ದಕ್ಷಿಣೇ ಚಕ್ರಂ ಉದರೇ ಪಂಚಚಕ್ರಕಮ್
ಹೃದಿ ತ್ರೀಣಿ ದ್ವಯಂ ಪಾರ್ಶ್ವೇ ಸ್ತನೇ ತ್ರೀಣಿ ಭುಜೇ ದ್ವಯಮ್
ಕರ್ಣ್ಣಮೂಲೇ ದ್ವಯಂ ಕಂಠೇ ವಾಮೇ ಬಾಹೌ ತಥಾ ದ್ವಯಮ್



**ಅಥ ವಾಮೇ ಕಪೋಲೇ ತು ಶಂಖಮೇಕಂ ತು ಪಾರ್ಶ್ವಕೇ**

**ದ್ವಯಂ ಸ್ತನೇ ತ್ರಯಂ ಬಾಹೌ ದ್ವಯಂ ಕಾರ್ಯಂ ಚ ಭಕ್ತಿತಃ**

**ಅಥ ಪದ್ಮದ್ವಯಂ ವಕ್ಷಸ್ತಿಲಕೇ ದಕ್ಷಪಾರ್ಶ್ವಕೇ**

**ಸ್ತನೇ ಚೈಕಂ ದ್ವಯಂ ಬಾಹೌ ನಾಮ ಸರ್ವತ್ರ ವಿನ್ಯಸೇತ್**

**ಮಸ್ತಕೇ ತು ಶರಂ ಚಾಪಂ ಹೃದಿ ಖಡ್ಗಂ ಚ ನಂದಕಮ್**

**ಕೌಸ್ತುಭಂ ಚ ಶ್ರಿಯೋ ವಾಸಂ ಭಾವಯೇತ್ಸವ್ಯದಕ್ಷಯೋಃ**

ನಾಡಿಗಳನ್ನು ಮುಖ್ಯವಾಗಿಟ್ಟುಕೊಂಡು ಮೈಯಲ್ಲಿ ಮುದ್ರೆಗಳನ್ನು ಹಾಕಿಕೊಳ್ಳುವಂತೆ **ಸಂನ್ಯಾಸವಿಧಿಯಲ್ಲಿ** ಮುದ್ರೆಧಾರಣೆಯ ಆಧ್ಯಾತ್ಮಿಕ ಶಕ್ತಿಯನ್ನು ತಿಳಿಸಿಕೊಟ್ಟಿದ್ದಾರೆ. ಇದರಿಂದ ಮೈತುಂಬಾ ಮುದ್ರೆ ಹಚ್ಚಿಕೊಳ್ಳುವಂತಿಲ್ಲ ಎನ್ನುವ ಎಚ್ಚರ ಸಿಗಲಿದೆ. ಅದಕ್ಕೊಂದು ನಿಯಮವಿದೆ, ಲೆಕ್ಕಾಚಾರವಿದೆ ಎನ್ನುವುದು ಸ್ಪಷ್ಟ

**ಮುದ್ರಾ ಹಿ ಧ್ರಿಯತೇ ನಿತ್ಯಂ ಬ್ರಹ್ಮನಾಡ್ಯನುಸಾರಿಣೀ**

ಮುದ್ರೆಗಳನ್ನು ಹಚ್ಚಿಕೊಂಡ ಮೇಲೆ ಆ ಲೋಹದ ಮುದ್ರೆಗಳನ್ನು ತೊಳೆದು ಪ್ರಣವ ಅಷ್ಟಾಕ್ಷರಮಂತ್ರಗಳನ್ನು ಜಪಿಸುತ್ತಾ ಆ ತೊಳೆದ ನೀರನ್ನು ತಲೆಗೆ ಪ್ರೋಕ್ಷಿಸಿಕೊಳ್ಳಬೇಕು. ಮುದ್ರಾಭ್ಯಃ ನಮಃ ಎನ್ನುತ್ತ ಅದನ್ನು ತಟ್ಟೆಯಲ್ಲಿಡಬೇಕು.

**ಪ್ರಕ್ಷಾಳ್ಯಾಯುಧತೋಯೇನ ಶಿರೋ ಮೂಲೇನ ಮಾರ್ಜ್ಜಯೇತ್**

**ನಮೋ ಮುದ್ರಾಭ್ಯ ಇತ್ಯುಕ್ತ್ವಾ ಸ್ಥಾಪಯೇನ್ಮಾನಿತಾಸ್ಸದಾ**

ಭಗವಂತನ ಆಯುಧಗಳೆಲ್ಲವೂ ಭಗವತ್ಸ್ವರೂಪಗಳೇ ಆಗಿವೆ. **ಭಾಗವತವು** ಇದನ್ನು ಸ್ಪಷ್ಟಪಡಿಸಿದೆ – **ಭೂಷಣಾಯುಧಲಿಂಗಾಖ್ಯಾಃ ಧತ್ತೇ ಶಕ್ತೀಃ ಸ್ವಮಾಯಯಾ.** ಇದನ್ನು ಆಚಾರ್ಯಮಧ್ವರು ಪುಷ್ಟಿಗೊಳಿಸಿದ್ದಾರೆ –

**ಏಕ ಏವ ಪರೋ ವಿಷ್ಣುಃ ಭೂಷಾಹೇತಿಧ್ವಜೇಷ್ವಜಃ**

**ತತ್ತಚ್ಛಕ್ತಿಸ್ವರೂಪೇಣ ಸ್ವಯಮೇವ ವ್ಯವಸ್ಥಿತಃ**

ಅದರೊಂದಿಗೆ ಆಯುಧಗಳ ಅಭಿಮಾನಿಗಳನ್ನೂ ನೆನೆಯಬೇಕು. ನಾರಾಯಣ ನಾಮಮುದ್ರೆಗೆ ಚತುರ್ಮುಖಬ್ರಹ್ಮನು ಅಭಿಮಾನಿ. ಚಕ್ರಶಂಖ ಪದ್ಮಮುದ್ರೆಗಳಿಗೆ ಲಕ್ಷ್ಮಿಯ ದುರ್ಗಾಶ್ರೀಭೂರೂಪಗಳು ಅಭಿಮಾನಿನಿಯರು.



ಗದಾ ಮುದ್ರೆಗೆ ವಾಯು ಅಭಿಮಾನಿ. ಹಾಗೆಯೆ ಶಾರ್ಙ್ಗಕ್ಕೆ ಭಾರತೀಸರಸ್ವತಿಯರು ಅಭಿಮಾನಿನಿಯರು. ಖಡ್ಗಕ್ಕೆ ರುದ್ರ ಅಭಿಮಾನಿ. ಚಕ್ರಶಂಖಗಳಿಗೆ ಭರತ – ಶತ್ರುಘ್ನರು ಅವರೇ ಪ್ರದ್ಯುಮ್ನ ಅನಿರುದ್ಧರು ಅಮುಖ್ಯ ಅಭಿಮಾನಿಯರು. ಇನ್ನೂ ಅನೇಕ ದೇವತೆಗಳು ಅವಾಂತರ ಅಭಿಮಾನಿಯರು ಭಗವಂತನ ಆಯುಧಗಳಿಗೆ ಇದ್ದಾರೆ. ಆಚಾರ್ಯಮಧ್ವರು ಚಕ್ರಕ್ಕೆ ಕಾಲನನ್ನು ತಿಳಿಸುತ್ತಾ, ಕಾಲ ಎಂದರೆ ಮುಖ್ಯವಾಗಿ ದುರ್ಗೆಯೂ ಪ್ರಾಣನೂ ಆಗುವರು ಎನ್ನುವರು.

**ಕಾಲಾಭಿಮಾನಿನೌ ತ್ವೇತೌ ದುರ್ಗಾ ವಾಯುಶ್ಚ ಕೀರ್ತಿತೌ** (ಪ್ರಕಾಶಿಕಾ)

**ಹೀಗೆಯೇ ಯಮಃ ಕಾಲಃ ಮನುಷ್ಯಾಣಾಂ ತಸ್ಯ ಕಾಲಃ** ಎನ್ನುವುದಾಗಿ ಅವಾಂತರ ಕಾಲರನ್ನೂ ಗುರುತಿಸುವರು. ಅದರಂತೆ ಇತರ ಆಯುಧಗಳಿಗೂ ಅನೇಕ ದೇವತೆಗಳು ಅವಾಂತರ ಅಭಿಮಾನಿಗಳು ಇದ್ದಾರೆ. ಹಾಗೆಯೇ ಭಗವಂತನ ಕಿರೀಟಾದಿ ಆಭರಣಗಳಿಗೂ ಶ್ರೀವತ್ಸ ಕೌಸ್ತುಭಗಳಿಗೆ ಲಕ್ಷ್ಮಿ ಬ್ರಹ್ಮರಂತೆ ಅಭಿಮಾನಿದೇವತೆಗಳು ಬೇರೆ ಇದ್ದಾರೆ. ಗುರುಗಳ ಉಪದೇಶದಂತೆ ಅವರವರ ಯೋಗ್ಯತೆಯ ನೆಲೆಯಲ್ಲಿ ಸಾಧನೆಯ ಹಂತಗಳಲ್ಲಿ ಇವರೆಲ್ಲ ಚಿಂತನೆಗೆ ಸಿಗುವರು. ಹಾಗೆಯೇ ದೇವರ ಆವರಣರಾಗಿರುವ ಆ ದೇವತೆಗಳ ಅನೇಕ ಬಗೆಯ ರೂಪವಿಶೇಷಗಳೂ ಲಕ್ಷಣಗಳೂ **ಈಶ್ವರಸಂಹಿತೆ**ಯಲ್ಲಿ ಹೇಳಲ್ಪಟ್ಟಿವೆ –

**ಕಿರೀಟೋ ಹುತಭುಕ್ ವೇದ್ಯಃ ಕೌಸ್ತುಭಸ್ತು ಪ್ರಭಾಕರಃ**
**ಸ್ವಯಂ ಶಶಾಂಕಃ ಶ್ರೀವತ್ಸೋ ....**
**ಅಪಾಂ ಪತಿರ್ವೈ ಕಮಲಂ ಗದಾ ದೇವೀ ಸರಸ್ವತೀ**
**ಕಾಲಶ್ಚಕ್ರಾಧಿಪೋ ಜ್ಞೇಯಃ ......**
**ಸುದರ್ಶನಂ ಚತುರ್ಹಸ್ತಂ ಹ್ರಸ್ವಕಾಯಂ ಜ್ವಲತ್ಪ್ರಭಮ್**
**ಕ್ರೋಧರಕ್ತೇಕ್ಷಣಂ ದೈತ್ಯದಾನವಾಸೃಗ್ವಿಲೇಪನಮ್**
**ನೃತ್ಯಂತಂ ಮದಮತ್ತಂ ಚ ಸಹಸ್ರಾರಾಂತರಸ್ಥಿತಮ್**
**ದಂಷ್ಟ್ರಾಕರಾಳವದನಂ ಕುಟಿಲಭ್ರೂಲತಾಯುತಮ್**
**ಕಲ್ಪಾಂತಪಾವಕಾಕಾರಂ ಸ್ವರಶ್ಮಿಪರಿವೇಷ್ಟಿತಮ್**

ವಿಭೂಷಿತಂ ವಿಚಿತ್ರೈಸ್ತು ಶ್ವೇತಮಾಲ್ಯಾಂಬರಾದಿಕೈಃ

ವಿಘ್ನಾನುತ್ಪಾಟಯಂತಂ ತು ದೀಪ್ತೇನ ಸ್ವೇನ ತೇಜಸಾ

ಕ್ರೋಧಮೂರ್ತಿಂ ಸ್ವದಶನೈಃ ದಶಂತಮಧರಂ ಸ್ವಕಮ್

ಸ್ವರಶ್ಮಿಖಚಿತಂ ಧ್ಯಾಯೇತ್ ನೃತ್ಯಮಾನಂ ತು ನಂದಕಮ್

ಮಾಲ್ಯಾಂಗರಾಗವಸನೈಃ ಉಚಿತೈಃ ಸಮಲಂಕೃತಾಃ

ದಿವ್ಯೈರಾಭರಣೈರ್ಯುಕ್ತಾಃ ಸ್ವಚಿಹ್ನಾಂಕಿತಮಸ್ತಕಾಃ

ತರ್ಜಯಂತಶ್ಚ ದುಷ್ಟೌಘಂ ದಕ್ಷಿಣೇನ ಕರೇಣ ತು

ವಾಮೇನ ಕಟಿಮಾಲಂಬ್ಯ ಸುಸಮೇ ಸ್ಥಾನಕೇ ಸ್ಥಿತಾಃ

ಶಬ್ದಾದಯಃ ಸಾಯಕಾಸ್ತ್ರಂ ಧನುರ್ವಿದ್ಧಿ ಸಮೀರಣಮ್

ನೀಲೋತ್ಪಲದಳಶ್ಯಾಮಂ ಇಷ್ವಸ್ತ್ರಂ ಬಾಣವಿಗ್ರಹಮ್

ನಾನಾರೂಪಂ ಚ ನಿಶಿತಂ ದೀರ್ಘದಿಗ್ಬಂಧವಿಗ್ರಹಮ್

ಕಾರ್ಮ್ಮುಕಂ ಹೇಮಗೌರಂ ಚ ಕಿಂಕಿಣೀಜಾಲಮಂಡಿತಮ್

ಆಸ್ಫೋಟಯತ್ತು ಸ್ವಕರೌ ಮಹಾಜಲದನಿಃಸ್ವನಮ್

ಗದಾಂ ಹೇಮಾದ್ರಿಸಂಕಾಶಾಂ ತನ್ವೀಂ ಕುವಲಯೇಕ್ಷಣಾಮ್

ದ್ವಿರಷ್ಟವರ್ಷವತ್ಕಾಂತಾಂ ಕುಮಾರೀಂ ನವಯೌವನಾಮ್

ಸ್ವರಶ್ಮಿಮಂಡಲಾಂತಸ್ಥಂ ವಲ್ಗಂತಂ ಹೇತಿಪಂ ಸ್ಮರೇತ್

ವಿಭೋರಾಜ್ಞಾ ಪ್ರತೀಕ್ಷಂತಂ ಹ್ರಸ್ವಾಂಗಂ ರಕ್ತಲೋಚನಮ್

ಇಲ್ಲಿ ಹೇತಿಪ ಎಂದರೆ ಚಕ್ರ.

ತುಹಿನಾಚಲಸಂಕಾಶಂ ಶಂಖಂ ಕಮಲಲೋಚನಮ್

ಸದಾಗಮಾದಿಸಾಮಾಂತಂ ಉದ್ಗಿರಂತಂ ಸ್ವಕೈರ್ಮ್ಮುಖೈಃ

ಧ್ಯೇಯಾಃ ಸ್ವರುಚಿಸಂಯುಕ್ತಾಃ ದ್ವಿಭುಜಾಃ ಪುರುಷೋತ್ತಮಾಃ

ಏತೇಽಸ್ತ್ರನಾಯಕಾಃ ಸರ್ವೇ ವಿಭೋರಾಜ್ಞಾ ಪ್ರತೀಕ್ಷಕಾಃ

ಪ್ರೋತ್ಥಿತಾ ವಿಚಲಂತಶ್ಚ ಸುಸಮೈಃ ಸ್ಥಾನಕೈಃ ಸ್ಥಿತಾಃ



ಶ್ರೋಣೀತಟಾರ್ಪಿತಕರಾಃ ಚಾಮರವ್ಯಜನೋದ್ಯತಾಃ

ಸ್ಮರ್ತ್ತವ್ಯಂ ಧ್ಯಾನಕಾಲೇ ತು ಸರ್ವೇಷಾಮಥ ಮಸ್ತಕೇ

ಧ್ಯೇಯಂ ಸ್ವಕಂ ಸ್ವಕಂ ಚಿಹ್ನಂ ಸುಪ್ರಸಿದ್ಧಂ ನಿರಾಕೃತಿ

ಚಕ್ರಶಂಖೌ ಪದ್ಮಗದೇ ಲಾಂಗಲಂ ಮುಸಲಂ ಶರಾಃ

ಶಾರ್ಙ್ಗಂ ಚೈತೇ ಕ್ರಮಾದ್ಧ್ಯೇಯಾ ವಿದ್ಯುತ್ತುಹಿನಕುಂದಭಾಃ

ಪೀತನೀಲಸಿತಾರಕ್ತಸಿತಗೋಕ್ಷೀರಸನ್ನಿಭೈಃ

ಹರಿತಾಲಾರುಣಾಭೈಸ್ತು ವಸ್ತ್ರಮಾಲ್ಯಾನುಲೇಪನೈಃ

ಸರ್ವರತ್ನಮಯೈರ್ಯುಕ್ತೈಃ ಭೂಷಣೈರಪ್ಯಲಂಕೃತಾಃ

ಮಹಾಬಲಾ ಮಹಾವೀರ್ಯಾಃ ತ್ವೇಕವಕ್ತ್ರಾ ದ್ವಿಬಾಹವಃ

ಏತೇ ತು ನಾಯಕಾಃ ಸರ್ವೇ ಸ್ವಚಿಹ್ನಾಂಕಿತಮಸ್ತಕಾಃ

ಭಾಗವತವು ಪರಿಚಯಿಸಿದ ಆಯುಧಗಳು –

ಚಕ್ರಂ ಸುದರ್ಶನಂ ಘೋರಂ ಸಹಸ್ರಾರಂ ಮನೋರಮಮ್

ಗದಾ ಕೌಮೋದಕೀ ಗುರ್ವೀ ನಾಮ್ನಾ ಕೌಮೋದಕೀ ಶುಭಾ

ತ್ರಿನತಂ ಕಾರ್ಮ್ಮುಕಶ್ರೇಷ್ಠಂ ಶಾರ್ಙ್ಗಸಂಜ್ಞಂ ಗುಣಾನ್ವಿತಮ್

ಧರ್ಮಜ ಸ್ವರ್ಗದಲ್ಲಿ ಕೃಷ್ಣನನ್ನು ಕಂಡಾಗ ಆಯುಧದೇವತೆಗಳ ಪರಿವಾರವನ್ನೂ ಕಂಡಿದ್ದ –

ದದರ್ಶ ತತ್ರ ಗೋವಿಂದಂ ಬ್ರಾಹ್ಮೇಣ ವಪುಷಾऽನ್ವಿತಮ್

ದೀಪ್ಯಮಾನಂ ಸ್ವವಪುಷಾ ದಿವ್ಯೈರಸ್ತ್ರೈರುಪಸ್ಥಿತಮ್

ಚಕ್ರಪ್ರಭೃತಿಭಿರ್ಘೋರೈಃ ದಿವ್ಯೈಃ ಪುರುಷವಿಗ್ರಹೈಃ

ಹರಿಕಥಾಮೃತಸಾರವು ಹಿಂಕಾರ ಪ್ರತಿಹಾರ ನಿಧನ ಪ್ರಸ್ತಾವ ಉದ್ಗೀಥರನ್ನು ಚಕ್ರಶಂಖಗದಾಪದ್ಮನಾಮಮುದ್ರೆಗಳಲ್ಲಿ ನೆನಪಿಸಿಕೊಟ್ಟಿದೆ. ಗರುಡಪುರಾಣವು ಮುದ್ರೆ ಹಚ್ಚಿಕೊಳ್ಳುವಾಗ ಅಂಗರೂಪಗಳನ್ನು ಸ್ಮರಿಸಲು ಕರೆಕೊಟ್ಟಿದೆ –

ಮುದ್ರಾಣಾಂ ಧಾರಣೇ ಕಾಲೇ ಕೃದ್ಧೋಲ್ಕಾದೀನ್ ಸ್ಮರೇತ್ ಸುಧೀಃ

ಪಂಚಾಮುದ್ರಾಧಾರಣೆಯಲ್ಲಿ ಹೇಳಬೇಕಾದ ಪ್ರಸಿದ್ಧವಾದ ಪ್ರಾರ್ಥನಾ



ಮಂತ್ರಗಳು ವಿಹಗೇಂದ್ರಸಂಹಿತೆಯಲ್ಲಿ ಹೀಗಿವೆ –

ಸುದರ್ಶನ ಮಹಾಜ್ವಾಲ ಕೋಟಿಸೂರ್ಯಸಮಪ್ರಭ

ಅಜ್ಞಾನಾಂಧಸ್ಯ ಮೇ ನಿತ್ಯಂ ವಿಷ್ಣೋರ್ಮಾರ್ಗಂ ಪ್ರದರ್ಶಯ

ಪಾಂಚಜನ್ಯ ನಿಜಧ್ವಾನಧ್ವಸ್ತಪಾತಕಸಂಚಯ

ತ್ರಾಹಿ ಮಾಂ ಪಾಪಿನಂ ಘೋರಸಂಸಾರಾರ್ಣ್ಣವಪಾತಿನಮ್

ಬ್ರಹ್ಮಾಂಡಭುವನಾರಂಭಮೂಲಸ್ತಂಭೋ(ऽ)ಗದಾಧರಃ

ಕೌಮೋದಕೀ ಕರೇ ಯಸ್ಯ ತಂ ನಮಾಮಿ ಗದಾಧರಮ್

ಸಂಸಾರಭಯಭೀತಾನಾಂ ಯೋಗಿನಾಮಭಯಪ್ರದಃ

ಪದ್ಮಹಸ್ತೇನ ಯೋ ದೇವೋ ಯೋಗೀಶಂ ತಂ ನಮಾಮ್ಯಹಮ್

ನಾರಾಯಣ ನಮಸ್ತೇऽಸ್ತು ನಾಮಮುದ್ರಾಂಕಿತಂ ನರಮ್

ದೃಷ್ಟ್ವೈವ ಲಭತೇ ಮುಕ್ತಿಂ ಚಂಡಾಲೋ ಬ್ರಹ್ಮಘಾತಕಃ

ವರಾಹಪುರಾಣದಲ್ಲಿ ಚಕ್ರಶಂಖಪದ್ಮಮುದ್ರೆಗಳ ಪ್ರಾರ್ಥನಾಮಂತ್ರಗಳು ಸಮಾನವಾಗಿವೆ. ಉಳಿದ ಆಯುಧಮಂತ್ರಗಳು ಇಲ್ಲಿವೆ. ಇಲ್ಲಿ ವಿಶೇಷವಾಗಿ ಬಿಲ್ಲು-ಬಾಣಗಳ ಕತ್ತಿ-ಗುರಾಣಿಗಳ ಪ್ರಾರ್ಥನೆಗಳೂ ಇವೆ –

ದೈತ್ಯಶೋಣಿತದಿಗ್ಧಾಂಗೇ ಕೌಮೋದಕಿ ಗದೇ ಹರೇಃ

ಭಿಂಧಿಭಿಂಧಿ ತಮೋऽಂತಸ್ಥಂ ತ್ವಾಂ ನಮಾಮಿ ಪುನಃಪುನಃ

ನಾಮಮುದ್ರ ನಮಸ್ತುಭ್ಯಂ ತ್ವದಂಕಿತತನುರ್ಹರೇಃ

ಪ್ರಸಾದಾದ್ವಿಷ್ಣುಲೋಕೇऽಹಂ ಚಿರಂ ಸ್ಥಾಸ್ಯಾಮಿ ನಿರ್ವೃತಃ

ನಮೋ ನಂದಕ ದೈತ್ಯಾನಾಂ ಶಿರಚ್ಛೇತ್ರೇऽಭಯಪ್ರದ

ಸಜ್ಜನಾನಾಂ ತಮಶ್ಛಿಂಧಿ ಮಮಾಜ್ಞಾನಂ ಹೃದಿ ಸ್ಥಿತಮ್

ಚರ್ಮ್ಮ ರಕ್ಷ ಸದಾ ಪಾಪಾತ್ ಹರೇಃ ಪೂಜಾಂತರಾಯತಃ

ವಿಘ್ನಾನ್ನಮಾಮಿ ಸತತಂ ಭಕ್ತಿಯುಕ್ತೋ ಹರಿಪ್ರಿಯಮ್

ದೈತ್ಯಾಸ್ತ್ವದ್ಧ್ವನಿಭಿಸ್ತ್ರಸ್ತಾಃ ಪಾತಿತಾ ಭಿನ್ನವಕ್ಷಸಃ

ತಸ್ಮೈ ಶಾರ್ಙ್ಗ ನಮಸ್ತುಭ್ಯಂ ವಿಷ್ಣುಭಕ್ತಿಂ ವಿವರ್ಧಯ



ವಾಯುರೂಪ ಹರೇರ್ಬಾಣ ವಾಯೋರಧಿಕವೇಗವನ್
ನಯ ಮಾಂ ವಾಯುವೇಗೇನ ವಿಷ್ಣುಲೋಕಂ ಸನಾತನಮ್

ಕರ್ಮಸಿದ್ಧಾಂತದಲ್ಲಿ ನಾಮಮುದ್ರೆಯ ಪ್ರಾರ್ಥನೆಯನ್ನು ಹೀಗೆಯೇ ಕೊಡಲಾಗಿದೆ. ಪಂಚಾಯುಧಧಾರಣೆಯ ಮಂತ್ರಗಳು ಅಗ್ನಿಪುರಾಣದಲ್ಲಿ ವಿಷ್ಣುಪಂಜರಸ್ತೋತ್ರದಲ್ಲಿ ಬಂದಿವೆ. ವಿಶೇಷವಾಗಿ ಇಲ್ಲಿ ಬಿಲ್ಲಿನ ಮತ್ತು ಕತ್ತಿಯ ಮುದ್ರೆಯನ್ನು ಹಚ್ಚಿಕೊಳ್ಳಲು ಬೇಕಾದ ಪ್ರಾರ್ಥನೆಗಳಿವೆ –

ವಿಷ್ಣುಃ ಪ್ರಾಚ್ಯಾಂ ಸ್ಥಿತಶ್ಚಕ್ರೀ ಹರಿರ್ದಕ್ಷಿಣತೋ ಗದೀ
ಪ್ರತೀಚ್ಯಾಂ ಶಾರ್ಙ್ಗಧೃದ್ವಿಷ್ಣುಃ ಜಿಷ್ಣುಃ ಖಡ್ಗೀ ಮಮೋತ್ತರೇ
ಹೃಷೀಕೇಶೋ ವಿಕೋಣೇಷು ತಚ್ಛಿದ್ರೇಷು ಜನಾರ್ದನಃ
ಕ್ರೋಡರೂಪೀ ಹರೇರ್ಭೂಮೌ ನರಸಿಂಹೋಽಂಬರೇ ದರೀ
ಕ್ಷುರಾಂತಮಮಲಂ ಚಕ್ರಂ ಭ್ರಮತ್ಯೇತತ್ಸುದರ್ಶನಮ್
ಅಸ್ಯಾಂಶುಮಾಲಾ ದುಷ್ಪ್ರೇಕ್ಷ್ಯಾ ಹಂತು ಪ್ರೇತನಿಶಾಚರಾನ್
ಗದಾ ಚೇಯಂ ಸಹಸ್ರಾರ್ಚಿಃ ಪ್ರದೀಪ್ತಪಾವಕೋಜ್ಜ್ವಲಾ
ರಕ್ಷೋಭೂತಪಿಶಾಚಾನಾಂ ಡಾಕಿನೀನಾಂ ಚ ನಾಶನೀ
ಶಾರ್ಙ್ಗವಿಸ್ಫೂರ್ಜಿತಂ ಚೈವ ವಾಸುದೇವಸ್ಯ ಮದ್ರಿಪೂನ್
ತಿರ್ಯಙ್ಮನುಷ್ಯಕೂಶ್ಮಾಂಡಪ್ರೇತಾದೀನ್ ಹಂತ್ವಶೇಷತಃ
ಖಡ್ಗಧಾರೋಜ್ಜ್ವಲಜ್ಯೋತ್ಸ್ನಾ ನಿರ್ಧೂತಾ ಯೇ ಸಮಾಹಿತಾಃ
ತೇ ಯಾಂತು ಶಾಮ್ಯತಾಂ ಸದ್ಯೋ ಗರುಡೇನೇವ ಪನ್ನಗಾಃ
ಯೇ ಕೂಶ್ಮಾಂಡಾಸ್ತಥಾ ಯಕ್ಷಾಃ ಯೇ ದೈತ್ಯಾ ಯೇ ನಿಶಾಚರಾಃ
ಪ್ರೇತಾ ವಿನಾಯಕಾಃ ಕ್ರೂರಾ ಮನುಷ್ಯಾ ಜಂಭಗಾಃ ಖಗಾಃ
ಸಿಂಹಾದಯಶ್ಚ ಪಶವೋ ದಂದಶೂಕಾಶ್ಚ ಪನ್ನಗಾಃ
ಸರ್ವೇ ಭವಂತು ತೇ ಸೌಮ್ಯಾಃ ಕೃಷ್ಣಶಂಖರವಾಹತಾಃ
ಚಿತ್ತವೃತ್ತಿಹರಾ ಯೇ ಮೇ ಯೇ ಜನಾಃ ಸ್ಮೃತಿಹಾರಕಾಃ
ಬಲೌಜಸಾಂ ಚ ಹರ್ತಾರಃ ಛಾಯಾವಿಭ್ರಂಶಕಾಶ್ಚ ಯೇ
ಸಂಧ್ಯಾಸಮಿಾಕ್ಷಾ



**ಯೇ ಚೋಪಭೋಗಹರ್ತಾರೋ ಯೇ ಚ ಲಕ್ಷಣನಾಶಕಾಃ**

**ಕೂಶ್ಮಾಂಡಾಸ್ತೇ ಪ್ರಣಶ್ಯಂತು ವಿಷ್ಣುಚಕ್ರರವಾಹತಾಃ**

ಅಗ್ನಿಪುರಾಣದಲ್ಲಿ ಬಂದ 64 ಅಕ್ಷರದ ಸುದರ್ಶನಮಾಲಾಮಂತ್ರವಿದು –

**ಸುದರ್ಶನ ಮಹಾಚಕ್ರ ಶಾಂತ ದುಷ್ಟಭಯಂಕರ**

**ಛಿಂದಿಛಿಂದಿ ಭಿಂದಿಭಿಂದಿ ವಿದಾರಯವಿದಾರಯ**

**ಪರಮಂತ್ರಾನ್ ಗ್ರಸಗ್ರಸ ಭಕ್ಷಯಭಕ್ಷಯ**

**ಭೂತಾನಿ ತ್ರಾಸಯತ್ರಾಸಯ ಹುಂ ಫಟ್ ಸುದರ್ಶನಾಯ ನಮಃ**

ಆಯುಧಗಳ ಮೂಲಮಂತ್ರಗಳು ಪದ್ಮಪುರಾಣದಲ್ಲಿವೆ –

**ಗಂ ಗದಾಯೈ ನಮೋ ಭೂತ್ಯೈ ಸರ್ವಪಾಪಪ್ರಹಾಣಯೇ**

**ಪ್ರಸನ್ನಾ ಭವ ಮೇ ನಿತ್ಯಂ ಆಶೀರ್ವಾದಪರಾಯಣಾ**

**ದೌರ್ಗ್ಗಂಧ್ಯಧ್ವಂಸಿನೀ ಭೂತ್ವಾ ಸರ್ವಪಾಪಹರಾಯ ಚ**

**ಅನೇನೈವ ತು ಮಂತ್ರೇಣ ಗದಾಂ ವೈ ಧಾರಯೇದ್ಬುಧಃ**

**ಪಂ ನಮಃ ಪದ್ಮನಾಭಾಯ ಪದ್ಮಂ ವೈ ಧಾರಯೇತ್ಸುಧೀಃ**

**ಚಂ ಚಕ್ರರೂಪಿಣೇ ವಿಷ್ಣೋ ಧಾರಣಂ ಚಕ್ರಜಂ ಸ್ಮೃತಮ್**

**ಶಂ ಶಂಖರೂಪಿಣೇ ತುಭ್ಯಂ ನಮೋಽಸ್ತು ಸುಖಕಾರಿಣೇ**

**ಮಂತ್ರೇಣಾನೇನ ವೈ ನಿತ್ಯಂ ಧಾರಣಂ ಶಂಖಜಂ ಸ್ಮೃತಮ್**

**ಚತುರ್ಣ್ಣಾಮಾಯುಧಾನಾಂ ತು ಧಾರಣಂ ಮುನಿಭಿಃ ಸ್ಮೃತಮ್**

**ಚಂದನೇನ ಸುಗಂಧೇನ ಗೋಪಿಕಾಚಂದನೇನ ತು**

**ಧಾರಣಂ ತು ವಿಶೇಷೇಣ ಬ್ರಾಹ್ಮಣೈರ್ವೇದಪಾರಗೈಃ**

ಗೊಲ್ಲಿಯರು ಪಂಚಾಯುಧಗಳ ರಕ್ಷಣೆಯನ್ನು ಬಹಳ ಸ್ಪಷ್ಟವಾಗಿ ಕೇಳಿಕೊಂಡಿದ್ದಾರೆ. ಪೂರ್ವದಲ್ಲಿ ಚಕ್ರ, ಪಶ್ಚಿಮದಲ್ಲಿ ಗದೆ, ದಕ್ಷಿಣದಲ್ಲಿ ಬಿಲ್ಲು, ಉತ್ತರದಲ್ಲಿ ಕತ್ತಿ, ಕೋನದಿಕ್ಕುಗಳಲ್ಲಿ ಶಂಖ ರಕ್ಷಿಸುವಂತೆ. ಇದು **ಭಾಗವತದ** ತುಂಬಾ ಅಪೂರ್ವವಾದ ಮಾತು –

**ಚಕ್ರ್ಯಗ್ರತಃ ಸಹಗದೋ ಹರಿರಸ್ತು ಪಶ್ಚಾತ್**



**ತ್ವತ್ಪಾರ್ಶ್ವಯೋರ್ಧನುರಸೀ ಮಧುಹಾ ಜನಶ್ಚ**

**ಕೋಣೇಷು ಶಂಖ ಉರುಗಾಯಃ**

ಜಗನ್ನಾಥದಾಸರ ಹರಿಕಥಾಮೃತಸಾರದಲ್ಲಿಯ ಮಾತು –

**ಮಂದನಾದರು ಸರಿಯೆ ಗೋಪೀ**

**ಚಂದನ ಶ್ರೀಮುದ್ರೆಗಳ ನಲ**

**ವಿಂದ ಧರಿಸುತ ಶ್ರೀತುಳಸಿಪದ್ಮಾಕ್ಷಸರಗಳನು**

**ಕಂಧರದ ಮಧ್ಯದಲಿ ಧರಿಸಿ ಮು**

**ಕುಂದ ಶ್ರೀಭೂರಮಣ ತ್ರಿಜಗ**

**ದ್ವಂದ್ಯ ಸರ್ವಸ್ವಾಮಿ ಮಮ ಕುಲದೈವವೆನೆ ಪೊರೆವ**

ಪ್ರಾಣೇಶವಿಠಲರ ನುಡಿಯಲ್ಲಿ ಪುಂಡ್ರಮುದ್ರಾಧಾರಣೆಯ ಮಹಿಮೆ–

**ಲಕ್ಷ್ಮೀರಮಣನ ಮುದ್ರೆ ಪುಂಡ್ರ ಧರಿಸಿದ ದ್ವಿಜನ**

**ಕುಕ್ಷಿಯೊಳು ಕವಳನ್ನ ಮಾತ್ರ ಕೊಡಲು**

**ಅಕ್ಷಯಾಗುವುದು ಫಲ ಹಿಂದೆಮುಂದೇಳು ಕುಲ**

**ತಕ್ಷಣಕೆ ಶುಚಿಯಾಗಿ ಗತಿ ಕೊಡುವುದು**

**ಪಂಚನಿಶಿ ಬದುಕುವುದು ಬೇಕೂರ್ಧ್ವಪುಂಡ್ರಗಳ**

**ಪಂಚಮುದ್ರೆಯ ಧರಿಸಿ ಹರಿ ಭಜಿಸುತ**

**ವಂಚಿಸಿ ಮುಕುಂದನ ತಿರಸ್ಕರಿಸಿ ಮುದ್ರೆಯನಿಡದೆ**

**ವಿರಿಂಚಿ ಕಲ್ಪಯುತ ಜೀವಿಸಲು ವ್ಯರ್ಥ**

**ನ ಮ್ಲೇಂಛಿತ ವೈ, ನಾಪ ಭಾಷಿತ ವೈ** ಎಂದು ವೇದ ನೀಡಿದ ಆದೇಶ. **ನ ಸುರಾಂ ಪಿಬೇತ್** ಎಂಬಂತೆ ನಿಷೇಧದ ಮಾತುಗಳಿವು. ಮ್ಲೇಂಛರ ಭಾಷೆಯನ್ನು ಬಳಸಬೇಡಿ, ಅಪಭಾಷೆಗಳನ್ನು, ಅಪಭ್ರಂಶ ಭಾಷೆಗಳನ್ನು, ಭಾಷೆಯ ಶಬ್ದದ ಅಪರೂಪಗಳನ್ನು ಗ್ರಾಮ್ಯ ಪ್ರಾಕೃತ ಗುಡ್ಡಗಾಡು ನುಡಿಗಳನ್ನು ಆಡದಿರಲೆಂದು ಇಲ್ಲಿ ನುಡಿಯಲಾಗಿದೆ. **ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್** ಎಂದಂತೆ ದೇವಭಾಷೆಯ ಪದಗಳನ್ನೇ ಬಳಸುವಂತೆ ವಿಧಿಸಿದ್ದಾರೆ.



ಇದರಿಂದ ಜಪಪೂಜಾವ್ರತಹೋಮಾದಿ ಧರ್ಮ–ಕರ್ಮಗಳಲ್ಲಿ ಸಂಸ್ಕೃತ ಭಾಷೆಯ ಹೊರತು ಇತರ ಭಾಷೆಗಳನ್ನು ಯಾವುದಕ್ಕೂ ಉಪಯೋಗಿಸುವಂತಿಲ್ಲ. ಸಿದ್ಧಾಂತಗಳನ್ನು ಕಲಿಯಲು ಮಾತ್ರವೇ ಅನುವಾದಪ್ರಪಂಚದಲ್ಲಿ ಬಳಸು ಭಾಷೆಗಳನ್ನು ಬಳಸಬಹುದಷ್ಟೆ. ಇದು ಸಾಧನೋಪಯೋಗಿಯಾಗಿ ಅಲ್ಲ. ಅಷ್ಟೇ ಅಲ್ಲ, ಸಾಧನೆಗೆ ವಿರೋಧಿಯೂ ಆಗಿದೆ ಎನ್ನುವುದು ವಿಧಿನಿಷೇಧ ವಾಕ್ಯಗಳ ಆಂತರ್ಯ.

ಹಿಂದೆ ಲೋಕಕಂಟಕನಾದ ವೃತ್ರನನ್ನು ಕೊಲ್ಲಲು ಉಪಾಯ ತಿಳಿಸಲು ದೇವತೆಗಳು ಚತುರ್ಮುಖನಲ್ಲಿ ಪ್ರಾರ್ಥಿಸಿಕೊಂಡರು. ದೇವತೆಗಳಿಗೆ ಸೋಲಾಗದಂತೆ ಗೆಲವು ಸಿಗುವಂತೆ ಬಲ ವೃದ್ಧಿಸುವಂತೆ ಚತುರ್ಮುಖ ಭಗವಂತನ ನಾಮಗಳಿಂದ ಪುಂಡ್ರಗಳನ್ನು ಧರಿಸಲು ಹೇಳಿದನು. ಹಾಗೆಯೆ ಶಂಖಚಕ್ರಗಳನ್ನು ತೋಳಿನಲ್ಲಿ ಧರಿಸಿಕೊಳ್ಳಲು ತಿಳಿಸಿ ಭಗವಂತನ ನಾಮಗಳನ್ನು ಬಾಯಲ್ಲಿ ಹೇಳಿ ಎಂದನು. ದೇವತೆಗಳು ಭಗವಂತನ ನಾಮಗಳಿಂದ ಪುಂಡ್ರಧರಿಸಿ ಶಂಖಚಕ್ರ ಚಿಹ್ನಿತರಾಗಿ ಬಲಪಡೆದು ಭಗವಂತನ ನಾಮೋಚ್ಚಾರಣೆಯ ಜತೆ ಎಲ್ಲೆಡೆ ತುಂಬಿದ ವೃತ್ರನನ್ನು ಕೊಂದರು ಎಂದು **ವಿಷ್ಣುತೀರ್ಥ**ರು ತಿಳಿಸುತ್ತಾರೆ –

**ಮಧುಘ್ನನಾಮಭಿರ್ದೇಹೇ ಧೃತ್ವಾ ತದ್ಧೃತಚಂದನಮ್**
**ಚಕ್ರಶಂಖೌ ತಥಾಂಸೇ ತು ಕಂಠೇ ಪದ್ಮಾಕ್ಷಮೇವ ಚ**
**ಹರೇರ್ನಾಮಾನಿ ಸುಮುಖೇ ತತೋ ವೃತ್ರಂ ಹನಿಷ್ಯಥ**

ಹಿಂದೆ ದಶರಥ ಶ್ರವಣನನ್ನು ಪ್ರಾಣಿಯೆಂದು ತಿಳಿದು ಕೊಂದ. ಆತನ ತಂದೆಗೆ ಪಾತ್ರೆಯಲ್ಲಿ ನೀರು ಹೊತ್ತು ಒಯ್ದ. ತಡವೇನೆಂದು ಕೇಳಿದನಾತ. ನಾನು ಬ್ರಹ್ಮಹತ್ಯೆ ಮಾಡಿದ ದಶರಥನೆಂದ. ನನಗೇಕೆ ಈ ಬಗೆಯ ಪುತ್ರಶೋಕ ಬಂದಿತೆಂದು ಶ್ರವಣನ ತಂದೆ ಗೋಳಾಡಿದ. ನಾನು ಹಿಂದೆ ಮಾಡಿದ ಯಾವ ಕೆಟ್ಟ ಕರ್ಮದ ಫಲವಿದೆಂದು ಗೋಗರೆದ. ದೇವರ ಚಕ್ರಶಂಖಾದಿಗಳ ಮುದ್ರೆ ಹೊತ್ತವಗೆ ಎಲ್ಲಿ ಅಪಚಾರಗೈದಿರುವೆನೋ, ಅದರ ಫಲವೇನೋ ಎನ್ನುವುದಾಗಿ ಹಪಹಪಿಸಿದ. ಹೀಗೆ ಅಗ್ನಿಪುರಾಣ ಮುದ್ರಾಂಕಿತನ ಹಿರಿಮೆಯನ್ನು ಸಾರಿದೆ –



ಶಿಲಾಬುದ್ಧಿಃ ಕೃತಾ ಕಿಂ ವಾ ಪ್ರತಿಮಾಯಾಂ ಹರೇರ್ಮ್ಮಯಾ

ಕಿಂ ಮಯಾ ಪಥಿ ದೃಷ್ಟಸ್ಯ ವಿಷ್ಣುಭಕ್ತಸ್ಯ ಕರ್ಹಿಚಿತ್

ತನ್ಮುದ್ರಾಂಕಿತದೇಹಸ್ಯ ಕಿಂ ತಸ್ಯಾನಾದರಃ ಕೃತಃ

ಯೇನ ಕರ್ಮ್ಮವಿಪಾಕೇನ ಪುತ್ರಶೋಕೋ ಮಮೇದೃಶಃ

ಶ್ರೀಕೃಷ್ಣ ದ್ವಾರಕೆಯಲ್ಲಿ ಪ್ರವೇಶಯೋಗ್ಯರು ಚಕ್ರಾಂಕಿತರೆಂದು ತಿಳಿಸಿದ್ದನ್ನು ಹರಿವಂಶ ಗುರುತಿಸಿದೆ–

ಚಕ್ರಾಂಕಿತಾಃ ಪ್ರವೇಷ್ಟವ್ಯಾಃ ಯಾವದಾಗಮನಂ ಮಮ

ಶೇಷಸಂಹಿತೆಯಲ್ಲಿ ಚತುರ್ಮುಖನ ದೀಕ್ಷೋಪದೇಶ ಬಂದಿದೆ –

ಸ್ವಸ್ಯ ಚಕ್ರಾದಿಕಂ ಕೃತ್ವಾ ದದೌ ಚ ಚತುರಕ್ಷರೀಮ್

ಚತುರ್ಮ್ಮುಖಸ್ಯ ಸೃಷ್ಟ್ಯಾದೌ ಮತ್ಸ್ಯರೂಪೋ ಹರಿಃ ಸ್ವಯಮ್

ಅಗ್ನಿಪುರಾಣವು ಕತ್ತಿಯ ಇತಿಹಾಸವನ್ನು ಬಿತ್ತರಿಸಿದೆ –

ಬ್ರಹ್ಮಾ ವೈ ಮೇರುಶಿಖರೇ ಸ್ವರ್ಗ್ಗಗಂಗಾತಟೇಽಯಜತ್

ಲೋಹದೈತ್ಯಂ ಸ ದದೃಶೇ ವಿಘ್ನಂ ಯಜ್ಞೇ ತು ಚಿಂತಯನ್

ತಸ್ಯ ಚಿಂತಯತೋ ವಹ್ನೇಃ ಪುರುಷೋಽಭೂದ್ಬಲೀ ಮಹಾನ್

ವವಂದೇಽಜಂ ಚ ತಂ ದೇವಾ ಅಭ್ಯನಂದಂತ ಹರ್ಷಿತಾಃ

ತಸ್ಮಾತ್ಸ ನಂದಕಃ ಖಡ್ಗೋ ದೇವೋಕ್ತೋ ಹರಿರಗ್ರಹೀತ್

ಮಹಾಭಾರತದಲ್ಲಿ ಕತ್ತಿಯ ಉತ್ಪತ್ತಿಯ ಬಗ್ಗೆ ಇದೇ ಕತೆಯಿದೆ. ಕತ್ತಿಯ ಅಭಿಮಾನಿದೇವತೆಯ ಲಕ್ಷಣವಿದೆ. ಬ್ರಹ್ಮನಿಂದಾಗಿ ಯಜ್ಞಕುಂಡದಲ್ಲಿ ಹುಟ್ಟಿಬಂದ ಕತ್ತಿಯು ಆತನಿಂದ ಶಿವನಿಗೆ ದಾನವರ ನಾಶಕ್ಕಾಗಿ ನೀಡಲ್ಪಟ್ಟಿತು. ದುರುಳಸಂಹಾರದ ಬಳಿಕ ಶಿವನು ತನಗೊಪ್ಪಿಸಿದ ಕೆಲಸ ಮುಗಿಸಿ, ಅದನ್ನು ಧರ್ಮಪಾಲನೆಯಲ್ಲಿ ತೊಡಗಿದ್ದ ಹರಿಗೆ ಒಪ್ಪಿಸಿದ. ಅಲ್ಲಿಂದ ಆ ಕತ್ತಿಯು ರಾಜವಂಶದಲ್ಲಿ ಪಾಂಡವರ ತನಕ ಪರಂಪರೆಯಲ್ಲಿ ಹರಿದು ಬಂತು –

ದಾನವೇಂದ್ರಾಸ್ತ್ವತಿಕ್ರಮ್ಯ ತತ್ಪಿತಾಮಹಶಾಸನಮ್

ಧರ್ಮಸ್ಯಾಪನಯಂ ಚಕ್ರುಃ ಕ್ರೋಧಲೋಭಸಮನ್ವಿತಾಃ



**ತತೋ ವರ್ಷಸಹಸ್ರಾಂತೇ ವಿತಾನಮಕರೋತ್ಪ್ರಭುಃ**

**ವಿದಾರ್ಯಾಗ್ನಿಂ ತಥಾ ಭೂತಂ ಉತ್ಥಿತಂ ಶ್ರೂಯತೇ ತದಾ**

**ನೀಲೋತ್ಪಲಸವರ್ಣಾಭಂ ತೀಕ್ಷ್ಣದಂಷ್ಟ್ರಂ ಕೃಶೋದರಮ್**

**ಪ್ರಾಂಶುಮುದ್ಧರ್ಷಣಂ ಚಾಪಿ ತಥೈವ ಹ್ಯಮಿತೌಜಸಮ್**

**ಮಯ್ಯೈವಂ ಚಿಂತಿತಂ ಭೂತಂ ಅಸಿರ್ನ್ನಾಮ್ನೈಷ ವೀರ್ಯವಾನ್**

**ರಕ್ಷಣಾರ್ಥಾಯ ಲೋಕಸ್ಯ ವಧಾಯ ಚ ಸುರದ್ವಿಷಾಮ್**

**ತತಸ್ತದ್ರೂಪಮುತ್ಸೃಜ್ಯ ಬಭೌ ನಿಸ್ತ್ರಿಂಶ ಏವ ಸಃ**

**ವಿಮಲಸ್ತೀಕ್ಷ್ಣಧಾರಶ್ಚ ಕಾಲಾಂತಕ ಇವೋದ್ಯತಃ**

**ತತಸ್ತಂ ನೀಲಕಂಠಾಯ ರುದ್ರಾಯರ್ಷಭಕೇತವೇ**

**ಬ್ರಹ್ಮಾ ದದಾವಸಿಂ ತೀಕ್ಷ್ಣಂ ಅಧರ್ಮಪ್ರತಿವಾರಣಮ್**

**ಸ ರುದ್ರೋ ದಾನವಾನ್ ಹತ್ವಾ ಕೃತ್ವಾ ಧರ್ಮೋತ್ತರಂ ಜಗತ್**

**ಅಸಿಂ ಧರ್ಮಸ್ಯ ಗೋಪ್ತಾರಂ ದದೌ ಸತ್ಕೃತ್ಯ ವಿಷ್ಣವೇ**

**ಕೃತ್ತಿಕಾಸ್ತಸ್ಯ ನಕ್ಷತ್ರಂ ಅಸೇರಗ್ನಿಶ್ಚ ದೈವತಮ್**

ಕತ್ತಿಯ ಎಂಟು ಹೆಸರುಗಳು ಇಲ್ಲಿ ಬಂದಿವೆ –

**ಅಸೇರಷ್ಟೌ ಹಿ ನಾಮಾನಿ ರಹಸ್ಯಾನಿ ನಿಬೋಧ ಮೇ**

**ಅಸಿರ್ವಿಶಸನಃ ಖಡ್ಗಃ ತೀಕ್ಷ್ಣಚರ್ಮಾ ದುರಾಸದಃ**

**ಶ್ರೀಗರ್ಭೋ ವಿಜಯಶ್ಚೈವ ಧರ್ಮಪಾಲಸ್ತಥೈವ ಚ**

**ಭಾಗವತಪುರಾಣದಲ್ಲಿ** ಶ್ರೀಕೃಷ್ಣನು ಉದ್ಧವನಿಗೆ ತನ್ನ ವಿಭೂತಿಯ ರಾಶಿಯನ್ನು ತಿಳಿಸುವಲ್ಲಿ ಆಯುಧಗಳಲ್ಲಿ ತಾನು ಬಿಲ್ಲು ಎನ್ನುವನು– **ಆಯುಧಾನಾಂ ಧನುರಹಮ್**. ಹೀಗಾಗಿ ಬಿಲ್ಲುಮುದ್ರೆಯನ್ನು ತಲೆಯಲ್ಲಿ ಉತ್ತಮ ಸ್ಥಾನದಲ್ಲಿ ಹಚ್ಚಿಕೊಳ್ಳಲು ತಿಳಿಸಿಕೊಟ್ಟಿದ್ದಾರೆ.

ಸೃಷ್ಟಿಯ ಆರಂಭದಲ್ಲಿ ಹುಟ್ಟಿಬಂದ ಎರಡು ಬಿಲ್ಲುಗಳಲ್ಲಿ ಒಂದನ್ನು ಹರಿಯು ಸ್ವೀಕರಿಸಿದರೆ ಮತ್ತೊಂದು ಬಿಲ್ಲನ್ನು ಪಿನಾಕವನ್ನು ಹರನು ಸ್ವೀಕರಿಸಿದನು. ಹರಿಯ ಎದುರಿನಲ್ಲಿ ಹರನು ಹೋರಾಟ ನೀಡಲಾಗದೆ ಸ್ತಬ್ಧನಾದನು.



ಹೀಗೆ ಪಿನಾಕದಿಂದ ಅತಿಶ್ರೇಷ್ಠವೆನಿಸಿಧ ಬಿಲ್ಲು ಶಾರ್ಙ್ಗ. ಅದುವೇ ಕೋದಂಡ. ಪರಶುರಾಮನಿಂದ ಕ್ಷತ್ರಸಂಹಾರದಲ್ಲಿ ಉಪಯೋಗಿಸಲ್ಪಟ್ಟ ಬಿಲ್ಲಿದು. ರಾಮನು ಸೀತಾಸ್ವಯಂವರದಲ್ಲಿ ಜನಕನಿಗೆ ಶಿವನು ನೀಡಿದ ಪಿನಾಕಬಿಲ್ಲನ್ನು ಮುರಿದಿದ್ದಾನೆ. ಕತೆ ತಿಳಿದ ಪರಶುರಾಮನು ನಡುದಾರಿಯಲ್ಲಿ ಬಿಲ್ಲುಗಳೆರಡರ ಮಾಹಿತಿಯನ್ನು ತಿಳಿಸಿ ತನ್ನ ಕೋದಂಡವನ್ನು ರಾಮನಿಗೆ ನೀಡಿ ಹೆದೆಯೇರಿಸಲು ತಿಳಿಸುವನು. ಅದರಂತೆ ರಾಮನು ಕೋದಂಡವನ್ನು ಸ್ವೀಕರಿಸಿ ಹೆದೆಯೇರಿಸಿ ಪರಶುರಾಮನೊಳಗೆ ಅಡಗಿದ್ದ ಅತುಲ ರಕ್ಕಸನನ್ನು ಸದೆಬಡಿಯುವನು. ಹೀಗಿದೆ ಶಾರ್ಙ್ಗದ ಮಹಿಮೆ ಮಧ್ವಾಚಾರ್ಯರ **ಮಹಾಭಾರತತಾತ್ಪರ್ಯನಿರ್ಣಯದ** 4ನೆಯ ಅಧ್ಯಾಯದಲ್ಲಿ–

**ಶೃಣುಷ್ವ ರಾಮ ತ್ವಮಿಹೋದಿತಂ ಮಯಾ**
**ಧನುರ್ದ್ವಯಂ ಪೂರ್ವಮಭೂನ್ಮಹಾದ್ಭುತಮ್**
**ಉಮಾಪತಿಸ್ತ್ವೇಕಮಧಾರಯತ್ತತೋ**
**ರಮಾಪತಿಶ್ಚಾಪರಮುತ್ತಮೋತ್ತಮಮ್** (44)
**ತತೋ ಹಿ ಯುದ್ಧಾಯ ರಮೇಶಶಂಕರೌ**
**ವ್ಯವಸ್ಥಿತೌ ತೌ ಧನುಷೀ ಪ್ರಗೃಹ್ಯ**
**ಯತೋಽಂತರಸ್ಯೈಷ ನಿಯಾಮಕೋ ಹರಿಃ**
**ತತೋ ಹರೋಽಗ್ರೇಽಸ್ಯ ಶಿಲೋಪಮೋಽಭೂತ್** (46)
**ತತಃ ಪ್ರಣಮ್ಯಾಶು ಜನಾರ್ದನಂ ಹರಃ**
**ಪ್ರಸನ್ನದೃಷ್ಟ್ಯಾ ಹರಿಣಾಭಿವೀಕ್ಷಿತಃ**
**ಜಗಾಮ ಕೈಲಾಸಮಮುಷ್ಯ ತದ್ಧನುಃ**
**ತ್ವಯಾ ಪ್ರಭಗ್ನಂ ಕಿಲ ಲೋಕಸನ್ನಿಧೌ** (49)
**ಧನುರ್ಯದನ್ಯದ್ಧರಿಹಸ್ತಯೋಗ್ಯಂ**
**ತತ್ಕಾರ್ಮ್ಮುಕಾತ್ ಕೋಟಿಗುಣಂ ಪುನಶ್ಚ**
**ವರಂ ಹಿ ಹಸ್ತೇ ತದಿದಂ ಗೃಹೀತಂ**



**ಮಯಾ ಗೃಹಾಣೈತದತೋ ಹಿ ವೈಷ್ಣವಮ್** (50)

**ಇತೀವ ರಾಮಾಯ ಸ ರಾಘವಃ ಶರಂ**

**ವಿಕರ್ಷಮಾಣೋ ವಿನಿಹತ್ಯ ಚಾಸುರಮ್** (58)

ಈ ಕತೆ ವಾಲ್ಮೀಕಿರಾಮಾಯಣದಲ್ಲಿಯೂ ಬಂದಿದೆ. ಗದೆಯ ಕಥೆಯನ್ನು ಆದಿಗದಾಧರನ ಚಿಂತನೆಯಲ್ಲಿ ಗಯಾಮಹಿಮೆಯ ಬಣ್ಣನೆಯಲ್ಲಿ **ಅಗ್ನಿಪುರಾಣ** ಹೇಳಿದೆ. ಗದನೆಂಬ ಒಬ್ಬ ಅಸುರನು ವಿಷ್ಣುವಿನಿಂದ ಹತನಾದನು. ಆತನ ಎಲುಬಿನಿಂದ ವಿಶ್ವಕರ್ಮನು ತಯಾರಿಸಿದ ಆಯುಧವೇ ಗದೆ –

**ಗದೋ ನಾಮಾಸುರೋ ರೌದ್ರಃ ಸ ಹತೋ ವಿಷ್ಣುನಾ ಪುರಾ**

**ತದಸ್ಥಿನಿರ್ಮ್ಮಿತಾ ಚಾದ್ಯಾ ಗದಾ ಯಾ ವಿಶ್ವಕರ್ಮ್ಮಣಾ**

**ಆದ್ಯಯಾ ಗದಯಾ ಹೇತಿಪ್ರಮುಖಾ ರಾಕ್ಷಸಾ ಹತಾಃ**

**ಗದಾಧರೇಣ ದೇವೇನ ತಸ್ಮಾದಾದಿಗದಾಧರಃ**

**ದೇವಮಯ್ಯಾಂ ಶಿಲಾಯಾಂ ಚ ಸ್ಥಿತೇ ಚಾದಿಗದಾಧರೇ**

**ಗಯಾಸುರೇ ನಿಶ್ಚಲೇಽಥ ಬ್ರಹ್ಮಾ ಪೂರ್ಣ್ಣಾಹುತಿಂ ದದೌ**

**ಮಹಾಭಾರತವು** ಲಕ್ಷಣವಂತರಾದರೇನೇ ಭಗವಂತನು ಆರಾಧ್ಯನು ಎನ್ನುವುದಾಗಿ ಹೇಳಿದೆ. ಅಲ್ಲಿ ಲಕ್ಷಣ ಎಂದರೆ ಚಿಹ್ನೆ ಎಂದು ವ್ಯಾಖ್ಯಾನಿಸುತ್ತಾ ಎಲ್ಲರೂ ಶಂಖಚಕ್ರಚಿಹ್ನಿತರಾಗಲು ಸೂಚನೆಯಿತ್ತಿದ್ದಾರೆ –

**ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈಶ್ಚ ಕೃತಲಕ್ಷಣೈಃ**

**ಅರ್ಚ್ಚನೀಯಶ್ಚ ಸೇವ್ಯಶ್ಚ ನಿತ್ಯಯುಕ್ತೈಃ ಸ್ವಕರ್ಮ್ಮಸು**

ಈ ಲೋಕದಲ್ಲಿ ದೇಹಪಾತದ ಬಳಿಕ ಮುಂದೆ ಶಾಶ್ವತವಾದ ವೈಕುಂಠಲೋಕಕ್ಕೆ ತೆರಳಲು ಈ ವೈಷ್ಣವ ಚಿಹ್ನಧಾರಣೆ ವಿಷ್ಣುನಾಮಸ್ಮರಣೆ ಬಾಹ್ಯ ಹಾಗೂ ಆಂತರ ದೀಕ್ಷೆಯಾಗಿ ಸಾಧಕನಿಗೆ ಬೇಕೇ ಬೇಕು. ಆದರೆ ಪುಂಡ್ರಧಾರಣೆಯ ವಿಷಯದಲ್ಲಿನ ಹಾಗೆ ಕೇವಲವಾಗಲಿ ತಪ್ತವಾಗಲಿ ಚಕ್ರಾದಿಧಾರಣೆ ಮಾಡಿದವ ಅಯೋಗ್ಯ ಎಂಬ ಹಲವು ಮಾತುಗಳನ್ನು ಪುರಾಣಮಾತುಗಳನ್ನಾಗಿ ಧರ್ಮಶಾಸ್ತ್ರಜ್ಞರನೇಕರು ಗುರುತಿಸಿ ನಿಂದಿಸಿದ್ದನ್ನು ನಿರ್ಣಯಸಿಂಧುಕಾರ ಎತ್ತಿ



ಹಿಡಿದಿದ್ದಾನೆ. ಈ ಸಂಕಟದ ಪರಿಹಾರಕ್ಕೆ ಶಿಷ್ಟಾಚಾರವೇ ಶರಣು ಎಂದು ತಿಳಿಸಿ ಜಾರಿಕೊಂಡಿದ್ದಾನೆ. ಶ್ರಾದ್ಧಭೋಜನದಲ್ಲಿಯೂ ತಪ್ತಮುದ್ರಾಧಾರಿ ಅಯೋಗ್ಯ ಎಂದು ಪುರಾಣ ಹೇಳಿದೆ ಎಂದು ಸ್ಮೃತಿಕಾರರು ಕೆಲವರು ತಿಳಿಸಿದ್ದುಂಟು. ನಿರ್ಣಯಸಿಂಧು ಇದನ್ನು ಗುರುತಿಸಿದೆ; ನಿರ್ಣಯ ನೀಡಿಲ್ಲ.

ಸಾಳಗ್ರಾಮ ಸನ್ನಿಧಾನದಲ್ಲಿ ಶ್ರಾದ್ಧ ಹಾಕಬೇಕೆಂಬುದನ್ನು ಒಪ್ಪಿರುವ ಧರ್ಮಶಾಸ್ತ್ರಜ್ಞರು ಇಲ್ಲಿ ಗಂಭೀರವಾಗಿ ಚಿಂತಿಸಬೇಕಾಗಿದೆ. ಗಂಗೆಯಲ್ಲಿ ಪಾವಿತ್ರ್ಯ ಹುಡುಕುವವರು ಗಂಗಾಸನ್ನಿಧಾನದಲ್ಲಿ ಕ್ಷೇತ್ರವಿಧಿ ನಡೆಸುವವರು ಅಸ್ಥಿಯನ್ನು ಗಂಗೆಯಲ್ಲಿ ವಿಸರ್ಜಿಸುವವರು ಇಲ್ಲಿ ನೆನೆಯಬೇಕಾಗಿದೆ. ವಿಷ್ಣುಪಾದದಲ್ಲಿ ಪಿಂಡ ನೀಡುವವರು ಕಣ್ಣುಹಾಯಿಸಬೇಕಿದೆ. ಸುದರ್ಶನ-ಸಾಳಗ್ರಾಮ ಬೇಕು, ವಿಷ್ಣುಚಕ್ರ ಚಿಹ್ನೆ ಬೇಡ; ವಿಷ್ಣುಪಾದೋದಕ ಬೇಕು; ಗಂಗಾಜನಕ ವಿಷ್ಣು ಬೇಡ-ಇದು ಎಂತಹ ನ್ಯಾಯ ಎನಿಸುವುದು? ನಿರ್ಮಲ ಮನಸ್ಸಿನಿಂದ ವಿಚಾರಿಸಿದರೆ ಗಂಗಾಧರನ ಬಳಿ ಬೇಡಿಕೊಂಡರೆ ಪರಮ ವೈಷ್ಣವನಾದ ಶಿವನು ವಿಷ್ಣುಚಿಂತನೆಯನ್ನು ನೀಡಿಯಾನು ಎಲ್ಲರಿಗೂ.

ವೈಷ್ಣವದೀಕ್ಷೆಯನ್ನು ಪಡೆಯದವ ಜನನ ಮರಣ ಚಕ್ರವನ್ನು ದೂರಗೊಳಿಸುವ ಮುಕುಂದನನ್ನು ಪೂಜಿಸದವ ಬದುಕಿ ಏನು ಪಡೆದಾನು? ಎನ್ನುವುದಾಗಿ ಆಚಾರ್ಯ ಮಧ್ವರು ವ್ಯಾಸರ ಮಾತನ್ನು ತೋರಿಸಿರುವರು –

**ತೇ ನರಾಃ ಪಶವೋ ಲೋಕೇ ಕಿಂ ತೇಷಾಂ ಜೀವನೇ ಫಲಮ್**
**ಯೈರ್ನ ಲಬ್ಧಾ ಹರೇರ್ದೀಕ್ಷಾ ನಾರ್ಚಿತೋ ವಾ ಜನಾರ್ದನಃ**

*ಅತ್ಯಂತ ಸಂಕ್ಷೇಪಾಚಮನವು ಸ್ಮೃತ್ಯರ್ಥಸಾರದಲ್ಲಿ –*
***ತ್ರಿಃಪೀತ್ವಾಪೋ ಹಸ್ತಂ ಪ್ರಕ್ಷಾಳ್ಯ ದಕ್ಷಿಣಕರ್ಣಂ ಸ್ಪೃಶೇತ್***
*ಮೂರು ಬಾರಿ ನೀರು ಕುಡಿದು, ಎಡಕೈ ತೊಳೆದು, ಬಲಕಿವಿಯನ್ನು ಮುಟ್ಟಬೇಕು. ಗಡಿಬಿಡಿಯಲ್ಲಿ ಆಚಮನ ಮಾಡುವವರು ನೀರೇನೊ ಕುಡಿಯುತ್ತಾರೆ, ಅಂಗಸ್ಪರ್ಶ ಮಾಡುವುದಿಲ್ಲ. ಅಂತಹವರು ಬಲಕಿವಿಯನ್ನಾದರೂ ಮುಟ್ಟಲಿ ಎಂಬುದು ಸ್ಮೃತಿಯ ಆಶಯ.* ***ಪಂಚಸಂಸ್ಕಾರಸಂಗ್ರಹ****ದಲ್ಲಿ ಗೋಮಯವನ್ನಾದರೂ ಮುಟ್ಟಬೇಕು ಎಂಬ ಮಾತನ್ನೂ ತಿಳಿಸಿದ್ದಾರೆ.*

# ಆಚಮನ

**ವಾಯುಪುರಾಣವು** ಆಚಮನ ನಡೆಸದೆ ಯಾವ ಕ್ರಿಯೆಯನ್ನು ನಡೆಸಿದರೂ ಆ ಕ್ರಿಯೆ ಫಲದಾಯಕವಾಗದೆಂದು ತಿಳಿಸಿದೆ –

**ಕ್ರಿಯಾಂ ಯಃ ಕುರುತೇ ಮೋಹಾತ್ ಅನಾಚಮ್ಯೈವ ನಾಸ್ತಿಕಃ**
**ಭವಂತಿ ಹಿ ವೃಥಾ ತಸ್ಯ ಕ್ರಿಯಾಃ ಸರ್ವಾಃ ನ ಸಂಶಯಃ**

**ಬೃಹದ್ಬ್ರಹ್ಮಸಂಹಿತೆಯು** ಕರ್ಮಾರಂಭ ಹಾಗೂ ಕರ್ಮದ ಕೊನೆಯಲ್ಲಿಯೂ ಆಚಮನವನ್ನು ವಿಧಿಸಿದೆ. ಮಿಂದು ಬಂದ ಬಳಿಕ ಬೆಚ್ಚನೆಯ ಬಟ್ಟೆ ತೊಟ್ಟ ಮೇಲೂ ಆಚಮನಗೈಯಲಿದೆ. ಸ್ನಾನ ಬಾಹ್ಯಶುದ್ಧಿಯನ್ನು ನೀಡಿದರೆ ಆಂತರಶುದ್ಧಿಗೆ ಮಂತ್ರಪೂತವಾದ ನೀರಿನಿಂದ ನಡೆಸಲ್ಪಡುವ ಆಚಮನೆಯೇ ಮೂಲ –

**ಉಪಕ್ರಮೋಪಸಂಹಾರೇ ಕರ್ಮ್ಮಣೋ ನೀವಿಬಂಧನೇ**
**ಕೇಶವಾದಿಭಿರಾಚಮ್ಯ ಸದ್ಯಃ ಶುದ್ಧಿಮವಾಪ್ನುಯಾತ್**
**ಅಕೃತ್ವಾಽಽಚಮನಂ ವಿಪ್ರೋ ನ ಕರ್ಮ್ಮಫಲಭಾಗ್ಭವೇತ್**
**ಯಥಾಭಿಷೇಕಜಾ ಶುದ್ಧಿಃ ಬಹಿರೇವ ಪ್ರಜಾಯತೇ**
**ಮಂತ್ರಪೂತಜಲೈಸ್ತದ್ವತ್ ಆಚಾಮೇ ಹ್ಯಂತರಾ ಶುಚಿಃ**

ಶುಭಕ್ರಿಯೆಯ ನಡುವೆ ಸೀನು ಬಂದರೆ, ಉಗುಳು ಬಂದರೆ, ನಿದ್ದೆ ಮಾಡಿದರೆ, ಬಟ್ಟೆ ಬಿಚ್ಚಿಹೋಗಿ ಕಟ್ಟಿಕೊಂಡರೆ ಕಣ್ಣೀರು ಸುರಿಸಿದರೆ ಕ್ರಿಯೆಯ ಸಾಫಲ್ಯಕ್ಕಾಗಿ ನಡುವೆ ಆಚಮನ ಮಾಡಲಿದೆ. ಇದು ಶ್ರೌತ್ರಾಚಮನ. ಅಂದರೆ ಕಿವಿ ಮುಟ್ಟಿಕೊಂಡರಾಯಿತು.

**ಕ್ಷುತೇ ನಿಷ್ಠೀವನೇ ಸುಪ್ತೇ ಪರಿಧಾನೇಽಶ್ರುಪಾತನೇ**
**ಏಷು ಕರ್ಮಸು ನಾಜಾಮೇತ್ ದಕ್ಷಿಣಂ ಶ್ರವಣಂ ಸ್ಪೃಶೇತ್**

ಪ್ರಣವದೊಡನೆ ಕರ್ಣಸ್ಪರ್ಶ ಮತ್ತು ಸೂರ್ಯದರ್ಶನ ಆಚಮನದ ಬಗೆ ಎನ್ನುವುದಾಗಿ **ಅನುಶಾಸನ** –



**ಸ್ಪೃಶೇತ್ಕರ್ಣ್ಣಂ ಸಪ್ರಣವಂ ಸೂರ್ಯಮೀಕ್ಷೇತ್ಸದಾ ತದಾ**

ಬಲಕಿವಿಯಲ್ಲಿ ತೀರ್ಥಾಭಿಮಾನಿದೇವತೆಗಳ ಸನ್ನಿಧಾನವಿದ್ದು, ಕಿವಿಯ ಸ್ಪರ್ಶದಿಂದ ಪಾವಿತ್ರ್ಯವನ್ನು ಪಡೆಯಬಹುದಾಗಿದೆ ಎಂದು **ಪರಾಶರಸ್ಮೃತಿ** ಹೇಳಿದೆ–

**ಪ್ರಭಾಸಾದೀನಿ ತೀರ್ಥಾನಿ ಗಂಗಾದಿಸರಿತಸ್ತಥಾ**

**ದ್ವಿಜಸ್ಯ ದಕ್ಷಿಣೇ ಕರ್ಣ್ಣೇ ವಸಂತಿ ಮನುರಬ್ರವೀತ್**

ಸಹಜವಾಗಿ ಶುದ್ಧಿಯನ್ನು ತರುವಲ್ಲಿ ಆಚಮನದಂತೆ ದಕ್ಷಿಣಶ್ರೋತ್ರ ಸ್ಪರ್ಶವೂ ಒಂದು ಎಂದು **ಮಾರ್ಕಂಡೇಯರ** ಮಾತು –

**ಕುರ್ಯಾದಾಚಮನಂ ಸ್ಪರ್ಶಂ ಗೋಪೃಷ್ಠಸ್ಯಾರ್ಕ್ಕದರ್ಶನಮ್**

**ಕುರ್ವೀತಾಲಂಭನಂ ವಾಽಪಿ ದಕ್ಷಿಣಂ ಶ್ರವಣಂ ಸ್ಪೃಶೇತ್**

ಸುಳ್ಳು ಹೇಳಿದರೂ ಧರ್ಮವನ್ನು ನಂಬದವರ ಬಳಿ ಮಾತನಾಡಿದರೂ ಪವಿತ್ರನಾಗಬೇಕೆನ್ನುವ ವಿಷಯದಲ್ಲಿ ಶ್ರೋತ್ರಾಚಮನವನ್ನು ತಿಳಿಸಿದ್ದಾರೆ. ಕಿವಿಯಲ್ಲಿ ನಿಂತ ದೇವತೆಗಳು ಶುದ್ಧಿಗೆ ಇಲ್ಲಿ ಮುಖ್ಯ ಪಾತ್ರವಹಿಸುವರು –

**ಕ್ಷುತೇ ನಿಷ್ಠೀವಿತೇ ಚೈವ ದಂತೋಚ್ಛಿಷ್ಟೇ ತಥಾಽನೃತೇ**

**ಪತಿತಾನಾಂ ಚ ಸಂಭಾಷೇ ದಕ್ಷಿಣಂ ಶ್ರವಣಂ ಸ್ಪೃಶೇತ್**

**ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಸೋಮಃ ಸೂರ್ಯೋಽನಿಲಸ್ತಥಾ**

**ತೇ ಸರ್ವೇ ಹ್ಯಪಿ ತಿಷ್ಠಂತಿ ಕರ್ಣ್ಣೇ ವಿಪ್ರಸ್ಯ ದಕ್ಷಿಣೇ** (ಪರಾಶರಸ್ಮೃತಿ)

ಚಕ್ರಶಂಖಗಳ ಆಭರಣವನ್ನು ಎಲ್ಲರೂ ಧರಿಸಬೇಕೆಂದು **ಶಾಂಡಿಲ್ಯಸ್ಮೃತಿ**ಯು ತಿಳಿಸಿದೆ. ಹೀಗೆ ಕಿವಿಗಳೆರಡರಲ್ಲಿ ಚಕ್ರಶಂಖಗಳನ್ನು ಧರಿಸಿದ್ದಲ್ಲಿ ಬಲಕಿವಿಯ ಸ್ಪರ್ಶವು ನಾರಾಯಣನ ಚಕ್ರಸ್ಪರ್ಶದಿಂದ ಪಾವಿತ್ರ್ಯವನ್ನು ಕೊಡುವುದು. ಚಕ್ರಕ್ಕೆ ಪವಿತ್ರವೆಂದೇ ಹೆಸರು.

**ಮುಕ್ತಾರತ್ನಸುವರ್ಣ್ಣಾದ್ಯೈಃ ಕೃತ್ವಾ ಚಕ್ರಾದಿಭೂಷಣಮ್**

**ಯಥಾರ್ಹಂ ಬಿಭೃಯುಸ್ಸರ್ವೇ ಪುಮಾಂಸಃ ಸ್ತ್ರೀಜನೋಽಪಿ ವಾ**

ಬರಿಯ ತೀರ್ಥಾಭಿಮಾನಿಗಳಷ್ಟೇ ಅಲ್ಲದೆ ಧರ್ಮಾದಿ 34 ಪ್ರಧಾನ



ದೇವತೆಗಳೂ ಬಲಕಿವಿಯಲ್ಲಿ ವಿಶೇಷ ಸನ್ನಿಧಾನವನ್ನು ಪಡೆದಿದ್ದಾರೆಂದು **ಸಾಂಖ್ಯಾಯನರು** ಕಂಡ ಸತ್ಯ-

**ಆದಿತ್ಯಾಃ ವಸವೋ ರುದ್ರಾಃ ವಾಯುರಗ್ನಿಶ್ಚ ಧರ್ಮರಾಟ್**

**ವಿಪ್ರಸ್ಯ ದಕ್ಷಿಣೇ ಕರ್ಣೇ ನಿವಸಂತಿ ಹಿ ದೇವತಾಃ**

ಹನ್ನೆರಡು ಅದಿತಿಪುತ್ರರು – ಆದಿತ್ಯರು, ಎಂಟು ವಸುಪುತ್ರರು–ವಸುಗಳು, ಹನ್ನೊಂದು ಭೂತಪುತ್ರರು–ರುದ್ರರು, ಐವರು ವಾಯುಗಳು, ನಲ್ವತ್ತೆಂಟು ಅಗ್ನಿಗಳು, ಯಮ ಇವರೆಲ್ಲರೂ ವೇದಾಧ್ಯಯನ ಮಾಡಿದ ಬ್ರಹ್ಮೋಪದೇಶ ಪಡೆದವನ ಕಿವಿಯಲ್ಲಿ ಸನ್ನಿಹಿತರಾಗಿರುತ್ತಾರೆ. ವೇದೋಕ್ತದೇವತೆಗಳವರು ಅಕ್ಷರದ ಮೂಲಕ ಕಿವಿಗೆ ಸೇರಿ ನಿತ್ಯ ಸನ್ನಿಹಿತರಾದವರು. ಆದಿತ್ಯರಲ್ಲಿ ಭಗವಂತನೂ ಸೇರಲಾಗಿ ಭಗವಂತನಿಂದ ಹಿಡಿದು ಪರ್ಜನ್ಯನವರೆಗೆ ಎಲ್ಲ ತತ್ವಾಭಿಮಾನಿದೇವತೆಗಳನ್ನು ಇಲ್ಲಿ ಹೇಳಿದಂತಾಗುವುದು.

ದ್ವಾದಶಾದಿತ್ಯರ ಹೆಸರು ಭಾಗವತದಲ್ಲಿ ಹೀಗಿದೆ (ಆವರಣದೊಳಗೆ ಕಕ್ಷೆ ಅಂದರೆ ಅವರ ಸ್ಥಾನ–ಮಾನ ನೀಡಲಾಗಿದೆ)

**ವಿವಸ್ವಾನರ್ಯಮಾ ಪೂಷಾ ತ್ವಷ್ಟಾಽಥ ಸವಿತಾ ಭಗಃ**

**ಧಾತಾ ವಿಧಾತಾ ವರುಣೋ ಮಿತ್ರಃ ಶಕ್ರ ಉರುಕ್ರಮಃ**

ವಿವಸ್ವಾನ್ (ಸೂರ್ಯ–12), ಅರ್ಯಮಾ (18), ಪೂಷಾ (18), ತ್ವಷ್ಟಾ (18), ಸವಿತಾ (ಅಂಶ – 18), ಭಗ (18), ಧಾತಾ (18), ವಿಧಾತಾ (ಪರ್ಜನ್ಯ – 20), ವರುಣ (13), ಮಿತ್ರ (17), ಶಕ್ರ (ಇಂದ್ರ–8), ಉರುಕ್ರಮ (ವಿಷ್ಣು – 1)

ಅಷ್ಟವಸುಗಳ ಹೆಸರು ಭಾಗವತದಲ್ಲಿ ಹೀಗಿದೆ–

**ದ್ರೋಣಃ ಪ್ರಾಣಃ ಧ್ರುವೋಽರ್ಕೋಽಗ್ನಿಃ ದೋಷೋ ವಸ್ತುರ್ವಿಭಾವಸುಃ**

ಇದರಲ್ಲಿ ಅಗ್ನಿ ಪ್ರಧಾನ ವಸು (15), ಉಳಿದವರು 7 ಮಂದಿ (18) ಅಪ್ರಧಾನರು.

ಏಕಾದಶ ರುದ್ರರ ಹೆಸರು ಭಾಗವತದಲ್ಲಿ ಹೀಗಿದೆ –

**ರೈವತೋಜೋ ಭವೋ ಭೀಮೋ ವಾಮ ಉಗ್ರ ವೃಷಾಕಪಿಃ**



**ಅಜೈಕಪಾತ್ ಅಹಿರ್ಬುಧ್ನಿಃ ಬಹುರೂಪೋ ಮಹಾನಿತಿ**

ಕಡೆಯವ ಮಹಾದೇವ ಪ್ರಧಾನ ರುದ್ರ (5) ಉಳಿದ ಹತ್ತುಮಂದಿ (18) ಅವಾಂತರರುದ್ರರು. ವಸುರುದ್ರಾದಿತ್ಯರಲ್ಲಿ ಕೆಲವರ ನಾಮಾಂತರಗಳು ಅನುಶಾಸನಪರ್ವದಲ್ಲಿ ಇವೆ.

ಮರುತ್ತುಗಳನ್ನಿಲ್ಲಿ ವಾಯುಶಬ್ದದಿಂದ ಕರೆಯಲಾಗಿದೆ. ಪ್ರಧಾನವಾಯು (3) ಚತುರ್ಮುಖ ಸಮಾನ. 49 ಮರುತ್ತುಗಳಲ್ಲಿ ಅಹಂಕಾರಿಕಪ್ರಾಣ (9), ಪ್ರವಹ (11) ಇವರಿಬ್ಬರು ಉಳಿದ 47 ಮಂದಿ (18)ಗಿಂತ ಉತ್ತಮರು.

ಅಗ್ನಿವಂಶದವರನ್ನೆಲ್ಲ ಅಗ್ನಿ ಶಬ್ದದಿಂದ ತಿಳಿಯಬಹುದಾಗಿದೆ. ಅಗ್ನಿಪುತ್ರರಾದ ಪಾವಕ(19), ಪವಮಾನ ಶುಚಿಯರಿಗೆ 15–15–15 ಮಕ್ಕಳಿದ್ದಾರೆ. ಒಟ್ಟು 48 (15+15+15+3) ಅಗ್ನಿದೇವತೆಗಳಷ್ಟೆ ಅಲ್ಲದೆ ಕೃಷ್ಣನ ಮಡದಿಯರಾಗಿದ್ದವರು 16,000 ಮಂದಿ ಅಗ್ನಿಪುತ್ರರು (27) ಇಲ್ಲಿ ಸೂಚಿತರಾಗಿರುವರು. ಪ್ರಧಾನಾಗ್ನಿಯನ್ನು ವಸುಗಳೆಂಬಲ್ಲಿ ಮೊದಲೆ ಹೇಳಿದ್ದರಿಂದ ಇಲ್ಲಿ ಅಗ್ನಿಶಬ್ದದಿಂದ ಅಪ್ರಧಾನರನ್ನೆ ಅರ್ಥೈಸಬೇಕು. ಸಂಸ್ಕೃತದಲ್ಲಿ ಏಕವಚನದಿಂದ ಸಮೂಹವನ್ನೆ ಸಂಗ್ರಹಿಸಲಾಗುವುದು. ಅದನ್ನು ಸೂಚಿಸಲು ಪ್ರಮಾಣದಲ್ಲಿ 'ಚ' ಕಾರವಿದೆ. ಜತೆಗೆ ವಾಯುಶಬ್ದವೂ ಮಹಾರ್ಥವನ್ನು ಸೂಚಿಸಿದೆ ಎಂದೂ ತಿಳಿದುಬರುವುದು. ಗಣದೇವತೆಗಳ (ವಸು–ರುದ್ರ–ಆದಿತ್ಯ) ಸಾಲಿನಲ್ಲಿ ವಾಯುಶಬ್ದವನ್ನಿಟ್ಟು ಮರುದ್ಗಣವನ್ನು ಸೂಚಿಸಿರುವರು.

ವಸುರುದ್ರಾದಿತ್ಯರನ್ನು ಪ್ರದ್ಯುಮ್ನ ಸಂಕರ್ಷಣ ಅನಿರುದ್ಧರ ವಿಭೂತಿಯರನ್ನಾಗಿ **ಬೃಹದ್ಬ್ರಹ್ಮಸಂಹಿತೆ** ಪಿತೃಪ್ರಕರಣದಲ್ಲಿ ತಿಳಿಸಿದೆ. ಅಲ್ಲಿ ಆ ದೇವತೆಗಳ ನಾಮಗಳನ್ನು ಕಾಣಬಹುದು –

**ಧ್ರುವೋ ಧರಶ್ಚ ಸೋಮಶ್ಚಾಪ್ಯಾಪಶ್ಚೈವಾನಿಲೋಽನಲಃ**
**ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋಽಷ್ಟೌ ಪ್ರಕೀರ್ತಿತಾಃ**
**ಪ್ರದ್ಯುಮ್ನಸ್ಯ ವಿಭೂತಯಃ**

**ಅಜೈಕಪಾದಹಿರ್ಬುಧ್ನ್ಯೋ ವಿರೂಪಾಕ್ಷೋಽಥ ಶಂಕರಃ**



**ಹರಶ್ಚ ಬಹುರೂಪಶ್ಚ ತ್ರ್ಯಂಬಕಶ್ಚ ಸುರೇಶ್ವರಃ**

**ಸಾವಿತ್ರಶ್ಚ ಜಯಂತಶ್ಚ ಪಿನಾಕೀ ಚಾಪರಾಜಿತಃ**

**ಏತೇ ರುದ್ರಾಃ ಸಮಾಖ್ಯಾತಾಃ ಸಂಕರ್ಷಣವಿಭೂತಯಃ**

**ಇಂದ್ರೋ ಧಾತಾ ಭಗಃ ಪೂಷಾ ಮಿತ್ರೋಽಥ ವರುಣೋಽರ್ಯಮಾ**

**ಅಂಶುರ್ವಿವಸ್ವಾನ್ ತ್ವಷ್ಟಾ ಚ ಸವಿತಾ ವಿಷ್ಣುರೇವ ಚ**

**ಏತೇ ವೈ ದ್ವಾದಶಾದಿತ್ಯಾ ಹ್ಯನಿರುದ್ಧಾತ್ಮಕಾ ಮತಾಃ**

ಪರಾಶರರು ಈ ದೇವತಾವೃಂದವನ್ನೂ ಆಪಃ ಎಂಬ ಶಬ್ದದಿಂದ ಹಿಡಿದು ತೋರಿಸಿರುತ್ತಾರೆ–

**ಅಗ್ನಿರಾಪಶ್ಚ ವೇದಾಶ್ಚ ಸೋಮಃ ಸೂರ್ಯೋಽನಿಲಸ್ತಥಾ**

**ಏತೇ ಸರ್ವೇ ಚ ವಿಪ್ರಾಣಾಂ ಶ್ರೋತ್ರೇ ತಿಷ್ಠಂತಿ ದಕ್ಷಿಣೇ**

ಆ=ಎಲ್ಲೆಡೆಯ ಪ=ಪಾಲಕರು ಎಂಬ ಅರ್ಥದಲ್ಲಿ ಆಪಃ ಶಬ್ದ ದೇವತೆಗಳನ್ನೆಲ್ಲ ಹೇಳಿದೆ–

**ಸದಾ ಸರ್ವಗುಣಾಪಾನಾದಾಪೋ ನಾರಾಯಣಃ ಸ್ಮೃತಃ** (ಬೃಹದಾರಣ್ಯಕಭಾಷ್ಯ)

**ತನ್ನಾಮಾಪ ಇತಿ ಹ್ಯೇತತ್ ಬ್ರಹ್ಮರುದ್ರಾದಿನಾಂ ಭವೇತ್**

**ಆಪ ಇತ್ಯೇವ ದೇವಾನಾಂ ಸರ್ವೇಷಾಂ ಪ್ರದದೌ ಹರಿಃ** (ಐತರೇಯಭಾಷ್ಯ)

ಆಪಃ ಶಬ್ದದಿಂದ ದೇವತೆಗಳೂ ತೀರ್ಥಾಭಿಮಾನಿಗಳೂ ಸಂಗ್ರಹವಾಗುವುದರಿಂದ ಶ್ರುತಿ ಬಳಸಿದ ಇಂತಹ ಶಬ್ದವನ್ನೆ ಬಳಸಿ ಋಷಿಗಳು ಅನುಸಂಧಾನ ಮಾಡುವುದುಂಟು. ಐತರೇಯವೂ ಪುಣ್ಯಕರ್ಮಗಳಿಗೆ ಇವರು ಆಸರೆ ಕಾರಣ ಎಂದಿದೆ –

**ಆಪೋ ಹಾಸ್ಮೈ ಶ್ರದ್ಧಾಂ ಸನ್ನಮಂತೇ ಪುಣ್ಯಾಹಕರ್ಮಣೇ**

ಇದರಿಂದ ಆಚಮನ ಪ್ರಕ್ರಿಯೆಗೆ ಕಿವಿಯು ನೀರಿನ ಸ್ಥಾನದಲ್ಲಿ ಮುಖ್ಯವಾಯಿತೆಂದು ತಿಳಿಯಬೇಕು.

ಹೀಗೆ ಬಲಕಿವಿಯಲ್ಲಿ ಅನೇಕ ದೇವತೆಗಳ ಸನ್ನಿಧಾನವಿರುವುದರಿಂದಲೆ ಶಾಸ್ತ್ರಗಳಲ್ಲಿ ಅಲ್ಲಲ್ಲಿ ಶ್ರೋತ್ರಾಚಮನಕ್ಕೆ ಹೆಚ್ಚು ಮಹತ್ತ್ವವನ್ನು ನೀಡಿದ್ದಾರೆ.



ತೀರ್ಥಪ್ರಾಶನದ ಬಳಿಕ ಆಚಮನ ನಿಷಿದ್ಧ. ತೀರ್ಥಪ್ರಾಶನವೇ ಶುದ್ಧಿಯನ್ನು ಕೊಡುವುದರಿಂದ ಅದಕ್ಕಾಗಿ ಇನ್ನೊಂದು ಶುದ್ಧಿಪ್ರದವಾದ ಕ್ರಿಯೆ ಬೇಡವೆಂದು **ಆಥರ್ವಣಶ್ರುತಿ** ತಿಳಿಸಿದೆ–

**ಭಗವಾನ್ ಪವಿತ್ರಂ ತತ್ಪಾದೌ ಪವಿತ್ರಂ ತತ್ಪಾದೋದಕಂ ಪವಿತ್ರಮ್**

**ನ ತತ್ಪಾನ ಆಚಮನಂ ಯಥಾ ಹಿ ಸೋಮಪಾನೇ**

ಆಚಮನೆಗೆ ನೀರು ಮುಖ್ಯ. ಆ ನೀರಿನ ಮಹತ್ತಿಕೆಯನ್ನು ವೇದ ಭಾಗಗಳಲ್ಲಿ ಹೀಗೆ ಕಾಣಬಹುದು–

**ಆಪಃ ಖಲು ವೈ ವಿಶ್ವೇದೇವಾಃ** (ಮೈತ್ರಾಯಣೀಯಸಂಹಿತೆ)

**ಆಪೋ ವೈ ಸರ್ವಾ ದೇವತಾಃ** (ಐತರೇಯಬ್ರಾಹ್ಮಣ, ಕೌಷೀತಕೀಬ್ರಾಹ್ಮಣ, ತೈತ್ತಿರೀಯಆರಣ್ಯಕ)

**ಪ್ರಾಣಾ ವಾ ಆಪಃ** (ತೈತ್ತಿರೀಯ ಬ್ರಾಹ್ಮಣ, ತಾಂಡ್ಯಬ್ರಾಹ್ಮಣ)

**ಆಪೋಽನ್ನಮ್** (ತೈತ್ತಿರೀಯಬ್ರಾಹ್ಮಣ, ಕೌಷೀತಕೀಬ್ರಾಹ್ಮಣ)

**ತದ್ಯದಬ್ರವೀತ್ । ಆಭಿರ್ವಾ ಅಹಮಿದಂ ಸರ್ವಮಾಪ್ಸ್ಯಾಮಿ ಯದಿದಂ ಕಿಂಚೇತಿ । ತಸ್ಮಾದಾಪೋಽಭವನ್** (ಗೋಪಥಬ್ರಾಹ್ಮಣ)

**ಆಪೋ ವೈ ಸರ್ವಸ್ಯ ಶಾಂತಿಃ ಪ್ರತಿಷ್ಠಾ । ತದೇತದೃಷಿರಾಹ**

**ಆಪ್ಸಾನಂ ತೀರ್ಥಂ ಕ ಇಹ ಪ್ರವೋಚತ್ ಯೇನ ದೇವಾಃ ಪಥಾ ಪ್ರ ಪಿಬಂತೇ ಸುತಸ್ಯ** (ಷಡ್ವಿಂಶಬ್ರಾಹ್ಮಣ)

**ಅಪ್ಸು ವೈ ಮರುತಃ ಶ್ರಿತಾಃ** (ಗೋಪಥಬ್ರಾಹ್ಮಣ)

**ಪವಿತ್ರಂ ವಾ ಆಪಃ** (ಶತಪಥಬ್ರಾಹ್ಮಣ)

**ಅಗ್ನೇರ್ಮೂರ್ತಿಃ ಕ್ಷಿತೇರ್ಯೋನಿಃ ಅಮೃತಸ್ಯ ಚ ಸಂಭವಃ**

**ಅತೋಽಂಭಃ ಸರ್ವಭೂತಾನಾಂ ಮೂಲಮಿತ್ಯುಚ್ಯತೇ ಬುಧೈಃ** (ಮಹಾಭಾರತ)

ಶುದ್ಧ್ಯಂಗವಾದ ಆಚಮನ ಎಲ್ಲರಿಗೂ ವಿಹಿತವಾಗಿದೆ. ವ್ಯಕ್ತಿಭೇದದಿಂದ ಮಂತ್ರಗಳೂ ಭಿನ್ನಭಿನ್ನವಾಗಿವೆ ಎಂದು **ಸ್ಮೃತ್ಯರ್ಥಸಾರ** ಅಭಿಪ್ರಾಯಪಟ್ಟಿದೆ–

**ತದೋಂಕಾರೇಣಾಚಮನಂ ಯದ್ವಾ ವ್ಯಾಹೃತಿಭಿರ್ಭವೇತ್**



**ಸಾವಿತ್ರ್ಯಾ ವಾಽಪಿ ಕರ್ತ್ತವ್ಯಂ ಯದ್ವಾ ಕಾರ್ಯಮಮಂತ್ರಕಮ್**

ಓಂಕಾರದಿಂದ ವ್ಯಾಹೃತಿಗಳಿಂದ ಆಚಮನ ಪ್ರಕಾರವು ಯತಿಗಳಿಗೆ ಹೇಳಿದ್ದು. ಅಮಂತ್ರಕವಾಗಿ ಆಚಮನವನ್ನು ವೇದಾಧಿಕಾರ ಇಲ್ಲದ ಸಂಸ್ಕಾರವಾಗದ ಜನರಿಗೆ ಹೇಳಿದ್ದು.

ಭಗವನ್ನಾಮಗಳ ಮನಃಪೂರ್ವಕ ಉಚ್ಚಾರಣೆಯೆ ಶುದ್ಧಿಪ್ರದವೆನಿಸಿದೆ. ಇದರಿಂದ ನಡೆಸಲ್ಪಟ್ಟ ಆಚಮನ ತಾಂತ್ರಿಕವಾಗಿ ಪಾವಿತ್ರ್ಯವನ್ನು ತಂದು ನೀಡಲಿದೆ. ಹೀಗೆ ಸಾಧಕ ಮುಂದಿನ ಕರ್ಮಗಳಿಗೆಲ್ಲ ಅಧಿಕಾರವನ್ನು ಪಡೆಯುವನು ಎಂದು **ಆಚಾರಭೂಷಣ** ವಿಸ್ತಾರವಾಗಿ ಆಚಮನದ ಚಿಂತನೆಯನ್ನು ನಡೆಸಿದೆ–

**ಆಚಾಮೇನ್ನಿತ್ಯಮೇವಂ ಯೋ ಭಗವನ್ನಾಮಭಿಃ ಕ್ರಮಾತ್**

**ಸದ್ಯಃ ಪೂತಃ ಸರ್ವಹಿತೇಷೂತ್ತರೇಷ್ವಧಿಕಾರವಾನ್**

ಕೆರೆಯಲ್ಲಿ ಮೊಣಗಂಟು ಮುಳುಗುವಷ್ಟು ನಿಂತು ಆಚಮನ ಮಾಡಿದರೆ ತಪ್ಪು ಎನಿಸದು. ಮೊಣಗಂಟಿಗಿಂತಲೂ ಕೆಳಗೆ ನೀರು ಇದ್ದು ತಟಾಕಾದಿಗಳಲ್ಲಿ ಆಚಮನ ಮಾಡಬಾರದು–

**ಜಾನ್ವೋರೂರ್ಧ್ವಂ ಜಲೇ ತಿಷ್ಠನ್ ಆಚಾಂತೋ ಶುಚಿತಾಮಿಯಾತ್**

**ಅಧಸ್ತಾಚ್ಛತಕೃತ್ವೋಽಪಿ ಸಮಾಚಾಂತೋ ನ ಶುಧ್ಯತಿ**

**(ಜಾನುಮಾತ್ರೇ ತದೂರ್ಧ್ವಂ ವಾ ಜಲೇ ತಿಷ್ಠನ್ನುಪಸ್ಪೃಶೇತ್)**

ಹೇಗೆ ಮುಳುಗುವಾಗ ಬೆನ್ನು-ಸೊಂಟಗಳೆಲ್ಲ ಮೇಲಿದ್ದು ಮತ್ತೆಮತ್ತೆ ಮುಳುಗಿದಾಗ ಮಾತ್ರ ಸ್ನಾನ ಅನಿಸಿಕೊಳ್ಳುವುದೋ ಹಾಗೆಯೆ ಆಚಮನವೂ ಒಂದೆರೆಡು ಅಡಿಗಳಷ್ಟೆ ನೀರಿನಲ್ಲಿ ನಿಂತು ಮಾಡಿದರೆ ಮಾತ್ರ ಆಚಮನ ಎಂದು ಕರೆಯಲ್ಪಡುವುದು. ಇಲ್ಲವಾದಲ್ಲಿ ನೀರು ಕುಡಿದಂತಾಗಿ ಅಶುಚಿಯಾದಾನು.

ರುಮಾಲು ಹಾಕಿಕೊಂಡು, ಅಂಗಿತೊಟ್ಟುಕೊಂಡು, ನಿಂತುಕೊಂಡು ಆಚಮನ ಮಾಡಿದರೆ, ಜುಟ್ಟು ಕಟ್ಟಿಕೊಳ್ಳದೆ ಕಾಲು ತೊಳೆಯದೆ ಆಚಮನ ಮಾಡಿದರೂ ಅಶುಚಿಯೇ.

**ಶಿರಃ ಪ್ರಾವೃತ್ಯ ಕಂಠಂ ವಾ ತಿಷ್ಠನ್ ಮುಕ್ತಶಿಖೋಽಪಿವಾ**



**ಅಕೃತ್ವಾ ಪಾದಯೋಃ ಶೌಚಂ ಆಚಮ್ಯಾಪ್ಯಶುಚಿರ್ಭವೇತ್**

ಯಾರೊಡನೆಯೋ ಮಾತನಾಡುತ್ತಾ ಏನೋ ಬೇರೆ ಕೆಲಸ ಮಾಡುತ್ತಾ ಎಲ್ಲಿಯೋ ಕೈಕಾಲುಗಳನ್ನು ಬಿಟ್ಟಿರುತ್ತಾ ಆಚಮನ ಮಾಡಿದರೆ ತಪ್ಪೇ. ಆಚಮನ ಕರ್ಮಕ್ಕೆ ಪ್ರಾಶಸ್ತ್ಯ ನೀಡಿಲ್ಲವೆಂದೇ ಅರ್ಥ.

**ತಿಷ್ಠನ್ ಮೇಹಂಶ್ಚ ಸಂಜಲ್ಪನ್ ಶೃಣ್ವನ್ ದುರ್ಜ್ಜನಭಾಷಣಮ್**
**ಅನ್ಯಂ ಸ್ಪೃಶನ್ ದಿಶಂ ಪಶ್ಯನ್ ಪಶ್ಯನ್ ದುಷ್ಟಪದಾರ್ಥಕಮ್**
**ಶಯಾನಃ ಪಾದುಕಸ್ಥಶ್ಚ ಬಹಿರ್ಜ್ಜಾನುಕರೋಽಪಿ ಚ**
**ಕಂಚುಕ್ಯಾಚ್ಛಾದಿತಶಿರಾಃ ಸೋಪಾನತ್ಕೋ ನ ಚಾಚಮೇತ್**
**ಏಕಹಸ್ತೇನ ನಾಚಾಮೇತ್ ಮುಕ್ತಕೇಶೋ ಜಲಾಪ್ಲುತಃ**

ದೇವಾಲಯಾದಿಗಳಲ್ಲಿ ಬೆಕ್ಕು ಇಲಿ ಮುಟ್ಟಿದರೆ ಸ್ನಾನಮಾಡುವ ಪ್ರಸಂಗ ಇರದು. ಆಚಮನದಿಂದ ಶುದ್ಧನಾಗುವನೆಂದು ಬೃಹಸ್ಪತಿ ಹೇಳಿರುವನು–

**ಅಧೋವಾಯುಸಮುತ್ಸರ್ಗೇ ಆಕ್ರಂದೇ ಕ್ರೋಧಸಂಭವೇ**
**ಮಾರ್ಜ್ಜಾರಮೂಷಕಸ್ಪರ್ಶೇ ಪ್ರಹಾಸೇಽನೃತಭಾಷಣೇ**
**ನಿಮಿತ್ತೇಷ್ವೇಷು ಸರ್ವೇಷು ಕರ್ಮ ಕುರ್ವನ್ನಪಃ ಸ್ಪೃಶೇತ್**

ಅತ್ತರೂ, ನಕ್ಕರೂ, ಸುಳ್ಳು ಹೇಳಿದರೂ, ಸಿಟ್ಟಾದರೂ, ಹೂಸುಬಿಟ್ಟರೂ ಆಚಮನ ಮಾಡಬೇಕು. ಇದರಂತೆ ಸ್ಮಶಾನವನ್ನು ಹಾಯ್ದು ಬಂದರೂ ಆಚ ಮನ ಮಾಡಿದಾಗ ಶುಚಿರ್ಭೂತನಾಗುವನು ಎಂದು ಮನು ಹೇಳಿರುವನು–

**ಸುಪ್ತ್ವಾ ಕ್ಷುತ್ವಾ ಚ ಭುಕ್ತ್ವಾ ಚ ನಿಷ್ಠೀವ್ಯೋಕ್ತ್ವಾಽನೃತಂ ವಚಃ**
**ರಥ್ಯಾಂ ಶ್ಮಶಾನಂ ಚಾಕ್ರಮ್ಯ ಆಚಾಮೇತ್ ಪ್ರಯತೋಽಪಿ ಸನ್**

ಉಂಡವನನ್ನು ಉಣ್ಣುವನನ್ನು ಮುಟ್ಟಿದರೂ, ಉಂಡುಳಿದ ಎಂಜಲು ಮುಟ್ಟಿದರೂ, ಗಾಯವಾಗಿ ಮೈಯಿಂದ ರಕ್ತ ಒಸರಿದರೂ, ಮತ್ತೆ ಆಚಮನ ಮಾಡಬೇಕೆಂದು ಆಚಮನದ ಬಗ್ಗೆ ವಿಸ್ತಾರವಾಗಿ ಹೇಳಹೊರಟ **ಕೂರ್ಮಪುರಾಣ** ತಿಳಿಸಿದೆ –

**ಉಚ್ಛಿಷ್ಟಂ ಪುರುಷಂ ಸ್ಪೃಷ್ಟ್ವಾ ಭೋಜ್ಯಂ ಚಾಪಿ ತಥಾವಿಧಮ್**



**ಆಚಾಮೇದಶ್ರುಪಾತೇ ವಾ ಲೋಹಿತಸ್ಯ ತಥೈವ ಚ**

ಜಪಿಸುವಾಗ ಹೆಚ್ಚು ಮಾತಾಡಿದರೆ ಮತ್ತೆ ಆಚಮನ ಮಾಡಿ ಮುಂದುವರೆಸಬೇಕೆಂದು **ತಂತ್ರಸಾರ** ಹೇಳಿದೆ-

**ಬಹುಪ್ರಲಾಪೀ ಆಚಮ್ಯ ನ್ಯಸ್ಯಾಂಗಾನಿ ತತೋ ಜಪೇತ್**

ಎರಡು ಬಾರಿ (ಕನಿಷ್ಠಪಕ್ಷ) ಆಚಮನ ಮಾಡಿಯೇ ಜಪಾದಿಗಳ ಸಂದರ್ಭದಲ್ಲಿ ಶುದ್ಧನಾಗುವುದು; ಒಂದು ಬಾರಿಯಿಂದಲ್ಲ. ಎರಡು ಬಾರಿ ಆಚ ಮನ ಮಾಡಿದಾಗ ಭಗವಂತನನ್ನು ಮತ್ತೆ ಮತ್ತೆ ನೆನೆದಂತಾಗುವುದು. ಒಂದೊಮ್ಮೆ ಅಮಂತ್ರಕವಾಗಿ ಆಚಮನಕ್ರಿಯೆಯನ್ನು ಮಾಡಿದರೂ ಶುದ್ಧನಾಗನು. ಕೇವಲ ಆಚಮನ ಕ್ರಿಯೆ ಪಾವಿತ್ರ್ಯವನ್ನು ಕೊಡುವುದಿಲ್ಲ. ಜತೆಗೆ ಭಗವಂತನ ನಾಮಗಳು ಸೇರಿದಾಗ ಆಚಮನ ಶುದ್ಧಿಯನ್ನೀಯುವುದು. ಕೆಲವು ಕಡೆ ಅಮಂತ್ರಕವಾಗಿ ಆಚಮನ ಹೇಳಿದ್ದಲ್ಲಿ ಕೂಡಲೇ ವಿಷ್ಣುಚಿಂತನೆ ಮಾಡಬೇಕೆಂದೂ ತಿಳಿಸಿರುತ್ತಾರೆ.

**ದ್ವಿರಾಚಮ್ಯ ತತಃ ಶುದ್ಧಿಃ ಸ್ಮೃತ್ವಾ ವಿಷ್ಣುಂ ಸನಾತನಮ್**

**ಸಚ್ಚರಿತ್ರಸುಧಾನಿಧಿ**ಯಲ್ಲಿ ಜಪಪೂಜಾದಿಗಳ ಆದಿಯಲ್ಲಿ ಎರಡು ಬಾರಿ ಆಚಮನ ಮಾಡಿ ಶುದ್ಧಿಯನ್ನು ತಂದುಕೊಂಡು, ಈ ಕ್ರಿಯಾದಿಗಳ ಅಂತ್ಯದಲ್ಲಿ ಒಂದು ಬಾರಿ ಆಚಮನ ಮಾಡಲು ತಿಳಿಸಿರುತ್ತಾರೆ-

**ದಾನೇ ಪ್ರತಿಗ್ರಹೇ ಹೋಮೇ ಜಪೇ ಸಂಧ್ಯಾಸು ಚಾರ್ಚನೇ**

**ಬಲಿಕರ್ಮಣಿ ಚಾಚಾಮೇತ್ ಆದೌ ದ್ವಿಃ ಸಕೃದಂತತಃ**

ಬೇರೆ ಬೇರೆ ಕ್ರಿಯೆಗಳ ಕಡೆಗೆ ಬೇರೆ ಬೇರೆ ಸಂಖ್ಯೆಯಲ್ಲಿ ಆಚ ಮನವನ್ನು ಆರ್ಷರು ಹೇಳಿರುತ್ತಾರೆ. ಮೊದಲ ಬಾರಿ ಮಂತ್ರಗಳನ್ನು ಮನಸ್ಸಿನಲ್ಲಿ ಹೇಳಿ ಆಚಮನ ಮಾಡಬೇಕು. ಎರಡನೆಯ ಬಾರಿ ಬಾಯಲ್ಲಿ ಮಂತ್ರ ಹೇಳಿ ಆಚಮನವನ್ನು ಮಾಡಬೇಕೆಂದು **ಕಾಣ್ವಸ್ಮೃತಿ** ತಿಳಿಸಿದೆ.

**ಯತ್ರಯತ್ರ ಹ್ಯಾಚಮನಂ ದ್ವಯಂ ತತ್ರ ಪರೋ ವಿಧಿಃ**

**ಅಯಮೇವ ಸಮಾಖ್ಯಾತಃ ಪ್ರಥಮಾಚಮನೇ ಖಲು**

**ಮಂತ್ರೋ ಮಾನಸಿಕಃ ಕಾರ್ಯಃ ಕದಾಚಿನ್ನ ತು ವಾಚಿಕಃ**



**ದ್ವಿತೀಯಾಚಮನೇ ಸಮ್ಯಕ್ ಮಂತ್ರೋಚ್ಚಾರಸ್ತು ವಾಚಿಕಃ**

ಹೆಚ್ಚಿನೆಡೆ ಕರ್ಮಾಂಗಗಳಲ್ಲಿ ಮೂರು ಬಾರಿ ಆಚಮನವನ್ನು ಹೇಳಿದ್ದಾರೆ. ಗೋಪಥಬ್ರಾಹ್ಮಣದಲ್ಲಿ ಮೂರು ಬಾರಿಯ ಆಚಮನದಿಂದ ಸಪ್ತಪ್ರಕಾರದ ಪ್ರಾಣಾಪಾನವ್ಯಾನಗಳ ಆಪ್ಯಾಯನವನ್ನು ವಿವರಿಸಲಾಗಿದೆ. ಹೀಗೆ ಇಪ್ಪತ್ತೊಂದು ದೇವತಾನುಗ್ರಹಚಿಂತನೆ ಆಚಮನದಲ್ಲಿದೆ.

ಆಚಮನ ಮಾಡಲು ತಾಮ್ರ-ಬೆಳ್ಳಿ-ಚಿನ್ನದ ಪಾತ್ರೆಗಳನ್ನು ಬಳಸಬೇಕು. ಇತರ ಲೋಹದ ಪಾತ್ರೆಗಳನ್ನು ಕಮಲಾಕರದಲ್ಲಿ ನಿಷೇಧಿಸಿದ್ದಾರೆ.

**ಕಾಂಸ್ಯೇನಾಯಸಪಾತ್ರೇಣ ತ್ರಪುಸೀಸಕಪಿತ್ತಲೈಃ**

**ಆಚಾಂತಃ ಶತಕೃತ್ವೋಽಪಿ ನ ಕದಾಚನ ಶುಧ್ಯತಿ**

ಈಗೀಗ ಸ್ಟೈನ್‌ಲೆಸ್ ಸ್ಟೀಲಿನ ಕೌಳಿಗೆ-ಸೌಟುಗಳು ಮಾರುಕಟ್ಟೆಯಲ್ಲಿ ಬಂದಿವೆ. ಇದರಿಂದ ಜಪತಪಾದಿಗಳು ನಡೆಸಿದ್ದು ಸೊನ್ನೆಯಾಗಲಿವೆ ಎಂದು ಶಾಸ್ತ್ರಗಳು ಎಚ್ಚರಿಕೆ ನೀಡಿವೆ.

ಮಣೆ ಮುಂತಾದ ಉನ್ನತ ಆಸನದಲ್ಲಿ ಕುಳಿತಿದ್ದು ಆಸನದ ಮೇಲೆಯೆ ಪಾದಗಳೂ ಬರುವಂತಿದ್ದು ಆಚಮನ ನಡೆಸಬಾರದು. ವೀರಾಸನವನ್ನು ಸರಿಯಾಗಿ ಹಾಕದೆ ತೊಡೆಯ ಮೇಲೆ ಪಾದಬಂದರೂ ಆಸನಚ್ಯುತನಾಗಿ ಆತ ಆಚಮನ ಜಪಾದಿಗಳಿಗೆ ಅಯೋಗ್ಯನೆನಿಸುವನು ಎಂದು **ಕಾತ್ಯಾಯನ** ತಿಳಿಸಿರುತ್ತಾನೆ -

**ದಾನಮಾಚಮನಂ ಹೋಮಂ ಭೋಜನಂ ದೇವತಾರ್ಚನಮ್**

**ಪ್ರೌಢಪಾದೋ ನ ಕುರ್ವೀತ ಸ್ವಾಧ್ಯಾಯಂ ಪಿತೃತರ್ಪಣಮ್**

**ಆಸನಾರೂಢಪಾದಸ್ತು ಜಾನುನೋರ್ವಾಽಥ ಜಂಘಯೋಃ**

**ಕೃತಾವಸಕ್ಥಿಕೋ ಯಸ್ತು ಪ್ರೌಢಪಾದಃ ಸ ಉಚ್ಯತೇ**

ಕುಳಿತುಕೊಂಡು ಆಚಮನ ಮಾಡುವಾಗ ಕೈಗಳೆರಡು ಕಾಲ್ಗಂಟಿನ ಒಳಬದಿಗೆ ಬರುವಂತಿರಬೇಕು ಎಂದು **ಬೋಧಾಯನರು** -

**ಭೋಜನಂ ಹವನಂ ದಾನಂ ಉಪಹಾರಃ ಪರಿಗ್ರಹಮ್**



**ಬಹಿರ್ಜ್ಞಾನು ನ ಕಾರ್ಯಾಣಿ ತದ್ವದಾಚಮನಂ ಸ್ಮೃತಮ್**

ಪೂರ್ವ ಅಥವಾ ಈಶಾನ್ಯ ದಿಕ್ಕಿಗೆ ಮುಖಮಾಡಿದ್ದು ಆಚಮನವನ್ನು ಮಾಡಬೇಕು. ದಕ್ಷಿಣಕ್ಕೆ ಮುಖಮಾಡಿ ಒಂದೊಮ್ಮೆ ಆಚಮನ ಮಾಡಿದ್ದಲ್ಲಿ ಆತ ಮತ್ತೆ ಮಿಂದು ಬರಬೇಕು. ಪಶ್ಚಿಮಕ್ಕೆ ಮುಖಮಾಡಿ ಆಚಮನ ಮಾಡಿದಲ್ಲಿ ಆತ ಮತ್ತೊಮ್ಮೆ ಪೂರ್ವ ಯಾ ಈಶಾನ್ಯಕ್ಕೆ ತಿರುಗಿ ಆಚಮನ ಮಾಡಿದರೆ ಶುದ್ಧನಾಗುವನು–

**ತತಃ ಪ್ರಾಙ್ಮುಖ ಆಸೀನಃ ಪ್ರಾಗುದಙ್ಮುಖ ಏವವಾ**

**ಪ್ರಕ್ಷಾಳ್ಯದ್ಭಿಃ ಕರೌ ಮೃದ್ಭಿಃ ಆಚಮೇನ್ಮನುಜಃ ಸದಾ**

**ಯಾಮ್ಯಪ್ರತ್ಯಙ್ಮುಖತ್ವೇನ ಕೃತಮಾಚಮನಂ ಯದಿ**

**ಪ್ರಾಯಶ್ಚಿತ್ತೇ ತದಾ ಕುರ್ಯಾತ್ ಸ್ನಾನಮಾಚಮನಂ ಕ್ರಮಾತ್**

ಪ್ರಾಯಶ್ಚಿತ್ತ ಮಾತ್ರವಲ್ಲದೇ ಆಚಮನದ ದಿಕ್ಕಿನ ಬದಲಾವಣೆಯಲ್ಲಿ ಶುಭಾಶುಭ ಫಲವನ್ನು ತಿಳಿಸಲಾಗಿದೆ. ಪೂರ್ವದಿಂದ ಅಮೃತಪಾನದ ಲಾಭ. ಉತ್ತರದಿಂದ ಸೋಮಪಾನದ ಆಯ. ಪಶ್ಚಿಮದಲ್ಲಿ ಲಾಭನಷ್ಟಗಳಿಲ್ಲದಿದ್ದರೂ ಪುನರಾಚಮನೆಯಂತೂ ಮುಖ್ಯ. ದಕ್ಷಿಣ ದಿಕ್ಕಿಗೆ ಮುಖ ಹಾಕಿ ಆಚಮನೆ ಮಾಡಿದಲ್ಲಿ ನೆತ್ತರು ಕುಡಿದಂತೆ ಎನ್ನುವ ತೀರಾ ಅಶುಭವಾದ ಫಲವನ್ನು ತಿಳಿಸಲಾಗಿದೆ–

**ಪೂರ್ವೆ ಆಚಮ್ಯ ಅಮೃತಂ ಸೋಮಪಾನಂ ತಥೋತ್ತರೇ**

**ಪಶ್ಚಿಮೇ ಪುನರಾಚಮ್ಯ ದಕ್ಷಿಣೇ ರುಧಿರಂ ಭವೇತ್**

ಹಾರೀತರು ಈಶಾನ್ಯವನ್ನು ಹೇಳಿದ್ದಾರೆ–

**ಈಶಾನ್ಯಾಭಿಮುಖೋ ಭೂತ್ವಾಽಽಪಃ ಸ್ಪೃಶೇತ್ತು ಯಥಾವಿಧಿ**

ಯಾಜ್ಞವಲ್ಕ್ಯರೂ ಪೂರ್ವ ಮತ್ತು ಉತ್ತರದಿಕ್ಕನ್ನು ಸೂಚಿಸಿದ್ದಾರೆ–

**ಅಂತರ್ಜ್ಞಾನು ಶುಚೌ ದೇಶೇ ಉಪವಿಷ್ಟ ಉದಙ್ಮುಖಃ**

**ಪ್ರಾಗ್ವಾ ಬ್ರಾಹ್ಮೇಣ ತೀರ್ಥೇನ ದ್ವಿಜೋ ನಿತ್ಯಮುಪಸ್ಪೃಶೇತ್**

ಬೋಧಾಯನಗೃಹ್ಯಸೂತ್ರದಲ್ಲಿ ಉತ್ತರದಿಕ್ಕು ಅಥವಾ ಪೂರ್ವದಿಕ್ಕು



ಎಂದು ಆಚಮನಕ್ಕೆ ಹೇಳಿದ್ದಾರೆ. ಜತೆಗೆ ನೀರಿನ ಗುಣಮಟ್ಟವನ್ನೂ ತಿಳಿಸಿದ್ದಾರೆ–

**ಅಥಾತ ಆಚಮನವಿಧಿಂ ವ್ಯಾಖ್ಯಾಸ್ಯಾಮಃ – ಪ್ರಾಙ್ಮುಖ ಉದಙ್ಮುಖೋ ವಾ ಬದ್ಧಶಿಖಃ ಯಜ್ಞೋಪವೀತೀ ನೋಷ್ಣಾಭಿಃ ನ ಕ್ಷಾರಾಭಿಃ ನ ವಿವರ್ಣಾಭಿಃ ನ ದುರ್ಗ್ಗಂಧರಸಾಭಿಃ ನ ಸಫೇನಾಭಿಃ ನ ಚೈಕಹಸ್ತಾಭಿಃ ನ ಬಹಿರ್ಜ್ಞಾನುಭಿಃ ನ ವಿರಳಾಂಗುಲೀಭಿಃ ನ ಬುದ್ಬುದಾಭಿಃ ನ ತಿಷ್ಠನ್ ನ ಹಸನ್ ನ ಜಲ್ಪನ್ ನ ವಿಲೋಕಯನ್ ನ ಪ್ರಹ್ವಃ ನ ಪ್ರಣತಃ ನ ರೋಚನ್**

ನೀರಿನ ಬಗ್ಗೆ ಹೇಳುತ್ತಾ ಆಚಮನದ ಕ್ರಮವನ್ನೂ ವಿವರಿಸಿರುತ್ತಾರೆ ಇಲ್ಲಿ. ನೀರಿನ ರುಚಿಯನ್ನು ಆಸ್ವಾದನೆಗೈಯುತ್ತಾ ಆಚಮನ ಮಾಡಬಾರದು. ಮಳೆ ನೀರಿನಲ್ಲಿ, ಸೋರಿದ ನೀರಿನಲ್ಲಿ, ಕಾಲ್ತೊಳೆದುಳಿದ ನೀರಿನಲ್ಲಿ ಆಚಮನ ನಿಷಿದ್ಧ –

**ನ ವರ್ಷಧಾರಾಸ್ವಾಚಾಮೇತ್ ತಥಾ ನ ಪ್ರತರೋದಕೇ**
**ಪಾದಕ್ಷಾಳನಶೇಷಾಚ್ಚ ನಾಚಾಮೇದ್ವಾರಿಣಾ ದ್ವಿಜಃ**

**ಭರದ್ವಾಜರು** ಇನ್ನೂ ಅನೇಕ ಬಗೆಯ ನೀರನ್ನು ಆಚಮನೆಗೆ ನಿಷೇಧಿಸಿದ್ದಾರೆ. ಕಾಸಿದ ನೊರೆಯುಳ್ಳ, ವಿಷಮಯವಾದ, ವಾಸನೆ ತುಂಬಿದ, ಗುಳ್ಳೆ ಎದ್ದಿರುವ, ಕಪ್ಪಾದ, ಕೆಸರು ತುಂಬಿದ, ಉಪ್ಪಾದ ನೀರನ್ನು ಬೇಡವೆಂದಿರುವರು. ಮೇಲಿನಿಂದ ಬೀಳುತ್ತಿರುವ ಮಳೆ ನೀರು, ಉಗುರು ತಾಗಿದ ನೀರು, ಸೋರಿ ಬಂದ ನೀರು, ಯಾರಿಂದಲೋ ಮುಟ್ಟಲ್ಪಟ್ಟ, ಎಲ್ಲಿಂದಲೋ ಹರಿದುಬಂದ ನೀರನ್ನೂ ತ್ಯಜಿಸಬೇಕೆಂದಿರುವರು. ಕ್ರಿಮಿ–ಕೀಟಗಳಿಂದ ತುಂಬಿದ ಮತ್ತು ದೇವರಿಗೆ ಅಭಿಷೇಕಿಸಲ್ಪಟ್ಟ ಹಾಗೆಯೇ ಹಾಳಾದ ನೀರೂ ಉಪಯೋಗಕ್ಕೆ ಬಾರದು–

**ಪಕ್ವಂ ಸಫೇನಂ ಕವಿಷಂ ಸುದುರ್ಗ್ಗಂಧಂ ಸಬುದ್ಬುದಮ್**
**ಕೃಷ್ಣಂ ಸಮೃತ್ತಿಕಂ ಕ್ಷಾರಂ ತ್ಯಜೇದಾಚಮನೇ ಜಲಮ್**
**ಅಂತರಿಕ್ಷಂ ನಖಸ್ಪೃಷ್ಟಂ ಭಿನ್ನರಂಧ್ರವಿನಿರ್ಗ್ಗತಮ್**
**ಭಿನ್ನಂ ಪರ್ಯುಷಿತಂ ಸ್ಪೃಷ್ಟಂ ತ್ಯಜೇಚ್ಚ ಕೃಮಿಸಂಯುತಮ್**
**ದೇವಾಭಿಷಿಕ್ತಂ ಹೇಯಂ ಚ ತ್ಯಜೇದಾಚಮನೇ ಜಲಮ್**



ಹಾಳಾದ ನೀರು ಉಪಯೋಗಕ್ಕಿಲ್ಲದ ಮೇಲೆ ನೀರನ್ನು ತಿಳಿಗೊಳಿಸಿ ಉಪಯೋಗಿಸಿದರೆ ಹೇಗೆ ಎನ್ನುವ ಚೋದ್ಯಕ್ಕೂ ಇಲ್ಲಿದೆ ಉತ್ತರ –ಪರಿಮಳವೋ ಪರಿಷ್ಕಾರವೋ ಬರಲೆಂದು ಏಲಕ್ಕಿ, ಲವಂಗ, ಕರ್ಪೂರ, ಗಂಧ, ಚೆಕ್ಕೆ, ಪತ್ರೆ, ಕಲ್ಲುಸಕ್ಕರೆ ಕೇಸರಿ ಹಾಕಿದ ನೀರಿನಿಂದ ಆಚಮನ ಮಾಡುವಂತಿಲ್ಲ ಎನ್ನುವುದಾಗಿಯೂ ಋಷಿಗಳ ಮಾತಿದೆ. ಒಬ್ಬರು ಮಾಡಿದ ಆಚಮನದ ನೀರಿನಿಂದ ಮತ್ತೊಬ್ಬರು ಆಚಮನ ನಡೆಸುವಂತಿಲ್ಲ. ಮೊದಲೇ ನೀರನ್ನು ಹಂಚಿಕೊಂಡಿರಬೇಕು. ಅಂದರೆ ಒಂದೇ ಪಾತ್ರೆಯ ನೀರಿನಿಂದ ಅನೇಕರು ಆಚಮನ ಮಾಡುವಂತಿಲ್ಲ. ಪಾತ್ರೆಯೊಂದೇ ಆದರೆ ಅದರಲ್ಲಿನ ಆಚಮನದ ಶೇಷ ನೀರು ಚೆಲ್ಲಿ ಪಾತ್ರೆಯನ್ನು ತೊಳೆದು ಮತ್ತೆ ನೀರು ತುಂಬಿ ಆಚಮನ ಮಾಡಿದರಾಯಿತು –

**ಏಲಾಲವಂಗಕರ್ಪೂರಗಂಧಾದ್ಯೈರ್ವಾಸಿತೈರ್ಜಲೈಃ**

**ನಾಚಮೇದದ್ಭಿರುಷ್ಣಾಭಿಃ ಅನ್ಯಾಚಮನಶೇಷಿತೈಃ**

**ಕಣ್ವಸ್ಮೃತಿ**ಯಲ್ಲಿ ಆಚಮನ ಮಾಡುವಾಗ ಸದ್ದು ಬರದಿರಲೆಂದು ಸ್ಪಷ್ಟಪಡಿಸಿದ್ದಾರೆ. ಊಟದಲ್ಲಿ ಯಾವುದೇ ಬಗೆಯ ಪದಾರ್ಥಗಳನ್ನು ತಿನ್ನುವಾಗಲೂ ಸದ್ದು ಮಾಡದಿರದಂತೆ ಇಲ್ಲಿಯೂ ಸದ್ದು ಮಾಡಿ ಆಚಮನ ಗೈದರೆ ನರಕಾದಿ ಅನರ್ಥಗಳನ್ನು ತಿಳಿಸಿದ್ದಾರೆ –

**ಏವಮಾಚಮನೇ ಪ್ರೋಕ್ತಂ ಜಲಪಾನೇ ಚ ಭೋಜನೇ**

**ಭಕ್ಷಣೇ ಚಾಪಿ ಭಕ್ಷ್ಯಾಣಾಂ ಖಾದ್ಯಾನಾಮಪಿ ಖಾದನೇ**

**ಭೋಜ್ಯಾನಾಂ ಭೋಜನೇ ಚಾಪಿ ತಥಾ ವೈ ಲೇಹ್ಯಚೋಷ್ಯಯೋಃ**

**ಅಶಬ್ದಂ ಸರ್ವತಃ ಕುರ್ವನ್ ತತ್ತತ್ಕರ್ಮ ಸಮಾಚರೇತ್**

**ಯದಿ ಶಬ್ದಂ ತಥಾ ಕುರ್ವನ್ ಸದ್ಯೋ ನಿರಯಮೃಚ್ಛತಿ**

ಸೋರಿದ ನೀರಿನ ನಿಷೇಧಕ್ಕೊಂದು ತೈತ್ತಿರೀಯಬ್ರಾಹ್ಮಣದ ಸಂಗ್ರಹ –

**ಪ್ರಹ್ಲಾದೋ ವೈ ಕಾಯಾಧವಃ ವಿರೋಚನಂ ಸ್ವಂ ಪುತ್ರಂ ಉದಾಸ್ಯಾತ್**

**ಸ ಪ್ರದರೋಽಭವತ್ ತಸ್ಮಾತ್ ಪ್ರದರಾದುದಕಂ ನಾಚಾಮೇತ್**



ಎಂದು ಆಚಮನಕ್ಕೆ ಹೇಳಿದ್ದಾರೆ. ಜತೆಗೆ ನೀರಿನ ಗುಣಮಟ್ಟವನ್ನೂ ತಿಳಿಸಿದ್ದಾರೆ–

**ಅಥಾತ ಆಚಮನವಿಧಿಂ ವ್ಯಾಖ್ಯಾಸ್ಯಾಮಃ – ಪ್ರಾಙ್ಮುಖ ಉದಙ್ಮುಖೋ ವಾ ಬದ್ಧಶಿಖಃ ಯಜ್ಞೋಪವೀತೀ ನೋಷ್ಣಾಭಿಃ ನ ಕ್ಷಾರಾಭಿಃ ನ ವಿವರ್ಣಾಭಿಃ ನ ದುರ್ಗ್ಗಂಧರಸಾಭಿಃ ನ ಸಫೇನಾಭಿಃ ನ ಚೈಕಹಸ್ತಾಭಿಃ ನ ಬಹಿರ್ಜ್ವಾನುಭಿಃ ನ ವಿರಳಾಂಗುಲೀಭಿಃ ನ ಬುದ್ಬುದಾಭಿಃ ನ ತಿಷ್ಠನ್ ನ ಹಸನ್ ನ ಜಲ್ಪನ್ ನ ವಿಲೋಕಯನ್ ನ ಪ್ರಹ್ವಃ ನ ಪ್ರಣತಃ ನ ರೋಚನ್**

ನೀರಿನ ಬಗ್ಗೆ ಹೇಳುತ್ತಾ ಆಚಮನದ ಕ್ರಮವನ್ನೂ ವಿವರಿಸಿರುತ್ತಾರೆ ಇಲ್ಲಿ. ನೀರಿನ ರುಚಿಯನ್ನು ಆಸ್ವಾದನೆಗೈಯುತ್ತಾ ಆಚಮನ ಮಾಡಬಾರದು. ಮಳೆ ನೀರಿನಲ್ಲಿ, ಸೋರಿದ ನೀರಿನಲ್ಲಿ, ಕಾಲ್ತೊಳೆದುಳಿದ ನೀರಿನಲ್ಲಿ ಆಚಮನ ನಿಷಿದ್ಧ –

**ನ ವರ್ಷಧಾರಾಸ್ವಾಚಾಮೇತ್ ತಥಾ ನ ಪ್ರತರೋದಕೇ**
**ಪಾದಕ್ಷಾಳನಶೇಷಾಚ್ಚ ನಾಚಾಮೇದ್ವಾರಿಣಾ ದ್ವಿಜಃ**

**ಭರದ್ವಾಜರು** ಇನ್ನೂ ಅನೇಕ ಬಗೆಯ ನೀರನ್ನು ಆಚಮನೆಗೆ ನಿಷೇಧಿಸಿದ್ದಾರೆ. ಕಾಸಿದ ನೊರೆಯುಳ್ಳ, ವಿಷಮಯವಾದ, ವಾಸನೆ ತುಂಬಿದ, ಗುಳ್ಳೆ ಎದ್ದಿರುವ, ಕಪ್ಪಾದ, ಕೆಸರು ತುಂಬಿದ, ಉಪ್ಪಾದ ನೀರನ್ನು ಬೇಡವೆಂದಿರುವರು. ಮೇಲಿನಿಂದ ಬೀಳುತ್ತಿರುವ ಮಳೆ ನೀರು, ಉಗುರು ತಾಗಿದ ನೀರು, ಸೋರಿ ಬಂದ ನೀರು, ಯಾರಿಂದಲೋ ಮುಟ್ಟಲ್ಪಟ್ಟ, ಎಲ್ಲಿಂದಲೋ ಹರಿದುಬಂದ ನೀರನ್ನೂ ತ್ಯಜಿಸಬೇಕೆಂದಿರುವರು. ಕ್ರಿಮಿ–ಕೀಟಗಳಿಂದ ತುಂಬಿದ ಮತ್ತು ದೇವರಿಗೆ ಅಭಿಷೇಕಿಸಲ್ಪಟ್ಟ ಹಾಗೆಯೇ ಹಾಳಾದ ನೀರೂ ಉಪಯೋಗಕ್ಕೆ ಬಾರದು–

**ಪಕ್ವಂ ಸಫೇನಂ ಕವಿಷಂ ಸುದುರ್ಗ್ಗಂಧಂ ಸಬುದ್ಬುದಮ್**
**ಕೃಷ್ಣಂ ಸಮೃತ್ತಿಕಂ ಕ್ಷಾರಂ ತ್ಯಜೇದಾಚಮನೇ ಜಲಮ್**
**ಅಂತರಿಕ್ಷಂ ನಖಸ್ಪೃಷ್ಟಂ ಭಿನ್ನರಂಧ್ರವಿನಿರ್ಗ್ಗತಮ್**
**ಭಿನ್ನಂ ಪರ್ಯುಷಿತಂ ಸ್ಪೃಷ್ಟಂ ತ್ಯಜೇಚ್ಚ ಕೃಮಿಸಂಯುತಮ್**
**ದೇವಾಭಿಷಿಕ್ತಂ ಹೇಯಂ ಚ ತ್ಯಜೇದಾಚಮನೇ ಜಲಮ್**



ಹಾಳಾದ ನೀರು ಉಪಯೋಗಕ್ಕಿಲ್ಲದ ಮೇಲೆ ನೀರನ್ನು ತಿಳಿಗೊಳಿಸಿ ಉಪಯೋಗಿಸಿದರೆ ಹೇಗೆ ಎನ್ನುವ ಚೋದ್ಯಕ್ಕೂ ಇಲ್ಲಿದೆ ಉತ್ತರ –ಪರಿಮಳವೋ ಪರಿಷ್ಕಾರವೋ ಬರಲೆಂದು ಏಲಕ್ಕಿ, ಲವಂಗ, ಕರ್ಪೂರ, ಗಂಧ, ಚೆಕ್ಕೆ, ಪತ್ರೆ, ಕಲ್ಲುಸಕ್ಕರೆ ಕೇಸರಿ ಹಾಕಿದ ನೀರಿನಿಂದ ಆಚಮನ ಮಾಡುವಂತಿಲ್ಲ ಎನ್ನುವುದಾಗಿಯೂ ಋಷಿಗಳ ಮಾತಿದೆ. ಒಬ್ಬರು ಮಾಡಿದ ಆಚಮನದ ನೀರಿನಿಂದ ಮತ್ತೊಬ್ಬರು ಆಚಮನ ನಡೆಸುವಂತಿಲ್ಲ. ಮೊದಲೇ ನೀರನ್ನು ಹಂಚಿಕೊಂಡಿರಬೇಕು. ಅಂದರೆ ಒಂದೇ ಪಾತ್ರೆಯ ನೀರಿನಿಂದ ಅನೇಕರು ಆಚಮನ ಮಾಡುವಂತಿಲ್ಲ. ಪಾತ್ರೆಯೊಂದೇ ಆದರೆ ಅದರಲ್ಲಿನ ಆಚಮನದ ಶೇಷ ನೀರು ಚೆಲ್ಲಿ ಪಾತ್ರೆಯನ್ನು ತೊಳೆದು ಮತ್ತೆ ನೀರು ತುಂಬಿ ಆಚಮನ ಮಾಡಿದರಾಯಿತು –

**ಏಲಾಲವಂಗಕರ್ಪೂರಗಂಧಾದ್ಯೈರ್ವಾಸಿತೈರ್ಜಲೈಃ**

**ನಾಚಮೇದದ್ಭಿರುಷ್ಣಾಭಿಃ ಅನ್ಯಾಚಮನಶೇಷಿತೈಃ**

**ಕಣ್ವಸ್ಮೃತಿ**ಯಲ್ಲಿ ಆಚಮನ ಮಾಡುವಾಗ ಸದ್ದು ಬರದಿರಲೆಂದು ಸ್ಪಷ್ಟಪಡಿಸಿದ್ದಾರೆ. ಊಟದಲ್ಲಿ ಯಾವುದೇ ಬಗೆಯ ಪದಾರ್ಥಗಳನ್ನು ತಿನ್ನುವಾಗಲೂ ಸದ್ದು ಮಾಡದಿರದಂತೆ ಇಲ್ಲಿಯೂ ಸದ್ದು ಮಾಡಿ ಆಚಮನ ಗೈದರೆ ನರಕಾದಿ ಅನರ್ಥಗಳನ್ನು ತಿಳಿಸಿದ್ದಾರೆ –

**ಏವಮಾಚಮನೇ ಪ್ರೋಕ್ತಂ ಜಲಪಾನೇ ಚ ಭೋಜನೇ**

**ಭಕ್ಷಣೇ ಚಾಪಿ ಭಕ್ಷ್ಯಾಣಾಂ ಖಾದ್ಯಾನಾಮಪಿ ಖಾದನೇ**

**ಭೋಜ್ಯಾನಾಂ ಭೋಜನೇ ಚಾಪಿ ತಥಾ ವೈ ಲೇಹ್ಯಚೋಷ್ಯಯೋಃ**

**ಅಶಬ್ದಂ ಸರ್ವತಃ ಕುರ್ವನ್ ತತ್ತತ್ಕರ್ಮ ಸಮಾಚರೇತ್**

**ಯದಿ ಶಬ್ದಂ ತಥಾ ಕುರ್ವನ್ ಸದ್ಯೋ ನಿರಯಮೃಚ್ಛತಿ**

ಸೋರಿದ ನೀರಿನ ನಿಷೇಧಕ್ಕೊಂದು ತೈತ್ತಿರೀಯಬ್ರಾಹ್ಮಣದ ಸಂಗ್ರಹ –

**ಪ್ರಹ್ಲಾದೋ ವೈ ಕಾಯಾಧವಃ ವಿರೋಚನಂ ಸ್ವಂ ಪುತ್ರಂ ಉದಾಸ್ಯಾತ್**

**ಸ ಪ್ರದರೋಽಭವತ್ ತಸ್ಮಾತ್ ಪ್ರದರಾದುದಕಂ ನಾಚಾಮೇತ್**



ಬಟ್ಟೆಯಿಂದ ಸೋಸಿದ ನೀರಿನಿಂದ ಶಬ್ದಮಾಡದೆ ಆಚಮನ ಮಾಡಬೇಕೆಂದು **ಪ್ರಚೇತಸ್ಸರು** ಹೇಳಿದ್ದಾರೆ –

**ಅನುಷ್ಣಾಭಿರಫೇನಾಭಿಃ ಪೂತಾಭಿರ್ವಸ್ತ್ರಚಕ್ಷುಷಾ**

**ಹೃದ್ಗತಾಭಿರಶಬ್ದಾಭಿಃ ತ್ರಿಶ್ಚತುರ್ವಾದ್ಭಿರಾಚಮೇತ್**

ನಿಶ್ಯಬ್ದಕ್ಕೆ ಎಚ್ಚರವಹಿಸಲು **ಭವಿಷ್ಯಪುರಾಣ** ಎಚ್ಚರಿಸಿದೆ –

**ಯುತಾಂಗುಲಿಕರಂ ಕೃತ್ವಾ ಏಕಾಗ್ರಃ ಸುಮನಾ ದ್ವಿಜಃ**

**ತ್ರಿಃ ಕೃತ್ವಾ ಯಃ ಪಿಬೇದಾಪೋ ಮುಖಶಬ್ದವಿವರ್ಜ್ಜಿತಃ**

ಹರಿವ ನೀರು ಆಚಮನೆಗೆ ಹೆಚ್ಚು ಯೋಗ್ಯ ಎನ್ನುವುದಾಗಿ **ಭವಿಷ್ಯಪುರಾಣ** –

**ಪ್ರಸನ್ನಾಭಿಸ್ತಥಾದ್ಭಿಸ್ತು ಆಚಾಂತಃ ಶುಚಿತಾಮಿಯಾತ್**

**ನೋಷ್ಣಾಭಿರ್ನ ಸಫೇನಾಭಿಃ ಯುಕ್ತಾಭಿಃ ಕಲುಷೇಣ ಚ**

**ವರ್ಣ್ಣೇನ ರಸಗಂಧಾಭ್ಯಾಂ ಹೀನಾಭಿರ್ನ್ನಚ ಭಾರತ**

**ಸಬುದ್ಬುದಾಭಿಶ್ಚ ತಥಾ ನಾಚಾಮೇತ್ಪಂಡಿತೋ ನೃಪ**

ಬಲಕೈಯ ಹೆಬ್ಬೆರಳ ತುದಿ ಬಲಕೈಯ ನಡುಬೆರಳ ನಡುಗಂಟಿಗೆ ತಾಗುವಂತೆ ಅಂಗೈಮಾಡಿ ಆಚಮನ ಮಾಡಬೇಕು. ಇದು ನೋಡಲು ದನದ ಕಿವಿಯಂತೆ ಕಾಣುವುದರಿಂದ ಇದನ್ನು **ಗೋಕರ್ಣಮುದ್ರೆ** ಎಂದು ಕರೆದಿರುವರು. ಗೋಕರ್ಣಾಕೃತಿಯ ಅಂಗೈಯಿಂದ ಆಚಮನವನ್ನು ನಡೆಸಬೇಕು –

**ಅಂಗುಷ್ಠಾಗ್ರಂ ಸಮಾಕುಂಚ್ಯ ಮಧ್ಯಮಾಮಧ್ಯಪರ್ವಣಿ**

**ಗೋಕರ್ಣ್ಣಂ ತದ್ಧಿ ವಿಜ್ಞೇಯಂ ಸರ್ವೇಷ್ವಾಚಮನೇಷ್ವಪಿ**

ಕೈಗೆ ನೀರನ್ನು ಹಾಕಿಕೊಳ್ಳುವಾಗ ಗೋಕರ್ಣದ ಆಕಾರ. ನೀರು ಪ್ರಾಶನ ಮಾಡುವಾಗ ಕಿರುಬೆರಳು ಮತ್ತು ಹೆಬ್ಬೆರಳು ದೂರವಾಗಿರಬೇಕು. ಒಂದು ಉದ್ದುಕಾಳು ಮುಳುಗುವಷ್ಟು ನೀರು ಆಚಮನೆಗೆ ಇರಬೇಕೆಂದು **ಭರದ್ವಾಜರು** ಹೇಳಿರುವರು–

**ಅಯತಂ ಪೂರ್ವತಃ ಕೃತ್ವಾ ಗೋಕರ್ಣ್ಣಾಕೃತಿವತ್ಕರಮ್**

**ಸಂಹತಾಗುಲಿನಾ ತೋಯಂ ಗೃಹೀತ್ವಾ ಪಾಣಿನಾ ದ್ವಿಜಃ**



**ಮುಕ್ತಾಂಗುಷ್ಠಕನಿಷ್ಠೇನ ಶೇಷೇಣಾಚಮನಂ ಚರೇತ್**

**ಮಾಷಮಜ್ಜನಮಾತ್ರಾಸ್ತು ಸಂಗೃಹ್ಯ ತ್ರಿಃ ಪಿಬೇದಪಃ**

ವ್ಯಾಸರ ಮಾತಿನಲ್ಲಿ ಹೇಳುವುದಾದರೆ ಉದ್ದು ಮುಳುಗುವದಕ್ಕಿಂತ ಹೆಚ್ಚು ಅಥವಾ ಕಡಿಮೆ ನೀರನ್ನು ಪ್ರತಿಯೊಂದು ಆಚಮನದಲ್ಲಿ ಉಪಯೋಗಿಸಿಕೊಂಡರೆ ಕಳ್ಳು ಕುಡಿದಂತೆ ಅಪಚಾರವಾಗಲಿದೆ –

**ಗೋಕರ್ಣಾಕೃತಿಹಸ್ತೇನ ಮಾಷಮಗ್ನಂ ಜಲಂ ಪಿಬೇತ್**

**ತನ್ನ್ಯೂನಮಧಿಕಂ ಪೀತ್ವಾ ಸುರಾಪಾನೀ ಭವೇದ್ದ್ವಿಜಃ**

ಐದು ಗುಲಗುಂಜಿಯಷ್ಟು ನೀರಿನ ಪ್ರಮಾಣವನ್ನು ಉದ್ದು ಮುಳುಗುವ ಪ್ರಮಾಣ ಎನ್ನುವುದಾಗಿ ತಿಳಿಯಬೇಕು – **ದಶಾರ್ಧಗುಂಜಂ ಪ್ರವದಂತಿ ಮಾಷಮ್**

ಆಚಮನದ ನೀರನ್ನು ಕಣ್ಣಿನಿಂದ ನೋಡಿಕೊಂಡೇ ಕುಡಿಯಬೇಕು ಎನ್ನುವುದಾಗಿ **ನರಸಿಂಹಪುರಾಣದ** ಮಾತು. ಇದರಿಂದ ನೀರಿನ ದೋಷದ ಅರಿವು ಆಗಲಿದೆ. ಹೀಗಾಗಿ ಕತ್ತಲೆಯಲ್ಲಿ ನದೀತೀರಗಳಲ್ಲಿ ಸಂಧ್ಯಾವಂದನೆಯಲ್ಲಿ ಸ್ವಲ್ಪ ಎಚ್ಚರ –

**ದಕ್ಷಿಣಂ ತು ಕರಂ ಕೃತ್ವಾ ಗೋಕರ್ಣಾಕೃತಿವತ್ಪುನಃ**

**ತ್ರಿಃಪಿಬೇತ್ ವೀಕ್ಷಿತಂ ತೋಯಂ ಆಸ್ಯಂ ದ್ವಿಃ ಪರಿಮಾರ್ಜಯೇತ್**

ನಿಧಾನ ಆಚಮನೆಗೈದಾಗ ಪರಿವೀಕ್ಷಣೆ ನಡೆಯಲಿದೆ ಎಂದು **ಭವಿಷ್ಯದ** ಆದೇಶ–

**ನ ತಿಷ್ಠನ್ನ ಚ ಸಂಜಲ್ಪನ್ ತಥಾ ಚಾನವಲೋಕಯನ್**

**ನ ತ್ವರನ್ಕುಪಿತೋ ವಾಽಪಿ ತ್ಯಕ್ತ್ವಾ ರಾಜನ್ ಸುದೂರತಃ**

ಒಂದೇ ಬಟ್ಟೆ ತೊಟ್ಟಿದ್ದು ಆಚಮನೆಗೈದರೆ ಶುದ್ಧಿಯಾಗದು ಎಂದು **ಪದ್ಮಪುರಾಣ** ಎಚ್ಚರಿಸಿದೆ –

**ಏಕವಸ್ತ್ರಪಿಧಾನಶ್ಚ ಆಚಾಂತೋ ನೈವ ಶುದ್ಧ್ಯತಿ**

**ಮಹಾಭಾರತವು** ಆಚಮನದ ಸ್ಪಷ್ಟ ಚಿತ್ರಣವನ್ನು ಹೀಗೆ ನೀಡಿದೆ –

**ಗೋಕರ್ಣಾಕೃತಿವತ್ಕೃತ್ವಾ ಕರಂ ತ್ರಿಃ ಪ್ರಪಿಬೇಜ್ಜಲಮ್**

**ದ್ವಿಸ್ತತ್ಪರಿಮೃಜೇದ್ವಕ್ತ್ರಂ ಪಾದಾವಭ್ಯುಕ್ಷ್ಯ ಚಾತ್ಮನಃ**



**ಶೀರ್ಷಣ್ಯಾಂಸ್ತು ತತಃ ಪ್ರಾಣಾನ್ ಸಕೃದೇವ ತು ಸಂಸ್ಪೃಶೇತ್**

**ಬಾಹೂ ದ್ವೌ ಚ ತತಃ ಸ್ಪೃಷ್ಟ್ವಾ ಹೃದಯಂ ನಾಭಿಮೇವ ಚ**

**ಪ್ರತ್ಯಂಗಮುದಕಂ ಸ್ಪೃಷ್ಟ್ವಾ ಮೂರ್ಧಾನಂ ತು ಪುನಃ ಸ್ಪೃಶೇತ್**

ಮೂರು ಬಾರಿ ನೀರಿನ ಪ್ರಾಶನಕ್ಕೆ ಹಾಗೂ ಎರಡು ಬಾರಿ ಮುಖ (ಬಾಯಿ) ಮಾರ್ಜನೆಗೆ ಮಂತ್ರಗಳು ಪಂಚವೇದಗಳು ಎಂದು **ಗರುಡಪುರಾಣ** ತಿಳಿಸಿದೆ –

**ಋಚೋ ಯಜೂಂಷಿ ಸಾಮಾನಿ ತ್ರಿಃ ಪಿಬನ್ ಪ್ರೀಣಯೇತ್ಕ್ರಮಾತ್**

**ಅಥರ್ವಾಂಗಿರಸೌ ಪೂರ್ವಂ ದ್ವಿಃ ಪ್ರಮಾರ್ಷ್ಟ್ಯಾನಯೇನ್ಮುಖಮ್**

**ಸೇತಿಹಾಸಪುರಾಣಾನಿ ವೇದಾಂಗಾನಿ ಯಥಾಕ್ರಮಮ್**

ಪಂಚವೇದಗಳು ಭಗವಂತನ ಪಂಚರೂಪಗಳನ್ನು ತಿಳಿಸಿವೆ. ಮತ್ತೆ ಇತರ ಗಣದೇವತೆಗಳು ಅರ್ಥವಾಗಲಿದ್ದಾರೆ. ಇದನ್ನು **ಛಂದೋಗವು** ಮಧುವಿದ್ಯೆಯಲ್ಲಿ ಸಾರಿದೆ. ಅದರ ಸಾರವನ್ನು ಆಚಾರ್ಯಮಧ್ವರು ನೀಡಿದ್ದಾರೆ.

**ಋಕ್ಪ್ರೋಕ್ತೋ ಲೋಹಿತಾಕಾರೋ ವಾಸುದೇವಃ ಪರಃ ಪುಮಾನ್**

**ಸ ಏವ ಸೂರ್ಯಲೋಹಿತ್ಯೇ ಪ್ರಾಚ್ಯರಶ್ಮಿಷು ಚ ಸ್ಥಿತಃ**

**ಸಂಕರ್ಷಣಃ ಶುಕ್ಲವರ್ಣೋ ಯಜುರ್ವೇದೋದಿತಃ ಪ್ರಭುಃ**

**ಪ್ರತ್ಯಗ್ರಶ್ಮಿಷು ಸೂರ್ಯಸ್ಯ ಶ್ಯಾಮವರ್ಣೋಽಪಿ ಚ ಸ್ಥಿತಃ**

**ಅನಿರುದ್ಧಃ ಸುನೀಲಶ್ಚ ಇತಿಹಾಸಪುರಾಣಯೋಃ**

**ಅಥರ್ವವೇದೇ ಚೋಕ್ತಃ ಸನ್ ಉದಗ್ರಶ್ಮಿಷು ಸಂಸ್ಥಿತಃ**

**ಸುಕೃಷ್ಣೇ ಸೂರ್ಯರೂಪೇ ಚ ಮಧ್ಯೇ ನಾರಾಯಣಃ ಪ್ರಭುಃ**

**ಊರ್ಧ್ವರಶ್ಮಿಷು ಸಂಸ್ಥಶ್ಚ ಪ್ರೋದ್ಯದಾದಿತ್ಯಸಪ್ರಭಃ**

**ಋಗ್ವೇದಮಾನಿನಶ್ಚೈವ ವಹ್ನ್ಯಾದ್ಯಾಃ ವಸವಸ್ತ್ವೃಚಃ**

**ಅರ್ಚ್ಯತ್ವಾತ್ಪ್ರಥಮಂ ಚೈವ ವಿಶೇಷಾದ್ಯಜ್ಞದೇವತಾಃ**

**ಇಂದ್ರಾದ್ಯಾ ಯಜುರುದ್ದಿಷ್ಟಾ ರುದ್ರ ಇಂದ್ರಸಹಾಯತಃ**

**ಇಂದ್ರಶಬ್ದೋದಿತೋ ವಾಯುಃ ಸ ಯಾಜ್ಯಃ ಸೋಮಭುಕ್ ಪುರಃ**



**ಸ ಹಿ ಶಂಕರಪೂರ್ವಾಣಾಂ ರುದ್ರಾಣಾಂ ಮುಖ್ಯ ಏವ ಚ**

**ಸಾಮನಾಮಾನ ಆದಿತ್ಯಾ ಮಾಸಶಃ ಸಮಭೋಗತಃ**

**ಇಂದ್ರೋ ವರುಣ ಉದ್ದಿಷ್ಟೋ ಯಜ್ಞೇಷು ಪ್ರಿಯತೇ ಯತಃ**

**ಆದಿತ್ಯಾನಾಮಧಿಪತಿಃ ಸ ಹಿ ವಿಷ್ಣುನಿಯೋಜಿತಃ**

**ಇತಿಹಾಸಪುರಾಣಾನಾಂ ಸೋಮಾದ್ಯಾ ಅಭಿಮಾನಿನಃ**

**ಅಥರ್ವಾಂಗಿರಸಾಂ ಚೈವಾಪ್ಯಥರ್ವಾಂಗಿರನಾಮಕಾಃ**

**ಅಥರಂ ವರ್ತಯೇಯುಸ್ತೇ ವೃಷ್ಟಿಮಂಗರಸಾಸ್ತಥಾ**

**ಮನಸ್ತ್ವಾತ್ ಪ್ರಾಣರೂಪತ್ವಾತ್ ಅಥರ್ವಾಂಗಿರಸಸ್ತತಃ**

ಸೂರ್ಯಸ್ಥ ಪಂಚರೂಪಗಳನ್ನು ವಿಶೇಷವಾಗಿ ಪಂಚವೇದಗಳು ಹೇಳುವ ಮೂಲಕ ಆಚಮನದಿಂದ ಆರಂಭಿಸಿ ಸಂಧ್ಯೋಪಾಸನೆಯಲ್ಲಿ ಸೂರ್ಯಪ್ರತೀಕದ ಆರಾಧನೆಯ ಔಚಿತ್ಯ ಎದ್ದುಕಾಣುವುದು. ಪಂಚಾಯುಧ ಧಾರಣೆಯಲ್ಲಿಯೂ ಪಂಚರೂಪನು ಪ್ರಪಂಚಿತನೇ. ಮುಂದೆ ಆಚಮನ, ಅರ್ಘ್ಯಪ್ರದಾನ, ಗಾಯತ್ರೀ ಜಪ ಇವೆಲ್ಲದರ ಮುಖ್ಯ ಧ್ಯೇಯ ನಾರಾಯಣ ಎನ್ನುವುದು ಸ್ಪಷ್ಟವಾಗುವುದು. ಅದಕೆಂದೆ ನಾರಾಯಣಮಂತ್ರಜಪವೂ ಸಂಧ್ಯೆಯಲ್ಲಿ ನಿಯತವಾಗಿರುವುದು.

ಎಲ್ಲ ಕರ್ಮಗಳೂ ವೇದದಿಂದಲೇ ನಡೆಸಲ್ಪಡುವುದರಿಂದ ವೇದನಾಮಗಳ ಜತೆಗೆಯೆ ಆಚಮನ ಶ್ರೇಯಸ್ಕರವೆನಿಸಿದೆಯೆಂದು **ಯಾಜ್ಞವಲ್ಕ್ಯ**ರು ಹೇಳಿರುತ್ತಾರೆ–

**ಯಜ್ಞಾನಾಂ ತಪಸಾಂ ಚೈವ ಶುಭಾನಾಂ ಚೈವ ಕರ್ಮಣಾಮ್**

**ವೇದ ಏವ ದ್ವಿಜಾತೀನಾಂ ನಿಃಶ್ರೇಯಸಕರಃ ಪರಃ**

**ಬೋಧಾಯನಗೃಹ್ಯಸೂತ್ರ**ದಲ್ಲಿಯೂ ವೈದಿಕ ದೇವತೆಗಳೆಲ್ಲರೂ ಇದ ರಿಂದ ತೃಪ್ತಿಗೊಳ್ಳುವರೆಂದು ಹೇಳಲಾಗಿದೆ–

**ಪ್ರಥಮಂ ಯತ್ಪಿಬತಿ ತೇನ ಋಗ್ವೇದಂ ಪ್ರೀಣಾತಿ**

**ಯದ್ವಿತೀಯಂ ತೇನ ಯಜುರ್ವೇದಂ ಪ್ರೀಣಾತಿ**

**ಯತ್ತೃತೀಯಂ ತೇನ ಸಾಮವೇದಂ ಪ್ರೀಣಾತಿ**



ಸರ್ವಾ: ದೇವತಾ: ಪ್ರೀಣಂತ್ಯಗ್ನಿರ್ವಾಯು: ಪ್ರಜಾಪತಿ:

ಅರ್ಕ್ಕಚಂದ್ರೌ ಮಘವಾನಿತಿ ವೈದಿಕಾ:

ಭವಿಷ್ಯಪುರಾಣದಲ್ಲಿ ನಾಲ್ಕು ವೇದಗಳ ಹರವು –

ಪ್ರಥಮಂ ಯತ್ಪಿಬೇದಾಪ ಋಗ್ವೇದಸ್ತೇನ ತೃಪ್ಯತಿ

ಯದ್ವಿತೀಯಂ ಯಜುರ್ವೇದ: ತೇನ ಪ್ರೀಣಾತಿ ಭಾರತ

ಯತ್ತೃತೀಯಂ ಸಾಮವೇದ: ತೇನ ಪ್ರೀಣಾತಿ ಭಾರತ

ಪ್ರಥಮಂ ಯನ್ಮೃಜೇದಾಸ್ಯಂ ದಕ್ಷಿಣಾಂಗುಷ್ಠಮೂಲತ:

ಅಥರ್ವವೇದ: ಪ್ರೀಣಾತಿ ತೇನ ರಾಜನ್ನ ಸಂಶಯ:

ಇದರ ಮೂಲ ಮಹಾಭಾರತ. ಮುಂದಿನ ವಿವರಣೆಗೂ –

.... ನಿಶ್ಶಬ್ದಂ ತ್ರಿರಪ: ಪಿಬೇತ್

ದ್ವಿರ್ಮ್ಮುಖಂ ಪರಿಮೃಜ್ಯಾಚ್ಚ ಖಾನಿ ಚೋಪಸ್ಪೃಶೇದ್ಬುಧ:

ಋಗ್ವೇದಂ ತೇನ ಪ್ರೀಣಾತಿ ಪ್ರಥಮಂ ಯ: ಪಿಬೇದಪ:

ದ್ವಿತೀಯಂ ತು ಯಜುರ್ವೇದಂ ತೃತೀಯಂ ಸಾಮ ಏವ ಚ

ಮೃಜ್ಯತೇ ಪ್ರಥಮಂ ತೇನ ಅಥರ್ವಾ ಪ್ರೀತಿಮಾಪ್ನುಯಾತ್

ದ್ವಿತೀಯೇನೇತಿಹಾಸಂ ಚ ಪುರಾಣಸ್ಮೃತಿದೇವತಾ:

ಯಚ್ಚಕ್ಷುಷಿ ಸಮಾಧತ್ತೇ ತೇನಾದಿತ್ಯಂ ತು ಪ್ರೀಣಯೇತ್

ಪ್ರೀಣಾತಿ ವಾಯುಂ ಘ್ರಾಣಂ ಚ ದಿಶಶ್ಚಾಪ್ಯಥ ಶ್ರೋತ್ರಯೋ:

ಬ್ರಹ್ಮಾಣಂ ತೇನ ಪ್ರೀಣಾತಿ ಯನ್ಮೂರ್ಧನಿ ಸಮಾಪಯೇತ್

ಸಮುತ್ಕ್ಷಿಪತಿ ಚಾಪೋರ್ಧ್ವಂ ಆಕಾಶಂ ತೇನ ಪ್ರೀಣಯೇತ್

ಪ್ರೀಣಾತಿ ವಿಷ್ಣು: ಪದ್ಭ್ಯಾಂ ತು ಸಲಿಲಂ ವೈ ಸಮಾದಧತ್

ಪ್ರಾಙ್ಮುಖೋದಙ್ಮುಖೋ ವಾಽಪಿ ಅಂತರ್ಜ್ಜಾನುರುಪಸ್ಪೃಶೇತ್

ಸಮಗ್ರ ಆಚಮನದಿಂದ ಸಕಲ ಶಾಸ್ತ್ರೋಕ್ತದೇವತೆಗಳ ಭಗವಂತನ ಚತೂರೂಪದ ತೃಪ್ತಿಯಾಗುವುದೆಂಬ ಸೂಕ್ಷ್ಮವಿಚಾರವನ್ನು ತೈತ್ತಿರೀಯಶ್ರುತಿ ಹೇಳಿದೆ –



**ಯತ್ತ್ರಿರಾಚಾಮತಿ ತೇನ ಋಚಃ ಪ್ರೀಣಾತಿ**

**ಯದ್ ದ್ವಿಃ ಪರಿಮೃಜತಿ ತೇನ ಯಜೂಂಷಿ**

**ಯತ್ ಸಕೃದುಪಸ್ಪೃಶತಿ ತೇನ ಸಾಮಾನಿ**

**ಯತ್ ಸವ್ಯಂ ಪಾಣಿಂ ಪಾದೌ ಪ್ರೋಕ್ಷತಿ ಯಚ್ಛಿರಶ್ಚಕ್ಷುಷೀ**

**ನಾಸಿಕೇ ಶ್ರೋತ್ರೇ ಹೃದಯಮಾಲಭತೇ**

**ತೇನಾಥರ್ವಾಂಗಿರಸೋ ಬ್ರಾಹ್ಮಣಾನೀತಿಹಾಸಾನ್ ಪುರಾಣಾನಿ ಕಲ್ಪಾನ್**

**ಗಾಥಾ ನಾರಾಶಂಸೀಃ ಪ್ರೀಣಾತೀತಿ**

ಮೂರು ಬಾರಿ ಜಲಪ್ರಾಶನದ ಬಳಿಕ ಎರಡು ಬಾರಿ ಮುಖಮಾರ್ಜನದ ಅನಂತರ ದೇಹದ ಕೆಲವು ಅಂಗಗಳ ಸ್ಪರ್ಶನ ಮಾಡಿದರೆ ಪೂರ್ಣರೂಪದಲ್ಲಿ ಆಚಮನ ಮಾಡಿದಂತೆ ಆಗುವುದು. ಈ ಪ್ರಕ್ರಿಯೆಯಲ್ಲಿ ಮಂತ್ರಗಳು ಬೇರೆಬೇರೆಯಾಗಿವೆ. ತಂತ್ರ ಒಂದೇ ರೀತಿಯಲ್ಲಿದೆ. ದೇಹದ ಕೆಲವು ಅಂಗಗಳ ಸ್ಪರ್ಶದಲ್ಲಿ ಸ್ಥಾನವ್ಯತ್ಯಾಸವಿದೆ. **ತೈತ್ತಿರೀಯಾರಣ್ಯಕದಲ್ಲಿ** ಕೆಲವು ಅಂಗಗಳನ್ನು ಹೇಳಿರುತ್ತಾರೆ –

**ತ್ರಿರಾಚಮೇದ್ ದ್ವಿಃಪರಿಮೃಜ್ಯ ಸಕೃದುಪಸ್ಪೃಶ್ಯ**

**ಶಿರಶ್ಚಕ್ಷುಷೀ ನಾಸಿಕೇ ಶ್ರೋತ್ರೇ ಹೃದಯಮಾಲಭ್ಯ**

ಎಂಟು ಸ್ಥಾನಗಳ ಸ್ಪರ್ಶವನ್ನು ಇಲ್ಲಿ ಹೇಳಲಾಗಿದೆ – ತಲೆ, ಕಣ್ಣುಗಳೆರಡು, ಮೂಗಿನ ಎರಡು ಬದಿ, ಕಿವಿಗಳೆರಡು ಮತ್ತು ಎದೆ. ಇದನ್ನೀಗ ಬ್ರಹ್ಮಯಜ್ಞದ ಸಂದರ್ಭದಲ್ಲಿ ನಡೆಸುವುದನ್ನು ಕಾಣಬಹುದು. **ಅನಿರುದ್ಧಸಂಹಿತೆಯಲ್ಲಿ** ದಶಾಂಗಸ್ಪರ್ಶ ಹೇಳಲಾಗಿದೆ.

**ತ್ರಿಃಪಿಬೇತ್ ದ್ವಿರ್ಮೃಜೇಚ್ಚೈವಂ ದಶಾಂಗಾನಿ ತು ಸಂಸ್ಪೃಶೇತ್**

**ಅಂಗುಲೀಭಿರ್ವಿಶೇಷೇಣ ಚಕ್ಷುರಾದ್ಯೈಸ್ತು ಸಂಸ್ಪೃಶೇತ್**

ಮಾರ್ಜನೆಗೆ ಹೇಳಿದ ಬಾಯಿಯನ್ನು ಸೇರಿಸಿ ಹನ್ನೆರಡು ಅಂಗಗಳ ಸ್ಪರ್ಶವನ್ನು **ಸ್ಮೃತಿರತ್ನಾಕರದಲ್ಲಿ** ಹೇಳಲಾಗಿದೆ –

**ಮುಖಾಕ್ಷಿನಾಸಿಕಾಶ್ರೋತ್ರಭುಜನಾಭಿಭುಜಾಂತರಮ್**



**ಶಿರಶ್ಚೇತಿ ದ್ವಾದಶಾಂಗಾನ್ಯಾಚಮನ್ ಸಂಸ್ಪೃಶೇತ್ ಪೃಥಕ್**

ಇಲ್ಲಿ ಭುಜಾಂತರ ಶಬ್ದದಿಂದ ಎದೆಯನ್ನು ಹೇಳಲಾಗಿದೆ. ಮನು ಇದನ್ನು ಆತ್ಮ ಶಬ್ದದಿಂದ ಪರಾಮರ್ಶಿಸಿದ್ದಾನೆ. ಆತ್ಮ ಶಬ್ದಕ್ಕೆ ಮಧ್ಯದೇಹ – ಎದೆ ಎಂಬ ಅರ್ಥವೂ ಇದೆ.

**ತ್ರಿಃ ಪ್ರಾಶಯೇದಪಃ ಪೂರ್ವಂ ದ್ವಿರುನ್ಮೃಜ್ಯಾತ್ತತೋ ಮುಖಮ್**

**ಖಾನಿ ಚೈವ ಸ್ಪೃಶೇದದ್ಭಿಃ ಆತ್ಮಾನಂ ಶಿರ ಏವ ಚ**

ಸಂವರ್ತಪನು ಮಾರ್ಜನೆಗಷ್ಟೆ ಅಲ್ಲದೆ ಬಾಯಿಯ ಪ್ರತ್ಯೇಕ ಸ್ಪರ್ಶದ ಜತೆಗೆ ಹನ್ನೆರೆಡು ಅಂಗಗಳ ಸ್ಪರ್ಶ ಹೇಳಿರುತ್ತಾನೆ –

**ಪರಿಮೃಜ್ಯ ದ್ವಿರಾಸ್ಯಂ ತು ದ್ವಾದಶಾಂಗಾನಿ ಚಾಲಭೇತ್**

ಕರಗಳೆರಡರ ಮಾರ್ಜನೆಗಿಂತ ಬಾಯಿಯ ಪರಿಮಾರ್ಜನೆಯನ್ನು ಸ್ಪಷ್ಟವಾಗಿ ಶಾಸ್ತ್ರಕಾರರು ತಿಳಿಸಿಕೊಟ್ಟಿದ್ದಾರೆ. ಮಿತಾಕ್ಷರದಲ್ಲೂ ಯಾಜ್ಞವಲ್ಕ್ಯ ಸ್ಮೃತಿಯ ವಾಕ್ಯವನ್ನು ವಿವರಿಸುತ್ತ ಮುಖಮಾರ್ಜನೆಯನ್ನು ತೀಳಿಸಲಾಗಿದೆ–

**ತ್ರಿಃ ಪ್ರಾಶ್ಯಾಪೋ ದ್ವಿರುನ್ಮೃಜ್ಯ ಖಾನ್ಯದ್ಭಿಃ ಸಮುಪಸ್ಪೃಶೇತ್**

**ಮುಖಮಂಗುಷ್ಠಮೂಲೇನ ದ್ವಿರುನ್ಮೃಜ್ಯ ಖಾನಿ ಛಿದ್ರಾಣಿ**

**ಊರ್ಧ್ವಕಾಯಗತಾನಿ ಘ್ರಾಣಾದೀನಿ ಅದ್ಭಿರುಪಸ್ಪೃಶೇತ್**

ಹನ್ನೆರಡು ಅಂಗಗಳ ಸ್ಪರ್ಶ ಅಂದರೆ ಮಲ ಸುರಿಸುವ ದ್ವಾರಗಳನ್ನು ನೀರಿನಿಂದ ಪ್ರೋಕ್ಷಿಸಿ ತೊಳೆಯುವ ಕ್ರಮ ಎಂಬ ವಿಶಿಷ್ಟ ಚಿಂತನೆಯನ್ನಿಲ್ಲಿ ಸ್ಪಷ್ಟ ಕಾಣಬಹುದು. ಅದರಲ್ಲಿಯೂ ಮಲಮೂತ್ರ ವಿಸರ್ಜನ ದ್ವಾರಗಳನ್ನು ಹೊರತುಪಡಿಸಿ ತಲೆಯಲ್ಲಿರುವ ಉಳಿದೇಳು ದ್ವಾರಗಳನ್ನು (ಬಾಯಿ, ಮೂಗಿನ ಹೊರಳೆಗಳೆರಡು, ಕಣ್ಣೆರಡು, ಕಿವಿಯೆರೆಡು) ನೀರು ಅದ್ದಿದ ಬೆರಳುಗಳಿಂದ ಮುಟ್ಟಬೇಕು. ನಾಭಿ ಹಾಗೂ ನೆತ್ತಿ ಇನ್ನೆರಡು ರಂಧ್ರಗಳಾಗಿವೆ. ಇವನ್ನೂ ಸ್ಪರ್ಶಿಸಬೇಕು –

**ನಾಸಿಕಾಂ ಚಕುಷೀ ಶ್ರೋತ್ರೇ ಮುಖಂ ನಾಭಿಂ ತತಃ ಶಿರಃ**

**ಸ್ಪೃಷ್ಟ್ವಾ ಪ್ರಾಣಾನ್ ಯಥಾಸಂಖ್ಯಂ ಪಾದೌ ಪ್ರೋಕ್ಷ್ಯ ತತಃ ಶುಚಿಃ**



ನೆತ್ತಿ ಮುಟ್ಟುವ ಆಚಮನವನ್ನು ಶಂಖಸ್ಮೃತಿಯಲ್ಲಿಯೂ, ಯೋಗ ದೀಪಿಕಾದಲ್ಲಿಯೂ ಕಾಣಬಹುದು. ಯೋಗದೀಪಿಕಾದಲ್ಲಿ ಆಚಮನವನ್ನು ಅಂತರಂಗದ ಸ್ನಾನವೆಂದೆ ಕರೆಯಲಾಗಿದೆ. ಮಂತ್ರಾಚಮನವೆಂದೂ ಹೇಳಲಾಗಿದೆ. ಮಂತ್ರಾಚಮನ ಎಂದರೆ ಶ್ರೌತಾಚಮನವೆ.

**ಸ ಆಚಾಮೋಽಂತರಂಗಾನಾಂ ಸ್ನಾನರೂಪೋ ನಿಗದ್ಯತೇ**
**ಋಗ್ಯಜುಃಸಾಮವೇದೈಸ್ತು ಚತುರ್ಥ್ಯಂತ್ಯೈಃ ಸ್ವರದ್ವಯೈಃ**
**ಅಶ್ನೀತ ತ್ರಿರ್ಮುಖಂ ತಿರ್ಯಕ್ ಮಾರ್ಜ್ಜಯೇದ್ವಿಃ ಸ್ಪಶನ್ನಪಃ**
**ಅಥರ್ವ್ವೇದಾಯ ನಮ ಇತಿ ಪ್ರಾಚ್ಯೋ ಮನುಸ್ತಯೋಃ**
**ಇತಿಹಾಸಪುರಾಣಾಭ್ಯಾಂ ನಮ ಇತ್ಯಪರೋ ಮತಃ**
**ಅಗ್ನಯೇ ನಮ ಇತ್ಯುಕ್ತ್ವಾ ಮಾರ್ಜ್ಜಯೇದಥ ಆನನಮ್**
**ವಿಷ್ಣವೇ ನಮ ಇತ್ಯುಕ್ತ್ವಾ ಸಿಂಚೇತ್ಪ್ರಪದಯೋರ್ಜ್ಜಲಮ್**
**ಸಾಂಗುಷ್ಠಯಾಽನಾಮಿಕಯಾ ಸ್ಪೃಶೇಚ್ಚಕ್ಷುರ್ದ್ವಯಂ ಕ್ರಮಾತ್**
**ತಥಾ ನಾಸೇ ತು ತರ್ಜ್ಜನ್ಯಾ ಶ್ರೋತ್ರೇಽಂಗುಲ್ಯಾ ಕನಿಷ್ಠಯಾ**
**ಸಮಸ್ತಾಭಿರ್ವಾಮಪಾಣಿಂ ಸೀಮಾಂ ಮಧ್ಯಮಯಾ ಸ್ಪೃಶೇತ್**
**ಹೃದಯಂ ಚ ಸಮಸ್ತಾಭಿಃ ಸೂರ್ಯೋ ವಾಯುರ್ದ್ದಿಶಸ್ತಥಾ**
**ವಸಿಷ್ಠಃ ಶ್ರೀಃ ಪರಾತ್ಮಾ ಚ ಸೋದ್ದೇಶಾ ಹೃದ್ವಸಾನಕಾಃ**
**ತತ್ರ ಮಂತ್ರಾಃ ಪ್ರಶಸ್ಯಂತೇ ಮಂತ್ರಾಚಾಮೋಽಯಮೀರಿತಃ**

**ಋಗ್ವೇದಾಯ ಸ್ವಾಹಾ ಯಜುರ್ವೇದಾಯ ಸ್ವಾಹಾ ಸಾಮವೇದಾಯ ಸ್ವಾಹಾ** ಎಂದು ಮೂರು ಮಂತ್ರಗಳಿಂದ ಜಲಪ್ರಾಶನಗೈದು ನೀರು ಹಿಡಿದು ಎರಡು ಬಾರಿ ಅಡ್ಡಕ್ಕೆ ಬಾಯಿಯನ್ನು ಒರೆಸಬೇಕು. ಆಗ **ಅಥರ್ವ್ವೇದಾಯ ನಮಃ ಇತಿಹಾಸಪುರಾಣಾಭ್ಯಾಂ ನಮಃ** ಎಂಬೆರೆಡು ಮಂತ್ರಗಳನ್ನು ಹೇಳಬೇಕು ಕೆಳಮುಖವಾಗಿ **ಅಗ್ನಯೇ ನಮಃ** ಎಂಬ ಮಂತ್ರವನ್ನು ಹೇಳುತ್ತಾ ಬಾಯಿಯನ್ನು ಒರೆಸಬೇಕು. **ವಿಷ್ಣವೇ ನಮಃ** ಎನ್ನುತ್ತಾ ಎರಡು ಪಾದಗಳಿಗೆ ನೀರನ್ನು ಪ್ರೋಕ್ಷಿಸಬೇಕು (ಇಂದ್ರಶಚೀಪುತ್ರರು ಯಜ್ಞಶಂಭುಗಳು ಪಾದದೇವತೆಗಳು.



**ಶಿರಶ್ಚೇತಿ ದ್ವಾದಶಾಂಗಾನ್ಯಾಚಮನ್ ಸಂಸ್ಪೃಶೇತ್ ಪೃಥಕ್**

ಇಲ್ಲಿ ಭುಜಾಂತರ ಶಬ್ದದಿಂದ ಎದೆಯನ್ನು ಹೇಳಲಾಗಿದೆ. ಮನು ಇದನ್ನು ಆತ್ಮ ಶಬ್ದದಿಂದ ಪರಾಮರ್ಶಿಸಿದ್ದಾನೆ. ಆತ್ಮ ಶಬ್ದಕ್ಕೆ ಮಧ್ಯದೇಹ – ಎದೆ ಎಂಬ ಅರ್ಥವೂ ಇದೆ.

**ತ್ರಿಃ ಪ್ರಾಶಯೇದಪಃ ಪೂರ್ವಂ ದ್ವಿರುನ್ಮೃಜ್ಯಾತ್ತತೋ ಮುಖಮ್**

**ಖಾನಿ ಚೈವ ಸ್ಪೃಶೇದದ್ಭಿಃ ಆತ್ಮಾನಂ ಶಿರ ಏವ ಚ**

ಸಂವರ್ತಪನು ಮಾರ್ಜನೆಗಷ್ಟೆ ಅಲ್ಲದೆ ಬಾಯಿಯ ಪ್ರತ್ಯೇಕ ಸ್ಪರ್ಶದ ಜತೆಗೆ ಹನ್ನೆರೆಡು ಅಂಗಗಳ ಸ್ಪರ್ಶ ಹೇಳಿರುತ್ತಾನೆ –

**ಪರಿಮೃಜ್ಯ ದ್ವಿರಾಸ್ಯಂ ತು ದ್ವಾದಶಾಂಗಾನಿ ಚಾಲಭೇತ್**

ಕರಗಳೆರಡರ ಮಾರ್ಜನೆಗಿಂತ ಬಾಯಿಯ ಪರಿಮಾರ್ಜನೆಯನ್ನು ಸ್ಪಷ್ಟವಾಗಿ ಶಾಸ್ತ್ರಕಾರರು ತಿಳಿಸಿಕೊಟ್ಟಿದ್ದಾರೆ. ಮಿತಾಕ್ಷರದಲ್ಲೂ ಯಾಜ್ಞವಲ್ಕ್ಯ ಸ್ಮೃತಿಯ ವಾಕ್ಯವನ್ನು ವಿವರಿಸುತ್ತ ಮುಖಮಾರ್ಜನೆಯನ್ನು ತೀಳಿಸಲಾಗಿದೆ–

**ತ್ರಿಃ ಪ್ರಾಶ್ಯಾಪೋ ದ್ವಿರುನ್ಮೃಜ್ಯ ಖಾನ್ಯದ್ಭಿಃ ಸಮುಪಸ್ಪೃಶೇತ್**

**ಮುಖಮಂಗುಷ್ಠಮೂಲೇನ ದ್ವಿರುನ್ಮೃಜ್ಯ ಖಾನಿ ಛಿದ್ರಾಣಿ**

**ಊರ್ಧ್ವಕಾಯಗತಾನಿ ಘ್ರಾಣಾದೀನಿ ಅದ್ಭಿರುಪಸ್ಪೃಶೇತ್**

ಹನ್ನೆರಡು ಅಂಗಗಳ ಸ್ಪರ್ಶ ಅಂದರೆ ಮಲ ಸುರಿಸುವ ದ್ವಾರಗಳನ್ನು ನೀರಿನಿಂದ ಪ್ರೋಕ್ಷಿಸಿ ತೊಳೆಯುವ ಕ್ರಮ ಎಂಬ ವಿಶಿಷ್ಟ ಚಿಂತನೆಯನ್ನಿಲ್ಲಿ ಸ್ಪಷ್ಟ ಕಾಣಬಹುದು. ಅದರಲ್ಲಿಯೂ ಮಲಮೂತ್ರ ವಿಸರ್ಜನ ದ್ವಾರಗಳನ್ನು ಹೊರತುಪಡಿಸಿ ತಲೆಯಲ್ಲಿರುವ ಉಳಿದೇಳು ದ್ವಾರಗಳನ್ನು (ಬಾಯಿ, ಮೂಗಿನ ಹೊರಳೆಗಳೆರಡು, ಕಣ್ಣೆರಡು, ಕಿವಿಯೆರೆಡು) ನೀರು ಅದ್ದಿದ ಬೆರಳುಗಳಿಂದ ಮುಟ್ಟಬೇಕು. ನಾಭಿ ಹಾಗೂ ನೆತ್ತಿ ಇನ್ನೆರಡು ರಂಧ್ರಗಳಾಗಿವೆ. ಇವನ್ನೂ ಸ್ಪರ್ಶಿಸಬೇಕು –

**ನಾಸಿಕಾಂ ಚಕುಷೀ ಶ್ರೋತ್ರೇ ಮುಖಂ ನಾಭಿಂ ತತಃ ಶಿರಃ**

**ಸ್ಪೃಷ್ಟ್ವಾ ಪ್ರಾಣಾನ್ ಯಥಾಸಂಖ್ಯಂ ಪಾದೌ ಪ್ರೋಕ್ಷ್ಯ ತತಃ ಶುಚಿಃ**



ನೆತ್ತಿ ಮುಟ್ಟುವ ಆಚಮನವನ್ನು ಶಂಖಸ್ಮೃತಿಯಲ್ಲಿಯೂ, ಯೋಗ ದೀಪಿಕಾದಲ್ಲಿಯೂ ಕಾಣಬಹುದು. ಯೋಗದೀಪಿಕಾದಲ್ಲಿ ಆಚಮನವನ್ನು ಅಂತರಂಗದ ಸ್ನಾನವೆಂದೆ ಕರೆಯಲಾಗಿದೆ. ಮಂತ್ರಾಚಮನವೆಂದೂ ಹೇಳಲಾಗಿದೆ. ಮಂತ್ರಾಚಮನ ಎಂದರೆ ಶ್ರೌತಾಚಮನವೆ.

**ಸ ಆಚಾಮೋಽಂತರಂಗಾನಾಂ ಸ್ನಾನರೂಪೋ ನಿಗದ್ಯತೇ**
**ಋಗ್ಯಜುಃಸಾಮವೇದೈಸ್ತು ಚತುರ್ಥ್ಯಂತ್ಯೈಃ ಸ್ವರದ್ವಯೈಃ**
**ಅಶ್ನೀತ ತ್ರಿರ್ಮುಖಂ ತಿರ್ಯಕ್ ಮಾರ್ಜ್ಜಯೇದ್ವಿಃ ಸ್ಪೃಶನ್ನಪಃ**
**ಅಥರ್ವವೇದಾಯ ನಮ ಇತಿ ಪ್ರಾಚ್ಯೋ ಮನುಸ್ತಯೋಃ**
**ಇತಿಹಾಸಪುರಾಣಾಭ್ಯಾಂ ನಮ ಇತ್ಯಪರೋ ಮತಃ**
**ಅಗ್ನಯೇ ನಮ ಇತ್ಯುಕ್ತ್ವಾ ಮಾರ್ಜ್ಜಯೇದಥ ಆನನಮ್**
**ವಿಷ್ಣವೇ ನಮ ಇತ್ಯುಕ್ತ್ವಾ ಸಿಂಚೇತ್ಪ್ರಪದಯೋರ್ಜ್ಜಲಮ್**
**ಸಾಂಗುಷ್ಠಯಾಽನಾಮಿಕಯಾ ಸ್ಪೃಶೇಚ್ಚಕ್ಷುರ್ದ್ವಯಂ ಕ್ರಮಾತ್**
**ತಥಾ ನಾಸೇ ತು ತರ್ಜ್ಜನ್ಯಾ ಶ್ರೋತ್ರೇಽಂಗುಲ್ಯಾ ಕನಿಷ್ಠಯಾ**
**ಸಮಸ್ತಾಭಿರ್ವಾಮಪಾಣಿಂ ಸೀಮಾಂ ಮಧ್ಯಮಯಾ ಸ್ಪೃಶೇತ್**
**ಹೃದಯಂ ಚ ಸಮಸ್ತಾಭಿಃ ಸೂರ್ಯೋ ವಾಯುರ್ದ್ವಿಶಸ್ತಥಾ**
**ವಸಿಷ್ಠಃ ಶ್ರೀಃ ಪರಾತ್ಮಾ ಚ ಸೋದ್ದೇಶಾ ಹೃದ್ವಸಾನಕಾಃ**
**ತತ್ರ ಮಂತ್ರಾಃ ಪ್ರಶಸ್ಯಂತೇ ಮಂತ್ರಾಚಾಮೋಽಯಮೀರಿತಃ**

**ಋಗ್ವೇದಾಯ ಸ್ವಾಹಾ ಯಜುರ್ವೇದಾಯ ಸ್ವಾಹಾ ಸಾಮವೇದಾಯ ಸ್ವಾಹಾ** ಎಂದು ಮೂರು ಮಂತ್ರಗಳಿಂದ ಜಲಪ್ರಾಶನಗೈದು ನೀರು ಹಿಡಿದು ಎರಡು ಬಾರಿ ಅಡ್ಡಕ್ಕೆ ಬಾಯಿಯನ್ನು ಒರೆಸಬೇಕು. ಆಗ **ಅಥರ್ವವೇದಾಯ ನಮಃ ಇತಿಹಾಸಪುರಾಣಾಭ್ಯಾಂ ನಮಃ** ಎಂಬೆರೆಡು ಮಂತ್ರಗಳನ್ನು ಹೇಳಬೇಕು ಕೆಳಮುಖವಾಗಿ **ಅಗ್ನಯೇ ನಮಃ** ಎಂಬ ಮಂತ್ರವನ್ನು ಹೇಳುತ್ತಾ ಬಾಯಿಯನ್ನು ಒರೆಸಬೇಕು. **ವಿಷ್ಣವೇ ನಮಃ** ಎನ್ನುತ್ತಾ ಎರಡು ಪಾದಗಳಿಗೆ ನೀರನ್ನು ಪ್ರೋಕ್ಷಿಸಬೇಕು (ಇಂದ್ರಶಚೀಪುತ್ರರು ಯಜ್ಞಶಂಭುಗಳು ಪಾದದೇವತೆಗಳು.



ಅವರೊಳಗೆ ವಿಷ್ಣುವಿನ ವಿಶೇಷ ಪ್ರವೇಶವಿರಲಾಗಿ ಇಲ್ಲಿ ದೇವತಾಚಿಂತನೆಯ ಪ್ರಕರಣದಲ್ಲಿ ವಿಷ್ಣುವನ್ನು ಉಲ್ಲೇಖಿಸಲಾಗಿದೆ – **ಪಾದೌ ತು ವಿಷ್ಣುನಾವಿಷ್ಟೌ ಯಜ್ಞಶಂಭೂ ಶಚೀಸುತೌ** ಎಂದು ಆಚಾರ್ಯಮಧ್ವರ ಮಾತು).

ಹೆಬ್ಬೆರಳು ಮತ್ತು ಉಂಗುರಬೆರಳು ಜೋಡಿಸಿದ ಬೆರಳ ತುದಿಯಿಂದ ಎರಡು ಕಣ್ಣುಗಳನ್ನು ಎರಡು ಬಾರಿ **ಸೂರ್ಯಾಯ ನಮಃ** ಎನ್ನುತ್ತಾ ಪ್ರಪ್ರತ್ಯೇಕವಾಗಿ ಮುಟ್ಟಬೇಕು. ಹೀಗೆಯೇ ಹೆಬ್ಬೆರಳ ಜತೆ ತೋರುಬೆರಳಿನಿಂದ ಮೂಗಿನ ಹೊರಳೆಗಳನ್ನು **ವಾಯವೇ ನಮಃ** ಎನ್ನುತ್ತ ಮುಟ್ಟಬೇಕು. ಹೆಬ್ಬೆರಳ ಜೊತೆ ಕಿರುಬೆರಳಿನಿಂದ ಕಿವಿಗಳೆರಡನ್ನು **ದಿಗ್ಭ್ಯೋ ನಮಃ** ಎನ್ನುತ್ತ ಮುಟ್ಟಬೇಕು. ಎಡ ಅಂಗೈಯನ್ನು ಬಲಕೈಯ ಎಲ್ಲ ಬೆರಳುಗಳಿಂದ **ವಸಿಷ್ಠಾಯ ನಮಃ** ಎನ್ನುತ್ತ ನೀರಿನಿಂದ ಒರೆಸಬೇಕು. **ಶ್ರಿಯೈ ನಮಃ** ಎನ್ನುತ್ತ ನೆತ್ತಿಯನ್ನೂ ಹೆಬ್ಬೆರಳು ನಡುಬೆರಳುಗಳಿಂದ ಮುಟ್ಟಬೇಕು (**ಶ್ರೀರ್ವೈ ಶಿರಃ – ಜೈಮಿನೀಯಬ್ರಾಹ್ಮಣ**) ಎಲ್ಲ ಬೆರಳುಗಳ ತುದಿಯಿಂದ **ಪರಾತ್ಮನೇ ನಮಃ** ಎನ್ನುತ್ತ ಎದೆಯನ್ನು ಮುಟ್ಟಬೇಕು.

ಬೆರಳ ತುದಿಗಳಿಂದ ಮುಟ್ಟುವ ಈ ತಂತ್ರಗಾರಿಕೆ ಪಂಚಪ್ರಾಣಮುದ್ರೆಗಳ ವಿನ್ಯಾಸದಲ್ಲಿದೆ. ಇದನ್ನು ನನ್ನ ಮುದ್ರಾಸಮೀಕ್ಷೆಯಲ್ಲಿ ತಿಳಿಯಬಹುದು.

ಇಲ್ಲಿ ಹನ್ನೆರಡು ಅಂಗಗಳ ಸ್ಪರ್ಶವನ್ನು ಕರಾರುವಾಕ್ಕಾಗಿ ಕಾಣಬಹುದು. ಎರಡೂ ಕೈಗಳ ಮಾರ್ಜನೆ ಇಲ್ಲಿ ಹೇಳಲಿಲ್ಲ. ಎಡಕ್ಕೆ ಮಾರ್ಜನೆ ಹೇಳಲಾಗಿದೆ. ಒಂದೊಮ್ಮೆ ಬಲಕೈ ಮಾರ್ಜನೆಯನ್ನು ಎಡಕೈಯಿಂದ ಮಾಡಿದರೆ ಮೊದಲೋ ಅನಂತರವೋ ಮಾಡಿದರೂ ಶುದ್ಧಿ ಅಸಾಧ್ಯವೆಂದೇ ಎಡಕ್ಕೆ ಮಾತ್ರ ಮಾರ್ಜನೆಯನ್ನು ಹೇಳಿದ್ದು. ಎಲ್ಲ ಕರ್ಮಗಳನ್ನೂ ಬಲಕೈಯಿಂದಲೇ ನಡೆಸುತ್ತ ಬಂದಾಗ ಅದಕ್ಕೂ ಮೊದಲು ಬಲಕೈ ಮಾರ್ಜನ ಹೇಳಬೇಕಾದೀತು. ಅದಕೆಂದೇ ಹಸ್ತಮಾರ್ಜನದ ಸುದ್ದಿ ಹೆಚ್ಚಾಗಿ ಕಂಡುಬರುವುದಿಲ್ಲ.

**ಕೂರ್ಮಪುರಾಣ**ದಲ್ಲಿ ಹೃದಯ ಮತ್ತು ತಲೆಯ ಸ್ಪರ್ಶದಲ್ಲಿ ಅಂಗುಷ್ಠ ಒಂದನ್ನಾದರೂ ಬಳಸುವ ವಿಕಲ್ಪವನ್ನು ಹೇಳಿದ್ದು ವಿಶೇಷ. ಹಾಗೆಯೇ ಬೆರಳ ತುದಿಯ ಬದಲಿಗೆ ಅಂಗೈಯಿಂದ ಸ್ಪರ್ಶವನ್ನು ವಿಕಲ್ಪವಾಗಿ ಇಲ್ಲಿ ಹೇಳಿದ್ದಾರೆ –



त्रिः प्राश्नीयादपः पूर्वं ब्राह्मणः प्रयतस्ततः

ತ್ರಿಃ ಪ್ರಾಶ್ನೀಯಾದಪಃ ಪೂರ್ವಂ ಬ್ರಾಹ್ಮಣಃ ಪ್ರಯತಸ್ತತಃ

ಸಮ್ಮೃಜ್ಯಾಂಗುಷ್ಠಮೂಲೇನ ಮುಖಂ ವೈ ಸಮುಪಸ್ಪೃಶೇತ್

ಅಂಗುಷ್ಠಾನಾಮಿಕಾಭ್ಯಾಂ ತು ಸ್ಪೃಶೇನ್ನೇತ್ರದ್ವಯಂ ತತಃ

ತರ್ಜನ್ಯಂಗುಷ್ಠಯೋಗೇನ ಸ್ಪೃಶೇನ್ನಾಸಾಪುಟದ್ವಯಮ್

ಕನಿಷ್ಠಾಂಗುಷ್ಠಯೋಗೇನ ಶ್ರವಣೇ ಸಮುಪಸ್ಪೃಶೇತ್

ಸರ್ವಾಸಾಮಥ ಯೋಗೇನ ಹೃದಯಂ ತು ತಲೇನ ವಾ

ಸಂಸ್ಪೃಶೇದ್ವಾ ಶಿರಃ ತದ್ವತ್ ಅಂಗುಷ್ಠೇನಾಥವಾ ದ್ವಯಮ್

ಇಲ್ಲಿ ಹೇಳಿದಂತೆ ಶಾಂಡಿಲ್ಯಸ್ಮೃತಿಯಲ್ಲಿ ಬೆರಳುಗಳ ಮತ್ತು ಸ್ಥಾನಗಳ ಕೆಲವು ವಿಚಾರವನ್ನು ಕಾಣಬಹುದು. ಎಲ್ಲಕ್ಕೂ ನೀರು ಮುಟ್ಟಿಕೊಂಡೇ ಸ್ಪರ್ಶವನ್ನು ಹೇಳಲಾಗಿದೆ –

ಅಂಗುಷ್ಠಾನಾಮಿಕಾಭ್ಯಾಂ ತು ಚಕ್ಷುಷೀ ಸಂಸ್ಪೃಶೇತ್ತತಃ

ಅಂಗುಷ್ಠತರ್ಜನೀಭ್ಯಾಂ ತು ನಾಸಾಪುಟಯುಗಂ ಸ್ಪೃಶೇತ್

ಕನಿಷ್ಠಾಂಗುಷ್ಠಯೋಗೇನ ಶ್ರೋತ್ರೇ ಚೈವ ಸಮಾಲಭೇತ್

ಹೃದಯಂ ಚ ತತೋ ಮೂರ್ಧ್ನಿ ಜಲಂ ಸ್ಪೃಷ್ಟ್ವಾಂತರಾಂತರಾ

ಗರುಡಪುರಾಣವೂ ಬೆರಳುಗಳಿಂದ ಸ್ಥಾನಗಳ ಸ್ಪರ್ಶವನ್ನು ಸ್ಪಷ್ಟವಾಗಿ ಹೇಳಿದೆ. ನಾಭಿಯ ಸ್ಪರ್ಶ ಸೇರಿದೆ –

ತ್ರಿರಾಚಮೇದಪಃ ಪೂರ್ವಂ ದ್ವಿಃ ಪ್ರಮೃಜ್ಯಾತ್ತತೋ ಮುಖಮ್

ಸಮ್ಮೃಜ್ಯಾಂಗುಷ್ಠಮೂಲೇನ ತ್ರಿಭಿರಾಸ್ಯಮುಪಸ್ಪೃಶೇತ್

ಅಂಗುಷ್ಠೇನ ಪ್ರದೇಶಿನ್ಯಾ ಘ್ರಾಣಂ ಪಶ್ಚಾದನಂತರಮ್

ಅಂಗುಷ್ಠಾನಾಮಿಕಾಭ್ಯಾಂ ಚ ಚಕ್ಷುಃ ಶ್ರೋತ್ರೇ ಪುನಃಪುನಃ

ಕನಿಷ್ಠಾಂಗುಷ್ಠಯೋರ್ನಾಭಿಂ ಹೃದಯಂ ತು ತಳೇನ ವೈ

ಸರ್ವಾಭಿಸ್ತು ಶಿರಃ ಪಶ್ಚಾದ್ಬಾಹೂ ಚಾಗ್ರೇಣ ಸಂಸ್ಪೃಶೇತ್

ಇಲ್ಲಿ ಯೋಗದೀಪಿಕಾ ಹೇಳದ ಪಾದಬಾಹುಸ್ಪರ್ಶವನ್ನೂ ಹೇಳಲಾಗಿದೆ ಅದಿಂದು ಚಾಲ್ತಿಯಲ್ಲಿರುವ ಆಚಮನದಲ್ಲಿ ಸೇರಿರುವುದು. ಬಾಹು ಸೇರಿದ್ದು



ಮತ್ತೆ ಕೆಲವು ಬೆರಳುಗಳ ವ್ಯತ್ಯಾಸದಲ್ಲಿ ಭವಿಷ್ಯಪುರಾಣದ ಮಾತು –

ಅಂಗುಷ್ಠೇನ ಪ್ರದೇಶಿನ್ಯಾ ಚಾಲಭೇದಕ್ಷಿಣೇ ನೃಪ

ಅನಾಮಿಕಾಂಗುಷ್ಠಿಕಾಭ್ಯಾಂ ನಾಸಿಕಾಮಾಲಭೇನ್ನೃಪ

ಮಧ್ಯಮಾಂಗುಷ್ಠಾಭ್ಯಾಂ ಮುಖಂ ಸಂಸ್ಪೃಶೇದ್ಭರತರ್ಷಭ

ಕನಿಷ್ಠಿಕಾಂಗುಷ್ಠಾಭ್ಯಾಂ ಚ ಕರ್ಣಾವಾಲಭತೇ ನೃಪ

ಅಂಗುಲೀಭಿಸ್ತಥಾ ಬಾಹೂ ಅಂಗುಷ್ಠೇನ ತು ಮಂಡಲಮ್

ನಾಭಿಂ ಕುರುಕುಲಶ್ರೇಷ್ಠ ಶಿರಃ ಸರ್ವಾಭಿರೇವ ಚ

ಬಾಹು ಸೇರಿದ್ದು ಉಳಿದಂತೆ ಯೋಗದೀಪಿಕಾ ಸಂಗ್ರಹಿಸಿದ್ದರ ಮೂಲ ಸ್ಕಾಂದಪುರಾಣದ ಮಾತು ಸ್ಪರ್ಶದಲ್ಲಿ ಬೆರಳ ತುದಿಗೆ ಪ್ರಾಶಸ್ತ್ಯ ನೀಡಿದೆ –

ತ್ರಿಃ ಪೀತ್ವಾಂಬು ವಿಶುದ್ಧ್ಯರ್ಥಂ ತತಃ ಖಾನಿ ವಿಶೋಧಯೇತ್

ಅಂಗುಷ್ಠಮೂಲದೇಶೇನ ದ್ವಿರ್ದ್ವಿರೋಷ್ಠಾಧರೌ ಸ್ಪೃಶೇತ್

ಅಂಗುಲೀಭಿಸ್ತ್ರಿಭಿಃ ಪಶ್ಚಾತ್ ಪುನರಾಸ್ಯಂ ಸ್ಪೃಶೇತ್ ಸುಧೀಃ

ತರ್ಜನ್ಯಂಗುಷ್ಠಕೋಟ್ಯಾ ಚ ಘ್ರಾಣರಂಧ್ರೇ ಪುನಃಪುನಃ

ಅಂಗುಷ್ಠಾನಾಮಿಕಾಗ್ರಾಭ್ಯಾಂ ಚಕ್ಷುಃ ಶ್ರೋತ್ರೇ ಪುನಃಪುನಃ

ಕನಿಷ್ಠಾಂಗುಷ್ಠಯೋಗೇನ ನಾಭಿರಂಧ್ರಮುಪಸ್ಪೃಶೇತ್

ಸ್ಪೃಷ್ಟ್ವಾ ತಳೇನ ಹೃದಯಂ ಸಮಸ್ತಾಭಿಃ ಶಿರಃ ಸ್ಪೃಶೇತ್

ಅಂಗುಲ್ಯಗ್ರೈಸ್ತಥಾ ಸ್ಕಂಧೌ ಸಾಂಬು ಸರ್ವತ್ರ ಸಂಸ್ಪೃಶೇತ್

ನಡುವಿನ ಮೂರು ಬೆರಳು ಬಾಯಿ ಒರೆಸಲೆಂದು ಪದ್ಮಪುರಾಣದಲ್ಲಿ ಸ್ಪಷ್ಟಮಾತು ಇದೆ. ಇಲ್ಲಿ ಆಚಮನದ ಫಲವು ಬಂದಿದೆ.

ಮಧ್ಯಮಾಭಿರ್ಮ್ಮುಖಂ ಪೂರ್ವಂ ತಿಸೃಭಿಃ ಸಮುಪಸ್ಪೃಶೇತ್

ಅಂಗುಷ್ಠದೇಶಿನೀಭ್ಯಾಂ ಚ ನಾಸಾಂ ಚ ತದನಂತರಮ್

ಅಂಗುಷ್ಠಾನಾಮಿಕಾಭ್ಯಾಂ ಚ ಚಕ್ಷುಷೀ ಸಮುಪಸ್ಪೃಶೇತ್

ಕನಿಷ್ಠಾಂಗುಷ್ಠಯೋಃ ಶ್ರೋತ್ರೇ ನಾಭಿಮಂಗುಷ್ಠಕೇನ ತು

ತಳೇನ ಹೃದಯಂ ನ್ಯಸ್ಯ ಸರ್ವಾಭಿಃ ಶಿರಸೋಪರಿ



ಬಾಹೂ ಚಾಗ್ರೇಣ ಸಂಸ್ಪೃಶ್ಯ ತತಃ ಶುದ್ಧೋ ಭವೇನ್ನರಃ

ಅನೇನಾಚಮನಂ ಕೃತ್ವಾ ಮಾನವಃ ಪ್ರಯತೋ ಭವೇತ್

ಸರ್ವಪಾಪೈರ್ವಿನಿರ್ಮ್ಮುಕ್ತಃ ಸ್ವರ್ಗ್ಗಂ ಚಾಕ್ಷಯಮಶ್ನುತೇ

ಗರುಡಪುರಾಣ ಸ್ಥಾನದೇವತೆಗಳನ್ನೂ ಅದ್ದೂರಿಯಾಗಿ ಹೇಳಿದೆ –

ಖಂ ಮುಖಂ ನಾಸಿಕೇ ವಾಯುಂ ನೇತ್ರೇ ಸೂರ್ಯಂ ಶ್ರುತೀ ದಿಶಃ

ಪ್ರಾಣಗ್ರಂಥಿಮಥೋ ನಾಭಿಂ ಬ್ರಹ್ಮಾಣಂ ಹೃದಯಂ ಸ್ಪಶೇತ್

ರುದ್ರಂ ಮೂರ್ಧಾನಮಾಲಭ್ಯ ಪ್ರೀಣಾತ್ಯಥ ಶಿಖಾಮೃಷೀನ್

ಬಾಹೂ ಯಮೇಂದ್ರವರುಣಕುಬೇರವಸುಧಾನಲಾನ್

ಅಭ್ಯುಕ್ಷ್ಯ ಚರಣೌ ವಿಷ್ಣುಂ ಇಂದ್ರವಿಷ್ಣುಕರದ್ವಯಮ್

ಯೋಗದೀಪಿಕಾ ಹೇಳಿದ ಪಾದಗಳ ಸಿಂಚನೆಯನ್ನು ಗರುಡಪುರಾಣ ಹೇಳಿದೆ. ದಿಕ್ಪಾಲಕರನೇಕರನ್ನು ಹೇಳಿದ್ದೊಂದು ವಿಶೇಷ ವಿಷಯವೂ ಆಗಿದೆ.

ದ್ವಾದಶಾಂಗಗಳ ವ್ಯತ್ಯಾಸದ ಜತೆಗೆ ದೇವತಾಚಿಂತನೆಯನ್ನು ಮಹಾನ್ಯಾಸಮಂತ್ರಗಳಲ್ಲಿ ಹೀಗೆ ನೀಡಲಾಗಿದೆ –

ಅಗ್ನಿರ್ಮೇ ವಾಚಿ ಶ್ರಿತಃ । ವಾಯುರ್ಮೇ ಪ್ರಾಣೇ ಶ್ರಿತಃ

ಸೂರ್ಯೋ ಮೇ ಚಕ್ಷುಷಿ ಶ್ರಿತಃ । ಚಂದ್ರಮಾ ಮೇ ಮನಸಿ ಶ್ರಿತಃ

ದಿಶೋ ಮೇ ಶ್ರೋತ್ರೇ ಶ್ರಿತಾಃ । ಆಪೋ ಮೇ ರೇತಸಿ ಶ್ರಿತಾಃ

ಪೃಥಿವೀ ಮೇ ಶರೀರೇ ಶ್ರಿತಾ । ಓಷಧಿವನಸ್ಪತಯೋ ಮೇ ಲೋಮಸು ಶ್ರಿತಾಃ

ಇಂದ್ರೋ ಮೇ ಬಲೇ ಶ್ರಿತಃ । ಪರ್ಜ್ಜನ್ಯೋ ಮೇ ಮೂರ್ಧ್ನಿ ಶ್ರಿತಃ

ಈಶಾನೋ ಮೇ ಮನ್ಯೌ ಶ್ರಿತಃ । ಆತ್ಮಾ ಮ ಆತ್ಮನಿ ಶ್ರಿತಃ

ಕಣ್ಣಿನಲ್ಲಿ ಎರಡರಲ್ಲಿಯೂ ಹೆಚ್ಚಿನೆಡೆ ಸೂರ್ಯನನ್ನೇ ತಿಳಿಸಿದ್ದಾರೆ. ಕೆಲವೆಡೆ ಸೂರ್ಯಚಂದ್ರರ ವಿನ್ಯಾಸವೂ ಪ್ರಮಾಣಿತವಾಗಿದೆ. ಕೌರವನ ಸಭೆಯಲ್ಲಿ ಕಾಣಿಸಿಕೊಂಡ ಶ್ರೀಕೃಷ್ಣನ ವಿಶ್ವರೂಪದಲ್ಲಿ ಕಣ್ಣೆರಡುಗಳಲ್ಲಿ ಸೂರ್ಯಚಂದ್ರರ ನೆಲೆ ಇತ್ತು. ಇದು ಮಹಾಭಾರತದ ಮಾತು –

ಚಂದ್ರಸೂರ್ಯೌ ತಥಾ ನೇತ್ರೇ ಗ್ರಹಾ ವೈ ಸರ್ವತಃ ಸ್ಥಿತಾಃ



ಇನ್ನೊಂದೆಡೆ ವ್ಯಾಪ್ತರೂಪಚಿಂತನೆಯಲ್ಲಿ, ಕೃಷ್ಣನದ್ದೇ ಮಾತು –

**ಮೂರ್ಧಾನಂ ಮೇ ವಿದ್ಧಿ ದಿವಂ ಚಂದ್ರಾದಿತ್ಯೌ ಚ ಲೋಚನೇ**

**ಗಾವೋಽಗ್ನಿರ್ಬ್ರಾಹ್ಮಣೋ ವಕ್ತ್ರಂ ಮಾರುತಃ ಶ್ವಸನಂ ಚ ಮೇ**

**ದಿಶೋ ಮೇ ಬಾಹವಶ್ಚಾಷ್ಟೌ ನಕ್ಷತ್ರಾಣಿ ಚ ಭೂಷಣಮ್**

ಸೂರ್ಯಚಂದ್ರರ ಬಗೆಗೆ ಬಲ–ಎಡ ಕಣ್ಣುಗಳ ಸ್ಪಷ್ಟ ಚಿಂತನೆಯನ್ನು **ಅಥರ್ವವೇದ** ನೀಡಿದೆ

**ಯದಸ್ಯ ದಕ್ಷಿಣಮಕ್ಷ್ಯಸೌ ಸ ಆದಿತ್ಯೋ**

**ಯದಸ್ಯ ಸವ್ಯಮಕ್ಷ್ಯಸೌ ಸ ಚಂದ್ರಮಾಃ**

ದೇವತಾಚಿಂತನೆಯಲ್ಲಿ ಸೂರ್ಯಾದಿಗಳು ಸ್ಪಷ್ಟವಾಗಿ ಒಬ್ಬೊಬ್ಬರೇ ಗುರುತಿಸಲ್ಪಟ್ಟರೆ ಕಿವಿಗಾಗುವಾಗ ದಿಗ್ದೇವತೆಗಳನ್ನೆಲ್ಲ ಮುದ್ದೆ ಮಾಡಿ ಹೇಳಲಾಗಿದೆ. ಇವರ ಬಗ್ಗೆ ಆಚಾರ್ಯಮಧ್ವರ **ಐತರೇಯಭಾಷ್ಯ**ದಲ್ಲಿ ವಿವರಣೆ ಇದೆ. ಬಗೆಬಗೆಯ ಕೇಳ್ಮೆಗಳಿಗೆ ಬಗೆಬಗೆಯ ಯೋಗ್ಯತೆವುಳ್ಳ ದೇವತೆಗಳು ನಿಯಾಮಕರಾಗುವುದರಿಂದ ಕಿವಿಯಲ್ಲಿ ವಿಶೇಷ ಸವಲತ್ತನ್ನು ನೋಡಿ ಇಲ್ಲಿ ಅನೇಕ ದೇವತೆಗಳ ಪ್ರವೇಶವಾಗಿದೆ. ಉಳಿದ ಇಂದ್ರಿಯಗಳಲ್ಲೂ ಸೂಕ್ಷ್ಮವಾಗಿ ಅನೇಕಾಂಶಗಳ ಸಂಯೋಗಗಳಿವೆ. ಅಲ್ಲಿಯೂ ಅನೇಕ ದೇವತೆಗಳ ಪ್ರವೇಶವನ್ನು ಆಚಾರ್ಯರು ತಿಳಿಸಿಕೊಟ್ಟಿದ್ದಾರೆ. ಆದರೆ ಮುಖ್ಯವಾಗಿ ಇಲ್ಲಿ ಆಚಮನದಲ್ಲಿ ಸೂರ್ಯಾದಿಗಳನ್ನು ಒಬ್ಬೊಬ್ಬರನ್ನೇ ಹೇಳಿದ್ದರಿಂದ ದಿಗಭಿಮಾನಿಗಳ ವಿಶೇಷ ಚಿಂತನೆ ಮುಖ್ಯವೆನಿಸಿದೆ–

**ಮಿತ್ರೋ ಯಮಶ್ಚ ವರುಣಃ ಕುಬೇರಶ್ಚ ದಿಗೀಶ್ವರಾಃ**

**ಶ್ರೋತ್ರಾಭಿಮಾನಿನಃ ಸರ್ವೇ ವೈದಿಕಶ್ರವಣೋಚಿತಮ್**

**ಶ್ರೋತ್ರಂ ಚಂದ್ರಸ್ತಥಾ ಸ್ಮಾರ್ತತಾಂತ್ರಿಕಶ್ರವಣೋಚಿತಮ್**

**ಯಮ ಏವ ಷಡಂಗಾನಾಂ ವಿಷಯಶ್ರವಣೋಚಿತಮ್**

**ಶ್ರೋತ್ರಂ ತು ವರುಣಃ ಕಾಮ್ಯಶಾಸ್ತ್ರಾರ್ಥಂ ಮಿತ್ರ ಏವ ಚ**

**ಶ್ರೋತ್ರಂ ಯನ್ನೀತಿಶಾಸ್ತ್ರಾರ್ಥಂ ಕುಬೇರಸ್ತತ್ಪ್ರಕೀರ್ತಿತಃ**



ದಿಗಭಿಮಾನಿಯರ ಇತಿಹಾಸ **ವರಾಹಪುರಾಣದಲ್ಲಿದೆ.** ಬ್ರಹ್ಮನಿಂದ ಅವರ ಸೃಷ್ಟಿ, ಬ್ರಹ್ಮ ಅವರಿಗೆ ನೀಡಿದ ಅಧಿಕಾರ, ಇವೆಲ್ಲ ಸಂಗತಿಗಳು ಇಲ್ಲಿವೆ –

**ಏವಂ ಚಿಂತಯತಸ್ತಸ್ಯ ಅವಕಾಶಂ ವ್ರಜಂತ್ವಿಹ**
**ಪ್ರಾದುರ್ಬಭೂವುಃ ಶ್ರೋತ್ರೇಭ್ಯೋ ದಶಕನ್ಯಾ ಮಹಾಪ್ರಭಾಃ**
**ಪೂರ್ವಾ ಚ ದಕ್ಷಿಣಾ ಚೈವ ಪ್ರತೀಚೀ ಚೋತ್ತರಾ ತಥಾ**
**ಊರ್ಧ್ವಾಧರಾ ಚ ಷಣ್ಮುಖ್ಯಾಃ ಕನ್ಯಾ ಹ್ಯಾಸಂಸ್ತದಾ ನೃಪ**
**ತಾಸಾಂ ಮಧ್ಯೇ ಚತಸ್ರಸ್ತು ಕನ್ಯಾಃ ಪರಮಶೋಭನಾಃ**
**ಬ್ರಹ್ಮಾಂಡಮೇತತ್ ಸುಶ್ರೋಣ್ಯಃ ಶತಕೋಟಿಪ್ರವಿಸ್ತರಮ್**
**ತಸ್ಯಾಂತೇ ಸ್ವೇಚ್ಛಯಾ ತುಷ್ಟಾ ಉಷ್ಯತಾಂ ಮಾ ವಿಲಂಬಥ**
**ಬ್ರಹ್ಮಾ ಸಸರ್ಜ ತೂರ್ಣ್ಣಂ ತಾನ್ ಲೋಕಪಾಲಾನ್ ಮಹಾಬಲಾನ್**
**ವಿವಾಹಂ ಕಾರಯಾಮಾಸ ಬ್ರಹ್ಮಾ ಲೋಕಪಿತಾಮಹಃ**
**ಏಕಾಮಿಂದ್ರಾಯ ಚ ಪ್ರಾದಾತ್ ಅಗ್ನಯೇಽನ್ಯಾಂ ಯಮಾಯ ಚ**
**ನಿರ್ಋತಾಯ ಚ ದೇವಾಯ ವರುಣಾಯ ಮಹಾತ್ಮನೇ**
**ವಾಯವೇ ಧನದೇಶಾಯ ತಥೇಶಾಯ ಚ ಸುವ್ರತ**
**ಊರ್ಧ್ವಾಂ ಸ್ವಯಮಧಿಷ್ಠಾಯ ಶೇಷಾಯಾಧೋ ವ್ಯವಸ್ಥಿತಾಮ್**
**ಏವಂ ದತ್ವಾ ಪುನರ್ಬ್ರಹ್ಮಾ ತಿಥಿಂ ಪ್ರಾದಾತ್ ದಿಶಾಂ ತಥಾ**
**ದಶಮೀ ಚ ತಿಥಿಸ್ತಾಸಾಂ ಅತೀವ ದಯಿತಾಽಭವತ್**

ಕೆಲವು ಸ್ಮೃತಿಕಾರರು ಋಗ್ವೇದಾದಿ ನಾಮಗಳನ್ನು ಬಿಟ್ಟು ಕೇಶವಾದಿ ನಾಮಗಳಿಂದ ಆಚಮನವನ್ನು ತಿಳಿಸಿದ್ದುಂಟು. **ನಾರದಪುರಾಣದಲ್ಲಿ** ಕೇಶವಾದಿಗಳಿಂದ ಆಚಮನ ಪದ್ಧತಿ ಕಂಡುಬರುವುದು. (ಇಲ್ಲಿ ಉಪೇಂದ್ರ ತಪ್ಪಿದೆ. **ವಾಮನಪುರಾಣದಲ್ಲಿ** ಆಚಮನಪ್ರಕರಣದಲ್ಲಿ **ಉಪೇಂದ್ರಾಯ ನಮಃ** ಎನ್ನುವಂತೆ ಹೇಳಲು ತಿಳಿಸಿದ್ದಾರೆಂದು ವ್ಯಾಖ್ಯಾನಕಾರರ ಮಾತು – **ತತೋ ಜಪೇದುಪೇಂದ್ರಾಯ ಸರ್ವಪಾಪೈಃ ಪ್ರಮುಚ್ಯತೇ**) –

**ಕೇಶವೇನ ತಥಾ ನಾರಾಯಣೇನ ಮಾಧವೇನ ಚ**



ಸಂಪ್ರಾಶ್ಯ ತೋಯಂ ಗೋವಿಂದವಿಷ್ಣುಭ್ಯಾಂ ಕ್ಷಾಳಯೇತ್ಕರೌ
ಮಧುಸೂದನತ್ರಿವಿಕ್ರಮಾಭ್ಯಾಮೋಷ್ಠೌ ಚ ಮಾರ್ಜ್ಜಯೇತ್
ವಾಮನಶ್ರೀಧರಾಭ್ಯಾಂ ಚ ಮುಖಂ ಹಸ್ತಂ ಸ್ಪೃಶೇತ್ತತಃ
ಹೃಷೀಕೇಶಪದ್ಮನಾಭಾಭ್ಯಾಂ ಸ್ಪೃಶೇತ್ ಚರಣೌ ತತಃ
ದಾಮೋದರೇಣ ಮೂರ್ಧಾನಂ ಮುಖಂ ಸಂಕರ್ಷಣೇನ ಚ
ವಾಸುದೇವೇನ ಪ್ರದ್ಯುಮ್ನೇನ ಸ್ಪೃಶೇನ್ನಾಸಿಕೇ ತತಃ
ಅನಿರುದ್ಧಪುರುಷೋತ್ತಮಾಭ್ಯಾಂ ನೇತ್ರೇ ಸ್ಪೃಶೇತ್ತತಃ
ಅಧೋಕ್ಷಜನೃಸಿಂಹಾಭ್ಯಾಂ ಶ್ರವಣೇ ಸಂಸ್ಪೃಶೇತ್ತತಃ
ನಾಭಿಂ ಸ್ಪೃಶೇದಚ್ಯುತೇನ ಜನಾರ್ದ್ದನೇನ ವಕ್ಷಸಿ
ಹರಿಣಾ ವಿಷ್ಣುನಾಂಸೌ ಚ ವೈಷ್ಣವಾಚಮನಂ ತ್ರಿದಮ್
ಮುಖೇ ನಸೋಃ ಪ್ರದೇಶಿನ್ಯಾಽನಾಮಯಾ ನೇತ್ರಕರ್ಣ್ಣಯೋಃ
ಕನಿಷ್ಠಯಾ ನಾಭಿದೇಶಂ ಸರ್ವತ್ರಾಂಗುಷ್ಠಯೋಜನಮ್

ಆಚಮ್ಯ ಕೇಶವಾದ್ಯೈಶ್ಚ ಎನ್ನುವುದು ಬೃಹತ್‌ಬ್ರಹ್ಮಸಂಹಿತೆಯಲ್ಲಿದೆ. ಅಂಗಾಂಗದ ಸ್ಪರ್ಶದ ಜೊತೆಯಲ್ಲಿ ಕುಶವಾರಿಯಿಂದ ಮಾರ್ಜನವನ್ನು ಅಲ್ಲಿ ವಿಶೇಷವಾಗಿ ಹೇಳಲಾಗಿದೆ –

ಕೇಶವಾಯ ನಮಃ ಪ್ರೋಚ್ಯ ತಥಾ ನಾರಾಯಣಾಯ ಚ
ಮಾಧವಾಯ ನಮಶ್ಚೈವಂ ಆಚಾಮೇತ್ಸರ್ವಕರ್ಮ್ಮಣಿ
ಗೋವಿಂದಾಯ ನಮಸ್ತದ್ವತ್ ವಿಷ್ಣವೇ ಚ ನಮೋ ವದನ್
ಕಪೋಲಯೋರ್ದ್ವಯೋಶ್ಚೈವ ವಿದಧ್ಯಾತ್ಪರಿಮಾರ್ಜ್ಜನಮ್
ಮಧುಸೂದನಾಯ ನಮೋ ವದನ್ ತ್ರಿವಿಕ್ರಮಾಯ ಚ
ಓಷ್ಠಯೋಃ ಸ್ಪರ್ಶನಂ ಕುರ್ಯಾತ್ ವಾಮನಶ್ರೀಧರೌ ತಥಾ
ಜೇಂತೌ ನಮೋಂತೌ ತಾರಾದೌ ತಾಭ್ಯಾಂ ಸಮ್ಮಾರ್ಜ್ಜಯೇತ್ತಥಾ
ಹೃಷೀಕೇಶೇನ ಕರಯೋಃ ಪದ್ಮನಾಭೇನ ಪಾದಯೋಃ
ಜಲೇನ ಸ್ಪರ್ಶನಂ ಕೃತ್ವಾ ಮೂರ್ಧ್ನಿ ದಾಮೋದರಾಯ ಚ



ಮಾರ್ಜ್ಜಯೇತ್ಕುಶವಾರಿಭ್ಯಾಂ ಏಭಿರಂಗಾನಿ ಸಂಸ್ಪೃಶೇತ್

ಸಂಕರ್ಷಣೋ ವಾಸುದೇವಃ ಪ್ರದ್ಯುಮ್ನಶ್ಚಾನಿರುದ್ಧಕಃ

ಪುರುಷೋತ್ತಮೋಽಧೋಕ್ಷಜೋ ನೃಸಿಂಹೋಽಚ್ಯುತ ಏವ ಚ

ಜನಾರ್ದನ ಉಪೇಂದ್ರಶ್ಚ ಹರಿಃ ಕೃಷ್ಣಶ್ಚ ಮೂರ್ತ್ತಯಃ

ಆಸ್ಯೇ ನಸಿ ತ್ವೇಕಮೇಕಂ ಅಕ್ಷ್ಣೋರ್ದ್ವೌ ದ್ವೌ ಚ ಕರ್ಣ್ಣಯೋಃ

ಹೃದಿ ನಾಭೌ ತ್ವಥೈಕೈಕಂ ಉದರೇ ಮಸ್ತಕೇ ತಥಾ

ಭುಜಯೋರ್ದ್ವಾವಿತಿ ಪ್ರೋಕ್ತೋ ವಿಧಿರಾಚಮನೇ ಸ್ಮೃತಃ

ಆಚಮನಪ್ರಕ್ರಿಯೆಯಲ್ಲಿ ಜಲಪ್ರಾಶನಕ್ಕೆ ಸಂಬಂಧಿಸಿದ ಮಂತ್ರಪದದಲ್ಲಿ ಸ್ವಾಹಾ ಪದವನ್ನು ಸೇರಿಸಬೇಕು. ಅಂಗಸ್ಪರ್ಶದ ಮಂತ್ರಪದಕ್ಕೆ ನಮಃ ಪದವನ್ನು ಸೇರಿಸಬೇಕು –

ಸ್ವಾಹಾಂತಂ ಪ್ರಾಶಯೇದ್ವಾರಿ ನಮೋಂತಂ ಸ್ಪರ್ಶಯೇದಥ

ಸ್ವಾಹಾಪೂರ್ವಂ ಪಿಬೇದಾಪಃ ನಮಃ ಪೂರ್ವಮುಪಸ್ಪೃಶೇತ್

ಕೇಶವಾದಿನಾಮಗಳನ್ನು ಹೇಳುವಲ್ಲಿ ಮೊದಲು ಪ್ರಣವವನ್ನು ಸ್ತ್ರೀಯರೂ ವೈಶ್ಯರೂ ಹೇಳಬಾರದೆಂದು ತಿಳಿಸಲಾಗಿದೆ. ಶ್ರೀಕಾರವನ್ನು ಸೇರಿಸಲು ಇಲ್ಲಿ ಹೇಳಲಿಲ್ಲ –

ವಿಪ್ರಾಣಾಂ ಕ್ಷತ್ರಿಯಾಣಾಂ ಚ ಪ್ರಣವಾದಿ ನಮೋಽಂತಕಮ್

ಸುವಾಸಿನೀನಾಂ ವೈಶ್ಯಾನಾಂ ಕೇಶವಾದಿ ನಮೋಽಂತಕಮ್

ಕರಮಾರ್ಜನದ ಬಗ್ಗೆ ಶ್ರೀಕೃಷ್ಣಪಂಡಿತನ ನಿರ್ಣಯಕಲ್ಪವಲ್ಲಿಯಲ್ಲಿ ಕೇಶವಾದಿ 24 ನಾಮಗಳ ಜತೆ ಹೇಳಿದ ಆಚಮನ ಪ್ರಮಾಣವಾಕ್ಯವಿದೆ. ಆದರೆ ಅದು ಸರಿಯಾಗಿ ಹೊಂದಿಕೆಯಾದಂತಿಲ್ಲ –

ಕೇಶವಾದ್ಯೈಸ್ತ್ರಿಭಿಃ ಪೀತ್ವಾ ದ್ವಾಭ್ಯಾಂ ಪ್ರಕ್ಷಾಳಯೇತ್ಕರೌ

ದ್ವಾಭ್ಯಾಮೋಷ್ಠೌ ಚ ಸಂಮೃಜ್ಯ ದ್ವಾಭ್ಯಾಮುನ್ಮಾರ್ಜ್ಜಯೇತ್ ಶಿರಃ

ಏಕೇನ ವಾಮಂ ಸಂಪ್ರೋಕ್ಷ್ಯ ಪಾದಾವಪಿ ತಥೈಕತಃ

ಏಕೇನಾಪಿ ಚ ಮೂರ್ಧ್ನಿ ಸ್ಯಾತ್ ತತಃ ಸಂಕರ್ಷಣಾದಿಭಿಃ



**ಸರ್ವಾಸಾಮಂಗುಲೀನಾಂ ತು ಮೂಲೇನ ಚಿಬುಕಂ ಸ್ಪೃಶೇತ್**

**ತರ್ಜನ್ಯಂಗುಷ್ಠಯೋಗೇನ ಘ್ರಾಣದ್ವಯಮುಪಸ್ಪೃಶೇತ್**

**ಅಂಗುಷ್ಠಾನಾಮಿಕಾಭ್ಯಾಂ ಚ ಚಕ್ಷುಃಶ್ರೋತ್ರಮುಪಸ್ಪೃಶೇತ್**

**ಅಂಗುಷ್ಠೇನ ಕನಿಷ್ಠೇನ ನಾಭಿದೇಶಮುಪಸ್ಪೃಶೇತ್**

**ಕರಮಧ್ಯಂ ಹೃದಿ ಸ್ಥಾಪ್ಯ ಕರಾಗ್ರಂ ಶಿರಸಿ ನ್ಯಸೇತ್**

**ಮುಕುಳೇನ ಚ ಹಸ್ತೇನ ಬಾಹುಮೂಲೇ ಉಪಸ್ಪೃಶೇತ್**

**ಆಹ್ನಿಕಚಂದ್ರಿಕಾ**ದಲ್ಲಿ ಹೇಳಲಾದ ಕೇಶವಾದಿ 24 ನಾಮಗಳಿಂದ ಮಾಡಲ್ಪಡುವ ಆಚಮನಕ್ಕೆ ಪ್ರಮಾಣಗಳು ಹೀಗಿವೆ–

**ಕೇಶವಾದಿತ್ರಿಭಿಃ ಪೀತ್ವಾ ಚತುರ್ಥೇನ ಮೃಜೇತ್ಕರಮ್**

**ಪಂಚಮೇನ ಚ ಷಷ್ಠೇನ ದ್ವಿರೋಷ್ಠಾವುನ್ಮೃಜೇತ್ಕ್ರಮಾತ್**

**ತೌ ಸಪ್ತಮೇನ ಚ ಮೃಜೇತ್ ಏಕವಾರಂ ತು ಮಂತ್ರವಿತ್**

**ಅಷ್ಟಮೇನ ತು ಮಂತ್ರೇಣ ತ್ವಭಿಮಂತ್ರ್ಯ ಜಲಂ ಶುಚಿ**

**ವಾಮಂ ಸಂಪ್ರೋಕ್ಷಯೇತ್ಪಾಣಿಂ ಮನುನಾ ನವಮೇನ ಚ**

**ದಕ್ಷಿಣಂ ದಶಮೇನಾಂಘ್ರಿಂ ವಾಮಮೇಕಾದಶೇನ ವೈ**

**ಮೂರ್ಧಾನಂ ದ್ವಾದಶೇನಾಥ ಸ್ಪೃಶೇದೂರ್ಧ್ವೋಷ್ಠಪೃಷ್ಠಕಮ್**

**ಸಂಕರ್ಷಣಾಯ ನಮ ಇತ್ಯನೇನಾಂಗುಲಿಮೂರ್ಧಭಿಃ**

**ಕೇಶವಾಯ ಸ್ವಾಹಾ, ನಾರಾಯಣಾಯ ಸ್ವಾಹಾ, ಮಾಧವಾಯ ಸ್ವಾಹಾ** ಎಂಬ ಮೂರು ಮಂತ್ರಗಳಿಂದ ಮೂರುಬಾರಿ ನೀರನ್ನು ಪಾನಮಾಡಬೇಕು. **ಗೋವಿಂದಾಯ ನಮಃ** ಎಂಬ ಮಂತ್ರದಿಂದ ಕೈ ಒರೆಸಬೇಕು. **ವಿಷ್ಣವೇ ನಮಃ, ಮಧುಸೂದನಾಯ ನಮಃ** ಎಂದು ಹೇಳುತ್ತ ಎರಡೂ ತುಟಿಗಳನ್ನು (ಅಡ್ಡಕ್ಕೆ) ಒರೆಸಬೇಕು. **ತ್ರಿವಿಕ್ರಮಾಯ ನಮಃ** ಎಂದು ತುಟಿಗಳನ್ನು (ಕೆಳಮುಖವಾಗಿ) ಒರೆಸಬೇಕು.

**ವಾಮನಾಯ ನಮಃ** ಎಂದು ನೀರನ್ನು (ಬಲಕೈಯಲ್ಲಿ ಹಿಡಿದು) ಮಂತ್ರಿಸಿ **ಶ್ರೀಧರಾಯ ನಮಃ** ಎನ್ನುತ್ತ ಎಡಕೈಯನ್ನು ಪ್ರೋಕ್ಷಿಸಬೇಕು. ಬಲಕಾಲನ್ನು



ಮತ್ತು ಎಡಕಾಲನ್ನು **ಹೃಷೀಕೇಶಾಯ ನಮಃ, ಪದ್ಮನಾಭಾಯ ನಮಃ** ಎನ್ನುವ ಮಂತ್ರಗಳಿಂದ ಪ್ರೋಕ್ಷಿಸಬೇಕು. **ದಾಮೋದರಾಯ ನಮಃ** ಎನ್ನುತ್ತ ತಲೆಯನ್ನು ಮುಟ್ಟಬೇಕು. **ಸಂಕರ್ಷಣಾಯ ನಮಃ** ಎಂದು ಮೇಲ್ತುಟಿಯ ಮೇಲ್ಗಡೆ ಎಲ್ಲ ಬೆರಳುಗಳ ತುದಿಗಳಿಂದ ಮುಟ್ಟಬೇಕು.

**ಅಂಗುಷ್ಠತರ್ಜನ್ಯಗ್ರಾಭ್ಯಾಂ ಸಂಶ್ಲಿಷ್ಟಾಭ್ಯಾಂ ಜಲೈಃ ಸಹ**
**ನಾಸಾರಂಧ್ರೇ ವಾಸುದೇವಪ್ರದ್ಯುಮ್ನಾಭ್ಯಾಂ ಸ್ಪೃಶೇತ್ ಶುಭೇ**
**ಅಂಗುಷ್ಠಾನಾಮಿಕಾಭ್ಯಾಂ ತು ಸಂಶ್ಲಿಷ್ಟಾಭ್ಯಾಂ ಜಲೈಃ ಸಹ**
**ಅನಿರುದ್ಧಾಯ ನಮ ಇತಿ ಸಂಸ್ಪೃಶೇದಕ್ಷಿ ದಕ್ಷಿಣಮ್**
**ಪುರುಷೋತ್ತಮಮಂತ್ರೇಣ ತಾಭ್ಯಾಂ ವಾಮಾಂ ಸ್ಪೃಶೇದ್ದೃಶಮ್**
**ತಥಾಂಗುಷ್ಠಕನಿಷ್ಠಾಭ್ಯಾಂ ಶ್ಲಿಷ್ಟಾಗ್ರಾಭ್ಯಾಂ ಜಲೈಃ ಸಹ**
**ಅಧೋಕ್ಷಜನೃಸಿಂಹಾಭ್ಯಾಂ ಶ್ರೋತ್ರೇ ದ್ವೇ ಸಂಸ್ಪೃಶೇತ್ಕ್ರಮಾತ್**
**ನಾಭಿಮಚ್ಯುತಮಂತ್ರೇಣ ತಾಭ್ಯಾಮೇವ ಸ್ಪೃಶೇದ್ಬುಧಃ**
**ಶ್ರೀಜನಾರ್ದನಮಂತ್ರೇಣ ತಳೇನ ಹೃದಯಂ ಸ್ಪೃಶೇತ್**
**ಉಪೇಂದ್ರಾಯೇತಿ ಮೂರ್ಧಾನಂ ಸ್ಪೃಶೇತ್ಸಜಲಪಾಣಿನಾ**
**ಸರ್ವಾಂಗುಲ್ಯಗ್ರಭಾಗೈಶ್ಚ ಸಮಾಶ್ಲಿಷ್ಟೈರ್ಜಲೈಃ ಸಹ**
**ಭುಜೌ ತು ಹರಿಕೃಷ್ಣಾಭ್ಯಾಂ ಸಂಸ್ಪೃಶೇದ್ದಕ್ಷಿಣೋತ್ತರೌ**
**ಆಚಾಮೇದೇವಮೇವಂ ಯೋ ಭಗವನ್ನಾಮಭಿಃ ಕ್ರಮಾತ್**
**ಸದ್ಯಃ ಪೂತಃ ಸ ವಿಹಿತೇಷೂತ್ತರೇಷ್ವಧಿಕಾರವಾನ್**

ಅಂಗುಷ್ಠತೋರುಬೆರಳುಗಳಿಂದ ಮೂಗಿನ ಹೊರಳೆಗಳನ್ನು **ವಾಸುದೇವಾಯ ನಮಃ, ಪ್ರದ್ಯುಮ್ನಾಯ ನಮಃ** ಎನ್ನುವ ಮಂತ್ರಗಳಿಂದ ಸ್ಪರ್ಶಿಸಬೇಕು. ಅಂಗುಷ್ಠ ಉಂಗುರಬೆರಳುಗಳಿಂದ ಕಣ್ಣುಗಳನ್ನು (ಬಲ–ಎಡ) **ಅನಿರುದ್ಧಾಯ ನಮಃ, ಪುರುಷೋತ್ತಮಾಯ ನಮಃ** ಎನ್ನುವ ಮಂತ್ರಗಳಿಂದ ಮುಟ್ಟಬೇಕು. ಅಂಗುಷ್ಠ ಕಿರುಬೆರಳುಗಳಿಂದ ಕಿವಿಗಳೆರಡನ್ನು **ಅಧೋಕ್ಷಜಾಯ ನಮಃ, ನೃಸಿಂಹಾಯ ನಮಃ** ಎಂಬ ಮಂತ್ರಗಳಿಂದ ಮುಟ್ಟಬೇಕು. ನಾಭಿಯನ್ನು



ಅಂಗುಷ್ಠ ಕಿರುಬೆರಳುಗಳಿಂದ **ಅಚ್ಯುತಾಯ ನಮಃ** ಎನ್ನುತ್ತ ಮುಟ್ಟಬೇಕು. **ಜನಾರ್ದನಾಯ ನಮಃ** ಎನ್ನುತ್ತ ಹೃದಯವನ್ನು ಅಂಗೈಯಿಂದ ಮುಟ್ಟಬೇಕು. **ಉಪೇಂದ್ರಾಯ ನಮಃ** ಎನ್ನುತ್ತ ತಲೆಯನ್ನು ಕೈಯಿಂದ ಮುಟ್ಟಬೇಕು. **ಹರಯೇ ನಮಃ, ಕೃಷ್ಣಾಯ ನಮಃ** ಎನ್ನುತ್ತ ಬಲ-ಎಡ ಹೆಗಲನ್ನು ಮುಟ್ಟಬೇಕು. ಎಲ್ಲೆಡೆ ನೀರನ್ನು ಮುಟ್ಟಿಕೊಂಡೆ ಮುಟ್ಟುವುದು. **ಅಪ ಉಪಸ್ಪೃಶ್ಯ** ಎನ್ನುವುದರ ಪೂರ್ಣವಾದ ಅರ್ಥ. ಅದನ್ನಿಲ್ಲಿ **ಜಲೈಃ ಸಹ** ಎಂದು ಮತ್ತೆ ಹೇಳಲಾಗಿದೆ.

**ತ್ರಿರಾಚಮ್ಯಾಪೋ ದ್ವಿಃ ಪರಿಮೃಜೇತ । ಪಾದಾವಭ್ಯುಕ್ಷ್ಯ ಶಿರೋಽಭ್ಯುಕ್ಷೇತ್ ಇಂದ್ರಿಯಾಣ್ಯದ್ಭಿಃ ಸಂಸ್ಪೃಶೇತ್** ಎಂದು **ಖಾದಿರಗೃಹ್ಯಸೂತ್ರ** ನೀರಿನ ಸ್ಪರ್ಶವನ್ನು ಸ್ಪಷ್ಟಪಡಿಸಿದೆ.

**ವಿಶ್ವಾಮಿತ್ರಕಲ್ಪದಲ್ಲಿ** 24 ನಾಮಗಳಿಂದ ನಡೆಸಲ್ಪಡುವ ಆಚಮನ ಕ್ರಮವನ್ನು ಸ್ವಲ್ಪ ಬೇರೆ ರೀತಿಯಲ್ಲಿ ನೀಡಲಾಗಿದೆ–

**ಕೇಶವಾದಿತ್ರಿಭಿರ್ಮಂತ್ರೈರಪಃ ಪೀತ್ವಾ ಯಥಾವಿಧಿ**
**ಹಸ್ತಪ್ರಕ್ಷಾಳನಂ ಕಾರ್ಯಂ ಗೋವಿಂದೇನಾಪಿ ವಿಷ್ಣುನಾ**
**ಓಷ್ಠಯೋಸ್ತು ನ್ಯಸೇದ್ದ್ವಾಭ್ಯಾಂ ಬ್ರಹ್ಮತೀರ್ಥೇನ ಸಾಧಕಃ**
**ವಾಮನೇನ ಶಿರೋಽಭ್ಯುಕ್ಷ್ಯ ಶ್ರೀಧರೇಣ ತಥೈವ ಚ**
**ಹಸ್ತಪ್ರಕ್ಷಾಳನಂ ಕಾರ್ಯಂ ಹೃಷೀಕೇಶಾಖ್ಯಮಂತ್ರತಃ**
**ತತಸ್ತು ಪದ್ಮನಾಭೇನ ಪಾದಯೋಃ ಪ್ರೋಕ್ಷಣಂ ಸ್ಮೃತಮ್**
**ದಾಮೋದರಾಖ್ಯಮಂತ್ರಂ ತು ವಿನ್ಯಸೇದ್ಬ್ರಹ್ಮರಂಧ್ರಕೇ**
**ಸಂಕರ್ಷಣಂ ತು ಚಿಬುಕೇ ನ್ಯಸೇದಂಗುಲಿಪೃಷ್ಠತಃ**
**ಅಂಗುಷ್ಠಾನಾಮಿಕಾಭ್ಯಾಂ ತು ನೇತ್ರಯೋರ್ವಿನ್ಯಸೇದ್ದ್ವಯಮ್**
**ಅಂಗುಷ್ಠತರ್ಜನೀಭ್ಯಾಂ ತು ದ್ವಾಭ್ಯಾಂ ನಸಿ ತು ವಿನ್ಯಸೇತ್**
**ಕನಿಷ್ಠಾಂಗುಷ್ಠಯೋಗೇನ ಶ್ರೋತ್ರಯೋಸ್ತು ನ್ಯಸೇದ್ದ್ವಯಮ್**
**ನ್ಯಸೇನ್ನಾಭಾವಚ್ಯುತಂ ಚ ಮಧ್ಯಮಾಂಗುಷ್ಠಯೋಗತಃ**
**ಸರ್ವಾಂಗುಲೀಭಿರ್ಹೃದಯೇ ವಿನ್ಯಸೇತ್ತು ಜನಾರ್ದನಮ್**



**ಉಪೇಂದ್ರಂ ತು ನ್ಯಸೇನ್ಮೂರ್ಧ್ನಿ ಭುಜಮೂಲೇ ದ್ವಯಂ ನ್ಯಸೇತ್**

ಕೇಶವಾದಿ ದ್ವಾದಶನಾಮಗಳಿಂದ ಆಚಮನಮಾಡುವ ಕ್ರಮದಲ್ಲಿ ಕೇಶವಾದಿ ನಾಮತ್ರಯದಿಂದ ಜಲಪ್ರಾಶನ ಮಾಡಬೇಕು. ಗೋವಿಂದಾಯ ನಮಃ ಎಂದು ತುಟಿಯನ್ನು ಒರೆಸಬೇಕು. ಉಳಿದ ಅಷ್ಟನಾಮಗಳಿಂದ ಮೂಗು, ಕಣ್ಣು, ಕಿವಿ, ಹೊಟ್ಟೆ, ಕುತ್ತಿಗೆ, ತಲೆ, ಎಡ–ಬಲ ಭುಜಗಳನ್ನು ಮುಟ್ಟಬೇಕು.

ಋಗ್ವೇದಾದಿಗಳ ಸ್ಥಾನದಲ್ಲಿ ನಾಮತ್ರಯದಿಂದ ಆಚಮನವೂ ವಾಸಿಷ್ಠಸಂಹಿತಾದಲ್ಲಿ ಉಕ್ತವಾಗಿದೆ –

**ನಾಮತ್ರಯೇಣ ವಾ ಕುರ್ಯಾತ್ ನಿತ್ಯಮಾಚಮನಂ ಬುಧಃ**

**ಅಂಗಾನಾಂ ಸ್ಪರ್ಶನಂ ಕುರ್ಯಾತ್ ಕೇಶವಾದ್ಯೈಶ್ಚ ನಾಮಭಿಃ**

ಹನ್ನೆರಡು ಅಂಗಗಳ ಸ್ಪರ್ಶ ಆಚಮನದಲ್ಲಿ ಇರುವಾಗ ಕೇಶವಾದಿ ದ್ವಾದಶನಾಮಗಳಿಂದ ಅದನ್ನು ನಡೆಸಲು ಸಂಹಿತೆ ಹೇಳಿ ಜಲಪ್ರಾಶನವನ್ನು ಅಚ್ಯುತಾನಂತಗೋವಿಂದನಾಮಗಳಿಂದ ಮಾಡಲು ಹೇಳಿದೆ. ಸಂಧ್ಯಾವಂದನೆಯ ಆದಿಯಲ್ಲಿ ಆಚಮನದಲ್ಲಿ ನಾಮತ್ರಯಚಿಂತನೆ ಸಂಧ್ಯಾವಂದನೆಯ ಕಡೆಗೂ ನಾಮತ್ರಯದ ಚಿಂತನೆ ಸಕಲ ದೋಷಗಳ ನಿವಾರಣೆಗೆ ತುಂಬಾ ಸಹಕಾರಿ ಯೆನಿಸಿದೆ. ಇಷ್ಟೆ ಅಲ್ಲದೆ ನಡುನಡುವೆ ನಡೆಸಲ್ಪಡುವ ಆಚಮನದಿಂದ ಮತ್ತೆ ಮತ್ತೆ ತಾಪತ್ರಯ ನಿವಾರಕನ ನಾಮತ್ರಯದ ಚಿಂತನೆಯಿಂದ ದೇಹ ಮನಸ್ ಶುದ್ಧಿಯಾಗಲಿದೆ. ಈ ರೀತಿಯ ಆಚಮನವನ್ನು ಸಾಮವೇದಿಗಳ ಸಂಧ್ಯಾವಂದನೆಯಲ್ಲಿ ಕಾಣಬಹುದು. (ಈಗ ಚಾಲ್ತಿಯಲ್ಲಿ ಇರಲಿಕ್ಕಿಲ್ಲ (?) ಹಳೆಯ ಪುಸ್ತಕಗಳಲ್ಲಿ ಕಂಡುಬರುವುದು. )

ನಾಮತ್ರಯದ ಆಚಮನವೆಂದರೆ ಮೂರ್ತಿತ್ರಯದ ಉಪಾಸನೆಯಲ್ಲಿ ಬಂದಿರಬೇಕು. ದೇಹಶುದ್ಧಿಗೆ ಹೇಳಲ್ಪಟ್ಟ ಆಚಮನದಲ್ಲಿ ಅವಸ್ಥಾತ್ರಯ ನಿಯಾಮಕರಾದ ವಿಶ್ವಾದಿಗಳೂ ಈ ನಾಮತ್ರಯದಲ್ಲಿ ಸೇರುವವರೇ. ಹೀಗೆ ಇವರೀರ್ವರ ಸಮಾಗಮದಲ್ಲಿ ಆಚಮನದ ವೈಭವ ಮೂಡಿದೆ. ಸೃಷ್ಟಿ ಸ್ಥಿತಿ ಸಂಹಾರಗಳ ಕರ್ತೃತ್ವದಲ್ಲಿ ಮತ್ತೆ ದೇಹದ ಮುಖ್ಯ ಮೂರು ಸ್ಥಾನವೆನಿಸಿದ ಭ್ರೂಮಧ್ಯ



ಕಂಠ ಹೃದಯ ಚಕ್ರಗಳ ಪರಿಶುದ್ಧಿಯಲ್ಲಿಯೂ ಈ ಮೂರ್ತಿತ್ರಯೋಪಾಸನೆ ಮುಖ್ಯವೆನಿಸಿದೆ. ಇದೆಲ್ಲ ಸಂಧ್ಯಾವಂದನೆಯ ಪ್ರಕ್ರಿಯೆಗಳನ್ನೆಲ್ಲ ಸಾಧನೋಪಾಯ ಗಳನ್ನಾಗಿ ಅಧ್ಯಾತ್ಮ ಜೀವನದಲ್ಲಿ ಅಳವಡಿಸಿಕೊಳ್ಳುವವರಿಗೆ ಮಾತ್ರ ಹೆಚ್ಚು ಆಪ್ತವಾಗುವುದು. ಈ ಹಿನ್ನೆಲೆಯಲ್ಲಿ ಆಚಾರ್ಯಮಧ್ವರ ವಿಶ್ವತೋಮುಖದ ದರ್ಶನ ಮತ್ತು ಸಮಗ್ರ ವಾಙ್ಮಯದ ಏಕವಾಕ್ಯತೆ ಮತ್ತು ಅದರ ಪ್ರಸ್ತುತಿಗೆ ಬೆಲೆ ಬರುವುದು. ಇದು ಆಚಾರ್ಯಮಧ್ವರ ದೊಡ್ಡ ಕೊಡುಗೆ –

**ಆತ್ಮಾಂತರಾತ್ಮಾ ಪರಮಾತ್ಮೇತಿ ಮೂರ್ತಿತ್ರಯಂ ಹರೇಃ**
**ಜಾಗ್ರತ್ಸ್ವಪ್ನಸುಷುಪ್ತೀನಾಂ ಸೃಷ್ಟ್ಯಾದೇಶ್ಚ ಪ್ರವರ್ತ್ತಕಮ್** (ತ್ರೈಕಾಲ್ಯ)
**ದಕ್ಷಿಣಾಕ್ಷಿಮುಖೇ ವಿಶ್ವೋ ಮನಸ್ಯಂತಸ್ತು ತೈಜಸಃ**
**ಆಕಾಶೇ ಚ ಹೃದಿ ಪ್ರಾಜ್ಞಃ ತ್ರಿಧಾ ದೇಹೇ ವ್ಯವಸ್ಥಿತಃ** (ಮಾಂಡೂಕ)
**ತಸ್ಯ ಚಾವಸಥಾಃ ತ್ರಯಃ । ಅಕ್ಷಿಕಂಠಹೃದಿತ್ಯೇವ** (ಐತರೇಯಭಾಷ್ಯ)
**ಸ ವಿಶ್ವತೈಜಸಪ್ರಾಜ್ಞತುರೀಯ ಇತಿ ವೃತ್ತಿಭಿಃ**
**ಅರ್ಥೇಂದ್ರಿಯಾಶಯಜ್ಞಾನೈಃ ಭಗವಾನ್ ಭಾಷ್ಯತೇ ತತಃ** (ಭಾಗವತ)

**ಗೃಹ್ಯಸೂತ್ರ**ಗಳಲ್ಲಿ ಅಂಗಾಂಗಗಳ ಸ್ಪರ್ಶವನ್ನೂ ಆಯಾ ಅಂಗನಾಮ ಗಳಿಂದಲೆ ನಡೆಸಲು ಹೇಳಲಾಗಿದೆ. ಅಂಗಾಭಿಮಾನಿಗಳ ನಾಮೋಚ್ಚಾರಣೆ ಪ್ರತ್ಯೇಕವಾಗಿ ಹೇಳದೆ ಆಯಾ ಅಂಗಗಳಲ್ಲಿ ಆಯಾ ಅಂಗಗಳ ನಾಮಗಳಿಂದಲೆ ಆಯಾ ದೇವತೆಗಳ ಚಿಂತನೆ ಅದ್ಭುತವಾದ ಪರಿಕಲ್ಪನೆ ಆಗಿದೆ. ಇದರಿಂದ ಆಯಾ ಅಂಗಗಳ ನಾಮಗಳಿಂದ ತತ್ತ್ವಾಭಿಮಾನಿದೇವತೆಯಷ್ಟೆ ಅಲ್ಲದೆ ಪ್ರಾಣನೂ ಭಗವಂತನೂ ಹೇಳಲ್ಪಟ್ಟು ವಿಶೇಷ ಅನುಸಂಧಾನಕ್ಕೆ ಎಡೆಮಾಡಿಕೊಟ್ಟಂತಾಗಿದೆ–

**ಓಂ ವಾಕ್ ವಾಕ್ । ಪ್ರಾಣಃ ಪ್ರಾಣಃ । ಚಕ್ಷುಃ ಚಕ್ಷುಃ**
**ಶ್ರೋತ್ರಂ ಶ್ರೋತ್ರಮ್ । ನಾಭಿಃ । ಹೃದಯಮ್ । ಕಂಠಃ । ಶಿರಃ**
**ಬಾಹುಭ್ಯಾಮ್ । ಯಶೋ ಬಲಮ್ । ಕರತಲಕರಪೃಷ್ಠೇ**

**ತಲವಕಾರೋಪನಿಷತ್** ಹೇಳುವಂತೆ ಈ ಮಾತುಗಳು ತುಂಬಾ ಔಚಿತ್ಯಪೂರ್ಣವೆನಿಸಿದೆ –



**ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯದ್**

**ವಾಚೋ ಹ ವಾಚಂ ಸ ಉ ಪ್ರಾಣಸ್ಯ ಪ್ರಾಣಃ । ಚಕ್ಷುಷಶ್ಚಕ್ಷುಃ...**

ಈ ಅಂಗಾಂಗಗಳಲ್ಲಿಯ ಪ್ರಾರ್ಥನಾಮಂತ್ರಗಳನ್ನು **ಪಾರಸ್ಕರ ಆಶ್ವಲಾಯನ ಗೃಹ್ಯಸೂತ್ರಗಳಲ್ಲಿ** ಕಾಣಬಹುದು –

**ಓಂ ವಾಕ್ ಮ ಆಸ್ಯೇಽಸ್ತು । ನಸೋರ್ಮೇ ಪ್ರಾಣೋಽಸ್ತು**

**ಅಕ್ಷ್ಣೋರ್ಮೇ ಚಕ್ಷುರಸ್ತು । ಕರ್ಣಯೋರ್ಮೇ ಶ್ರೋತ್ರಮಸ್ತು**

**ಬಾಹ್ವೋರ್ಮೇ ಬಲಮಸ್ತು । ಊರ್ವೋರ್ಮೇ ಓಜೋಽಸ್ತು**

**ಅರಿಷ್ಟಾನಿ ಮೇಽಂಗಾನಿ ತನೂಸ್ತನ್ವಾ ಮೇ ಸಹ ಸಂತು**

ತೋಳಿನ ಸ್ಪರ್ಶದ ಬಗ್ಗೆ ಇತರ ಕೆಲವು ಸ್ಮೃತಿಗಳಲ್ಲಿ ಕಂಡರೂ ಇಲ್ಲಿ ತೊಡೆಯ ಸ್ಪರ್ಶವನ್ನು ಹೇಳಿದ್ದು ವಿಶೇಷ. ಜತೆಗೆ ಸೂತ್ರಕಾರರು ಜಲಪ್ರಾಶನ ಮಂತ್ರವನ್ನು ಮೂರು ಬೇರೆಯೆ ಹೇಳಿದ್ದಾರೆ –

**ಅಮೃತೋಪಸ್ತರಣಮಸಿ ಸ್ವಾಹಾ**

**ಅಮೃತಾಪಿಧಾನಮಸಿ ಸ್ವಾಹಾ**

**ಸತ್ಯಂ ಯಶಃ ಶ್ರೀರ್ಮಯಿ ಶ್ರೀಃ ಶ್ರಯತಾಂ ಸ್ವಾಹಾ**

**ಅಥರ್ವವೇದದಲ್ಲಿ** ದೇಹದ ಎಲ್ಲಾ ಅವಯವಗಳನ್ನೂ ಗುರುತಿಸಲಾಗಿದೆ–

**ಸೂರ್ಯಾಚಂದ್ರಮಸಾಭ್ಯಾಮಕ್ಷೀಭ್ಯಾಮ್ । ಬೃಹಸ್ಪತಿನಾ ಶೀರ್ಷ್ಣಾ**

**ದ್ಯಾವಾಪೃಥಿವೀಭ್ಯಾಂ ಶ್ರೋತ್ರಾಭ್ಯಾಮ್ । ಬ್ರಹ್ಮಣಾ ಮುಖೇನ**

**ಅಗ್ನೇರ್ಜಿಹ್ವಯಾ । ಋತುಭಿರ್ದಂತೈಃ । ಸಪ್ತರ್ಷಿಭಿಃ ಪ್ರಾಣಾಪಾನೈಃ**

**ದಿವಾ ಪೃಷ್ಠೇನ । ಪೃಥಿವ್ಯೋರಸಾ । ಸತ್ಯೇನೋದರೇಣ**

**ಸಮುದ್ರೇಣ ವಸ್ತಿನಾ । ಮಿತ್ರಾವರುಣಯೋರೂರುಭ್ಯಾಮ್**

**ತ್ವಷ್ಟುರಷ್ಠೀವದ್ಭ್ಯಾಮ್ । ಅಶ್ವಿನೋಃ ಪಾದಾಭ್ಯಾಮ್**

**ಸವಿತುಃ ಪ್ರಪದಾಭ್ಯಾಮ್ । ಋತಸ್ಯ ಹಸ್ತಾಭ್ಯಾಮ್**

ಮೂರು ಹೊತ್ತಿನ ಸಂಧ್ಯಾವಂದನೆಯಲ್ಲಿ ಮೂರು ಬಗೆಯ ಶ್ರೌತ–ಸ್ಮಾರ್ತ–ಪೌರಾಣ ಆಚಮನಗಳನ್ನು ನಡೆಸಬೇಕೆಂದು ವಿಶ್ವಾಮಿತ್ರರ ಆದೇಶ.



ಕಂಠ ಹೃದಯ ಚಕ್ರಗಳ ಪರಿಶುದ್ಧಿಯಲ್ಲಿಯೂ ಈ ಮೂರ್ತಿತ್ರಯೋಪಾಸನೆ ಮುಖ್ಯವೆನಿಸಿದೆ. ಇದೆಲ್ಲ ಸಂಧ್ಯಾವಂದನೆಯ ಪ್ರಕ್ರಿಯೆಗಳನ್ನೆಲ್ಲ ಸಾಧನೋಪಾಯ ಗಳನ್ನಾಗಿ ಅಧ್ಯಾತ್ಮ ಜೀವನದಲ್ಲಿ ಅಳವಡಿಸಿಕೊಳ್ಳುವವರಿಗೆ ಮಾತ್ರ ಹೆಚ್ಚು ಆಪ್ತವಾಗುವುದು. ಈ ಹಿನ್ನೆಲೆಯಲ್ಲಿ ಆಚಾರ್ಯಮಧ್ವರ ವಿಶ್ವತೋಮುಖದ ದರ್ಶನ ಮತ್ತು ಸಮಗ್ರ ವಾಙ್ಮಯದ ಏಕವಾಕ್ಯತೆ ಮತ್ತು ಅದರ ಪ್ರಸ್ತುತಿಗೆ ಬೆಲೆ ಬರುವುದು. ಇದು ಆಚಾರ್ಯಮಧ್ವರ ದೊಡ್ಡ ಕೊಡುಗೆ –

**ಆತ್ಮಾಂತರಾತ್ಮಾ ಪರಮಾತ್ಮೇತಿ ಮೂರ್ತಿತ್ರಯಂ ಹರೇಃ**
**ಜಾಗ್ರತ್ಸ್ವಪ್ನಸುಷುಪ್ತೀನಾಂ ಸೃಷ್ಟ್ಯಾದೇಶ್ಚ ಪ್ರವರ್ತ್ತಕಮ್** (ತ್ರೈಕಾಲ್ಯ)
**ದಕ್ಷಿಣಾಕ್ಷಿಮುಖೇ ವಿಶ್ವೋ ಮನಸ್ಯಂತಸ್ತು ತೈಜಸಃ**
**ಆಕಾಶೇ ಚ ಹೃದಿ ಪ್ರಾಜ್ಞಃ ತ್ರಿಧಾ ದೇಹೇ ವ್ಯವಸ್ಥಿತಃ** (ಮಾಂಡೂಕ)
**ತಸ್ಯ ಚಾವಸಥಾಃ ತ್ರಯಃ । ಅಕ್ಷಿಕಂಠಹೃದಿತ್ಯೇವ** (ಐತರೇಯಭಾಷ್ಯ)
**ಸ ವಿಶ್ವತೈಜಸಪ್ರಾಜ್ಞತುರೀಯ ಇತಿ ವೃತ್ತಿಭಿಃ**
**ಅರ್ಥೇಂದ್ರಿಯಾಶಯಜ್ಞಾನೈಃ ಭಗವಾನ್ ಭಾಷ್ಯತೇ ತತಃ** (ಭಾಗವತ)

ಗೃಹ್ಯಸೂತ್ರಗಳಲ್ಲಿ ಅಂಗಾಂಗಗಳ ಸ್ಪರ್ಶವನ್ನೂ ಆಯಾ ಅಂಗನಾಮ ಗಳಿಂದಲೆ ನಡೆಸಲು ಹೇಳಲಾಗಿದೆ. ಅಂಗಾಭಿಮಾನಿಗಳ ನಾಮೋಚ್ಚಾರಣೆ ಪ್ರತ್ಯೇಕವಾಗಿ ಹೇಳದೆ ಆಯಾ ಅಂಗಗಳಲ್ಲಿ ಆಯಾ ಅಂಗಗಳ ನಾಮಗಳಿಂದಲೆ ಆಯಾ ದೇವತೆಗಳ ಚಿಂತನೆ ಅದ್ಭುತವಾದ ಪರಿಕಲ್ಪನೆ ಆಗಿದೆ. ಇದರಿಂದ ಆಯಾ ಅಂಗಗಳ ನಾಮಗಳಿಂದ ತತ್ತ್ವಾಭಿಮಾನಿದೇವತೆಯಷ್ಟೆ ಅಲ್ಲದೆ ಪ್ರಾಣನೂ ಭಗವಂತನೂ ಹೇಳಲ್ಪಟ್ಟು ವಿಶೇಷ ಅನುಸಂಧಾನಕ್ಕೆ ಎಡೆಮಾಡಿಕೊಟ್ಟಂತಾಗಿದೆ–

**ಓಂ ವಾಕ್ ವಾಕ್ । ಪ್ರಾಣಃ ಪ್ರಾಣಃ । ಚಕ್ಷುಃ ಚಕ್ಷುಃ**
**ಶ್ರೋತ್ರಂ ಶ್ರೋತ್ರಮ್ । ನಾಭಿಃ । ಹೃದಯಮ್ । ಕಂಠಃ । ಶಿರಃ**
**ಬಾಹುಭ್ಯಾಮ್ । ಯಶೋ ಬಲಮ್ । ಕರತಲಕರಪೃಷ್ಠೇ**

**ತಲವಕಾರೋಪನಿಷತ್** ಹೇಳುವಂತೆ ಈ ಮಾತುಗಳು ತುಂಬಾ ಔಚಿತ್ಯಪೂರ್ಣವೆನಿಸಿದೆ –



ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯದ್

ವಾಚೋ ಹ ವಾಚಂ ಸ ಉ ಪ್ರಾಣಸ್ಯ ಪ್ರಾಣಃ । ಚಕ್ಷುಷಶ್ಚಕ್ಷುಃ...

ಈ ಅಂಗಾಂಗಗಳಲ್ಲಿಯ ಪ್ರಾರ್ಥನಾಮಂತ್ರಗಳನ್ನು ಪಾರಸ್ಕರ ಆಶ್ವಲಾಯನ ಗೃಹ್ಯಸೂತ್ರಗಳಲ್ಲಿ ಕಾಣಬಹುದು –

ಓಂ ವಾಕ್ ಮ ಆಸ್ಯೇಽಸ್ತು । ನಸೋರ್ಮೇ ಪ್ರಾಣೋಽಸ್ತು

ಅಕ್ಷ್ಣೋರ್ಮೇ ಚಕ್ಷುರಸ್ತು । ಕರ್ಣಯೋರ್ಮೇ ಶ್ರೋತ್ರಮಸ್ತು

ಬಾಹ್ವೋರ್ಮೇ ಬಲಮಸ್ತು । ಊರ್ವೋರ್ಮೇ ಓಜೋಽಸ್ತು

ಅರಿಷ್ಟಾನಿ ಮೇಽಂಗಾನಿ ತನೂಸ್ತನ್ವಾ ಮೇ ಸಹ ಸಂತು

ತೋಳಿನ ಸ್ಪರ್ಶದ ಬಗ್ಗೆ ಇತರ ಕೆಲವು ಸ್ಮೃತಿಗಳಲ್ಲಿ ಕಂಡರೂ ಇಲ್ಲಿ ತೊಡೆಯ ಸ್ಪರ್ಶವನ್ನು ಹೇಳಿದ್ದು ವಿಶೇಷ. ಜತೆಗೆ ಸೂತ್ರಕಾರರು ಜಲಪ್ರಾಶನ ಮಂತ್ರವನ್ನು ಮೂರು ಬೇರೆಯೆ ಹೇಳಿದ್ದಾರೆ –

ಅಮೃತೋಪಸ್ತರಣಮಸಿ ಸ್ವಾಹಾ

ಅಮೃತಾಪಿಧಾನಮಸಿ ಸ್ವಾಹಾ

ಸತ್ಯಂ ಯಶಃ ಶ್ರೀರ್ಮಯಿ ಶ್ರೀಃ ಶ್ರಯತಾಂ ಸ್ವಾಹಾ

ಅಥರ್ವವೇದದಲ್ಲಿ ದೇಹದ ಎಲ್ಲಾ ಅವಯವಗಳನ್ನೂ ಗುರುತಿಸಲಾಗಿದೆ–

ಸೂರ್ಯಾಚಂದ್ರಮಸಾಭ್ಯಾಮಕ್ಷೀಭ್ಯಾಮ್ । ಬೃಹಸ್ಪತಿನಾ ಶೀರ್ಷ್ಣಾ

ದ್ಯಾವಾಪೃಥಿವೀಭ್ಯಾಂ ಶ್ರೋತ್ರಾಭ್ಯಾಮ್ । ಬ್ರಹ್ಮಣಾ ಮುಖೇನ

ಅಗ್ನೇರ್ಜಿಹ್ವಯಾ । ಋತುಭಿರ್ದಂತೈಃ । ಸಪ್ತರ್ಷಿಭಿಃ ಪ್ರಾಣಾಪಾನೈಃ

ದಿವಾ ಪೃಷ್ಠೇನ । ಪೃಥಿವ್ಯೋರಸಾ । ಸತ್ಯೇನೋದರೇಣ

ಸಮುದ್ರೇಣ ವಸ್ತಿನಾ । ಮಿತ್ರಾವರುಣಯೋರೂರುಭ್ಯಾಮ್

ತ್ವಷ್ಟುರಷ್ಠೀವದ್ಭ್ಯಾಮ್ । ಅಶ್ವಿನೋಃ ಪಾದಾಭ್ಯಾಮ್

ಸವಿತುಃ ಪ್ರಪದಾಭ್ಯಾಮ್ । ಋತಸ್ಯ ಹಸ್ತಾಭ್ಯಾಮ್

ಮೂರು ಹೊತ್ತಿನ ಸಂಧ್ಯಾವಂದನೆಯಲ್ಲಿ ಮೂರು ಬಗೆಯ ಶ್ರೌತ–ಸ್ಮಾರ್ತ–ಪೌರಾಣ ಆಚಮನಗಳನ್ನು ನಡೆಸಬೇಕೆಂದು ವಿಶ್ವಾಮಿತ್ರರ ಆದೇಶ.



ನಮ್ಮಲ್ಲಿಂದು ಹೆಚ್ಚಾಗಿ ಕೇಶವಾದಿ ಹಾಗೂ ಋಗ್ವೇದಾದಿ ಆಚಮನಕ್ರಮ ಬಳಕೆಯಲ್ಲಿದೆ. **ಭಾರದ್ವಾಜಸ್ಮೃತಿ** ದೈವಾಚಮನವೆಂದು ಗುರುತಿಸಿ ಋಗ್ವೇದಾದಿಯನ್ನು ಹೇಳಿದೆ. ಇಲ್ಲಿಯೂ ಮುಖಮಾರ್ಜನವೆ ಇದೆ; ಕರಮಾರ್ಜನ ಇಲ್ಲ. ಜತೆಗೆ ನಾಭಿ ಎದೆ ಶಿರಸ್‌ಗಳ ಸ್ಪರ್ಶಗಳಲ್ಲಿ ತ್ರಿಮೂರ್ತಿಗಳನ್ನೂ ಹೇಳಲಾಗಿದೆ. ಬ್ರಹ್ಮಯಜ್ಞದಲ್ಲಿ ಬೇರೆ ರೀತಿಯ ಆಚಮನ ಮಾಡಬೇಕೆಂದೂ ತಿಳಿಸಿದ್ದಾರೆ. ಆಯಾ ಬೆರಳುಗಳಿಂದ ಸ್ಪರ್ಶವನ್ನೂ ಹಲವೆಡೆ ತಿಳಿಸಲಾಗಿದೆ. ಆದರೆ ಇಂದು ಆಚಮನ ನಡೆಸುವಾಗ ಉದಾಸೀನತೆಯಿಂದ ಅಂಗಸ್ಪರ್ಶವೇ ಆಗದು. ಆದರೂ ಆಯಾ ಬೆರಳುಗಳಿಂದ ನಡೆಯದು. ಆಚಮನವೆ ಸರಿಯಾಗದಿದ್ದಾಗ ಮುಂದಿನ ಸಂಧ್ಯಾಧಿಕಾರವೇ ಕೆಡುವುದೆಂದು ಎಲ್ಲ ಶಾಸ್ತ್ರಗಳೂ ಹೇಳುತ್ತಲಿವೆ. ಯಾವ ನಾಮಗಳಿಂದಾದರೂ ಕೆಲವಾದರೂ ಅಂಗಗಳ ಸ್ಪರ್ಶದ ಜತೆಗೆ ಆಚಮನ ನಡೆಯುವಂತಾಗಬೇಕು. ಇದು ಹೇಮಾದ್ರಿಯ ಹೇಳಿಕೆಯೂ ಹೌದು.

**ಪ್ರಯೋಗಪಾರಿಜಾತ**ದಲ್ಲಿ ಗಾಯತ್ರೀಮಂತ್ರದ ಮೂರು ಪಾದಗಳಿಂದ ಜಲಪ್ರಾಶನ ಮಾಡಿ ಆಪ್ಯಸೂಕ್ತದ ಒಂಭತ್ತು ಪಾದಗಳಿಂದ ಅಂಗಗಳನ್ನು ಮುಟ್ಟಬೇಕು. ಮತ್ತೆ ವ್ಯಾಹೃತಿಗಳಿಂದ ತಲೆಯನ್ನು ಮುಟ್ಟಬೇಕು ಎಂದು ಭಾರದ್ವಾಜರ ಮಾತನ್ನು ಹೇಳಲಾಗಿದೆ –

**ದೇವ್ಯಾಃ ಪಾದೈಸ್ತ್ರಿಭಿಃ ಪೀತ್ವಾ ಅಬ್ಲಿಂಗೈರ್ನವಧಾ ಸ್ಪೃಶೇತ್**
**ಪುನರ್ವ್ಯಾಹೃತಿಗಾಯತ್ರ್ಯಾ ಶಿರೋ ಮಂತ್ರೈರ್ದ್ವಿಧಾ ಸ್ಪೃಶೇತ್**
**ಏವಂ ಯಃ ಕುರುತೇ ವಿಪ್ರೋ ಸರ್ವಪಾಪೈಃ ಪ್ರಮುಚ್ಯತೇ**

**ಗಾಯತ್ರೀಕಲ್ಪ**ದಲ್ಲಿ ಹೇಳಿದ ಈ ಆಚಮನ ಕ್ರಮ ತುಂಬಾ ಪ್ರಶಸ್ತವಾದದ್ದು. ನವದ್ವಾರಗಳ ಸ್ಪರ್ಶವನ್ನಿಲ್ಲಿ ಹೇಳಿದಂತಾಗಿದೆ.

ವ್ಯಾಸವಿರಚಿತ **ಮಹಾಭಾರತ**ದಲ್ಲಿಯ ವಿಷ್ಣುಸಹಸ್ರರೂಪನಾಮದಿಂದ ನಡೆಸಲ್ಪಡುವ ಆಚಮನವನ್ನಿಲ್ಲಿ ಕಾಣಬಹುದು. ನಮಗೆ ತೀರಾ ಹೊಸತಾದರೂ ಪ್ರಾಚೀನರು ಗುರುತಿಸಿದ ಆಚಮನಕ್ರಮವಿದು. ಪಂಚಮವೇದದ ಉಪನಿಷದ್ಭಾಗವಾದ ಭಗವಂತನ ಸಾವಿರರೂಪಗಳಿಗೆ ಸಂಬಂಧಪಟ್ಟದ್ದು –



**ಅಮೃತಾಶಾಯ ಸ್ವಾಹಾ । ಅಮೃತವಪುಷೇ ಸ್ವಾಹಾ**

**ವೃಷೋದರಾಯ ಸ್ವಾಹಾ ।** (ಪ್ರಾಶನ)

**ಶುಚಯೇ ನಮಃ । ಶುಚಯೇ ನಮಃ ।** (ಮುಖ)

**ಸ್ವಷ್ಟಾಕ್ಷರಾಯ ನಮಃ । ಮಂತ್ರಾಯ ನಮಃ ।** (ಬಾಯಿ)

**ಪವನಾಯ ನಮಃ । ಪಾವನಾಯ ನಮಃ ।** (ಮೂಗು)

**ಶುಭೇಕ್ಷಣಾಯ ನಮಃ । ಸ್ವಕ್ಷಾಯ ನಮಃ ।** (ಕಣ್ಣು)

**ಶುಚಿಶ್ರವಸೇ ನಮಃ । ಶ್ರುತಿಸಾಗರಾಯ ನಮಃ ।** (ಕಿವಿ)

**ಅಧೋಕ್ಷಜಾಯ ನಮಃ ।** (ನಾಭಿ)

**ಪ್ರಸನ್ನಾತ್ಮನೇ ನಮಃ ।** (ಹೃದಯ)

**ಪರಮಾತ್ಮನೇ ನಮಃ ।** (ತಲೆ)

**ಸುಭುಜಾಯ ನಮಃ । ಗರುಡಧ್ವಜಾಯ ನಮಃ ।** (ಹೆಗಲು)

ಈ ಕ್ರಮದಲ್ಲಿಯ ಅಂಗಸ್ಪರ್ಶಗಳು **ಛಂದೋಗಪರಿಶಿಷ್ಟ**ದಲ್ಲಿ ಹೇಳಲಾಗಿವೆ –

**ತ್ರಿಃ ಪ್ರಾಶ್ಯಾಪೋ ದ್ವಿರುನ್ಮೃಜ್ಯ ಮುಖಮೇತಾನ್ಯುಪಸ್ಪೃಶೇತ್**

**ಅಸ್ಯನಾಸಾಕ್ಷಿಕರ್ಣಾಂಶ್ಚ ನಾಭಿವಕ್ಷಃಶಿರೋಽಂಸಕಾನ್**

ಕೆಲವು ಶ್ರುತಿಸ್ಮೃತಿಗಳ ವಾಕ್ಯಗಳಲ್ಲಿ ಕೆಲವೊಂದು ಅಂಗಗಳ ಉಪಸ್ಪರ್ಶ ವ್ಯತ್ಯಾಸದಲ್ಲಿದ್ದರೂ ಯಾವೊಂದು ಕ್ರಮದಲ್ಲಾದರೂ ಭಗವನ್ನಾಮಗಳಿಂದ ಅಂಗಸ್ಪರ್ಶ ನಡೆಸಲೇಬೇಕು. ಆಚಾರಗ್ರಂಥಗಳೇ ಈ ಸ್ಥಾನ ವಿಷಯದಲ್ಲಿ ಇದಮಿತ್ಥಂ ನಿರ್ಣಯವನ್ನು ನೀಡಿಲ್ಲ. ಎಲ್ಲವೂ ಕ್ರಮಬದ್ಧವಾಗಿರುವುದರಿಂದ ವೇದಗಳ ಭಿನ್ನಭಿನ್ನ ಶಾಖೆಗನುಗುಣವಾಗಿ ಆಚಮನಪ್ರಕಾರಗಳನ್ನು ಆಚಾರ್ಯ ಪುರುಷರು ಪ್ರಾಚೀನರು ಋಷಿಮುನಿಗಳು ಒಪ್ಪಿಕೊಂಡಿರುತ್ತಾರೆ.

ಅಂಗಸ್ಪರ್ಶದ ಕ್ರಮದಲ್ಲಿಯೂ ವ್ಯತ್ಯಾಸವನ್ನು ವೀರಮಿತ್ರೋದಯದಲ್ಲಿ ಕಾಣಿಸಿದ್ದಾರೆ–

**ತ್ರಿಃ ಪ್ರಾಶಯೇದಪಃ ಪೂರ್ವಂ ದ್ವಿರುನ್ಮೃಜ್ಯಾತ್ತತೋ ಮುಖಮ್**



**ಪಾದಾವಭ್ಯುಕ್ಷ್ಯ ಮೂರ್ಧಾನಂ ಅಭ್ಯುಕ್ಷೇತ್ತದನಂತರಮ್**

**ಅಕ್ಷಿಣೀ ನಾಸಿಕೇ ಕರ್ಣೌ ಓಷ್ಠೌ ಚ ತದನಂತರಮ್**

**ತತಃ ಸ್ಪೃಶೇನ್ನಾಭಿದೇಶಂ ಪುನರಾಪಶ್ಚ ಸಂಸ್ಪೃಶೇತ್**

**ಭವಿಷ್ಯಪುರಾಣದಲ್ಲಿಯೂ** ವ್ಯತ್ಯಸ್ತಕ್ರಮದ ಅಂಗಸ್ಪರ್ಶ ವಿಧಾನವಿದೆ. **ಅಂಗುಷ್ಠೇನ..... ಸರ್ವಾಭಿರೇವ ತು** ಎಂಬಲ್ಲಿ ಕಣ್ಣು, ಮೂಗು, ಬಾಯಿ, ಕಿವಿ, ಹೆಗಲು, ನಾಭಿ, ತಲೆ ಎನ್ನುವ ಕ್ರಮದಲ್ಲಿ ಅಂಗಸ್ಪರ್ಶವನ್ನು ಹೇಳಿರುತ್ತಾರೆ. ಹಾಗೆಯೇ **ವೃದ್ಧಶಂಖಮುನಿಯು** ತಲೆ (4 ಬೆರಳು – ಹೆಬ್ಬೆರಳು ಬಿಟ್ಟು), ಕಣ್ಣು, ಮೂಗು, ಕಿವಿ, ನಾಭಿ (ತರ್ಜನೀ ಅಂಗುಷ್ಠಗಳಿಂದ), ಹೃದಯ (ಅಂಗೈಯಿಂದ) ಗಳೆಂಬ ಕ್ರಮದಿಂದ ಅಂಗಸ್ಪರ್ಶವನ್ನು ಕೆಲವೊಂದು ಬೆರಳುಗಳ ವ್ಯತ್ಯಾಸದಿಂದ ಹೇಳಿರುತ್ತಾರೆ. ಉಪಸ್ಪರ್ಶದಲ್ಲಿಯ ಬೆರಳುಗಳ ಬಗ್ಗೆ ಹೇಳಿದ ಸಂಗ್ರಹವಾಕ್ಯ ಹೀಗಿದೆ –

**ಆಸ್ಯೇ ನಸೋಃ ಪ್ರದೇಶಿನ್ಯಾನಾಮಯಾ ನೇತ್ರಕರ್ಣಯೋಃ**

**ಕನಿಷ್ಠಯಾ ನಾಭಿದೇಶೇಽಂಗುಷ್ಠಃ ಸರ್ವತ್ರ ಸಂಯುತಃ**

**ತಳೇನ ಹೃದಯೇ ಚೈವ ಸರ್ವಾಭಿರ್ಮಸ್ತಕೇಂಸಯೋಃ**

ಬೆರಳುಗಳಲ್ಲಿ ದೇವತಾಸನ್ನಿಧಾನ ವಿಶೇಷವನ್ನು ಶಾಸ್ತ್ರಕಾರರು ಗುರುತಿಸಿದ್ದಾರೆ. ವಾಯು (ತೋರುಬೆರಳು), ಸೂರ್ಯ (ಉಂಗುರಬೆರಳು), ಇಂದ್ರ (ಕಿರುಬೆರಳು), ಪ್ರಜಾಪತಿ (ನಡುಬೆರಳು), ಅಗ್ನಿ (ಹೆಬ್ಬೆರಳು), ಕಣ್ಣು ಮುಂತಾದ ಇಂದ್ರಿಯ ಗೋಲಕಗಳನ್ನೂ ಆಯಾ ದೇವತೆಗಳಿಗೆ ಸಂಬಂಧಿಸಿದಂತೆ ಮುಟ್ಟಲು ಹೇಳುವ ಮೂಲಕ ಬೆರಳುಗಳಿಗೂ ಅಂಗಗಳಿಗೂ ಇರುವ ದೈವಿಕ ಭೌತಿಕ ಸಂಬಂಧವನ್ನೂ ತಿಳಿಸಿದ್ದಾರೆ.

ಆಚಮನದಲ್ಲಿ ತ್ರಿಮೂರ್ತಿಗಳ ಮತ್ತು ಮುಖ ಪರಿಮಾರ್ಜನದಲ್ಲಿ ಗಂಗೆ ಯಮುನೆಯರ ವಿಶೇಷ ಚಿಂತನೆಯನ್ನು **ಕೂರ್ಮಪುರಾಣದಲ್ಲಿ** ಕಾಣಬಹುದು–

**ತ್ರಿಃ ಪ್ರಾಶ್ನೀಯಾದ್ಯದಂಭಸ್ತು ಪ್ರೀತಾಸ್ತೇನಾಸ್ಯ ದೇವತಾಃ**

**ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಭವಂತೀತ್ಯನುಶುಶ್ರುಮ**



ಗಂಗಾ ಚ ಯಮುನಾ ಚೈವ ಪ್ರೀಯೇತೇ ಪರಿಮಾರ್ಜ್ಜನಾತ್

ಸಂಸ್ಪೃಷ್ಟಯೋರ್ಲೋಚನಯೋಃ ಪ್ರೀಯೇತೇ ಶಶಿಭಾಸ್ಕರೌ

ನಾಸತ್ಯದಸ್ರೌ ಪ್ರೀಯೇತೇ ಸ್ಪೃಷ್ಟೇ ನಾಸಾಪುಟದ್ವಯೇ

ಕರ್ಣ್ಣಯುಗ್ಮೇ ತಥಾ ಸ್ಪೃಷ್ಟೇ ಪ್ರೀಯೇತೇ ಚಾನಿಲಾನಲೌ

ಸಂಸ್ಪೃಷ್ಟೇ ಹೃದಯೇ ಚಾಸ್ಯ ಪ್ರೀಯಂತೇ ಸರ್ವದೇವತಾಃ

ಮೂರ್ಧ್ನಃ ಸಂಸ್ಪರ್ಶನಾದಸ್ಯ ಪ್ರೀತಸ್ತು ಪುರುಷೋ ಭವೇತ್

ಶಂಖಸ್ಮೃತಿಯಲ್ಲಿ ಇದರೊಂದಿಗೆ ಹೆಗಲ ಮತ್ತು ನಾಭಿಯ ಸ್ಪರ್ಶದಲ್ಲಿ ಪರ್ವತಾಭಿಮಾನಿಗಳ ಮತ್ತು ನಾಗರ ಅನುಗ್ರಹವನ್ನು ತಿಳಿಸಲಾಗಿದೆ –

ಸ್ಕಂಧಯೋಃ ಸ್ಪರ್ಶನಾದೇವ ಪ್ರೀಯಂತೇ ಸರ್ವಪರ್ವತಾಃ

ನಾಭೇಃ ಸಂಸ್ಪರ್ಶನಾನ್ನಾಗಾಃ ಪ್ರೀಯಂತೇ ಚಾಸ್ಯ ನಿತ್ಯಶಃ

ಅಂಗಸ್ಪರ್ಶದಿಂದ ಅಲ್ಲಿ ಸನ್ನಿಹಿತರಾದ ದೇವತೆಗಳ ತೃಪ್ತಿಯನ್ನು ಕಂಡು ಸ್ಪರ್ಶಸಂದರ್ಭದಲ್ಲಿ ಆಯಾ ದೇವತೆಗಳ ನಾಮಗಳನ್ನು ಉಚ್ಚರಿಸುವ ಆಚಮನ ಪ್ರಕಾರಗಳು ರೂಢಿಗೆ ಬಂದವು. ಆಶ್ವಲಾಯನರು ಹೀಗೆ ಹೇಳಿರುವರು –

ಜಲೈಃ ಶುದ್ಧೈಃ ಪಿಬೇದ್ವೇದೈಃ ಚತುರ್ಧಾಽಂಬು ಶನೈರ್ದ್ವಿಜಃ

ಪ್ರಮೃಜೇದ್ದ್ವಿರಥರ್ವೇಣ ಪುರಾಣೈಶ್ಚೇತಿಹಾಸಕೈಃ

ಮುಖಮಂಗುಷ್ಠಮೂಲೇನ ಪೃಥಕ್ಕಾಯ ಉಪಸ್ಪೃಶೇತ್

ಪಾಣಿನಾಽಧೋಽಗ್ನಿಮಂತ್ರೇಣ ಅವಮೃಜ್ಯಾಥ ಸಂಸ್ಪೃಶೇತ್

ಸೂರ್ಯಾಯ ದಕ್ಷಿಣೇ ನೇತ್ರೇ ವಾಮೇ ಸೋಮಾಯ ವಾಯವೇ

ನಸೋರ್ದಿಗ್ಭ್ಯಃ ಶ್ರವಣಯೋಃ ಬಾಹ್ವೋರಿಂದ್ರಾಯ ಸಂಸ್ಪೃಶೇತ್

ಪೃಥಿವ್ಯೈ ಪಾದಯೋರ್ಬಾಹ್ವೋಃ ಅಂತರಿಕ್ಷಾಯ ಗುಹ್ಯಕೌ

ದಿವೇ ನಾಭ್ಯಾಂ ಬ್ರಹ್ಮಣೇ ಚ ವಿಷ್ಣವೇ ಹೃದಯೇ ತಥಾ

ಶಿವಾಯೇತಿ ಶಿರಸ್ಯಂತೇ ಹಸ್ತಂ ಪ್ರಕ್ಷಾಳಯೇತ್ತತಃ

ಅಂಗುಷ್ಠತರ್ಜ್ಜನ್ಯಗ್ರಾಭ್ಯಾಂ ನೇತ್ರಯೋರಾಚಮನ್ ಸ್ಪೃಶೇತ್

ಅಂಗುಷ್ಠಮಧ್ಯಮಾಭ್ಯಾಂ ಚ ನಾಸಾಶ್ರವಣಯೋಸ್ತತಃ



**ಅಂಗುಷ್ಠಾನಾಮಿಕಾಭ್ಯಾಂ ಸಕನಿಷ್ಠಾಭ್ಯಾಂ ಚ ಬಾಹುಕೇ**

**ಸಾಂಗುಷ್ಠೈರಖಿಲೈರೇವ ಸ್ಥಾನೇಷ್ವನ್ಯೇಷು ಸಂಸ್ಪೃಶೇತ್**

**ಇದಂ ಶ್ರೌತಾಚಮಂ ನಾಮ ಸರ್ವಾರ್ಥಸ್ಯ ಪ್ರಸಾಧಕಮ್**

**ಋಗ್ವೇದಾಯ ಸ್ವಾಹಾ, ಯಜುರ್ವೇದಾಯ ಸ್ವಾಹಾ, ಸಾಮವೇದಾಯ ಸ್ವಾಹಾ** ಎಂದು ಮೂರು ಬಾರಿ ಜಲಪ್ರಾಶನಗೈದು **ಅಥರ್ವವೇದಾಯ ನಮಃ, ಇತಿಹಾಸಪುರಾಣೇಭ್ಯೋ ನಮಃ** ಎಂದು ಬಾಯಿಯನ್ನು (ಅಡ್ಡಕ್ಕೆ) ಹೆಬ್ಬೆರಳಿನಿಂದ ಒರೆಸಬೇಕು.

ಅಂಗುಷ್ಠ ತೋರುಬೆರಳುಗಳಿಂದ **ಸೂರ್ಯಾಯ ನಮಃ, ಚಂದ್ರಾಯ ನಮಃ** ಎನ್ನುತ್ತ ಬಲ ಎಡ ಕಣ್ಣುಗಳನ್ನು ಮುಟ್ಟಬೇಕು. ಅಂಗುಷ್ಠ ನಡು ಬೆರಳುಗಳಿಂದ **ವಾಯವೇ ನಮಃ ವಾಯವೇ ನಮಃ** ಎಂದು ಮೂಗಿನ ಹೊರಳೆಗಳನ್ನು ಮತ್ತು **ದಿಗ್ಭ್ಯೋ ನಮಃ ದಿಗ್ಭ್ಯೋ ನಮಃ** ಎಂದು ಕಿವಿಗಳೆರೆಡನ್ನೂ ಮುಟ್ಟಬೇಕು. **ಇಂದ್ರಾಯ ನಮಃ ಇಂದ್ರಾಯ ನಮಃ** ಎನ್ನುತ್ತ ಅಂಗುಷ್ಠ ಉಂಗುರ ಕಿರುಬೆರಳುಗಳಿಂದ ಭುಜಗಳನ್ನು ಮುಟ್ಟಬೇಕು. **ಪೃಥಿವ್ಯೈ ನಮಃ ಪೃಥಿವ್ಯೈ ನಮಃ** ಎಂದು ಪಾದಗಳನ್ನು, **ಅಂತರಿಕ್ಷಾಯ ನಮಃ ಅಂತರಿಕ್ಷಾಯ ನಮಃ** ಎಂದು ಕಾಲ್ಗಂಟುಗಳನ್ನು, **ದಿವೇ ನಮಃ** ಎಂದು ಗುಹ್ಯವನ್ನು, **ಬ್ರಹ್ಮಣೇ ನಮಃ** ಎಂದು ನಾಭಿಯನ್ನು, **ವಿಷ್ಣವೇ ನಮಃ** ಎಂದು ಹೃದಯವನ್ನು **ಶಿವಾಯ ನಮಃ** ಎಂದು ತಲೆಯನ್ನು ಎಲ್ಲ ಬೆರಳುಗಳಿಂದ ಮುಟ್ಟಬೇಕು.

ಈಗ ಬಳಕೆಯಲ್ಲಿ ಕಾಲ್ಗಂಟಿನ ಸ್ಪರ್ಶ ಇರದು. ನಾಭಿ ಹೃದಯ ಶಿರಸ್ಸುಗಳಲ್ಲಿ ಆತ್ಮಾಂತರಾತ್ಮಪರಮಾತ್ಮರೂಪಗಳ ಚಿಂತನೆ ಇರುವುದು. ಹಾಗೆಯೆ ಮುಖಮಾರ್ಜನದ ಬದಲು ಕರಮಾರ್ಜನವಿದೆ. **ಅಗ್ನಯೇ ನಮಃ** ಎಂದು ಎರಡು ಬಾರಿ ಮುಖ ಸ್ಪರ್ಶವು ಬಾಯಿಯ ಮಾರ್ಜನದ ಸ್ಥಾನದಲ್ಲಿ ಬಂದಿದೆ. ಹೀಗೆ ಸ್ವಲ್ಪ ಬದಲಾವಣೆಯೊಂದಿಗೆ ಈ ಕ್ರಮ ಹೆಚ್ಚು ಕಡೆ ಬಳಕೆಯಲ್ಲಿ ಬಂದಿದೆ. ಇದಕ್ಕೂ ಸ್ಮೃತಿಕಾರರ ಮಾತುಗಳೇ ಆಧಾರವಾಗಿರುವುದರಿಂದ ಈ ಕ್ರಮವೂ ಗ್ರಾಹ್ಯವೆನಿಸಿದೆ. ಎರಡು ಬಾರಿ ಒಂದೇ ದೇವತಾನಾಮದಿಂದ ಕೆಲವು ಅಂಗಗಳ



ಸ್ಪರ್ಶಕ್ಕೆ ಕಾರಣ ಆ ದೇವತೆಗಳ ಸೃಷ್ಟಿಪ್ರವೇಶದಲ್ಲಿ ಎರಡು ರೂಪಗಳ ಅಸ್ತಿತ್ವ ಎನ್ನುವುದಾಗಿ ಆಚಾರ್ಯಮಧ್ವರು **ಐತರೇಯಭಾಷ್ಯ**ದಲ್ಲಿ ಸ್ಪಷ್ಟಪಡಿಸಿದ್ದಾರೆ –

**ತಥೈವ ನಾಸಿಕಾತೋಽಭೂತ್ ಮುಖ್ಯವಾಯೋಃ ಸುತೋ ಮರುತ್**
**ಪ್ರಾಣೋ ವಾಯುರಿತಿ ದ್ವೇಧಾ ಚಕ್ಷುಷೋಽಭೂತ್ ತಥಾ ರವಿಃ**

ಆಚಮನದ ನೀರಿಗೆ ಕೈಯ ಉಗುರು ತಾಗಿದರೆ ಅದು ಸುರಾಪಾನಕ್ಕೆ ಸಮನಾಗುವುದು ಎಂದು **ಯಮಸ್ಮೃತಿ** ಹೇಳಿದೆ–

**ಆಪಃ ಕರನಖಸ್ಪೃಷ್ಟಾ ಯ ಆಚಾಮತಿ ವೈ ದ್ವಿಜಃ**
**ಸುರಾಂ ಪಿಬತಿ ಸುವ್ಯಕ್ತಂ ಯಮಸ್ಯ ವಚನಂ ತಥಾ**

ಅಂಗೈಬುಡದಿಂದ ಅಂದರೆ ಅಂಗುಷ್ಠಮೂಲದಿಂದ (ಬ್ರಾಹ್ಮತೀರ್ಥ ಸ್ಥಾನದಿಂದ) ಆಚಮನ ಪ್ರಾಶನವನ್ನು ಮಾಡಬೇಕು. ಅಂಗೈ ಮಧ್ಯದಿಂದಾಗಲಿ ಬೆರಳತುದಿಗಳಿಂದಾಗಲಿ ಆಚಮನವು ದೋಷಪ್ರದವೆನಿಸುವುದೆಂದು **ಮನು** ಅಭಿಪ್ರಾಯಪಟ್ಟಿರುವನು–

**ಬ್ರಾಹ್ಮೇಣ ವಿಪ್ರಸ್ತೀರ್ಥೇನ ನಿತ್ಯಕಾಲಮುಪಸ್ಪೃಶೇತ್**

**ಭರದ್ವಾಜಸ್ಮೃತಿ**ಯ ಮಾತಿನಲ್ಲಿಯೂ ಪ್ರಾಶನದಲ್ಲಿ ಬ್ರಾಹ್ಮತೀರ್ಥದ ಸಂಗತಿ ಮತ್ತು ನೀರನ್ನು ಪರಿಕಿಸಿ ಉಪಯೋಗಿಸಬೇಕೆನ್ನುವ ಮಾತೂ ಬಂದಿದೆ –

**ಪಿಬೇದಾಚಮನೇ ವಾರಿ ವೀಕ್ಷಿತಂ ಬ್ರಹ್ಮತೀರ್ಥತಃ**

ಬೆರಳತುದಿಯಲ್ಲಿ ದೇವತೀರ್ಥ, ತೋರುಬೆರಳು ಮತ್ತು ಹೆಬ್ಬೆರಳ ನಡುವೆ ಪಿತೃತೀರ್ಥ, ಕಿರುಬೆರಳ ಸನಿಹ ಪ್ರಜಾಪತಿತೀರ್ಥ, ಅಂಗೈ ನಡುವೆ ಸೋಮತೀರ್ಥ. ಅಂಗೈ ಬುಡದಲ್ಲಿ ಬ್ರಹ್ಮತೀರ್ಥ – ಹೀಗೆ ಪಂಚತೀರ್ಥವನ್ನು **ಭವಿಷ್ಯಪುರಾಣ**ವು ಹೇಳಿದೆ.

**ಪಂಚತೀರ್ಥಾನಿ ವಿಪ್ರಸ್ಯ ಶ್ರೂಯಂತೇ ದಕ್ಷಿಣೇ ಕರೇ**
**ದೇವತೀರ್ಥಂ ಪಿತೃತೀರ್ಥಂ ಬ್ರಹ್ಮತೀರ್ಥಂ ಚ ಮಾನದ**
**ಪ್ರಾಜಾಪತ್ಯಂ ತಥಾ ಚಾನ್ಯತ್ ತಥಾನ್ಯತ್ಸೌಮ್ಯಮುಚ್ಯತೇ**

ಶ್ರೌತಸ್ಮಾರ್ತಪೌರಾಣಿಕವೆಂಬ ಮೂರು ಬಗೆಯ ಆಚಮನಕ್ರಮದಲ್ಲಿ



ಶ್ರುತಿಯಲ್ಲಿ ಹೇಳಿದ ಶ್ರೌತಾಚಮನ ಬ್ರಹ್ಮಯಜ್ಞದಲ್ಲಿ ಮಾಡಲಿದೆ; ಸೂತ್ರಕಾರರು ಹೇಳಿದ ಸ್ಮಾರ್ತಾಚಮನ ಸಂಧ್ಯಾದಿ ನಿತ್ಯಕರ್ಮದಲ್ಲಿ ಮಾಡಲಿದೆ; ಕೇಶವಾದಿ ನಾಮಗಳಿಂದ ಹೇಳಲಾದ ಪುರಾಣಾಚಮನ ಶೌಚಾದಿಗಳಲ್ಲಿ ಮಾಡಲಿರುವುದೆಂದು ಸಾಮಾನ್ಯವಾಗಿ ಧರ್ಮಶಾಸ್ತ್ರಕಾರರ ಅಭಿಪ್ರಾಯ.

**ಶೌಚಾಂತೇ ಚ ತಥಾಪಾನೇ ಸ್ಪೃಷ್ಟಾಸ್ಪೃಷ್ಟೇ ಚ ಕರ್ಮಣಿ**

**ಪೌರಾಣಾಚಮನಂ ಕುರ್ಯಾತ್ ನಾಮಭಿಃ ಕೇಶವಾದಿಭಿಃ**

**ಸಂಧ್ಯಾಯಾಂ ಕರ್ಮಕಾಲೇ ಚ ಸ್ಮೃತೇರಾಚಮನಂ ಭವೇತ್**

**ಬ್ರಹ್ಮಯಜ್ಞೇ ತು ವೈ ಕುರ್ಯಾತ್ ಶ್ರುತೇರಾಚಮನಂ ದ್ವಿಜಃ**

ಆದರೂ ಇಂದಿಲ್ಲಿ ಎಲ್ಲ ಬಗೆಯ ಆಚಮನಗಳೂ ಬೇರೆ ಬೇರೆ ದೇಶಗಳಲ್ಲಿ ಸಂಧ್ಯಾದಿ ನಿತ್ಯಕರ್ಮದಲ್ಲಿಯೇ ಕಂಡುಬರುವುದು. ಇದರಿಂದ ಲೋಪದೋಷಗಳೇನೂ ಇಲ್ಲ. ಆಚಮನ ಪ್ರಕಾರ ವ್ಯತ್ಯಾಸದಿಂದ ಹಾನಿಯನ್ನು ಹೇಳುವ ಪ್ರಮಾಣಗಳು ಸರಿಯಾಗಿ ದೊರಕದು. ಆದ್ದರಿಂದಲೆ ಎಲ್ಲ ಬಗೆಯ ಆಚಮನಗಳೂ ಅಲ್ಲಲ್ಲಿ ಪ್ರಯೋಗದಲ್ಲಿವೆ.

ಮೂರರ ಜತೆ ಆಗಮ ಆಚಮನ, ಮಾನಸ ಆಚಮನ ಎಂಬೆರೆಡು ಕ್ರಮವನ್ನು ಸೇರಿಸಿ **ವಿಶ್ವಾಮಿತ್ರಕಲ್ಪ**ದಲ್ಲಿ ಪಂಚಾಚಮನವನ್ನು ತಿಳಿಸಲಾಗಿದೆ–

**ಆಚಾಮಸ್ಯ ವಿಧಿಃ ಪ್ರೋಕ್ತಃ ಪುರಾಣಂ ಸ್ಮೃತಿರಾಗಮಮ್**

**ಶ್ರೌತಂ ಮಾನಸಮಾಚಾಮಂ ಪಂಚಭಿಃ ಶ್ರುತಿಚೋದಿತೈಃ**

ತಂತ್ರಗ್ರಂಥಗಳಲ್ಲಿ ಇನ್ನೂ ಹಲವಾರು ಬಗೆಯ ಆಚಮನ ಕ್ರಮಗಳ ಮಂತ್ರಗಳಿವೆ. ಇವೆಲ್ಲ ಪದ್ಧತಿಗಳು ಬೇರೆ ಬೇರೆ ಮಂತ್ರಗಳನ್ನು ಅವಲಂಬಿಸಿ ಹೇಳಿರುವವುಗಳು. ಇವನ್ನು ಶಾಕ್ತರು, ಶೈವರು ಹೆಚ್ಚಾಗಿ ಮಾಂತ್ರಿಕರು ಆಚರಣೆಯಲ್ಲಿ ತಂದಿದ್ದರು.

ಇವಾವುದೂ ಸಂಧ್ಯೋಪಾಸನೆಯಲ್ಲಿ ಹೇಳಿದ್ದಲ್ಲ. ಹಾಗಾಗಿ ಇಲ್ಲಿ ಅವನ್ನು ಬರೆಯಲಾಗಿಲ್ಲ.



# ಮಾಲಾಧಾರಣೆ

ಮನಸ್ಸಿನ ಪಾವಿತ್ರ್ಯಸಂಪಾದನೆಯಲ್ಲಿ ಪುಂಡರೀಕಾಕ್ಷನ ಸ್ಮರಣೆ ತುಂಬಾ ಮುಖ್ಯವಾದದ್ದು. ಹಾಗೆಯೇ ಬಾಹ್ಯ ಪಾವಿತ್ರ್ಯ ಸಂಪಾದನೆಯಲ್ಲಿ ಸ್ನಾನದಂತೆ ಪುಂಡ್ರ-ಮುದ್ರೆಗಳ ಧಾರಣೆಯಂತೆ ಪವಿತ್ರಧಾರಣೆಯೂ ಅಗತ್ಯವಾಗಿದೆ. ಇದರ ಜತೆ ತುಳಸೀಕಾಷ್ಠದಿಂದ ನಿರ್ಮಿತವಾದ ಮಣಿಸರವೂ ಧರಿಸಲು ಯೋಗ್ಯವೆನಿಸಿದೆ. ಅದರಂತೆ ಕಮಲದ ಬೀಜದ ಸರ ಹಾಗೂ ನೆಲ್ಲಿಕಾಯಿಯ ಸರವೂ ಧಾರ್ಯ ಎನ್ನುವುದಾಗಿ ಪದ್ಮಪುರಾಣ ಮತ್ತು ಇತರೆಡೆ ಹೇಳಿದೆ -

**ಸುದರ್ಶನೇನಾಂಕಿತ-ಬಾಹುಮೂಲಾಃ ತಥೋರ್ಧ್ವಪುಂಡ್ರಾಂಕಿತ-ಸರ್ವಗಾತ್ರಾಃ**
**ಮಾಲಾರವಿಂದಾಕ್ಷಧರಾ ವಿಶುದ್ಧಾಃ ರಕ್ಷಂತಿ ಲೋಕಾನ್ ದುರಿತೌಘಸಂಗಾತ್**
**ಲಲಾಟೇ ಚೋರ್ಧ್ವಪುಂಡ್ರಂ ತು ಬಾಹುಮೂಲೇ ಸುದರ್ಶನಮ್**
**ಕಂಠೇ ಪದ್ಮಾಕ್ಷಮಾಲಾ ತು ಪವಿತ್ರಂ ದಕ್ಷಿಣೇ ಕರೇ** (ಪಂಚಸಂಸ್ಕಾರಸಂಗ್ರಹ)

**ಪದ್ಮಾಕ್ಷಮಾಲಾ ವಿಪ್ರೇಂದ್ರೈಃ ಧಾರಣೀಯಾ ಪ್ರಯತ್ನತಃ**
**ಜಪಹೋಮಾರ್ಚ್ಚನಾದ್ಯೇಷು......** (ವಾಮನ)

**ಪದ್ಮಾಕ್ಷಂ ತುಳಸೀಮಾಲಾಂ ಊರ್ಧ್ವಪುಂಡ್ರಾಣಿ ಧಾರಯೇತ್** (ಶೇಷಸಂಹಿತಾ)

**ತುಳಸೀಕಾಷ್ಠಮಾಲಾಭಿಃ ಭೂಷಿತಃ ಪುಣ್ಯಮಾಚರೇತ್**
**ಯದ್ಯತ್ಕರೋತಿ ತತ್ಸರ್ವಂ ಅನಂತಫಲದಂ ಭವೇತ್**
**ನಿವೇದ್ಯ ಕೇಶವೇ ಮಾಲಾಂ ತುಳಸೀಕಾಷ್ಠಸಂಭವಾಮ್**
**ವಹತೇ ಯೋ ನರೋ ಭಕ್ತ್ಯಾ ತಸ್ಯ ನೈವಾಸ್ತಿ ಪಾತಕಮ್** (ಸ್ಕಾಂದ)

ತ್ರಿವಿಧ ಪುರುಷಾರ್ಥಗಳ ಪ್ರಾಪ್ತಿಗೆ ತುಳಸಿ, ನೆಲ್ಲಿ ಮತ್ತು ರುದ್ರಾಕ್ಷಿಯ ಮಾಲೆಗಳ ಧಾರಣೆ. ಪದ್ಮಾಕ್ಷಮಾಲೆ ಮೋಕ್ಷ ಪುರುಷಾರ್ಥಕ್ಕೆ ಎಂದು ತಿಳಿಯಬಹುದು - **ನ ತ್ಯಾಜ್ಯಾ ತುಳಸೀಮಾಲಾ ಧಾತ್ರೀಮಾಲಾ ವಿಶೇಷತಃ**

**ತಥಾ ರುದ್ರಾಕ್ಷಮಾಲಾಽಪಿ ಧರ್ಮಕಾಮಾರ್ಥಮಿಚ್ಛತಾ** (ಪಾದ್ಮಪುರಾಣ)
**ರುದ್ರಾಕ್ಷಕಟಕಂ ಧಾರ್ಯಂ ವಿಷಮಂ ಸುಸಮಂ ದೃಢಮ್**
**ಏಕತ್ರಿಪಂಚವದನಂ ಯಥಾಲಾಭಂ ತು ಧಾರಯೇತ್**



ಶ್ರುತಿಯಲ್ಲಿ ಹೇಳಿದ ಶ್ರೌತಾಚಮನ ಬ್ರಹ್ಮಯಜ್ಞದಲ್ಲಿ ಮಾಡಲಿದೆ; ಸೂತ್ರಕಾರರು ಹೇಳಿದ ಸ್ಮಾರ್ತಾಚಮನ ಸಂಧ್ಯಾದಿ ನಿತ್ಯಕರ್ಮದಲ್ಲಿ ಮಾಡಲಿದೆ; ಕೇಶವಾದಿ ನಾಮಗಳಿಂದ ಹೇಳಲಾದ ಪುರಾಣಾಚಮನ ಶೌಚಾದಿಗಳಲ್ಲಿ ಮಾಡಲಿರುವುದೆಂದು ಸಾಮಾನ್ಯವಾಗಿ ಧರ್ಮಶಾಸ್ತ್ರಕಾರರ ಅಭಿಪ್ರಾಯ.

**ಶೌಚಾಂತೇ ಚ ತಥಾಪಾನೇ ಸ್ಪಷ್ಟಾಸ್ಪಷ್ಟೇ ಚ ಕರ್ಮಣಿ**
**ಪೌರಾಣಾಚಮನಂ ಕುರ್ಯಾತ್ ನಾಮಭಿಃ ಕೇಶವಾದಿಭಿಃ**
**ಸಂಧ್ಯಾಯಾಂ ಕರ್ಮಕಾಲೇ ಚ ಸ್ಮೃತೇರಾಚಮನಂ ಭವೇತ್**
**ಬ್ರಹ್ಮಯಜ್ಞೇ ತು ವೈ ಕುರ್ಯಾತ್ ಶ್ರುತೇರಾಚಮನಂ ದ್ವಿಜಃ**

ಆದರೂ ಇಂದಿಲ್ಲಿ ಎಲ್ಲ ಬಗೆಯ ಆಚಮನಗಳೂ ಬೇರೆ ಬೇರೆ ದೇಶಗಳಲ್ಲಿ ಸಂಧ್ಯಾದಿ ನಿತ್ಯಕರ್ಮದಲ್ಲಿಯೇ ಕಂಡುಬರುವುದು. ಇದರಿಂದ ಲೋಪದೋಷಗಳೇನೂ ಇಲ್ಲ. ಆಚಮನ ಪ್ರಕಾರ ವ್ಯತ್ಯಾಸದಿಂದ ಹಾನಿಯನ್ನು ಹೇಳುವ ಪ್ರಮಾಣಗಳು ಸರಿಯಾಗಿ ದೊರಕದು. ಆದ್ದರಿಂದಲೆ ಎಲ್ಲ ಬಗೆಯ ಆಚಮನಗಳೂ ಅಲ್ಲಲ್ಲಿ ಪ್ರಯೋಗದಲ್ಲಿವೆ.

ಮೂರರ ಜತೆ ಆಗಮ ಆಚಮನ, ಮಾನಸ ಆಚಮನ ಎಂಬೆರೆಡು ಕ್ರಮವನ್ನು ಸೇರಿಸಿ **ವಿಶ್ವಾಮಿತ್ರಕಲ್ಪದಲ್ಲಿ** ಪಂಚಾಚಮನವನ್ನು ತಿಳಿಸಲಾಗಿದೆ–

**ಆಚಾಮಸ್ಯ ವಿಧಿಃ ಪ್ರೋಕ್ತಃ ಪುರಾಣಂ ಸ್ಮೃತಿರಾಗಮಮ್**
**ಶ್ರೌತಂ ಮಾನಸಮಾಚಾಮಂ ಪಂಚಭಿಃ ಶ್ರುತಿಚೋದಿತೈಃ**

ತಂತ್ರಗ್ರಂಥಗಳಲ್ಲಿ ಇನ್ನೂ ಹಲವಾರು ಬಗೆಯ ಆಚಮನ ಕ್ರಮಗಳ ಮಂತ್ರಗಳಿವೆ. ಇವೆಲ್ಲ ಪದ್ಧತಿಗಳು ಬೇರೆ ಬೇರೆ ಮಂತ್ರಗಳನ್ನು ಅವಲಂಬಿಸಿ ಹೇಳಿರುವವುಗಳು. ಇವನ್ನು ಶಾಕ್ತರು, ಶೈವರು ಹೆಚ್ಚಾಗಿ ಮಾಂತ್ರಿಕರು ಆಚರಣೆ ಯಲ್ಲಿ ತಂದಿದ್ದರು.

ಇವಾವುದೂ ಸಂಧ್ಯೋಪಾಸನೆಯಲ್ಲಿ ಹೇಳಿದ್ದಲ್ಲ. ಹಾಗಾಗಿ ಇಲ್ಲಿ ಅವನ್ನು ಬರೆಯಲಾಗಿಲ್ಲ.



# ಮಾಲಾಧಾರಣೆ

ಮನಸ್ಸಿನ ಪಾವಿತ್ರ್ಯಸಂಪಾದನೆಯಲ್ಲಿ ಪುಂಡರೀಕಾಕ್ಷನ ಸ್ಮರಣೆ ತುಂಬಾ ಮುಖ್ಯವಾದದ್ದು. ಹಾಗೆಯೇ ಬಾಹ್ಯ ಪಾವಿತ್ರ್ಯ ಸಂಪಾದನೆಯಲ್ಲಿ ಸ್ನಾನದಂತೆ ಪುಂಡ್ರ-ಮುದ್ರೆಗಳ ಧಾರಣೆಯಂತೆ ಪವಿತ್ರಧಾರಣೆಯೂ ಅಗತ್ಯವಾಗಿದೆ. ಇದರ ಜತೆ ತುಳಸೀಕಾಷ್ಠದಿಂದ ನಿರ್ಮಿತವಾದ ಮಣಿಸರವೂ ಧರಿಸಲು ಯೋಗ್ಯವೆನಿಸಿದೆ. ಅದರಂತೆ ಕಮಲದ ಬೀಜದ ಸರ ಹಾಗೂ ನೆಲ್ಲಿಕಾಯಿಯ ಸರವೂ ಧಾರ್ಯ ಎನ್ನುವುದಾಗಿ **ಪದ್ಮಪುರಾಣ** ಮತ್ತು ಇತರೆಡೆ ಹೇಳಿದೆ -

**ಸುದರ್ಶನೇನಾಂಕಿತ-ಬಾಹುಮೂಲಾಃ ತಥೋರ್ಧ್ವಪುಂಡ್ರಾಂಕಿತ-ಸರ್ವಗಾತ್ರಾಃ**
**ಮಾಲಾರವಿಂದಾಕ್ಷಧರಾ ವಿಶುದ್ಧಾಃ ರಕ್ಷಂತಿ ಲೋಕಾನ್ ದುರಿತೌಘಸಂಗಾತ್**
**ಲಲಾಟೇ ಚೋರ್ಧ್ವಪುಂಡ್ರಂ ತು ಬಾಹುಮೂಲೇ ಸುದರ್ಶನಮ್**
**ಕಂಠೇ ಪದ್ಮಾಕ್ಷಮಾಲಾ ತು ಪವಿತ್ರಂ ದಕ್ಷಿಣೇ ಕರೇ** (ಪಂಚಸಂಸ್ಕಾರಸಂಗ್ರಹ)

**ಪದ್ಮಾಕ್ಷಮಾಲಾ ವಿಪ್ರೇಂದ್ರೈಃ ಧಾರಣೀಯಾ ಪ್ರಯತ್ನತಃ**
**ಜಪಹೋಮಾರ್ಚ್ಚನಾದ್ಯೇಷು......** (ವಾಮನ)

**ಪದ್ಮಾಕ್ಷಂ ತುಳಸೀಮಾಲಾಂ ಊರ್ಧ್ವಪುಂಡ್ರಾಣಿ ಧಾರಯೇತ್** (ಶೇಷಸಂಹಿತಾ)

**ತುಳಸೀಕಾಷ್ಠಮಾಲಾಭಿಃ ಭೂಷಿತಃ ಪುಣ್ಯಮಾಚರೇತ್**
**ಯದ್ಯತ್ಕರೋತಿ ತತ್ಸರ್ವಂ ಅನಂತಫಲದಂ ಭವೇತ್**
**ನಿವೇದ್ಯ ಕೇಶವೇ ಮಾಲಾಂ ತುಳಸೀಕಾಷ್ಠಸಂಭವಾಮ್**
**ವಹತೇ ಯೋ ನರೋ ಭಕ್ತ್ಯಾ ತಸ್ಯ ನೈವಾಸ್ತಿ ಪಾತಕಮ್** (ಸ್ಕಾಂದ)

ತ್ರಿವಿಧ ಪುರುಷಾರ್ಥಗಳ ಪ್ರಾಪ್ತಿಗೆ ತುಳಸಿ, ನೆಲ್ಲಿ ಮತ್ತು ರುದ್ರಾಕ್ಷಿಯ ಮಾಲೆಗಳ ಧಾರಣೆ. ಪದ್ಮಾಕ್ಷಮಾಲೆ ಮೋಕ್ಷ ಪುರುಷಾರ್ಥಕ್ಕೆ ಎಂದು ತಿಳಿಯಬಹುದು - **ನ ತ್ಯಾಜ್ಯಾ ತುಳಸೀಮಾಲಾ ಧಾತ್ರೀಮಾಲಾ ವಿಶೇಷತಃ**

**ತಥಾ ರುದ್ರಾಕ್ಷಮಾಲಾಽಪಿ ಧರ್ಮಕಾಮಾರ್ಥಮಿಚ್ಛತಾ** (ಪಾದ್ಮಪುರಾಣ)
**ರುದ್ರಾಕ್ಷಕಟಕಂ ಧಾರ್ಯಂ ವಿಷಮಂ ಸುಸಮಂ ದೃಢಮ್**
**ಏಕತ್ರಿಪಂಚವದನಂ ಯಥಾಲಾಭಂ ತು ಧಾರಯೇತ್**



ದ್ವಿಚತುಃಷಣ್ಮುಖಂ ಶಸ್ತಂ ಅವ್ರಣಂ ತೀವ್ರಕಂಟಕಮ್ (ಅಗ್ನಿಪುರಾಣ)

ಬ್ರಾಹ್ಮಣಸ್ತುಳಸೀಮಾಲಾಂ ಧಾತ್ರೀಮಾಲಾಂ ವಿಶೇಷತಃ

ಮಹಾಪಾತಕಸಂಹರ್ತ್ರೀಂ ಧರ್ಮ್ಮಕಾಮಾರ್ಥದಾಯಿನೀಮ್ (ಗರುಡಪುರಾಣ)

ತುಳಸೀಕಾಷ್ಠಮಣಿಭಿಃ ಧಾತ್ರೀಮಣಿಸಮನ್ವಿತೈಃ

ತಥಾ ಪದ್ಮಾಕ್ಷಮಣಿಭಿಃ ಸಹಸ್ರೈರುಪಶೋಭಿತಾಮ್

ಪಂಚಮಾಲಾಂ ತು ಕೃತ್ವಾ ಯೋ ಜಪಕಾಲೇ ಧರೇದ್ದ್ವಿಜಃ

ತಸ್ಯ ಪುಣ್ಯಫಲಂ ವಕ್ತುಂ ನಾಹಂ ಶಕ್ತೋಽಸ್ಮಿ ನಾರದ

ಧಾತ್ರೀಫಲಕೃತಾಂ ಮಾಲಾಂ ಕಂಠಸ್ಥಾಂ ಯೋ ವಹೇನ್ನಹಿ

ಸ ವೈಷ್ಣವೋ ನ ಹಿ ಜ್ಞೇಯೋ ವಿಷ್ಣುಪೂಜಾರತೋಽಪಿ ಯಃ

ಧಾತ್ರೀಫಲಕೃತಾ ಮಾಲಾ ತುಳಸೀಕಾಷ್ಠಸಂಭವಾ

ದೃಶ್ಯತೇ ಯಸ್ಯ ದೇಹೇ ತು ಸ ವೈ ಭಾಗವತೋ ನರಃ

ತಸ್ಮಾದ್ಧಾರ್ಯಾ ಪ್ರಯತ್ನೇನ ಮಾಲಾ ತುಳಸಿಸಂಭವಾ

ಪದ್ಮಾಕ್ಷನಿರ್ಮ್ಮಿತಾ ಭಕ್ತ್ಯಾ ಫಲೈಃ ಧಾತ್ರ್ಯಾಃ ಸುಪುಣ್ಯದಾ (ಸ್ಕಂದಪುರಾಣ)

ತುಳಸಿಮಾಲೆ ಮತ್ತು ಪದ್ಮಾಕ್ಷಮಾಲೆ ಧರಿಸಲು ಪ್ರಾರ್ಥನೆ ಹೀಗಿದೆ –

ತುಳಸೀಕಾಷ್ಠಸಂಭೂತೇ ಮಾಲೇ ಕೃಷ್ಣಜನಪ್ರಿಯೇ

ಕಂಠೇ ತ್ವಾಂ ಧಾರಯಿಷ್ಯಾಮಿ ಕುರು ಮಾಂ ವಿಷ್ಣುವಲ್ಲಭಮ್

ಅಕ್ಷಮಾಲೇ ನಮಸ್ತುಭ್ಯಂ ಪದ್ಮಾಸನಧೃತೇ ಸದಾ

ಪದ್ಮಾಪತಿಪ್ರಸಾದಂ ಚ ಕುರು ಧಾರಣತೋ ಮಯಿ (ಗೌರೀತಂತ್ರ)

ಮಲ-ಮೂತ್ರ ವಿಸರ್ಜನೆಯ ಸಮಯದಲ್ಲಿ ಮಾಲೆಗಳನ್ನು ತೆಗೆದಿಡಬೇಕು –

ಉತ್ತಾರ್ಯ ತುಳಸೀಕಂಜಮಾಲೇ ವೈಷ್ಣವಸತ್ತಮಃ

ಮಲಮೂತ್ರಪರಿತ್ಯಾಗಂ ನೈತ್ತಿಕಂ ತು ಸಮಾಚರೇತ್ (ಬೃಹತ್‌ಬ್ರಹ್ಮಸಂಹಿತಾ)

ಮಲಗುವಾಗ, ಉಣ್ಣುವಾಗ, ಆಶೌಚದ ಸಂದರ್ಭಗಳಲ್ಲಿ ಅಭ್ಯಂಗದಲ್ಲಿ ಮಾಲೆ ಧರಿಸಬಾರದು – ಸೂತಕೇ ಪ್ರೇತಕಾರ್ಯೇ ಚ ತೈಲಾಭ್ಯಂಗೇ ಚ ಭೋಜನೇ ಶಯನೇ ತುಳಸೀಮಾಲಾಂ ಅಧೃತ್ವೈವ ಸಮಾಚರೇತ್ (ಬೃಹತ್‌ಬ್ರಹ್ಮಸಂಹಿತಾ)



# ಪವಿತ್ರಪಾಣಿ

ಊರ್ಧ್ವಪುಂಡ್ರಗಳನ್ನು ಹಚ್ಚಿಕೊಂಡು, ಮಾಲೆಗಳನ್ನು ಕುತ್ತಿಗೆಯಲ್ಲಿ ಧರಿಸಿಕೊಂಡ ಬಳಿಕ ನಿರ್ಮಾಲ್ಯ ತುಳಸಿಗಳನ್ನು ದೇಹದಲ್ಲಿ ಹೊಕ್ಕುಳು, ಕಿವಿ, ತಲೆಗಳಲ್ಲಿ ಇಟ್ಟುಕೊಳ್ಳಬೇಕು. ಮತ್ತೆ ಜಪಾರಂಭ. ಜಪಪೂಜೆಹೋಮಗಳಲ್ಲೆಲ್ಲಾ ಕೈಗಳಲ್ಲಿ ದರ್ಭೆ ಇರಲಿ –

**ತದೂರ್ಧ್ವಂ ಪುಂಡ್ರಶಾಖಾದ್ಯೈಃ ಯುಕ್ತಃ ತುಳಸಿಭೂಷಣೈಃ**
**ಸಂಧ್ಯೋಪಾಸ್ತ್ಯಾದಿಕಂ ಕುರ್ಯಾತ್ ಕುಶಪಾಣಿರ್ಹಿ ಮಾಂ ಸ್ಮರನ್** (ಸ್ಕಂದಪುರಾಣ)

ದರ್ಭೆಯಿಂದ ಮಾಡಿದ ಪವಿತ್ರವನ್ನು ಜಪ – ಹೋಮಾದಿಗಳನ್ನು ನಡೆಸುವಾಗ ಕೈಯಲ್ಲಿ ಧರಿಸಬೇಕು. ಕಡೆಯ ಪಕ್ಷ ಗೇಣುದ್ದದ ತುದಿ ತುಂಡಾಗದ ಗರ್ಭವಿಲ್ಲದ (ಒಂದರೊಳಗೆ ಇನ್ನೊಂದು ದರ್ಭೆ ಇರದ) ಎರಡು ದರ್ಭೆಯನ್ನಾದರೂ ಬೆರಳಿನೆಡೆಯಲ್ಲಿ ಹಿಡಿದುಕೊಂಡೇ ಜಪಾದಿಗಳನ್ನು ನಡೆಸಬೇಕು.

**ಅನಂತರ್ಗರ್ಭಿಣಂ ಸಾಗ್ರಂ ಕೌಶಂ ದ್ವಿದಳಮೇವ ಚ**
**ಪ್ರಾದೇಶಮಾತ್ರಂ ವಿಜ್ಞೇಯಂ ಪವಿತ್ರಂ ಯತ್ರಕುತ್ರಚಿತ್** (ಕಾತ್ಯಾಯನ)
**ಪವಿತ್ರಂ ವೈ ದರ್ಭಾಃ** ಎಂದು (ಶತಪಥಬ್ರಾಹ್ಮಣ, ತೈತ್ತಿರೀಯಸಂಹಿತೆ)

ಬ್ರಾಹ್ಮಣಗಳಲ್ಲಿ ದರ್ಭೆಯಲ್ಲಿಯೇ ಪವಿತ್ರವನ್ನು ಗುರುತಿಸಲಾಗಿದೆ. ರಾಗದ್ವೇಷಗಳನ್ನು ತೊರೆದು ದೇವರ ನೆನಪಿನೆಡೆಗೆ ನಮ್ಮನ್ನು ಒಯ್ಯಲಿದೆ ದರ್ಭೆ ಎಂದು **ಅಥರ್ವವೇದವು** ತಿಳಿಸಿಕೊಡುತ್ತಾ, ಕೆಟ್ಟದರ ವಿನಾಶಕ್ಕಾಗಿಯೇ ದರ್ಭೆಯ ಉತ್ಪತ್ತಿಯನ್ನು ಸಾರಿದೆ –

**ಅಯಂ ದರ್ಭೋ ವಿಮನ್ಯುಕಃ ಸ್ವಾಯ ಚಾರಣಾಯ ಚ**
**ದರ್ಭಃ ಪೃಥಿವ್ಯಾ ಉತ್ಥಿತೋ ಮನ್ಯುಶಮನ ಉಚ್ಯತೇ**

ಗ್ರಂಥಿ ಹಾಕದಿದ್ದರೂ ದರ್ಭೆಯ ಎಸಳುಗಳೇ ಪವಿತ್ರವೆನಿಸುವವು –

**ದರ್ಭಾಃ ಸ್ಥಾನವಿಶೇಷೇಷು ಪವಿತ್ರತ್ವಂ ಪ್ರಯಾತಿ ಹಿ** (ಬೃಹತ್‌ಬ್ರಹ್ಮಸಂಹಿತಾ)



ದರ್ಭೆಯಿಲ್ಲದ ಜಪ ವ್ಯರ್ಥ ಎಂದು **ಲಘುಹಾರೀತರು** ತಿಳಿಸಿರುತ್ತಾರೆ–

**ದರ್ಭಹೀನಾ ತು ಯಾ ಸಂಧ್ಯಾ ಯಚ್ಚ ದಾನಂ ವಿನೋದಕಮ್**

**ಅಸಂಖ್ಯಾತಂ ತು ಯಜ್ಜಪ್ತಂ ತತ್ಸರ್ವಂ ನಿಷ್ಪ್ರಯೋಜಕಮ್**

ದರ್ಭೆಯ ಸಂಪರ್ಕದಿಂದ ನೀರು ಅಮೃತವಾಗಲಿದೆ ಎಂದು **ಪದ್ಮಪುರಾಣ.** ಮಂತ್ರಜಪಕ್ಕೆ ಮತ್ತು ಸ್ತೋತ್ರಪಾರಾಯಣಕ್ಕೆ ದರ್ಭೆ ಹಿಡಿದವನು ಪವಿತ್ರನು ಎಂದು ಇಲ್ಲಿನ ಹೇಳಿಕೆ –

**ವಿಶೇಷೇ ಕುಶಸಂಸರ್ಗಾತ್ ಪೀಯೂಷಾದಧಿಕಂ ಜಲಮ್**

**ಸರ್ವದೇವಮಯೋ ದರ್ಭೋ ಮಯಾಯಂ ನಿರ್ಮಿತಃ ಪುರಾ**

**ಕುಶಹಸ್ತಃ ಸದಾ ಮೇಧ್ಯಃ ಸ್ತೋತ್ರಂ ಮಂತ್ರಂ ಪಠೇದ್ಯದಿ**

ಸಂಕಲ್ಪದಿಂದ ಆರಂಭಿಸಿ ಕೃಷ್ಣಾರ್ಪಣದವರೆಗೆ ಕೈಯಲ್ಲಿ ದರ್ಭೆ ಇರಬೇಕು. **ಮದನಪಾರಿಜಾತ** ಇದನ್ನು ತಿಳಿಸಿದೆ–

**ಬ್ರಹ್ಮವರ್ಚಸಕಾಮಾರ್ಥಂ ಪ್ರಾತಃಸಂಧ್ಯಾಮುಪಾಸ್ಮಹೇ**

**ಇತ್ಥಂ ಕೃತ್ವಾಽಥ ಸಂಕಲ್ಪಂ ಕುಶಾನಾದಾಯ ಪಾಣಿನಾ**

ಆಚಮನ ಮಾಡುವಾಗ ಬ್ರಹ್ಮಗಂಟು (ಪವಿತ್ರಗ್ರಂಥಿ) ಹಾಕಿದ ಪವಿತ್ರವನ್ನು ಧರಿಸಿರಬಾರದು –

**ಕಾಶಹಸ್ತಸ್ತು ನಾಚಾಮೇತ್ ದೂರ್ವಾಹಸ್ತಸ್ತಥೈವ ಚ** (ಅಪರಾರ್ಕ)

**ಗ್ರಂಥಿರ್ಯಸ್ಯ ಪವಿತ್ರಸ್ಯ ನ ತೇನಾಚಮನಂ ಭವೇತ್** (ಶಂಖ)

**ಗ್ರಂಥೀಕೃತಪವಿತ್ರೇಣ ನ ಭುಂಜೀಯಾನ್ನ ಚಾಚಮೇತ್** (ಆಶ್ವಲಾಯನ)

**ಸವ್ಯಾಪಸವ್ಯೌ ಕುರ್ವೀತ ಸಪವಿತ್ರೌ ಕರೌ ಬುಧಃ**

**ಗ್ರಂಥಿರ್ಯಸ್ಯ ಪವಿತ್ರಸ್ಯ ನ ತೇನಾಚಮನಂ ಚರೇತ್** (ಹಾರೀತ)

**ಮಾರ್ಕಂಡೇಯಪುರಾಣವು** ನಾಲ್ಕು ದರ್ಭೆಗಳಿಂದ ಪವಿತ್ರವನ್ನು ತಯಾರಿಸಲು ಹೇಳಿದೆ–

**ಚತುರ್ಭಿರ್ದರ್ಭಪಿಂಜೂಲೈಃ ಬ್ರಾಹ್ಮಣಸ್ಯ ಪವಿತ್ರಕಮ್**

ಎರಡೂ ಕೈಗಳಲ್ಲಿ ಧರಿಸಬೇಕೆಂದು ಅತ್ರಿಗಳು ಸ್ಪಷ್ಟಪಡಿಸಿದ್ದಾರೆ –



**ಉಭಾಭ್ಯಾಮಪಿ ಪಾಣಿಭ್ಯಾಂ ವಿಪ್ರೈರ್ದರ್ಭಪವಿತ್ರಕೇ**

**ಧಾರಣೀಯೇ ಪ್ರಯತ್ನೇನ ಬ್ರಹ್ಮಗ್ರಂಥಿಸಮನ್ವಿತೇ**

**ಈಶ್ವರಸಂಹಿತೆಯು** ದರ್ಭೆಯ ನಾಲ್ಕು ಎಸಳಿನ ಪವಿತ್ರವನ್ನು ಉಂಗುರದಂತೆ ಧರಿಸಿಕೊಳ್ಳಲು ಹೇಳಿದೆ –

**ಬಹುಶಾಖೈರಭಗ್ನಾಗ್ರೈಃ ಸಮೂಲೈಸ್ಸುಸಮೈಃ ಕುಶೈಃ**

**ಚತುರ್ಭಿರ್ವಾಮಹಸ್ತೇನ ತ್ವಾದಾಯಾಥ ಪವಿತ್ರಕಮ್**

**ದಕ್ಷಿಣಾನಾಮಿಕಾಯಾಂ ತು ಚತುಷ್ಕಾಂಡವಿನಿರ್ಮಿತಮ್**

**ಅಂಗುಲೀಯಕರೂಪಂ ಚ ಕೃತ್ವಾ ವೈ ತದನಂತರಮ್**

ಪ್ರಣವದೊಂದಿಗೆ ಪವಿತ್ರದ ರಚನೆಯ ಕ್ರಮವನ್ನು **ಆಶ್ವಲಾಯನರು** ಹೇಳಿದ್ದಾರೆ –

**ಸಾಗ್ರಾಭ್ಯಾಮೃಜುದರ್ಭಾಭ್ಯಾಂ ದಕ್ಷಿಣೇನ ತು ಮಧ್ಯತಃ**

**ಮೂಲಾಗ್ರಾವುದ್ಧೃತೌ ಕೃತ್ವಾ ಕುರ್ಯಾದ್ಗ್ರಂಥಿಂ ಚ ಮಂತ್ರವಿತ್**

**ತಾರೇಣ ಕುರ್ಯಾತ್ತದ್ಗ್ರಂಥಿಂ ಪವಿತ್ರಸ್ಯ ದ್ವಿಜೋತ್ತಮಃ**

**ಗ್ರಂಥಿರೇಕಾಂಗುಲಸ್ತಸ್ಯ ತದಧೋ ದ್ವ್ಯಂಗುಲೋತ್ತಮಃ**

ಬ್ರಹ್ಮಗಂಟು ಹಾಕಿದ ದರ್ಭೆ ಎಸಳುಗಳವು ವೇದಾಧ್ಯಯನಕ್ಕೆ ಮಂತ್ರಜಪಕ್ಕೆ ಬರುವ ತೊಂದರೆಗಳನ್ನು ತಡೆಗಟ್ಟಲು ಸಮರ್ಥಗಳಾಗಿವೆ. ಬ್ರಹ್ಮಾಸ್ತ್ರದ ಕಾರ್ಯವನ್ನು ನಡೆಸಿಕೊಡುವುದು. ಕಾಣಲು ಆಂಗ್ಲ ಅಂಕೆಯ ಎಂಟು ಬರೆದಂತೆ ಇದ್ದು ಭಗವಂತನ ಕೈಯಲ್ಲಿಯ ಚಕ್ರದ ಸನ್ನಿಧಾನವನ್ನು ಪಡೆದಿರುವುದು. ಭಗವಂತನ ಚಕ್ರಕ್ಕೇ ಪವಿತ್ರ ಎಂದು ಹೆಸರು. **ಪದ್ಮಪುರಾಣ** ಕೋಶವನ್ನೆ ಸಾದರಪಡಿಸಿದೆ –

**ಪವಿತ್ರಂ ಚರಣಂ ನೇಮಿಃ ಅರಿಶ್ಚಕ್ರಂ ಸುದರ್ಶನಮ್**

**ವಿಷ್ಣುಚಕ್ರಸ್ಯ ನಾಮಾನಿ ಪರ್ಯಾಯೇಣ ನಿಬೋಧ ಮೇ**

ಪವಿತ್ರ ಶಬ್ದದ ಯೌಗಿಕ ಅರ್ಥವೆ ಪಾಪದಿಂದ ಮುಕ್ತಿಯನ್ನೀಡಿ ರಕ್ಷಿಸುವುದೆಂದು.



**ಪಾವಯತ್ಯೇನಸೋ ನಿತ್ಯಂ ತ್ರಾಯತೇ ಭವಬಂಧನಾತ್**

**ಪವಿತ್ರಂ ತೇನ ವಿಖ್ಯಾತಂ ಬ್ರಾಹ್ಮಂ ತೇಜೋಽಭಿಧೀಯತೇ**

ದೋಷಗಳಿಗೆಲ್ಲ ಅಭಿಮಾನಿಗಳಾದ ಕಲಿ ಮುಂತಾದ ಅಸುರರನ್ನು ಮುಖ್ಯವಾಗಿ ಹಿಮ್ಮೆಟ್ಟಿಸುವ ಪ್ರಧಾನ ಸಾಧಕ ಚತುರ್ಮುಖ ಈ ಪವಿತ್ರದ ಅಭಿಮಾನಿ ದೇವತೆಯಾಗಿದ್ದಾನೆ. ಎಲ್ಲ ಮಂತ್ರಗಳಿಗೂ ಋಷಿಯಾಗಿ ಸಾಧಕ ರಿಂದ ಜಪ ತಪಾದಿಗಳನ್ನು ಒಳಗಿನಿಂದ ಹೊರಗಿನಿಂದ ಮಾಡಿಸುವವನು. ಇಂತಹ ಪವಿತ್ರವನ್ನು ತೋರುಬೆರಳು ಹಾಗೂ ನಡುಬೆರಳ ಸಂಧಿಯಲ್ಲಿ ಬುಡದಲ್ಲಿ ಹಿಡಿದುಕೊಂಡು ಜಪಿಸುವ ಕ್ರಮ ಹೆಚ್ಚಾಗಿ ರೂಢಿಯಲ್ಲಿದೆ. ಇಲ್ಲವೆ ಉಂಗುರಬೆರಳಿಗೆ ಉಂಗುರದಂತೆ ಸಿಕ್ಕಿಸಿಕೊಂಡು ಜಪಾದಿಗಳನ್ನು ನಡೆಸುವರು. ಬೆರಳ ಬುಡದಲ್ಲಿ ಧಾರಣೆ ಸರ್ವಾರ್ಥಸಾಧಕ ಎಂದು **ಸ್ಕಾಂದಪುರಾಣವು** ಫಲವಿಶೇಷವನ್ನು ಹೇಳಿದೆ–

**ಅಗ್ರಪರ್ವಸ್ಥಿತೋ ದರ್ಭಃ ತಪೋವೃದ್ಧಿಕರೋ ಹಿ ಸಃ**

**ಮಧ್ಯೇ ಚೈವ ಪ್ರಜಾಕಾಮಃ ಮೂಲೇ ಸರ್ವಾರ್ಥಸಾಧಕಃ** (ರತ್ನಾವಳೀ)

ಶ್ರಾವಣದ ಅಮಾವಾಸ್ಯೆಯಂದು ದರ್ಭೆಯನ್ನು ಕೊಯ್ದು ಇಟ್ಟುಕೊಂಡರೆ ಅದು ವರ್ಷಪೂರ್ತಿ ಉಪಯೋಗಕ್ಕೆ ಬರುತ್ತದೆ. ಕೊಯ್ಯುವಾಗ **ಹುಂ ಅಸ್ತ್ರಾಯ ಫಟ್** ಎನ್ನುವುದಾಗಿ ಮಂತ್ರವನ್ನು **ಬೃಹತ್**ಬ್ರಹ್ಮ**ಸಂಹಿತೆ** ಪ್ರಯೋಗ ಪಾರಿಜಾತಕ್ಕಿಂತ ಭಿನ್ನವಾಗಿ ಸ್ಪಷ್ಟವಾಗಿ ಪ್ರಮಾಣದೊಡನೆ ಹೇಳಿಕೊಟ್ಟಿದೆ. ಪ್ರಾರ್ಥನೆಯ ಜೊತೆಗೆ ಇತರ ವಿಶೇಷಾಂಶಗಳನ್ನೂ ತಿಳಿಸಿದೆ –

**ಮಾಸೇ ನಭಸ್ಯಮಾಯಾಂ ತು ಕೃತೋ ದರ್ಭೋಚ್ಚಯಸ್ತು ಯಃ**

**ಅಯಾತಯಾಮಃ ಸ ಜ್ಞೇಯೋ ಯಾವದಬ್ಧಂ ಭವೇತ್ ಪುನಃ**

**ಶುಚಿರ್ಭೂತ್ವಾ ಶುಚೌ ದೇಶೇ ಸ್ಥಿತ್ವಾ ಪೂರ್ವೋತ್ತರಾಮುಖಃ**

**ಓಂಕಾರೇಣೈವ ಮಂತ್ರೇಣ ಕುಶಾನ್ ಸ್ಪೃಷ್ಟ್ವಾ ದ್ವಿಜೋತ್ತಮಃ**

**ವಿರಿಂಚಿನಾ ಸಹೋತ್ಪನ್ನ ಪರಮೇಷ್ಠಿನಿಸರ್ಗಜ**

**ದಹಸ್ವ ಸರ್ವಪಾಪಾನಿ ದರ್ಭ ಸ್ವಸ್ತಿಕರೋ ಭವ**



**ಹುಮಸ್ತ್ರಾಯ ಫಡಿತ್ಯುಕ್ತ್ವಾ ಭೂಮೇರ್ದರ್ಭಾನ್ ಸಮುದ್ಧರೇತ್**

ಪ್ರಶಸ್ತವಾದ ದರ್ಭೆಗಳು ಇಲ್ಲದಿದ್ದರೆ ದರ್ಭೆಯಂತಿರುವ ಕಾಶ ಎನಿಸುವ ಹುಲ್ಲಿನಿಂದ ಪವಿತ್ರವನ್ನು ತಯಾರಿಸಬಹುದು. ಅದರಂತೆ ಗರಿಕೆಗಳಿಂದ ಭತ್ತ, ಗೋಧಿ, ನೀವಾರ, ಶ್ಯಾಮಾಕಗಳ ಎಲೆಗಳಿಂದಲೂ ಪವಿತ್ರ ಮಾಡಬಹುದು –

**ಕುಶಾಭಾವೇ ತಥಾ ಕಾಶಾನ್ ದೂರ್ವಾನ್ ವ್ರೀಹೀನ್ ಯವಾನಪಿ**

**ತದಭಾವೇ ತು ನೀವಾರಾನ್ ಶ್ಯಾಮಾಕಾನ್ವಾ ನಿಯೋಜಯೇತ್**

ಏಳು ಬಗೆಯ ದರ್ಭೆಯನ್ನು **ಪದ್ಮಪುರಾಣ** ಪರಿಚಯಿಸಿದೆ –

**ಕುಶಾಃ ಕಾಶಾಸ್ತಥಾ ದೂರ್ವಾ ಯವಪತ್ರಾಣಿ ವ್ರೀಹಯಃ**

**ಬಲ್ವಜಾಃ ಪುಂಡರೀಕಾಶ್ಚ ಕುಶಾಃ ಸಪ್ತ ಪ್ರಕೀರ್ತಿತಾಃ**

ತ್ರಿಮೂರ್ತಿಗಳ ಮತ್ತು ದೇವತೆಗಳೆಲ್ಲರ ಆವಾಸಸ್ಥಾನ ದರ್ಭೆ ಎಂದು **ಪದ್ಮಪುರಾಣ – ಕುಶಮೂಲೇ ಸ್ಥಿತೋ ಬ್ರಹ್ಮಾ ಕುಶಮಧ್ಯೇ ತು ಕೇಶವಃ**

**ಕುಶಾಗ್ರೇ ಶಂಕರೋ ದೇವಃ ಸರ್ವೇ ದೇವಾಃ ಕುಶೇ ಸ್ಥಿತಾಃ**

ದರ್ಭಜಾತಿಗಳಲ್ಲಿ ಕುಶವು ಭಗವಂತನ ವಿಭೂತಿರೂಪಕ್ಕೆ ಹೆಚ್ಚು ಪಾತ್ರವು ಎನ್ನುವುದಾಗಿ ಉದ್ಧವನಿಗೆ ಕೃಷ್ಣನ ಮಾತು – **ಕುಶೋಽಸ್ಮಿ ದರ್ಭಜಾತೀನಾಮ್**

ದರ್ಭೆಯ ಸ್ಥಾನದಲ್ಲಿ ಹರಿನಿರ್ಮಾಲ್ಯ ತುಳಸಿಯೂ ಇರಬೇಕು. ನಿರ್ಮಾಲ್ಯ ಹಿಡಿದುಕೊಂಡೆ ಜಪವನ್ನಾಚರಿಸಬೇಕು. ದರ್ಭೆಯ ಪವಿತ್ರದಂತೆ ಚಿನ್ನದಿಂದಲೂ ಪವಿತ್ರವನ್ನು ತಯಾರಿಸಿಕೊಂಡು ಧರಿಸಬಹುದು. ಚಿನ್ನದ ಪವಿತ್ರ ದರ್ಭೆಗಿಂತ ಶೇಷ್ಠ ಎಂದು **ಹೇಮಾದ್ರಿ** ಹೇಳಿಕೆ ನೀಡಿದೆ–

**ಅನ್ಯಾನ್ಯಪಿ ಪವಿತ್ರಾಣಿ ಕುಶದೂರ್ವಾತ್ಮಕಾನಿ ಚ**

**ಹೇಮಾತ್ಮಕಪವಿತ್ರಸ್ಯ ಕಲಾಂ ನಾರ್ಹಂತಿ ಷೋಡಶೀಮ್**

ದರ್ಭೆಯಲ್ಲಿ ತ್ರಿಮೂರ್ತಿಗಳ ಹಾಗೂ ಇತರ ದೇವತೆಗಳ ಸನ್ನಿಧಾನ ನಿತ್ಯವಿರುವಂತೆ ಚಿನ್ನದಲ್ಲಿಯೂ ಸಕಲದೇವತೆಗಳು ಸನ್ನಿಹಿತರಾಗಿರುವುದರಿಂದ ಚಿನ್ನದ ಪವಿತ್ರವನ್ನು ಪ್ರಶಂಸೆ ಮಾಡಿರುತ್ತಾರೆ. ದರ್ಭೆಯ ಪವಿತ್ರವನ್ನು ಜಪದಲ್ಲಿ ಪ್ರತಿನಿತ್ಯ ಒಂದನ್ನೇ ಉಪಯೋಗಿಸುತ್ತಾ ಬರಬಹುದು. ಬೇರೆ ಮಾಡಬೇಕಾಗಿಲ್ಲ.



ಭೋಜನಾದಿಗಳಿಂದ ಅದು ಅಶುದ್ಧವಾಗದಂತೆ ಜಪಕ್ಕೆ ಮಾತ್ರ ಉಪಯೋಗಿಸಿದ್ದಲ್ಲಿ ಒಬ್ಬನಿಂದ ಅದು ಮತ್ತೆ ಮತ್ತೆ ಧರಿಸಲ್ಪಡಬಹುದು. ಆದರೆ ಬಹಳ ಕಾಲ ಅದು ಗಟ್ಟಿಯಾಗಿ ತುಂಡಾಗದೆ ಇರದು. ಅದಕೆಂದೆ ಚಿನ್ನದ ಪವಿತ್ರವನ್ನು ಆ ಸ್ಥಾನದಲ್ಲಿ ಶಾಸ್ತ್ರಕಾರರು ತಿಳಿಸಿದರು. ಅಷ್ಟೆ ಅಲ್ಲದೆ ಚಿನ್ನದಲ್ಲಿ ಲಕ್ಷ್ಮೀ ನಿತ್ಯಸನ್ನಿಹಿತಳಾಗಿ ಇರಲಾಗಿ, ಚಿನ್ನದಿಂದ ಮಾಡಿದ ಪವಿತ್ರದಲ್ಲಿ ನಾರಾಯಣನ ದಿವ್ಯಸನ್ನಿಧಾನ ವಿಶೇಷವಾಗಿ ಅನುಸಂಧಾನ ಯೋಗ್ಯವೆನಿಸಿದೆ.

ಬೆಳ್ಳಿಯಿಂದ ಮಾಡಿದ ಪವಿತ್ರವನ್ನು ತಂದೆ ಬದುಕಿರುವಾಗ ಧರಿಸಬಾರದೆಂದು ವಿಧಿಸಿರುತ್ತಾರೆ. ಇತರ ಲೋಹಗಳಿಂದ ಪವಿತ್ರನಿರ್ಮಾಣವನ್ನು ಶಾಸ್ತ್ರಕಾರರು ತಿಳಿಸಿಲ್ಲ. ಚಿನ್ನದೊಡನೆ ಬೆಳ್ಳಿ ಮತ್ತು ತಾಮ್ರದ ಮಿಶ್ರಣದಿಂದ ಪವಿತ್ರವನ್ನು ತಯಾರಿಸುವ ಪ್ರಮಾಣಗಳನ್ನು ಛಂದಸ್ಸಿಗೆ ಸಂಬಂಧಿಸಿದಂತೆ ಆಶ್ವಲಾಯನರು ಹೇಳಿದ್ದಾರೆ. ಸಂಹಿತೆಗಳಲ್ಲಿ ಬೇರೆರಡು ಬಗೆಯ ಮಿಶ್ರಲೋಹದ ಪವಿತ್ರ ಉಂಗುರದ ತಯಾರಿಕೆಯನ್ನು ಹೇಳಿದ್ದಾರೆ. (ಆದರೆ ಅದರಂತೆ ಮಿಶ್ರಣಗೊಳಿಸಿ ತಯಾರಿಸುವ ತಾಂತ್ರಿಕತೆ ಇಂದಿನ ಚಿನಿವಾರರಲ್ಲಿಲ್ಲ.) ಮೂರು ಲೋಹದ ಪವಿತ್ರದಲ್ಲಿ ಮೂರು ಬಗೆಯ ಕಾರ್ಯಸಿದ್ಧಿಯಿದೆ –

**ಏವಂ ಲೋಹತ್ರಯೇಣೈವ ಕೃತಂ ರಕ್ಷೋಘ್ನಮುತ್ತಮಮ್**
**ಪಾಪಘ್ನಂ ಚ ಪವಿತ್ರಂ ಸ್ಯಾತ್ ರಕ್ಷಾಕರಮನುತ್ತಮಮ್** (ಆಶ್ವಲಾಯನ)

ಒಬ್ಬನ ದರ್ಭೆಯ ಪವಿತ್ರ ಇನ್ನೊಬ್ಬನಿಗೆ ಉಪಯೋಗಕ್ಕೆ ಬಾರದು –

**ಅನ್ಯೈರ್ಧೃತಂ ನ ಗೃಹ್ಣೀಯಾತ್ ಪವಿತ್ರಂ ತೃಣಸಂಭವಮ್**

ಪವಿತ್ರ ಕೆಳಗೆ ಬಿದ್ದರೆ ಮೂರು ಪ್ರಾಣಾಯಾಮ ಮಾಡಲಿದೆ. ಅಘಮರ್ಷಣ ಸೂಕ್ತದಿಂದ ಪ್ರೋಕ್ಷಣೆ ಮಾಡಿಕೊಳ್ಳಬೇಕು. ಜಪ ಮಾಡುವಾಗ ಅಕ್ಷಮಾಲೆ ಕೆಳಗೆ ಬಿದ್ದರೂ ಇದೇ ಪ್ರಾಯಶ್ಚಿತ್ತ –

**ಪವಿತ್ರೇ ಪತಿತೇ ಹಸ್ತಾತ್ ತಥಾ ಜಪಮಣಾವಪಿ**
**ಪ್ರಾಣಾಯಾಮತ್ರಯಂ ಕುರ್ಯಾತ್ ಸ್ನಾತ್ವಾ ವಿಪ್ರೋಽಘಮರ್ಷಣಮ್**

ಪವಿತ್ರಪಾಣಿಯನ್ನು ಭಗವಂತ ರಕ್ಷಿಸಿ ಆತ ಸಿದ್ಧಿಯನ್ನು ಪಡೆಯುವಂತೆ



ಮಾಡುವನೆಂದು ಶ್ರುತಿಯೆ ಘೋಷಿಸಿದೆ –

**ಪವಿತ್ರವಂತಃ ಪರಿ ವಾಜಮಾಸತೇ ಪಿತೈಷಾಂ ಪ್ರತ್ನೋ ಅಭಿ ರಕ್ಷತಿ ವ್ರತಮ್**

ಪವಿತ್ರಧಾರಣೆಗೆ ಮಂತ್ರ ಪುಂಡರೀಕಾಕ್ಷನ ಸ್ಮರಣೆಯೆ ಆಗಿದೆ. ಪ್ರಾಚ್ಯಕಾರಿಕೆಯೊಂದು ಇಲ್ಲಿ ಸಂವಾದಿಯಾಗಿದೆ –

**ಅಪವಿತ್ರಃ ಪವಿತ್ರೋ ವೇತ್ಯಸ್ಯ ವಾಮದೇವ ಋಷಿಃ**

**ಅನುಷ್ಟುಪ್ ಛಂದಃ, ವಿಷ್ಣುರ್ದೇವತಾ, ಪವಿತ್ರಕರಣೇ ವಿನಿಯೋಗಃ**

**ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂಗತೋಽಪಿ ವಾ**

**ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ** (ಬ್ರಹ್ಮವೈವರ್ತ)

**ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂಗತೋಽಪಿ ವಾ**

**ಸಂಸ್ಮರೇತ್ ಪುಂಡರೀಕಾಕ್ಷಂ ಸದ್ಯಃ ಶುದ್ಧಿಮವಾಪ್ನುಯಾತ್** (ಬೃಹತ್‌ಬ್ರಹ್ಮಸಂಹಿತಾ)

ಹೃದಯ ಕಮಲ (ಪುಂಡರೀಕ)ದಲ್ಲಿ ವ್ಯಾಪಿಸಿದ್ದು ಎಲ್ಲ ಇಂದ್ರಿಯವೃತ್ತಿಗಳನ್ನು ನಿಯಮಿಸುವ ಭಗವಂತನ ಚಿಂತನೆ ಮತ್ತೆ ಮತ್ತೆ ಪಾವಿತ್ರ್ಯವನ್ನು ತಂದುಕೊಡುವುದು. ಒಳಗೂ ಹೊರಗೂ ಆತ ಮಡಿಯಾಗುವನು– ದೇವರ ನಾಮಚಿಂತನೆ ಇದ್ದಾಗ. ನಾರಾಯಣ ಸ್ಮರಣೆ ಇಲ್ಲದಿರೆ ಆತ ಧರ್ಮಕರ್ಮಕ್ಕೆ ಅಯೋಗ್ಯನು. ಹಾಗಾಗಿ ಕರ್ಮದ ಆರಂಭದಲ್ಲಿ ಮಾತ್ರವಲ್ಲ, ಎಲ್ಲೆಡೆಯೂ ದೇವರ ನೆನಪು ಸದಾ ಜಾಗೃತವಾಗಿರಬೇಕು –

**ಅನರ್ಹಃ ಕೃತಶೌಚೋಽಪಿ ವಿನಾ ನಾರಾಯಣಸ್ಮೃತಿಮ್**

**ತಸ್ಮಾತ್ಸರ್ವತ್ರ ಸಂಯೋಜ್ಯಂ ಭಗವತ್ಸ್ಮರಣಂ ತಥಾ** (ಬೃಹತ್‌ಬ್ರಹ್ಮಸಂಹಿತಾ)

ಶ್ರೀಕೃಷ್ಣನು ಧರ್ಮರಾಜನಿಗೆ ಪಂಚವಿಧದ ಶೌಚವನ್ನು ತಿಳಿಸುತ್ತಾನೆ. ಮಾನಸಶೌಚವನ್ನೇ ಶ್ರೇಷ್ಠವೆನ್ನುವುದಾಗಿ **ಮಹಾಭಾರತ** ಗುರುತಿಸಿದೆ –

**ಮನಃಶೌಚಂ ಕರ್ಮಶೌಚಂ ಕುಲಶೌಚಂ ಚ ಭಾರತ**

**ಶರೀರಶೌಚಂ ವಾಕ್‌ಶೌಚಂ ಶೌಚಂ ಪಂಚವಿಧಂ ಸ್ಮೃತಮ್**

**ಪಂಚಸ್ವೇತೇಷು ಶೌಚೇಷು ಹೃದಿ ಶೌಚಂ ವಿಶಿಷ್ಯತೇ**

**ಹೃದಯಸ್ಯ ಚ ಶೌಚೇನ ಸ್ವರ್ಗಂ ಗಚ್ಛಂತಿ ಮಾನವಾಃ**

# ಪ್ರಾಣಾಯಾಮ

ಭಾಗವತವು ಸಾಧನೆಯ ಪ್ರಕರಣದಲ್ಲಿ ಪ್ರಾಣಾಯಾಮಕ್ಕೆ ಹೆಚ್ಚು ಬಲವಿದೆ ಎಂದು ತಿಳಿಸಿದೆ – **ಪ್ರಾಣಾಯಾಮಃ ಪರಂ ಬಲಮ್**

ತನ್ನ ಮೇಲಿನ ಪೂರ್ಣವಾದ ನೆನಪಿನಲ್ಲಿ ಪ್ರಾಣಾಯಾಮಗಳನ್ನು ನಡೆಸುವಂತೆ ಶ್ರೀಕೃಷ್ಣನು **ಮಹಾಭಾರತ**ದಲ್ಲಿ ಆದೇಶಿಸಿರುತ್ತಾನೆ.

**ದರ್ಭೇಷು ದರ್ಭಪಾಣಿಃ ಸನ್ ಪ್ರಾಙ್ಮುಖಃ ಸುಸಮಾಹಿತಃ**

**ಪ್ರಾಣಾಯಾಮಾಂಸ್ತತಃ ಕುರ್ಯಾತ್ ಮದ್ಗತೇನಾಂತರಾತ್ಮನಾ**

**ಮನುಸ್ಮೃತಿ**ಯಲ್ಲಿ ಪ್ರಾಣಾಯಾಮವನ್ನು ವಿಧ್ಯುಕ್ತವಾಗಿ ಆಚರಿಸಿದ್ದಲ್ಲಿ ತಪಗೈದಂತೆ ಎನ್ನಲಾಗಿದೆ –

**ಪ್ರಾಣಾಯಾಮಾಃ ಬ್ರಾಹ್ಮಣಸ್ಯ ತ್ರಯೋಽಪಿ ವಿಧಿವತ್ಕೃತಾಃ**

**ವ್ಯಾಹೃತಿಪ್ರಣವೈರ್ಯುಕ್ತಾಃ ವಿಜ್ಞೇಯಂ ಪರಮಂ ತಪಃ**

ಪೂಜೆ, ಜಪ, ಹೋಮ, ಶ್ರಾದ್ಧ, ಸ್ನಾನ, ದಾನ, ಧ್ಯಾನಗಳಲ್ಲಿ ಮೂರು ಬಾರಿ ಪ್ರಾಣಾಯಾಮ ನಡೆಸಲು **ವ್ಯಾಸರು** ಹೇಳಿರುತ್ತಾರೆ –

**ನಿತ್ಯದೇವಾರ್ಚನೇ ಹೋಮೇ ಸಂಧ್ಯಾಯಾಂ ಶ್ರಾದ್ಧಕರ್ಮಣಿ**

**ಸ್ನಾನೇ ದಾನೇ ತಥಾ ಧ್ಯಾನೇ ಪ್ರಾಣಾಯಾಮಾಸ್ತ್ರಯಃ ಸ್ಮೃತಾಃ**

ಜಪಪೂಜೆಗಳ ನಡುವೆ ಯಾರೊಡನೆಯೂ ಮಾತುಕತೆ ನಡೆಸಿದಲ್ಲಿ ನಡುವೆ ಒಂದಾವರ್ತಿ ಪ್ರಾಣಾಯಾಮವನ್ನು ಪ್ರಾಯಶ್ಚಿತ್ತವನ್ನಾಗಿ ಆಚರಿಸಲು **ತಂತ್ರಸಾರವು** ತಿಳಿಸಿದೆ –

**ಪ್ರೋಕ್ತೇ ಪಾರವಶೇ ಶಬ್ದೇ ಪ್ರಾಣಾಯಾಮಂ ಸಕೃಚ್ಚರೇತ್**

ಪ್ರಾಣಾಯಾಮ ಮಾಡದೆ ಜಪಾದಿಗಳ ಆಚರಣೆ ಫಲದಾಯಕವಲ್ಲ ಎಂದು **ಅಗಸ್ತ್ಯರು** ತಿಳಿಸಿದ್ದಾರೆ –

**ಪ್ರಾಣಾಯಾಮೈರ್ವಿನಾ ಯದ್ಯತ್ ಕೃತಂ ಕರ್ಮ ನಿರರ್ಥಕಮ್**

**ಅತೋ ಯತ್ನೇನ ಕರ್ತವ್ಯಃ ಪ್ರಾಣಾಯಾಮಃ ಶುಭಾರ್ಥಿನಾ**



ಪ್ರಾಣಾಯಾಮದಿಂದ ಆಂತರದೋಷನಿವೃತ್ತಿಯನ್ನು ಅತ್ರಿಗಳು ಹೇಳಿದ್ದಾರೆ –

**ತ್ವಕ್‌ಚರ್ಮಮಾಂಸರುಧಿರಮೇದೋಮಜ್ಜಾಸ್ಥಿಭಿಃ ಕೃತಾಃ**
**ತಥೇಂದ್ರಿಯಕೃತಾ ದೋಷಾ ದಹ್ಯಂತೇ ಪ್ರಾಣನಿಗ್ರಹಾತ್**

ಮಂತ್ರಮಯವಾದ ಒಳಗೆ ತಡೆಹಿಡಿಯಲ್ಪಟ್ಟ ಗಾಳಿಯು ಮಂತ್ರದೇವತೆಗಳ ಪ್ರಭಾವದಿಂದ ದೇಹದೊಳಗೆ ದೋಷಗಳನ್ನು ನಿವಾರಿಸುತ್ತದೆ.

ಮನುಸ್ಮೃತಿಯಲ್ಲಿ ಧಾತುಶುದ್ಧಿಯ ಉದಾಹರಣೆಯೊಂದಿಗೆ ಪ್ರಾಣಾಯಾಮದ ಕೆಲಸವನ್ನು ಸಾರಲಾಗಿದೆ –

**ದಹ್ಯಂತೇ ಧ್ಮಾಯಮಾನಾನಾಂ ಧಾತೂನಾಂ ಹಿ ಯಥಾ ಮಲಾಃ**
**ತಥೇಂದ್ರಿಯಾಣಾಂ ದಹ್ಯಂತೇ ದೋಷಾಃ ಪ್ರಾಣಸ್ಯ ನಿಗ್ರಹಾತ್**

ಅಶುದ್ಧಿ ಹೋದ ಬಳಿಕ ಜ್ಞಾನೋದಯವನ್ನು **ಯೋಗಸೂತ್ರ** ಹೇಳಿದೆ –

**ಪ್ರಾಣಾಯಾಮಾತ್ ಅಶುದ್ಧಿಕ್ಷಯೇ ಜ್ಞಾನದೀಪ್ತಿಃ ಆವಿವೇಕಖ್ಯಾತೇಃ**

ಬಾಹ್ಯದೋಷಗಳೂ ಪ್ರಾಣಾಯಾಮದಿಂದ ನಿವೃತ್ತಗಳಾಗುವುದನ್ನೂ ಸ್ಮೃತಿ ಸಾರಿದೆ–

**ತಾನ್ ಪ್ರತಿಗ್ರಹಜಾನ್ ದೋಷಾನ್ ಪ್ರಾಣಾಯಾಮೈರ್ದ್ವಿಜೋತ್ತಮಾಃ**
**ಉತ್ಸಾದಯಂತಿ ವಿದ್ವಾಂಸೋ ವಾಯುರ್ಮೇಘಾನಿವಾಂಬರೇ**

ಶುಭ್ರ ಆಕಾಶವನ್ನು ಮುತ್ತಿಕೊಳ್ಳುವ ಮೋಡಗಳು ದಟ್ಟ ಕತ್ತಲೆಯನ್ನುಂಟು ಮಾಡುವಾಗ ಬೀಸುಗಾಳಿ ಅವನ್ನೆಲ್ಲ ಮತ್ತೆ ಓಡಿಸಿ ತಿಳಿ ಆಗಸವನ್ನು ಕಾಣಿಸುವಂತೆ ಎಲ್ಲೆಲ್ಲಿಂದ ಏನೇನನ್ನೋ ಪಡೆದು ಬಂದು ಬದುಕುವ ಮಂದಿ ಅದರಲ್ಲಿಯ ಬಹುಬಗೆಯ ದೋಷಗಳಿಗೆ ಪಾತ್ರರಾದಾಗ ಆ ಎಲ್ಲ ದೋಷನಿವೃತ್ತಿಗೆ ತಿಳಿದು ಪ್ರಾಣಾಯಾಮವನ್ನು ಮೂರು ಬಾರಿ ನಡೆಸಿದರಾಯಿತು. **ಭಾಗವತದ** ಮಾತೂ ಇದಕ್ಕೆ ಸಂವಾದಿಯಾಗಿದೆ – **ಪ್ರಾಣಾಯಾಮೈರ್ದಹೇದ್ದೋಷಾನ್.**

ಸರ್ವಪಾಪ ಪರಿಹಾರಕ್ಕೆ ನೂರು ಬಾರಿ ಪ್ರಾಣಾಯಾಮ ಮಾಡಲು **ಯಾಜ್ಞವಲ್ಕ್ಯಸ್ಮೃತಿಯು** ಹೇಳಿದೆ –



**ಪ್ರಾಣಾಯಾಮಶತಂ ಕಾರ್ಯಂ ಸರ್ವಪಾಪಾಪನುತ್ತಯೇ**

**ಉಪಪಾತಕಜಾತೀನಾಂ ಅನಾದಿಷ್ಟಸ್ಯ ಚೈವ ಹಿ**

ಗೋವಧೆಯೆ ಮೊದಲಾದ ಐವತ್ತು ಉಪಪಾತಕಗಳಿವೆ. ಅವುಗಳಲ್ಲಿ ವಿಶೇಷವಾಗಿ ಪ್ರಾಯಶ್ಚಿತ್ತ ಹೇಳದ ಉಪಪಾತಕಗಳಿಗೆ ಪ್ರಾಣಾಯಾಮವೆ ಪ್ರಾಯಶ್ಚಿತ್ತವೆನಿಸಿದೆ. ಪಾತಕ ಪರಿಹಾರಕ್ಕೆ ಪ್ರಾಣಾಯಾಮವನ್ನು **ವಸಿಷ್ಠಸಂಹಿತಾ** ಹೇಳಿದೆ – **ಆಸನೇನ ರುಜೋ ಹಂತಿ ಪ್ರಾಣಾಯಾಮೇನ ಪಾತಕಮ್**

ಪ್ರಾಯಶ್ಚಿತ್ತ ಪ್ರಾಣಾಯಾಮವು ಮಂತ್ರಧ್ಯಾನಸಹಿತವಾದದ್ದು. ದೇಹಶುದ್ಧಿಗೆ ಕಾರಣವಾದ ಅಮಂತ್ರಕವಾದ ಪ್ರಾಣಾಯಾಮವು ಮಾಂತ್ರಿಕಪ್ರಾಣಾಯಾಮಕ್ಕಿಂತ ಕಡಿಮೆಯಾದದ್ದೆಂದು **ಸಚ್ಚರಿತ್ರಸುಧಾನಿಧಿ** ತಿಳಿಸಿದೆ– **ಪ್ರಾಣಾಯಾಮೋ ಧ್ಯಾನಹೀನಾತ್ ಉತ್ಕೃಷ್ಟೋ ಧ್ಯಾನಸಂಯುತಃ**

ಮಂತ್ರದೊಡನೆ ಪ್ರಾಣಾಯಾಮ ಮಾಡಿದರೆ ಅದು ಸಗರ್ಭ ಪ್ರಾಣಾಯಾಮವೆನಿಸುವುದು. ಕೇವಲ ಗಾಳಿಯ ಬಿಗಿತಕ್ಕೆ ಅಗರ್ಭ ಪ್ರಾಣಾಯಾಮವೆಂದು ಹೆಸರು. ಸಗರ್ಭಪ್ರಾಣಾಯಾಮವು ಮುಖ್ಯ –

**ಅಗರ್ಭಶ್ಚ ಸಗರ್ಭಶ್ಚ ಪ್ರಾಣಾಯಾಮೋ ದ್ವಿಧಾ ಮತಃ**

**ಅಗರ್ಭೋ ಧ್ಯಾನಹೀನಸ್ತು ಸಗರ್ಭೋ ಧ್ಯಾನಸಂಯುತಃ**

**ಅಗರ್ಭಾತ್ ಕೋಟಿಗುಣಿತೋ ಪ್ರಾಣಾಯಾಮಃ ಸಗರ್ಭಕಃ** (ವಾಯುಪುರಾಣ)

ಬಲಮೂಗಿನಿಂದ ಗಾಳಿಯನ್ನು ಹೊರಗೆ ಬಿಡಬೇಕು. ಮೂಗಿನ ಎಡಹೊರಳೆಯಿಂದ ಗಾಳಿಯನ್ನು ಒಳಗೆ ಎಳೆದುಕೊಳ್ಳಬೇಕು. ದೇಹದೊಳಗೆ ಗಾಳಿಯನ್ನು ಬಂಧಿಸಿಡಬೇಕು. ಇದು ಪ್ರಾಣಾಯಾಮ –

**ದಕ್ಷಿಣೇ ರೇಚನಂ ಕುರ್ಯಾತ್ ವಾಮೇನಾಪೂರಿತೋತ್ತರಮ್**

**ಕುಂಭಕೇನ ಜಪಂ ಕುರ್ಯಾತ್ ಪ್ರಾಣಾಯಾಮಸ್ಯ ಲಕ್ಷಣಮ್** (ವ್ಯಾಸ)

ಪ್ರಾಣಾಯಾಮದ ತಾಂತ್ರಿಕ ಪ್ರಕ್ರಿಯೆಯಲ್ಲಿನ ಒಳಬಗೆಯನ್ನು ದೇಹ ಮತ್ತು ಜೀವನಲ್ಲಿ ಆಗುವ ವ್ಯತ್ಯಾಸವನ್ನು **ಯೋಗದೀಪಿಕಾದಲ್ಲಿ** ನಾರಾಯಣ ಪಂಡಿತರು ವಿವರಿಸಿದ್ದಾರೆ. ನೃಸಿಂಹಾಗ್ನಿಯ ಜ್ವಾಲೆಯಿಂದ ಪರಿಶುದ್ಧಿಯನ್ನು



ತಿಳಿಸುವ ಮೂಲಕ ಪ್ರಾಣನ ಅಂದರೆ ಗಾಳಿಯ ಒತ್ತಡವನ್ನು ತಿಳಿಸಿದ್ದಾರೆ. ಇಲ್ಲಿ ಸೋಮಮಂಡಲದ ಅಮೃತಸಿಂಚನೆಯೊಂದು ವಿಶೇಷ ಸಂಗತಿ –

ಪೂರಕಾಸ್ಫಾಲನೋದ್ಬುದ್ಧಮೂಲಶಕ್ತ್ಯಾ ಮುಖೋದ್ಗಲನ್
ಆಸ್ಫಾಲಯತಿ ಪಾಪ್ಮಾನಂ ವಾಯುಃ ಕೌಂಭಕಸಂಯುತಃ
ಸ ಸಂಶುಧ್ಯತಿ ತದ್ಯೋಗಾತ್ ತತ್ರತತ್ರ ಪರಿಭ್ರಮನ್
ಜೀವಃ ಸರ್ವಶರೀರಾಂತಂ ಸ್ಥೂಲಸೂಕ್ಷ್ಮಶರೀರವಾನ್
ವಹ್ನಿನಾ ಪವನಾಯಾಮ್ಯೈಃ ವಾಯ್ವಾಸ್ಫಾಲಪ್ರಸಾರಿಭಿಃ
ಹೃದಬ್ಜಸ್ಥನೃಸಿಂಹಾಗ್ನಿಜ್ವಾಲೈಃ ಪಾಪ್ಮಾ ಸ ದಹ್ಯತೇ
ವಾಯುನಾ ಸಾನುಬಂಧೇಽಸ್ಮಿನ್ ಭಸ್ಮರೂಪೇಣ ರೇಚಿತೇ
ಸ್ವರ್ಣವನ್ನಿರ್ಮಲೌ ಸ್ಯಾತೌ ಅದೂನೌ ದೇಹದೇಹಿನೌ
ಸ್ವಿನ್ನಾದಿಂದೋಃ ಕಪದ್ಮಸ್ಥಾತ್ ಸುಧಾ ವಾತಾಯತೇ ಹೃದಿ
ಸಂಸ್ರುತಾಽಪ್ಲಾವಯತ್ಯೇನಂ ಅಂತಃ ಸರ್ವಶರೀರಗಮ್

ಬೋಧಾಯನಧರ್ಮಸೂತ್ರದಲ್ಲಿ ಇದರ ಸೂಚನೆ ಇದೆ –

ಆವರ್ತಯೇತ್ಸದಾ ಯುಕ್ತಃ ಪ್ರಾಣಾಯಾಮಂ ಪುನಃಪುನಃ
ಆಕೇಶಾಂತಾನ್ನಖಾಗ್ರಾಚ್ಚ ತಪಸ್ತಪ್ಯತ ಉತ್ತಮಮ್
ನಿರೋಧಾಜ್ಜಾಯತೇ ವಾಯುಃ ವಾಯೋರಗ್ನಿಶ್ಚ ಜಾಯತೇ
ತಾಪೇನಾಪೋಽಭಿಜಾಯಂತೇ ತತೋಂತಃ ಶುಧ್ಯತೇ ತ್ರಿಭಿಃ

ಅಗ್ನಿಪುರಾಣವು ತ್ರಿವೃತ್ಕರಣವನ್ನು ತಿಳಿಸಿದೆ –

ಪ್ರಾಣರೋಧಾತ್ತು ವಾಯುಃ ಸ್ಯಾತ್ ವಾಯೋರಗ್ನಿಶ್ಚ ಜಾಯತೇ
ಅಗ್ನೇರಾಪಸ್ತತಃ ಶುದ್ಧಿಃ.....

ಪ್ರಾಣಾಯಾಮದ ವಿಶೇಷಾಂಶಗಳನ್ನು ಹೇಳಹೊರಟ ಅಗ್ನಿಪುರಾಣವು ಇಂದ್ರಿಯಗಳ ಹತೋಟಿಗಾಗಿ ಮಾಡಿದ ಪ್ರಾಣಾಯಾಮದಲ್ಲಿ ಮಂತ್ರ ಸೇರಿ ಕೊಂಡಲ್ಲಿ ಜ್ಞಾನವೈರಾಗ್ಯಗಳ ಸಂಪಾದನೆಯಿಂದ ಎಲ್ಲದರ ಗೆಲುವನ್ನು ಹೇಳಿದೆ. ಯೋಗಸೂತ್ರಕಾರರು ಪ್ರಾಣಾಯಾಮದ ಹಿರಿತನವನ್ನು ಈ ಪುರಾಣದ



ಅಂಶಗಳಿಂದಲೇ ಸೂಚಿಸಿದ್ದಾರೆ –

**ಇಂದ್ರಿಯಾಣಾಂ ಜಯಾರ್ಥಾಯ ಸಗರ್ಭಂ ಧಾರಯೇತ್ ಪರಮ್**

**ಜ್ಞಾನವೈರಾಗ್ಯಯುಕ್ತಾಭ್ಯಾಂ ಪ್ರಾಣಾಯಾಮವಶೇನ ಚ**

**ಇಂದ್ರಿಯಾಣಿ ವಿನಿರ್ಜ್ಜಿತ್ಯ ಸರ್ವಮೇವ ಜಿತಂ ಭವೇತ್**

ಪ್ರಾಣಾಯಾಮವು ಚಾಟಿಯಂತೆ ಸಾರಥಿಯಾದ ಮನಸ್ಸಿನ ಕೈಯಲ್ಲಿರುವ ಸೊತ್ತು. ಶರೀರರಥಕ್ಕೆ ಕಟ್ಟಿದ ಇಂದ್ರಿಯ ಕುದುರೆಗಳ ಪಳಗಿಸುವಲ್ಲಿ ಸಾರ್ಥಕವೆಂದು **ಅಗ್ನಿಪುರಾಣ**ದ ಆಶಯ. ಇಲ್ಲಿ ವ್ಯಾಸರ ರೂಪಕಮಾಲೆ ಪ್ರತ್ಯಕ್ಷ–

**ಶರೀರಂ ರಥಮಿತ್ಯಾಹುಃ ಇಂದ್ರಿಯಾಣ್ಯಸ್ಯ ವಾಜಿನಃ**

**ಮನಶ್ಚ ಸಾರಥಿಃ ಪ್ರೋಕ್ತಃ ಪ್ರಾಣಾಯಾಮಃ ಕಶಃ ಸ್ಮೃತಃ**

ಪ್ರಾಣಾಯಾಮವು ಏಕಾಗ್ರತೆಯನ್ನು ತರುವಲ್ಲಿ ಹುಚ್ಚು ಮನಸ್ಸನ್ನು ಸೆರೆಹಿಡಿವಲ್ಲಿ ಕೆಲಸ ಮಾಡಿದೆ. ಇದು ಅದಕ್ಕೆ ಕಟ್ಟಿದ ಹಗ್ಗಗಳೆರಡರಿಂದ ಸಾಧ್ಯವಾದದ್ದು. ದೇವರ ಮೇಲಿನ ಎಚ್ಚರ ಮತ್ತು ಪ್ರಪಂಚದ ಮೇಲಿನ ನಿದ್ದೆ ಎಂದು **ಅಗ್ನಿಪುರಾಣ**ದ ಆಶಯ –

**ಜ್ಞಾನವೈರಾಗ್ಯರಶ್ಮಿಭ್ಯಾಂ ಮಾಯಯಾ ವಿಧೃತಂ ಮನಃ**

**ಶನೈರ್ನಿಶ್ಚಲತಾಮೇತಿ ಪ್ರಾಣಾಯಾಮೈಕಸಂಹಿತಾ**

ವಿಶೇಷವಾಗಿ ಪ್ರಾಣಾಯಾಮದ ಅನುಗ್ರಹವು ಆರೋಗ್ಯವೆಂದು **ಅಗ್ನಿಪುರಾಣ**ವು ತಿಳಿಸಿದೆ. ಜೊತೆಗೆ ಯೋಗಸಂಬಂಧಿ ಎನಿಸಿದ ಲಾಘವ ಉತ್ಸಾಹ ಗಾಂಭೀರ್ಯ ಕಾಂತಿ ಶಕ್ತಿ ಮುಂತಾದ ಗುಣಗಳೆಲ್ಲ ಸಿಗುವಂತೆಯೂ ಹೇಳಿದೆ. ಮುಖ್ಯವಾಗಿ ಎಲ್ಲ ತೊಂದರೆಗಳ ನಿವೃತ್ತಿ ಪ್ರಾಣಾಯಾಮದ ಗುರಿ –

**ಆರೋಗ್ಯಂ ಶೀಘ್ರಗಾಮಿತ್ವಂ ಉತ್ಸಾಹಃ ಸ್ವರಸೌಷ್ಠವಮ್**

**ಬಲವರ್ಣ್ಣಪ್ರಸಾದಶ್ಚ ಸರ್ವದೋಷಕ್ಷಯಃ ಫಲಮ್**

**ಅಗ್ನಿಪುರಾಣ**ವು ಪ್ರಾಣಾಯಾಮವೆಂದರೆ ತನ್ನ ದೇಹದೊಳಗಿನ ಗಾಳಿಯನ್ನು ಬಿಗಿ ಹಿಡಿಯುವುದೆಂದೆ ಹೇಳಿದೆ –

**ಪ್ರಾಣಃ ಸ್ವದೇಹಜೋ ವಾಯುಃ ತಸ್ಯಾಯಾಮೋ ನಿರೋಧನಮ್**



ಪ್ರಾಣಾಯಾಮದಲ್ಲಿಯ ಗಾಳಿಯ ಬಂಧನದಲ್ಲಿ ಒಳ–ಹೊರ ಭೇದ ವನ್ನು **ಸೌರಪುರಾಣ** ಸೂಚಿಸಿದೆ. ಇದನ್ನು ಬಾಹ್ಯಕುಂಭಕ–ಆಂತರಿಕಕುಂಭಕ ಎಂದು ಕರೆವರು –

**ಅಂತಶ್ಚರಾಣಾಂ ವಾಯೂನಾಂ ಬಾಹ್ಯಾಭ್ಯಂತರರೋಧನಮ್**

**ಪ್ರಾಣಾಯಾಮ ಇತಿ ಪ್ರೋಕ್ತೋ ದ್ವಿವಿಧಃ ಸ ಚ ಕಥ್ಯತೇ**

ಸಾಮಾನ್ಯವಾಗಿ ಜಪಾದಿಗಳಲ್ಲಿ ಆಂತರಕುಂಭಕವನ್ನೆ ಹೇಳಿರುತ್ತಾರೆ.

ಬಲಗಡೆಯ ಪಿಂಗಳಾನಾಡಿಯಿಂದ ಗಾಳಿಯನ್ನು ಹೊರಗೆ ಹಾಕಿ (ರೇಚಕ) ಮೂಗಿನ ಎಡ ಹೊರಳೆಯಿಂದ ಇಡಾನಾಡಿಯಿಂದ ಗಾಳಿಯನ್ನು ಒಳಗೆಳೆದು (ಪೂರಕ) ಮಧ್ಯನಾಡಿ ಸುಷುಮ್ನಾದಲ್ಲಿ ಗಾಳಿಯನ್ನು ಹಿಡಿದು ಕೊಳ್ಳುವುದು (ಕುಂಭಕ) ಪ್ರಾಣಾಯಾಮ. ರೇಚಕ 16 ಮಾತ್ರಾಕಾಲದಲ್ಲಿ, ಪೂರಕ 32 ಮಾತ್ರಾಕಾಲದಲ್ಲಿ, ಕುಂಭಕ 64 ಮಾತ್ರಕಾಲದಲ್ಲಿ ಆಗಬೇಕೆಂದು **ಗೌತಮೀತಂತ್ರ** ಹೇಳಿದೆ–

**ರೇಚಯೇದ್ದಕ್ಷಿಣೇ ವಿದ್ವಾನ್ ಮಾತ್ರಾಷೋಡಶಕೇನ ಚ**

**ದ್ವಾತ್ರಿಂಶನ್ಮಾತ್ರಯಾಽಽಪೂರ್ಯ ಚತುಃಷಷ್ಟ್ಯಾ ಚ ಧಾರಯೇತ್**

**ಮಂಡಲಬ್ರಾಹ್ಮಣೋಪನಿಷತ್ತಿನಲ್ಲಿ** ಇದು ಬಂದಿದೆ –

**ಪೂರಕಕುಂಭಕರೇಚಕೈಃ ಷೋಡಶಚತುಷ್ಷಷ್ಟಿದ್ವಾತ್ರಿಂಶತ್ಸಂಖ್ಯಯಾ**

**ಯಥಾಕ್ರಮಂ ಪ್ರಾಣಾಯಾಮಃ**

**ಸ್ಮೃತ್ಯರ್ಥಸಾಗರದಲ್ಲಿ** ಪ್ರಾಣಾಯಾಮದ ಕ್ರಮದೊಡನೆ ಮಾತ್ರಾಕಾಲದ ಬಗ್ಗೆ ಮಾಹಿತಿ ಬಂದಿದೆ. ಕಿರುಬೆರಳು ಮತ್ತು ಉಂಗುರಬೆರಳಿನಿಂದ ಮೂಗಿನ ಎಡಹೊರಳೆಯನ್ನು ಒತ್ತಿ ಮುಚ್ಚಿ ಹಿಡಿದು, ಬಲಹೊರಳೆಯಿಂದ ಗಾಳಿಯನ್ನು ಹೊರಗೆ ಬಿಡಬೇಕು (ರೇಚನ). ಮತ್ತೆ ಹೆಬ್ಬೆರಳಿನಿಂದ ಮೂಗಿನ ಬಲಹೊರಳೆಯನ್ನು ಒತ್ತಿ ಮುಚ್ಚಿ ಹಿಡಿದು, ಎಡ ಹೊರಳೆಯಿಂದ ಗಾಳಿಯನ್ನು ಒಳಗೆ ಎಳೆದುಕೊಳ್ಳಬೇಕು (ಪೂರಣ). ಮತ್ತೆ ಮೂಗನ್ನು ಪೂರ್ತಿ ಮುಚ್ಚಿಕೊಂಡು ಹೊಟ್ಟೆಯಲ್ಲಿ ಗಾಳಿಯ ಬಂಧನ (ಕುಂಭಕ) –



**ಕನಿಷ್ಠಾನಾಮಿಕಾಭ್ಯಾಂ ಚ ಗೃಹೀತ್ವಾ ವಾಮಭಾಗತಃ**

**ಹ್ರಸ್ವೋಚ್ಚಾರಣಕಾಲಾಖ್ಯಾ ಮಾತ್ರಾಃ ಷೋಡಶ ರೇಚನೇ**

**ದ್ವಾತ್ರಿಂಶತ್ಪೂರಣೇ ಪ್ರೋಕ್ತಾಃ ಚತುಃಷಷ್ಟಿಸ್ತು ಕುಂಭಕೇ**

**ದಕ್ಷನಾಸಾಪುಟೇನೈವ ಪೂರ್ವಂ ವಾಯುಂ ವಿರೇಚಯೇತ್**

**ಅಂಗುಷ್ಠೇನ ಪುಟಂ ಬದ್ಧ್ವಾ ನಾಸಾಯಾಂ ದಕ್ಷಿಣಂ ಪುನಃ**

**ವಾಮಭಾಗೇನ ಸಂಪೂರ್ಯ ಧಾರಯೇತ್ಪೂರ್ಣ್ಣಕುಂಭವತ್**

ಒಂದು ಹ್ರಸ್ವ ಅಕ್ಷರ ಉಚ್ಚಾರಣೆಯ ಕಾಲವನ್ನು ಒಂದು ಮಾತ್ರಾಕಾಲ ಎಂದು ಆಚಾರ್ಯಮಧ್ವರು **ತಂತ್ರಸಾರಸಂಗ್ರಹ**ದಲ್ಲಿ ತಿಳಿಸಿದ್ದಾರೆ –

**ಮಾತ್ರಾಣಾಂ ಹ್ರಸ್ವವರ್ಣಸ್ಯ ಕಾಲೋ ಮಾತ್ರೇತಿ ಶಬ್ದ್ಯತೇ**

**ವರ್ಣರತ್ನಪ್ರದೀಪಿಕಾಶಿಕ್ಷೆ**ಯಲ್ಲಿ –

**ಏಕಮಾತ್ರೋ ಭವೇದ್ಧ್ರಸ್ವೋ ದ್ವಿಮಾತ್ರೋ ದೀರ್ಘ ಉಚ್ಯತೇ**

**ತ್ರಿಮಾತ್ರಸ್ತು ಪ್ಲುತೋ ಜ್ಞೇಯೋ ವ್ಯಂಜನಂ ಚಾರ್ಧಮಾತ್ರಕಮ್**

**ತದರ್ಧಮಣು ತಸ್ಯಾರ್ಧಂ ಪರಮಾಣ್ವಭಿಧೀಯತೇ**

ಮಧ್ವಾಚಾರ್ಯರು 36 ಪ್ರಣವದಿಂದ ಪ್ರಾಣಾಯಾಮವನ್ನು ಹೇಳಿರುತ್ತಾರೆ –

**ತಾರತ್ರಿದ್ವಾದಶಾವರ್ತ್ಯೈಃ** (ತಂತ್ರಸಾರಸಂಗ್ರಹ)

ಓಂಕಾರವನ್ನು ದೀರ್ಘಾಕ್ಷರವೆಂದು ಪರಿಗಣಿಸಿ ಎರಡು ಮಾತ್ರಾಕಾಲದಲ್ಲಿ ಪಠಿಸಿದಾಗ 72 ಮಾತ್ರಾಕಾಲವಾಗಿ ಹಿಂದೆ ಹೇಳಿದಂತೆ ಕುಂಭಕವು ಸುಮಾರಾಗಿ ಸರಿಹೋಗುವುದು. ಅಭ್ಯಾಸ ಮಾಡುತ್ತಾ ಓಂಕಾರವನ್ನು ಎರಡಕ್ಕಿಂತ ಹೆಚ್ಚು ಮಾತ್ರಾಕಾಲದಲ್ಲಿ ಹೇಳುವ ಮೂಲಕ ಕುಂಭಕವನ್ನು ಹೆಚ್ಚು ಹೊತ್ತು ಮಾಡಬಹುದು. ಅಷ್ಟಮಾತ್ರಾ ಕಾಲದಲ್ಲಿ ಅಷ್ಟಾಕ್ಷರವೆನಿಸಿದ ಓಂಕಾರವನ್ನು ಪಠಿಸಿದಲ್ಲಿ ಒಟ್ಟು 288 (36X8) ಮಾತ್ರಾಕಾಲ ಪ್ರಾಣಾಯಾಮ ನಡೆಸಿದಂತಾಗುವುದು. ಇದು ಆಚಾರ್ಯರು ಹೇಳಿದ ದಶಪ್ರಣವಸಹಿತವಾದ ಗಾಯತ್ರೀಮಂತ್ರದಿಂದ ಮಾಡುವ ಪ್ರಾಣಾಯಾಮಕ್ಕೆ ಸುಮಾರಾಗಿ ಸರಿಯಾಗುವುದು. ದಶಪ್ರಣವಪೂರ್ವಕ ಗಾಯತ್ರೀಮಂತ್ರದಲ್ಲಿ ಓಂಕಾರವನ್ನು



ದೀರ್ಘಾಕ್ಷರವಾಗಿ ಎರಡು ಮಾತ್ರಾಕಾಲದಲ್ಲಿ ಉಚ್ಚರಿಸಬೇಕು. ಇಂತಹ ಗಾಯತ್ರೀಮಂತ್ರವನ್ನು ಸ್ಮೃತಿಕಾರರು ತಿಳಿಸಿದಂತೆ ಮೂರುಬಾರಿ ಪಠಿಸಬೇಕು. (ಆಚಾರ್ಯರ ಮಾತಿನಲ್ಲಿ ಗಾಯತ್ರೀಮಂತ್ರ ಮೂರುಬಾರಿ ಹೇಳುವ ಅಭಿಪ್ರಾಯವಿಲ್ಲ. ಆದುದರಿಂದಲೆ ಜಪದ ಆರಂಭದಲ್ಲಿ ಪ್ರಾಣಾಯಾಮ ಮಾಡುವಾಗ ಒಂದು ಬಾರಿಯಷ್ಟೆ ದಶೋಂಕಾರದ ಗಾಯತ್ರೀಯನ್ನು ಹೇಳಲಾಗುವುದು.)

ಪ್ರಾಣಾಯಾಮ ಮಂತ್ರವನ್ನು ಮೂರು ತೆರನಾಗಿ ಆಚಾರ್ಯರು ತಿಳಿಸಿದ್ದಾರೆ – **ತಾರತ್ರಿದ್ವಾದಶಾವರ್ತ್ಯೈಃ ದ್ವ್ಯೇಕದ್ವಾದಶಕೇನ ವಾ**

**ತತ್ತನ್ಮಂತ್ರೇಣ ವಾ ಕಾರ್ಯಃ ಗಾಯತ್ರ್ಯಾ ದಶತಾರಕೈಃ**

(36 ಅಥವಾ 24 ಅಥವಾ 12) ಓಂಕಾರದಿಂದ ಪ್ರಾಣಾಯಾಮ ಒಂದು ರೀತಿಯದು. ಇತರ ಮಂತ್ರಗಳ ಜಪದ ಆರಂಭದಲ್ಲಿ ಆಯಾ ಮಂತ್ರಗಳಿಂದಲೆ ಪ್ರಾಣಾಯಾಮ ಇನ್ನೊಂದು ತೆರನಾದದ್ದು. ಹತ್ತು ಓಂಕಾರದ ಗಾಯತ್ರೀಮಂತ್ರದಿಂದ ಪ್ರಾಣಾಯಾಮ ಮೂರನೆಯ ಕ್ರಮ.

ಬ್ರಹ್ಮೋಪದೇಶ ಪಡೆದ ವಟು ಹತ್ತು ಓಂಕಾರದ ಗಾಯತ್ರೀ ಮಂತ್ರದ ಪ್ರಾಣಾಯಾಮವನ್ನು (ಮೂರನೆಯ ಕ್ರಮದಿಂದ) ಸಂಧ್ಯಾದಿಯಲ್ಲಿ ನಡೆಸುವನು. ಇದಕ್ಕೆ ಹಲವಾರು ಸ್ಮೃತಿಗಳು ಪ್ರಮಾಣವಾಗಿವೆ. ಗಾಯತ್ರೀಜಪದ ಮೊದಲು ಆಯಾ ಮಂತ್ರದಿಂದ ಪ್ರಾಣಾಯಾಮ ಎಂದೆನಿಸಿ ಒಂದು ಪ್ರಣವದ ಮೂರು ವ್ಯಾಹೃತಿಯ 24 ಅಕ್ಷರದ ಗಾಯತ್ರಿಮಂತ್ರದಿಂದ ಪ್ರಾಣಾಯಾಮ ಪ್ರಸ್ತುತವಾಗುವುದು (ಎರಡನೆಯ ಕ್ರಮ) ಆದರೆ ಯಾರೂ ಈ ಬಗೆಯ ಪ್ರಾಣಾಯಾಮ ನಡೆಸದೆ ಸಂಧ್ಯಾದಿಯಲ್ಲಿ ಹೇಳಿದ ದಶೋಂಕಾರದ ಗಾಯತ್ರಿಯನ್ನೇ ಇಲ್ಲಿಯೂ ಮೂರು ಬಾರಿ ಹೇಳುವ ಮೂಲಕ ಪ್ರಾಣಾಯಾಮ ಮಾಡುವರು. ಇದಕ್ಕೆ ಕೆಲವು ಸ್ಮೃತಿವಾಕ್ಯಗಳು ಆಧಾರವಾದಂತಿವೆ. ಮೊದಲನೆಯ ಕ್ರಮದ ಓಂಕಾರದಿಂದ ಪ್ರಾಣಾಯಾಮವು (ಯತಿವಿಷಯಕವಾಗಿದ್ದು) ಸಂಧ್ಯಾದಿಗಳಲ್ಲಿ ಕಂಡುಬರುವುದಿಲ್ಲ.

**ಶೇಷಸಂಹಿತೆ**ಯಲ್ಲಿ ಬಂದ ಪ್ರಾಣಾಯಾಮದ ಮಂತ್ರರೂಪವನ್ನು



ವಿಷ್ಣುಧರ್ಮೋತ್ತರ ಸಂಗ್ರಹಿಸಿದೆ. ಗರುಡಪುರಾಣವೂ ಹೀಗೆ ಹೇಳಿದೆ –

**ಸವ್ಯಾಹೃತಿಂ ಸಪ್ರಣವಾಂ ಗಾಯತ್ರೀಂ ಶಿರಸಾ ಸಹ**

**ತ್ರಿಃ ಪಠೇದಾಯತಪ್ರಾಣಃ ಪ್ರಾಣಾಯಾಮಃ ಸ ಉಚ್ಯತೇ**

ಪ್ರಾಣಾಯಾಮಕ್ಕೆ ಹತ್ತು ಓಂಕಾರದ ಗಾಯತ್ರಿಯನ್ನು ಮಾಧವೀಯದಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಇದು ತೈತ್ತಿರೀಯಾರಣ್ಯಕದಲ್ಲಿ ಸೂಚಿತ–

**ಭೂರ್ಭುವಃ ಸ್ವರ್ಮಹರ್ಜನಃ ತಪಃ ಸತ್ಯಂ ತಥೈವ ಚ**

**ಪ್ರತ್ಯೋಂಕಾರಸಮಾಯುಕ್ತಂ ತಥಾ ತತ್ಸವಿತುಃ ಪರಮ್**

**ಓಮಾಪೋ ಜ್ಯೋತಿರಿತ್ಯೇತತ್ ಶಿರಃ ಪಶ್ಚಾತ್ಪ್ರಯೋಜಯೇತ್**

ಯಾಜ್ಞವಲ್ಕ್ಯಸ್ಮೃತಿಯಲ್ಲಿ –

**ಗಾಯತ್ರೀಂ ಶಿರಸಾ ಸಾರ್ಧಂ ಜಪೇದ್ವ್ಯಾಹೃತಿಪೂರ್ವಕಾಮ್**

**ಪ್ರತಿಪ್ರಣಮಸಂಯುಕ್ತಾಂ ತ್ರಿರಯಂ ಪ್ರಾಣಸಂಯಮಃ**

ಹದಿನಾರು ಅಕ್ಷರದ ಶಿರೋಮಂತ್ರವನ್ನು ವ್ಯಾಸರು ತಿಳಿಸಿಕೊಟ್ಟಿದ್ದಾರೆ –

**ಷೋಡಶಾಕ್ಷರಕಂ ಬ್ರಹ್ಮ ಗಾಯತ್ರ್ಯಾಸ್ತು ಶಿರಃ ಸ್ಮೃತಮ್**

**ಓಮಾಪೋಜ್ಯೋತಿರಿತ್ಯೇಷ ಮಂತ್ರೋ ವೈ ತೈತ್ತಿರೀಯಕೇ**

ಪ್ರಣವದ ಪ್ರಾಣಾಯಾಮಕ್ಕೆ ಇದು ಸಮ ಎಂದು ಸ್ಕಾಂದಪುರಾಣ –

**ಗಾಯತ್ರೀಂ ಶಿರಸಾ ಸಾರ್ಧಂ ಸಪ್ತವ್ಯಾಹೃತಿಪೂರ್ವಿಕಾಮ್**

**ತ್ರಿರ್ಜಪೇತ್ಸದೃಶೋಂಕಾರಪ್ರಾಣಾಯಾಮೋಽಯಮುಚ್ಯತೇ**

ಯಾವುದೇ ಮಾತ್ರಾಕಾಲದಲ್ಲಿ ಓಂಕಾರವನ್ನು ಪಠಿಸಿದರೂ 36 ಓಂಕಾರ ಹೇಳಿದ ಕಾಲದಲ್ಲಿ ಹತ್ತು ಓಂಕಾರವುಳ್ಳ ಸಪ್ತವ್ಯಾಹೃತಿಯೊಡನೆ ಗಾಯತ್ರೀಮಂತ್ರ ಮತ್ತೆ ಶಿರೋಮಂತ್ರ ಹೇಳಿ ಮುಗಿಯಲು ಬರಬೇಕು.

ಅಂದರೆ ಮೂವತ್ತಾರು ಓಂಕಾರ ಉಚ್ಚಾರಣೆಯ ಕಾಲದಲ್ಲಿ ಶಿರೋಮಂತ್ರ ಸಹಿತವಾದ ಗಾಯತ್ರೀಮಂತ್ರ ಸಪ್ತವ್ಯಾಹೃತಿಯೊಡನೆ ಮುಗಿಯಬೇಕು. 36 ಓಂಕಾರದ ಹೊತ್ತಿನಲ್ಲಿ ಮೂರುಬಾರಿ ಗಾಯತ್ರೀಮಂತ್ರದಿಂದ ಪ್ರಾಣಾಯಾಮ ಆಗಲಾರದು. ಹತ್ತು ಪ್ರಣವದ ಜತೆಗೆ ಮೂರುಬಾರಿ ಶಿರೋಮಂತ್ರ ಹಾಗೂ



24 ಅಕ್ಷರದ ಗಾಯತ್ರೀ ಸಪ್ತವ್ಯಾಹೃತಿಯೊಡನೆ ಹೇಳಲಾಗದು. ಹಾಗಾಗಿ ಆಚಾರ್ಯರು ಹೇಳಿದಂತೆ ಒಂದಾವರ್ತಿ ಪಠಿಸಿ ಪ್ರಾಣಾಯಾಮ ಸೂಕ್ತ. ಮತ್ತೆ ಇಂತಹ ಪ್ರಾಣಾಯಾಮವನ್ನು ಮೂರು ಬಾರಿ ನಡೆಸಬೇಕೆನ್ನುವುದೇ ಸ್ಮೃತಿಕಾರರ ಆಶಯ ಹೊರತು ಒಮ್ಮೆಲೆ ಮೂರುಬಾರಿ ಗಾಯತ್ರೀಪಠನ ಅಲ್ಲ. **ತ್ರಿಃ ಪಠೇದಾಯತಪ್ರಾಣಃ** ಎನ್ನುವ ಮಾತಿಗೆಲ್ಲ ಪ್ರಾಣನಿರೋಧ ಮಾಡಿ ಮೂರು ಬಾರಿ ಮಂತ್ರ ಹೇಳಬೇಕೆಂದಿರುವಲ್ಲಿ ಮೂರು ಬಾರಿ ಪ್ರಾಣನಿರೋಧ ಮಾಡಿ ಎಂದು ಅರ್ಥ ಮಾಡಬೇಕು. ಅಲ್ಲೇನು ಒಮ್ಮೆಗೆ ಮೂರು ಬಾರಿ ಹೇಳಬೇಕೆಂದು ತಿಳಿಸಲಿಲ್ಲ.

**ದೇವಾರ್ಚನೇ ಜಪೇ ಹೋಮೇ ಪ್ರಾಣಾಯಾಮಾಸ್ತ್ರಯಸ್ತ್ರಯಃ**
**ಸಂಧ್ಯಾಯಾಮರ್ಘ್ಯದಾನೇ ಚ ಪ್ರಾಣಾಯಾಮಃ ಸಕೃತ್ಸಕೃತ್**

ಎಂದು ಮೂರು ಬಾರಿ ಪ್ರಾಣಾಯಾಮ ಮಾಡಲು ಸ್ಪಷ್ಟ ಹೇಳಿದ ಮಾತುಗಳು ಬಹಳ ಇವೆ. ಮೂರು ಪ್ರಾಣಾಯಾಮಗಳಿಂದ ತ್ರಿಕರಣಗಳ ಪಾಪನಿವೃತ್ತಿಯನ್ನು **ಗರುಡಪುರಾಣ** ಹೇಳಿದೆ –

**ಮನೋವಾಕ್ಕಾಯಜಂ ದೋಷಂ ಪ್ರಾಣಾಯಾಮೈರ್ದಹೇದ್ದ್ವಿಜಃ**

ಪ್ರಾಣಾಯಾಮ ಎಂದರೇನೆ ಮೂರು ಬಾರಿ ಹೇಳಿದ ಮಂತ್ರವುಳ್ಳದ್ದೆಂದು ಅರ್ಥೈಸಿದರೆ ಇತರ ಮಂತ್ರಗಳಿಂದ, ಪ್ರಣವದಿಂದ ಹೇಳಲಾದ ಪ್ರಾಣಾಯಾಮಕ್ಕೆ ತೊಂದರೆಯಾಗುವುದು. ಹತ್ತು, ಹನ್ನೆರಡು, ಹದಿನಾರು ಬಾರಿ ಪ್ರಾಣಾಯಾಮ ಮಾಡಿದ್ದರ ಫಲವಿಶೇಷವನ್ನು **ಸ್ಕಾಂದಪುರಾಣ** ಹೇಳಿದೆ –

**ದಶ ದ್ವಾದಶಸಂಖ್ಯಾ ವಾ ಪ್ರಾಣಾಯಾಮಾಃ ಕೃತಾ ಯದಿ**
**ನಿಯಮ್ಯ ಮಾನಸಂ ತೇನ ತದಾ ತಪ್ತಂ ಮಹತ್ತಪಃ**
**ಸವ್ಯಾಹೃತಿಪ್ರಣವಕಾಃ ಪ್ರಾಣಾಯಾಮಾಸ್ತು ಷೋಡಶ**
**ಅಪಿ ಭ್ರೂಣಹನಂ ಮಾಸಾತ್ ಪುನಂತ್ಯಹರಹಃ ಕೃತಾಃ**
**ಪ್ರಣವೇ ನಿತ್ಯಯುಕ್ತಸ್ಯ ಸಪ್ತಸು ವ್ಯಾಹೃತಿಷ್ವಪಿ**
**ತ್ರಿಪದಾಯಾಂ ತು ಗಾಯತ್ರ್ಯಾಂ ನ ಭಯಂ ಜಾಯತೇ ಕ್ವಚಿತ್**



**ಏಕಂ ಸಂಭೋಜ್ಯ ವಿಧಿವತ್ ಬ್ರಾಹ್ಮಣಂ ಯತ್ಫಲಂ ಲಭೇತ್**

**ಪ್ರಾಣಾಯಾಮೈರ್ದ್ವಾದಶಭಿಃ ತತ್ಫಲಂ ಶ್ರದ್ಧಯಾಪ್ಯತೇ**

ವಾನಪ್ರಸ್ಥಗೃಹಸ್ಥರು ಕುಂಭಕವನ್ನು ಮಾಡುವಾಗ ಮೂಗನ್ನು ಐದೂ ಬೆರಳುಗಳಿಂದ ಹಿಡಿದಿರಬೇಕು. ಇದು ಸರ್ವಪಾಪಘ್ನಮುದ್ರೆ ಎನಿಸಿದೆ. ಯತಿಗಳು ಬ್ರಹ್ಮಚಾರಿಗಳು ನಡುಬೆರಳು ಹಾಗೂ ತೋರುಬೆರಳನ್ನು ಬಿಟ್ಟು ಮೂಗನ್ನು ಹಿಡಿದಿರಬೇಕು. ಇದನ್ನು ಓಂಕಾರಮುದ್ರೆಯೆಂದೆ ಸ್ಮೃತಿಸಂಗ್ರಹದಲ್ಲಿ ಕರೆದಿರುವರು–

**ಪಂಚಾಗುಲೀಭಿರ್ನಾಸಾಗ್ರಂ ಪೀಡಯೇತ್ಪ್ರಣವೇನ ವೈ**

**ಮುದ್ರೇಯಂ ಸರ್ವಪಾಪಘ್ನೀ ವಾನಪ್ರಸ್ಥಗೃಹಸ್ಥಯೋಃ**

**ಕನಿಷ್ಠಾನಾಮಿಕಾಂಗುಷ್ಠೈಃ ನಾಸಾಗ್ರಸ್ಯ ಪ್ರಪೀಡನಮ್**

**ಓಂಕಾರಮುದ್ರಾ ಸಾ ಪ್ರೋಕ್ತಾ ಯತೇಶ್ಚ ಬ್ರಹ್ಮಚಾರಿಣಃ** (ವ್ಯಾಸಸ್ಮೃತಿ)

ಜಪಪೂಜಾದಿಗಳಲ್ಲಿ ವಿಧ್ಯುಕ್ತವಾದ ಮುದ್ರಾರಚನೆ ಇಲ್ಲದೇ ಹೋದಲ್ಲಿ ಕರ್ಮ ನಿಷ್ಫಲವೆಂದು **ಕಾಳಿಕಾಪುರಾಣ** –

**ಮುದ್ರಾಂ ವಿನಾ ತು ಯಜ್ಜಾಪ್ಯಂ ಪ್ರಾಣಾಯಾಮಃ ಸುರಾರ್ಚನಮ್**

**ಯೋಗೋ ಧ್ಯಾನಾಸನೇ ಚಾಪಿ ನಿಷ್ಫಲಾನಿ ತು ಭೈರವ**

ಪೂರಕದಲ್ಲಿ ಪದ್ಮನಾಭನನ್ನು ಕುಂಭಕದಲ್ಲಿ ವಿಷ್ಣುವನ್ನು ರೇಚಕದಲ್ಲಿ ನಾರಾಯಣನನ್ನು ಹೇಗೆ ಎಲ್ಲಿ ಚಿಂತನೆ ಮಾಡಬೇಕೆಂದು **ಅತ್ರಿಸಂಹಿತೆ** ಹೇಳಿದೆ–

**ನೀಲೋತ್ಪಲದಳಶ್ಯಾಮಂ ನಾಭಿದೇಶೇ ಪ್ರತಿಷ್ಠಿತಮ್**

**ಪೂರಕೇ ಪದ್ಮನಾಭಂ ತು ಧ್ಯಾಯೇತ್ಕಮಲಲೋಚನಮ್**

**ಕುಂಭಕೇ ಹೃದಯೇ ವಿಷ್ಣುಂ ಪೂರ್ಣೇಂದುಸದೃಶದ್ಯುತಿಮ್**

**ಶಂಖಚಕ್ರಧರಂ ದೇವಂ ಸರ್ವಾಭರಣಭೂಷಿತಮ್**

**ರೇಚಕೇ ಸಂಸ್ಮರೇದ್ದೇವಂ ನಾರಾಯಣಮನಾಮಯಮ್**

**ಉದ್ಯತ್ಕೋಟಿರವಿಪ್ರಖ್ಯಂ ಪೀತವಸ್ತ್ರಧರಂ ಪ್ರಭುಮ್**

**ಏವಂ ತ್ರಿವಾರಂ ಕರ್ತ್ತವ್ಯಃ ಪ್ರಾಣಾಯಾಮೋ ದ್ವಿಜೋತ್ತಮೈಃ**

ಜಾತಾಶೌಚ – ಮೃತಾಶೌಚಗಳಲ್ಲಿ ಮಂತ್ರ ಹೇಳದೆ ಪ್ರಾಣಾಯಾಮವನ್ನು



ನಡೆಸಬೇಕೆಂದು ಭರದ್ವಾಜರು ತಿಳಿಸಿದ್ದಾರೆ –

**ಸೂತಕೇ ಮೃತಕೇ ಚೈವ ಪ್ರಾಣಾಯಾಮಮಮಂತ್ರಕಮ್**

ನೆಟ್ಟಗೆ ಕುಳಿತು, ಕಣ್ಣು ಮುಚ್ಚಿಕೊಂಡು ಪ್ರಾಣಾಯಾಮವನ್ನು ಮಾಡಬೇಕು –

**ಬದ್ಧಾಸನಂ ನಿಯಮ್ಯಾಸೂನ್ ಸ್ಮೃತ್ವಾ ಚರ್ಷ್ಯಾದಿಕಂ ತಥಾ**

**ಸಂನಿಮಿಲೀತದೃಕ್ ಮೌನೀ ಪ್ರಾಣಾಯಾಮಂ ಸಮಭ್ಯಸೇತ್**

ಮಂತ್ರವನ್ನು ಮನದಲ್ಲಿಯೆ ಹೇಳಬೇಕೆಂದು **ಮೌನೀ** ಎಂಬ ಪದದಿಂದ ಹೇಳಿದ್ದಾರೆ.

ಪಂಚಪ್ರಾಣಗಳಲ್ಲಿ ಪ್ರಧಾನವಾಗಿ ಪ್ರಾಣಾಪಾನಗಳ ತಡೆಯೇ ಪ್ರಾಣಾಯಾಮ. ಶ್ವಾಸೋಚ್ಛ್ವಾಸಗಳ ನಿಯಂತ್ರಣವೇ ಸ್ಥೂಲವಾಗಿ ಪ್ರಾಣಾಯಾಮ ಎನಿಸಿದೆ ಎಂದು **ಮಾರ್ಕಂಡೇಯಪುರಾಣ** ಹೇಳಿದೆ–

**ಪ್ರಾಣಾಪಾನನಿರೋಧಸ್ತು ಪ್ರಾಣಾಯಾಮ ಉದಾಹೃತಃ**

ಪ್ರಾಣಾಯಾಮದ ಮಂತ್ರದಲ್ಲಿ ಹತ್ತುಬಾರಿ ಓಂಕಾರವು ಪಠಿತವಾಗಿದೆ. ಸಪ್ತವ್ಯಾಹೃತಿಗಳಿವೆ. 24 ಅಕ್ಷರದ ವೇದಮಾತೆಯೆನಿಸಿದ ಗಾಯತ್ರೀಮಂತ್ರವಿದೆ. ಕಡೆಗೆ ಗಾಯತ್ರೀ ಶಿರೋಮಂತ್ರ ಮೂರು ವ್ಯಾಹೃತಿಯೊಂದಿಗೆ ಇದೆ. **ಲೌಗಾಕ್ಷಿಸ್ಮೃತಿ** ಸರ್ವಕಾರ್ಯಗಳಲ್ಲಿ ಇದನ್ನೆ ಪ್ರಾಣಾಯಾಮ ಮಂತ್ರವನ್ನಾಗಿ ಸ್ವೀಕರಿಸಬೇಕೆಂದಿದೆ–

**ಸರ್ವಕಾರ್ಯೇಷ್ವೇವಮೇವ ಪ್ರಾಣಾಯಾಮವಿಧಿಃ ಸ್ಮೃತಃ**

ಪ್ರಾಣಾಯಾಮದಲ್ಲಿ ಓಂಕಾರವು ಸರ್ವಮಂತ್ರರಾಜ ಎನಿಸಿದೆ. ಮತ್ತೆ ಮತ್ತೆ ಇದನ್ನು ಉಚ್ಚರಿಸುವುದರಿಂದ ವಾಙ್ಮಯ ಪ್ರಪಂಚವನ್ನೆ ಹೇಳಿದಂತಾಗುವುದೆಂದು ಸ್ಕಾಂದಪುರಾಣಕ್ಕೆ ಸಂವಾದಿಯಾದ ಪ್ರಮಾಣ ಹೀಗಿದೆ –

**ಓಂಕಾರಃ ಪರಮಂ ಬ್ರಹ್ಮ ಸರ್ವಮಂತ್ರೇಷು ನಾಯಕಃ**

**ಪ್ರಣವಾದ್ಯಾಃ ಸ್ಮೃತಾ ವೇದಾಃ ಪ್ರಣವೇ ಪರ್ಯುಪಸ್ಥಿತಾಃ**

**ವಾಙ್ಮಯಂ ಪ್ರಣವಃ ಸರ್ವಂ ತಸ್ಮಾತ್ ಪ್ರಣವಮಭ್ಯಸೇತ್**

ಪ್ರಣವ ಸರ್ವವೇದಮಯವಾಗಿ ನಿತ್ಯವಾಗಿ ನಿಂತ ಚಿಂತನೆ ಇಲ್ಲಿದೆ –

**ಬ್ರಹ್ಮ ವೈ ಪ್ರಣವಃ** (ಕೌಷೀತಕೀ ಬ್ರಾಹ್ಮಣ, ಗೋಪಥ ಬ್ರಾಹ್ಮಣ)



**ಏಕಂ ಸಂಭೋಜ್ಯ ವಿಧಿವತ್ ಬ್ರಾಹ್ಮಣಂ ಯತ್ಫಲಂ ಲಭೇತ್**

**ಪ್ರಾಣಾಯಾಮೈರ್ದ್ವಾದಶಭಿಃ ತತ್ಫಲಂ ಶ್ರದ್ಧಯಾಪ್ಯತೇ**

ವಾನಪ್ರಸ್ಥಗೃಹಸ್ಥರು ಕುಂಭಕವನ್ನು ಮಾಡುವಾಗ ಮೂಗನ್ನು ಐದೂ ಬೆರಳುಗಳಿಂದ ಹಿಡಿದಿರಬೇಕು. ಇದು ಸರ್ವಪಾಪಘ್ನಮುದ್ರೆ ಎನಿಸಿದೆ. ಯತಿಗಳು ಬ್ರಹ್ಮಚಾರಿಗಳು ನಡುಬೆರಳು ಹಾಗೂ ತೋರುಬೆರಳನ್ನು ಬಿಟ್ಟು ಮೂಗನ್ನು ಹಿಡಿದಿರಬೇಕು. ಇದನ್ನು ಓಂಕಾರಮುದ್ರೆಯೆಂದೆ ಸ್ಮೃತಿಸಂಗ್ರಹದಲ್ಲಿ ಕರೆದಿರುವರು–

**ಪಂಚಾಗುಲೀಭಿರ್ನಾಸಾಗ್ರಂ ಪೀಡಯೇತ್ಪ್ರಣವೇನ ವೈ**

**ಮುದ್ರೇಯಂ ಸರ್ವಪಾಪಘ್ನೀ ವಾನಪ್ರಸ್ಥಗೃಹಸ್ಥಯೋಃ**

**ಕನಿಷ್ಠಾನಾಮಿಕಾಂಗುಷ್ಠೈಃ ನಾಸಾಗ್ರಸ್ಯ ಪ್ರಪೀಡನಮ್**

**ಓಂಕಾರಮುದ್ರಾ ಸಾ ಪ್ರೋಕ್ತಾ ಯತೇಶ್ಚ ಬ್ರಹ್ಮಚಾರಿಣಃ** (ವ್ಯಾಸಸ್ಮೃತಿ)

ಜಪಪೂಜಾದಿಗಳಲ್ಲಿ ವಿಧ್ಯುಕ್ತವಾದ ಮುದ್ರಾರಚನೆ ಇಲ್ಲದೇ ಹೋದಲ್ಲಿ ಕರ್ಮ ನಿಷ್ಫಲವೆಂದು **ಕಾಳಿಕಾಪುರಾಣ** –

**ಮುದ್ರಾಂ ವಿನಾ ತು ಯಜ್ಜಾಪ್ಯಂ ಪ್ರಾಣಾಯಾಮಃ ಸುರಾರ್ಚನಮ್**

**ಯೋಗೋ ಧ್ಯಾನಾಸನೇ ಚಾಪಿ ನಿಷ್ಫಲಾನಿ ತು ಭೈರವ**

ಪೂರಕದಲ್ಲಿ ಪದ್ಮನಾಭನನ್ನು ಕುಂಭಕದಲ್ಲಿ ವಿಷ್ಣುವನ್ನು ರೇಚಕದಲ್ಲಿ ನಾರಾಯಣನನ್ನು ಹೇಗೆ ಎಲ್ಲಿ ಚಿಂತನೆ ಮಾಡಬೇಕೆಂದು **ಅತ್ರಿಸಂಹಿತೆ** ಹೇಳಿದೆ–

**ನೀಲೋತ್ಪಲದಳಶ್ಯಾಮಂ ನಾಭಿದೇಶೇ ಪ್ರತಿಷ್ಠಿತಮ್**

**ಪೂರಕೇ ಪದ್ಮನಾಭಂ ತು ಧ್ಯಾಯೇತ್ಕಮಲಲೋಚನಮ್**

**ಕುಂಭಕೇ ಹೃದಯೇ ವಿಷ್ಣುಂ ಪೂರ್ಣೇಂದುಸದೃಶದ್ಯುತಿಮ್**

**ಶಂಖಚಕ್ರಧರಂ ದೇವಂ ಸರ್ವಾಭರಣಭೂಷಿತಮ್**

**ರೇಚಕೇ ಸಂಸ್ಮರೇದ್ದೇವಂ ನಾರಾಯಣಮನಾಮಯಮ್**

**ಉದ್ಯತ್ಕೋಟಿರವಿಪ್ರಖ್ಯಂ ಪೀತವಸ್ತ್ರಧರಂ ಪ್ರಭುಮ್**

**ಏವಂ ತ್ರಿವಾರಂ ಕರ್ತ್ತವ್ಯಃ ಪ್ರಾಣಾಯಾಮೋ ದ್ವಿಜೋತ್ತಮೈಃ**

ಜಾತಾಶೌಚ – ಮೃತಾಶೌಚಗಳಲ್ಲಿ ಮಂತ್ರ ಹೇಳದೆ ಪ್ರಾಣಾಯಾಮವನ್ನು



ನಡೆಸಬೇಕೆಂದು ಭರದ್ವಾಜರು ತಿಳಿಸಿದ್ದಾರೆ –

**ಸೂತಕೇ ಮೃತಕೇ ಚೈವ ಪ್ರಾಣಾಯಾಮಮಮಂತ್ರಕಮ್**

ನೆಟ್ಟಗೆ ಕುಳಿತು, ಕಣ್ಣು ಮುಚ್ಚಿಕೊಂಡು ಪ್ರಾಣಾಯಾಮವನ್ನು ಮಾಡಬೇಕು –

**ಬದ್ಧ್ವಾಸನಂ ನಿಯಮ್ಯಾಸೂನ್ ಸ್ಮೃತ್ವಾ ಚರ್ಷ್ಯಾದಿಕಂ ತಥಾ**

**ಸಂನಿಮಿಲೀತದೃಕ್ ಮೌನೀ ಪ್ರಾಣಾಯಾಮಂ ಸಮಭ್ಯಸೇತ್**

ಮಂತ್ರವನ್ನು ಮನದಲ್ಲಿಯೆ ಹೇಳಬೇಕೆಂದು **ಮೌನೀ** ಎಂಬ ಪದದಿಂದ ಹೇಳಿದ್ದಾರೆ.

ಪಂಚಪ್ರಾಣಗಳಲ್ಲಿ ಪ್ರಧಾನವಾಗಿ ಪ್ರಾಣಾಪಾನಗಳ ತಡೆಯೇ ಪ್ರಾಣಾಯಾಮ. ಶ್ವಾಸೋಚ್ಛ್ವಾಸಗಳ ನಿಯಂತ್ರಣವೇ ಸ್ಥೂಲವಾಗಿ ಪ್ರಾಣಾಯಾಮ ಎನಿಸಿದೆ ಎಂದು **ಮಾರ್ಕಂಡೇಯಪುರಾಣ** ಹೇಳಿದೆ–

**ಪ್ರಾಣಾಪಾನನಿರೋಧಸ್ತು ಪ್ರಾಣಾಯಾಮ ಉದಾಹೃತಃ**

ಪ್ರಾಣಾಯಾಮದ ಮಂತ್ರದಲ್ಲಿ ಹತ್ತುಬಾರಿ ಓಂಕಾರವು ಪಠಿತವಾಗಿದೆ. ಸಪ್ತವ್ಯಾಹೃತಿಗಳಿವೆ. 24 ಅಕ್ಷರದ ವೇದಮಾತೆಯೆನಿಸಿದ ಗಾಯತ್ರೀಮಂತ್ರವಿದೆ. ಕಡೆಗೆ ಗಾಯತ್ರೀ ಶಿರೋಮಂತ್ರ ಮೂರು ವ್ಯಾಹೃತಿಯೊಂದಿಗೆ ಇದೆ. **ಲೌಗಾಕ್ಷಿಸ್ಮೃತಿ** ಸರ್ವಕಾರ್ಯಗಳಲ್ಲಿ ಇದನ್ನೆ ಪ್ರಾಣಾಯಾಮ ಮಂತ್ರವನ್ನಾಗಿ ಸ್ವೀಕರಿಸಬೇಕೆಂದಿದೆ–

**ಸರ್ವಕಾರ್ಯೇಷ್ವೇವಮೇವ ಪ್ರಾಣಾಯಾಮವಿಧಿಃ ಸ್ಮೃತಃ**

ಪ್ರಾಣಾಯಾಮದಲ್ಲಿ ಓಂಕಾರವು ಸರ್ವಮಂತ್ರರಾಜ ಎನಿಸಿದೆ. ಮತ್ತೆ ಮತ್ತೆ ಇದನ್ನು ಉಚ್ಚರಿಸುವುದರಿಂದ ವಾಙ್ಮಯ ಪ್ರಪಂಚವನ್ನೆ ಹೇಳಿದಂತಾಗುವುದೆಂದು ಸ್ಕಾಂದಪುರಾಣಕ್ಕೆ ಸಂವಾದಿಯಾದ ಪ್ರಮಾಣ ಹೀಗಿದೆ –

**ಓಂಕಾರಃ ಪರಮಂ ಬ್ರಹ್ಮ ಸರ್ವಮಂತ್ರೇಷು ನಾಯಕಃ**

**ಪ್ರಣವಾದ್ಯಾಃ ಸ್ಮೃತಾ ವೇದಾಃ ಪ್ರಣವೇ ಪರ್ಯುಪಸ್ಥಿತಾಃ**

**ವಾಙ್ಮಯಂ ಪ್ರಣವಃ ಸರ್ವಂ ತಸ್ಮಾತ್ ಪ್ರಣವಮಭ್ಯಸೇತ್**

ಪ್ರಣವ ಸರ್ವವೇದಮಯವಾಗಿ ನಿತ್ಯವಾಗಿ ನಿಂತ ಚಿಂತನೆ ಇಲ್ಲಿದೆ –

**ಬ್ರಹ್ಮ ವೈ ಪ್ರಣವಃ** (ಕೌಷೀತಕೀ ಬ್ರಾಹ್ಮಣ, ಗೋಪಥ ಬ್ರಾಹ್ಮಣ)



**ಅಮೃತಂ ವೈ ಪ್ರಣವಃ (ಗೋಪಥಬ್ರಾಹ್ಮಣ)**

**ಏತದೇವಾಕ್ಷರಂ ತ್ರಯೀ ವಿದ್ಯಾ (ಜೈಮಿನೀಯಬ್ರಾಹ್ಮಣ)**

**ಪ್ರಣವೋ ಹಿ ಪರಂಬ್ರಹ್ಮ ತಜ್ಜಪಃ ಸರ್ವಪಾಪಹಾ**

**ಮಾತ್ರಾತ್ರಯಂ ತ್ರಯೋ ವೇದಾಃ ತ್ರಯೋ ದೇವಾಸ್ತ್ರಯೋಽಗ್ನಯಃ (ಅಗ್ನಿಪುರಾಣ)**

**ಸರ್ವವಿಘ್ನಹರೋ ಮಂತ್ರಃ ಪ್ರಣವಃ ಸರ್ವದೋಷಹಾ (ಶ್ರೀಪ್ರಶ್ನಸಂಹಿತಾ)**

ಮೂರು ಮಾತ್ರಾಕಾಲದಲ್ಲಿ ಇದನ್ನು ಉಚ್ಚರಿಸುವುದು ವಿಶೇಷವಾಗಿದೆ. ಇದರಿಂದ ಬ್ರಹ್ಮವಿಷ್ಣುರುದ್ರರು ಪ್ರೀತರಾಗುವರು. ತ್ರಿಗುಣಾತೀತನಾಗುವನು. ಮೂರು ವೇದ ಪಠಿಸಿದಂತಾಗಲಿದೆ. ಮೂರು ಲೋಕಗಳನ್ನು ಗೆಲ್ಲುವನು. ಅಗ್ನಿವಾಯುರವಿಗಳು ಅನುಗ್ರಹಿಸುವರು. ತ್ರಿಕಾಲದರ್ಶಿಯಾಗುವನು. ಮೂರು ಅಗ್ನಿಗಳು ಆರಾಧಿತರಾಗುವರು. ಮೂರು ಅವಸ್ಥೆಯನ್ನು ದಾಟುವನು. ಧಾತುತ್ರಯ ಬಂಧನದಿಂದ ದೂರನಾಗುವನು ಸೃಷ್ಟಿಸ್ಥಿತಿಸಂಹಾರಚಕ್ರದಿಂದ ಮುಕ್ತನಾಗುವನು.

ವಾಚಕವಾದ ಪ್ರಣವದಿಂದ ಕರೆದಾಗ ವಾಚ್ಯನಾದ ಭಗವಂತ ಕೂಡಲೆ ಪ್ರಸನ್ನನಾಗುವನು. ಶಬ್ದಬ್ರಹ್ಮವೆನಿಸಿದ ಪ್ರಣವವನ್ನು ಪರಬ್ರಹ್ಮನೆನಿಸಿದ ಭಗವಂತನನ್ನು ತಿಳಿಯಬೇಕು. ಪ್ರಣವವನ್ನು ಚೆನ್ನಾಗಿ ತಿಳಿದವ ಪರಮಾತ್ಮನನ್ನು ಪಡೆಯುವನು.

**ಶಬ್ದಬ್ರಹ್ಮಣಿ ನಿಷ್ಣಾತಃ ಪರಂಬ್ರಹ್ಮಾಧಿಗಚ್ಛತಿ**

**ಓಂಕಾರಂ ವಿಂದತೇ ಯಸ್ತು ತಸ್ಯ ಜನ್ಮ ನ ವಿದ್ಯತೇ**

ಓಂಕಾರದ ಮೂರು ಅಕ್ಷರಗಳ ವಿಸ್ತಾರವೆ ಸಪ್ತವ್ಯಾಹೃತಿಗಳು, 24 ಅಕ್ಷರದ ಗಾಯತ್ರೀ ಮಂತ್ರ ಮತ್ತು ಶಿರೋಮಂತ್ರ ಇವಿಷ್ಟನ್ನು ಅರಿತವ ಮತ್ತೆ ಸಂಸಾರಕ್ಕೆ ಬರುವುದಿಲ್ಲ –

**ಪ್ರಣವೇ ನಿತ್ಯಯುಕ್ತಸ್ಯ ವ್ಯಾಹೃತೀಷು ಚ ಸಪ್ತಸು**

**ತ್ರಿಪದಾಯಾಂ ಚ ಗಾಯತ್ರ್ಯಾಂ ನ ಭಯಂ ವಿದ್ಯತೇ ಕ್ವಚಿತ್**

**ಅಪವಿತ್ರಃ ಪವಿತ್ರೋ ವಾ, ಯೋಽನ್ಯಥಾ ಸಂತಂ ಆತ್ಮಾನಂ...** ಮುಂತಾದ ಮಾತುಗಳನ್ನು ಪುರಾಣೇತಿಹಾಸಗಳಿಂದ ಉದ್ಧರಿಸಿದ ಶಂಕರಾಚಾರ್ಯರೂ



ಒಂದೆಡೆ ಈ ಮಂತ್ರ ಸರ್ವವೇದಸಾರ ಎಂದು ಶಾಸ್ತ್ರ ಹೇಳಿದೆ ಎನ್ನುತ್ತಾರೆ –

**ತತ್ರ ಗಾಯತ್ರೀಂ ಪ್ರಣವಾದಿಸಪ್ತವ್ಯಾಹೃತ್ಯುಪೇತಾಂ**

**ಶಿರಃಸಮೇತಾಂ ಸರ್ವವೇದಸಾರಮಿತಿ ವದಂತಿ**

ಪ್ರಣವಕ್ಕೆ ಹತ್ತು ಹೆಸರುಗಳಿವೆ–

**ದಶನಾಮಾನಿ ನೈರುಕ್ತಾ ಓಂಕಾರಸ್ಯ ಪ್ರಚಕ್ಷತೇ**

**1 ಓಂಕಾರಂ 2 ಪ್ರಣವಂ ಚೈವ 3 ಸರ್ವವ್ಯಾಪಿನಮೇವ ಚ**

**4 ಅನಂತಂ ಚ ತಥಾ 5 ತಾರಂ 6 ಶುಕ್ಲಂ 7 ವೈದ್ಯುತಮೇವ ಚ**

**8 ಹಂಸಂ 9 ತುರ್ಯಂ 10 ಪರಂಬ್ರಹ್ಮ ಇತಿ ನಾಮಾನಿ ಜಾನತ**

**ಉನ್ನಾಮಯೇತ್ ಶರೀರಂ ತು ಓಂಕಾರಸ್ತೇನ ಚೋಚ್ಯತೇ**

**ಶರೀರಂ ವಾಙ್ಮನಶ್ಚೈವ ಪ್ರಾಣಾನಾತ್ ಪ್ರಣವಃ ಸ್ಮೃತಃ**

**ಶರೀರಂ ಚೈವ ವಿಶ್ವಂ ಚ ವಿದ್ಯಾಸ್ಥಾನಾನಿ ಸರ್ವಶಃ**

**ವ್ಯಾಪ್ಯ ಸಂತಿಷ್ಠತೇ ಯಸ್ಮಾತ್ ಸರ್ವವ್ಯಾಪೀ ತತಃ ಸ್ಮೃತಃ**

**ಅನಂತಂ ನಯತೇ ಸ್ಥಾನಂ ತಸ್ಯ ಚಾಂತೋ ನ ಲಭ್ಯತೇ**

**ಋಷಿದೇವಮನುಷ್ಯೇಷು ಅನಂತಸ್ತೇನ ಕೀರ್ತಿತಃ**

**ಚಿಂತಿತಸ್ತಾರಯೇದ್ಯಸ್ಮಾತ್ ತೇನ ತಾರೋ ನಿಗದ್ಯತೇ**

**ತ್ರಿವಿಧಂ ಶೋಷಯೇತ್ ಪಾಪಂ ತೇನ ಶುಕ್ಲ ಇತಿ ಸ್ಮೃತಃ**

**ವಿದ್ಯೋತತೇ ತಮೋ ಭಿತ್ವಾ ವೈದ್ಯುತಸ್ತೇನ ಕೀರ್ತಿತಃ**

**ಭಿತ್ವಾ ಶರೀರಂ ನಯತಿ ತಸ್ಮಾದ್ಧಂಸ ಇತಿ ಸ್ಮೃತಃ**

**ಜ್ಞಾತಸ್ತು ತ್ರಾಯತೇ ಯಸ್ಮಾತ್ ತುರ್ಯಸ್ತೇನ ನಿಗದ್ಯತೇ**

**ಪರಂ ಬ್ರಹ್ಮ ನಿಯತ್ಯೇವ ಪರಂಬ್ರಹ್ಮ ಇತಿ ಸ್ಮೃತಃ**

ಪ್ರಾಣಾಯಾಮದ ಮಂತ್ರದಲ್ಲಿ ಆರಂಭದಲ್ಲಿ ಓಂಕಾರ ಅಂತ್ಯದಲ್ಲಿಯೂ ಓಂಕಾರ ಇದೆ. (ಸಾಮಾನ್ಯವಾಗಿ) ಎಲ್ಲ ಮಂತ್ರಗಳನ್ನು ಹೇಳುವಲ್ಲಿ ಆದ್ಯಂತಗಳಲ್ಲಿ ಓಂಕಾರವನ್ನು ಹೇಳಲೇಬೇಕು. ಮೊದಲು ಓಂಕಾರವಿಲ್ಲದೆ ಮಂತ್ರ ಹೇಳಿದ್ದಲ್ಲಿ ಮಂತ್ರದಲ್ಲಿ ಹೇಳಿದ ಫಲ ದೊರಕದು. ಮಂತ್ರದ ಕಡೆಯಲ್ಲಿ ಓಂಕಾರ



ಹೇಳದಿದ್ದರೆ ದೊರೆತ ಫಲವೂ ಉಳಿಯದು. ಯೋಗಕ್ಷೇಮಗಳಿಗೆ ಓಂಕಾರದ ಸಂಪುಟ ಮಂತ್ರಗಳಿಗೆ ಬೇಕು –

**ಬ್ರಹ್ಮಾವಸಾನೇ ಪ್ರಾರಂಭೇ ಪ್ರಣವಂ ಚ ಪ್ರಕೀರ್ತ್ತಯೇತ್** (ಶಂಖಸ್ಮೃತಿ)
**ಸ್ರವತ್ಯನೋಂಕೃತಂ ಪೂರ್ವಂ ಪರಸ್ತಾಚ್ಚ ವಿಶೀರ್ಯತೇ** (ಬೃಹದ್ಯೋಗಿಯಾಜ್ಞವಲ್ಕ್ಯಸ್ಮೃತಿ)
**ಸರ್ವೇಷಾಂ ಚೈವ ಮಂತ್ರಾಣಾಂ ಪ್ರಣವಃ ಪ್ರಾಣ ಉಚ್ಯತೇ** (ವಿ.ಶು.ತಂತ್ರ)

ಓಂಕಾರದ ಜತೆಗೆ ಮಂತ್ರಪಠನದಿಂದ ಹೆಚ್ಚು-ಕಡಿಮೆಯಾದದ್ದು, ಬಿಟ್ಟುಹೋದದ್ದು, ಅಶುದ್ಧವಾದದ್ದು ಎಲ್ಲವೂ ಸರಿಯಾಗಿ ಪೂರ್ಣಫಲ ಪ್ರಾಪ್ತಿ ಆಗುವುದು –

**ಯದೂನಂ ಚಾತಿರಿಕ್ತಂ ಚ ಯಚ್ಛಿದ್ರಂ ಯದಯಾಜ್ಞಿಕಮ್**
**ಯದಮೇಧ್ಯಮಶುದ್ಧಂ ವಾ ಯಾತಯಾಮಂ ಚ ಯದ್ಭವೇತ್**
**ಓಂಕಾರೇಣ ಪ್ರಯುಕ್ತೇನ ಸರ್ವಂ ಚಾವಿಕಲಂ ಭವೇತ್**

ಪ್ರಾಣಾಯಾಮದಲ್ಲಿ ಸಪ್ತವ್ಯಾಹೃತಿಮಂತ್ರಗಳನ್ನು ಓಂಕಾರದ ಜತೆಗೆ ಹೇಳಬೇಕು. ಊರ್ಧ್ವಲೋಕಗಳ ನಾಮದಲ್ಲಿ ಈ ಏಳು ಮಹಾವ್ಯಾಹೃತಿಗಳು ಬಂದಿವೆ. ಈ ವ್ಯಾಹೃತಿಗಳನ್ನು ಪ್ರಾಣಾಯಾಮದಲ್ಲಿ ಹೇಳುವುದರಿಂದ ಏಳು ಲೋಕವನ್ನೂ ಸಂತೋಷಪಡಿಸಿದಂತೆ ಆಗುವುದು –

**ಏತಾಸ್ತು ವ್ಯಾಹೃತೀಃ ಸಪ್ತ ಯಃ ಸ್ಮರೇತ್ ಪ್ರಾಣಸಂಯಮೇ**
**ಉಪಾಸಿತಂ ಭವೇತ್ತಸ್ಯ ವಿಶ್ವಂ ಭುವನಸಪ್ತಕಮ್**

ಭಗವಂತ ಸಪ್ತ ಲೋಕಗಳ ಒಡೆತನವನ್ನು ಚತುರ್ಮುಖನಿಗೆ ನೀಡಿರುತ್ತಾನೆ. ಚತುರ್ಮುಖ ಮೊದಲಿಗೆ ಸಪ್ತಲೋಕನಾಮಗಳಾದ ಸಪ್ತವ್ಯಾಹೃತಿಗಳಿಂದ ಭಗವಂತನನ್ನು ಸ್ತುತಿಸಿದ. ಅದಕೆಂದೆ ಸಪ್ತವ್ಯಾಹೃತಿಗಳಿಗೆ ಪ್ರಜಾಪತಿ ಋಷಿ-

**ವ್ಯಾಹೃತೀನಾಂ ಚ ಸರ್ವಾಸಾಂ ಋಷಿಶ್ಚೈವ ಪ್ರಜಾಪತಿಃ**

ಏಳು ವ್ಯಾಹೃತಿಗಳಿಗೆ ಎರಡು ರೀತಿಯಲ್ಲಿ ಸಪ್ತರ್ಷಿಗಳೇ ಋಷಿಗಳಾಗಿದ್ದಾರೆ ಎನ್ನುವುದಾಗಿ **ಭಾರದ್ವಾಜಸ್ಮೃತಿ** ತಿಳಿಸಿದೆ. ಎರಡನೇ ಪಕ್ಷ ಪರಾಶರರಿಗೂ ಸಮ್ಮತ –



**ಕಥ್ಯಂತೇ ಮುನಯಸ್ತಾಸಾಂ ವ್ಯಾಹೃತೀನಾಂ ಪೃಥಕ್ ಪೃಥಕ್**

**ಅತ್ರಿರ್ಭೃಗುಶ್ಚ ಕುತ್ಸಶ್ಚ ವಶಿಷ್ಠೋ ಗೌತಮಸ್ತಥಾ**

**ಕಾಶ್ಯಪಶ್ಚಾಂಗಿರಾಶ್ಚೈತೇ ಮುನಯಃ ಕ್ರಮಶಃ ಸ್ಮೃತಾಃ**

**ವಿಶ್ವಾಮಿತ್ರೋ ಜಮದಗ್ನಿಃ ಭಾರದ್ವಾಜೋಽಥ ಗೌತಮಃ**

**ಅತ್ರಿರ್ವಸಿಷ್ಠಃ ಕಶ್ಯಪ ಇತಿ ಸಪ್ತರ್ಷಯಃ ಸ್ಮೃತಾಃ**

ಸಪ್ತಛಂದಸ್‌ಗಳೇ ವ್ಯಾಹೃತಿಗಳ ಛಂದಸ್ಸುಗಳು–

**ಸಪ್ತಛಂದಾಂಸಿ ಯಾನ್ಯಾಸಾಂ ತಾನಿ ಸಮ್ಯಕ್ ಪ್ರಕೀರ್ತಯೇತ್**

**ಗಾಯತ್ರ್ಯುಷ್ಣಿಗನುಷ್ಟುಪ್ ಚ ಬೃಹತೀ ಪಂಕ್ತಿರೇವ ಚ**

**ತ್ರಿಷ್ಟುಪ್ ಚ ಜಗತೀ ಚೈವ ಛಂದಾಂಸ್ಯೇತಾನಿ ಸಪ್ತ ವೈ**

ಅಗ್ನಿ, ವಾಯು, ಆದಿತ್ಯ, ಬೃಹಸ್ಪತಿ, ಆಪರು (ಲೋಕಪಾಲರು), ಇಂದ್ರ, ವಿಶ್ವೇದೇವತೆಗಳು (ಸೋಮಾಧಿಕಾರಿಗಳು) ಸಪ್ತವ್ಯಾಹೃತಿಗಳ ದೇವತೆಗಳು–

**ಅಗ್ನಿರ್ವಾಯುಸ್ತಥಾದಿತ್ಯೋ ಬೃಹಸ್ಪತ್ಯಾಪ ಏವ ಚ**

**ಇಂದ್ರಶ್ಚ ವಿಶ್ವೇದೇವಾಶ್ಚ ವ್ಯಾಹೃತೀನಾಂ ತು ದೇವತಾಃ** (ಪರಾಶರ)

**ಭಾರದ್ವಾಜಸ್ಮೃತಿ**ಯು ಅಪ್ ಶಬ್ದದ ಬದಲಿಗೆ ಮುಖ್ಯ ಅಬ್ದೇವತೆ ಎನಿಸಿದ ವರುಣನೊಬ್ಬನನ್ನೇ ಸೂಚಿಸಿದೆ –

**ಅಗ್ನಿರ್ವಾಯುಃ ಸಹಸ್ರಾಂಶುಃ ವಾಗೀಶೋ ವರುಣೋ ವೃಷಾ**

**ಆಸಾಂ ಯಥಾಕ್ರಮೇಣೈವ ವಿಶ್ವೇದೇವಾಶ್ಚ ದೇವತಾಃ**

ವ್ಯಾಹೃತಿಯ ಋಷಿಛಂದೋದೇವತೆಗಳ ಬಗ್ಗೆ **ಅಗ್ನಿಪುರಾಣ**ದಲ್ಲಿ ಹೀಗೆಯೇ ಪ್ರಮಾಣಗಳಿವೆ. ಓಂಕಾರದ ಅಷ್ಟಾಕ್ಷರದಿಂದ ಪ್ರತಿಪಾದ್ಯರಾದ ವಿಶ್ವ, ತೈಜಸ, ಪ್ರಾಜ್ಞ, ತುರ್ಯ, ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ ರೂಪಗಳು ಪ್ರಣವಚಿಂತನೆಯಿಂದ ತುಷ್ಟರಾಗುವರು. ಯತಿಪ್ರಣವಕಲ್ಪದಲ್ಲಿ ಹೇಳಿದಂತೆ ಕೃಷ್ಣ, ರಾಮ, ನೃಸಿಂಹ, ವರಾಹ, ವಿಷ್ಣು, ಪರಂಜ್ಯೋತಿ, ಪರಂಬ್ರಹ್ಮ, ವಾಸುದೇವ ರೂಪಗಳು ಪ್ರಣವವಾಚ್ಯರು ಪ್ರಣವಜಪದಿಂದ ಪ್ರಸನ್ನರಾಗುವರು. ಇದರಂತೆ ವ್ಯಾಹೃತಿ ಪ್ರತಿಪಾದ್ಯಗಳಾದ ಭಗವಂತನ ವಾಸುದೇವಾದಿ ವ್ಯೂಹರೂಪಗಳೂ



ವ್ಯಾಹೃತಿಗಳ ಉಚ್ಚಾರಣೆಯಿಂದ ತೃಪ್ತರಾಗುವರು.

ಭೂಲೋಕದಲ್ಲಿಯ ಭಗವಂತನ ರೂಪ **ಭೂಃ ವ್ಯಾಹೃತಿಪ್ರತಿಪಾದ್ಯ.** ಕಲ್ಪಾಂತದಲ್ಲಿ ಮತ್ತೆ ಹುಟ್ಟಿ ಬರುವವುಗಳು ತುಂಬಿರುವ ಭುವೋಲೋಕದಲ್ಲಿಯ ಭಗವಂತನ ರೂಪ **ಭುವಃ ವ್ಯಾಹೃತಿಪ್ರತಿಪಾದ್ಯ.** ಸುಕೃತಿಗಳ ಲೋಕ ಸ್ವರ್ಲೋಕದಲ್ಲಿಯ ಭಗವದ್ರೂಪ **ಸ್ವಃ ವ್ಯಾಹೃತಿಪ್ರತಿಪಾದ್ಯ.** ಮೇಲೆ ಕೆಳಗಿನ ಎಲ್ಲ ಲೋಕಗಳಿಗಿಂತ ಮಹತ್ತಾದ ಮಹೋಲೋಕದಲ್ಲಿ ನೆಲೆಸಿದ ಭಗವಂತನ ರೂಪ **ಮಹಃ ವ್ಯಾಹೃತಿಪ್ರತಿಪಾದ್ಯ.** ಕಲ್ಪಾಂತದಲ್ಲಿ ಮತ್ತೆ ಹುಟ್ಟಿಬರಲಿರುವವರು ತುಂಬಿರುವ ಜನಲೋಕದಲ್ಲಿಯ ಭಗವದ್ರೂಪ **ಜನಃ ವ್ಯಾಹೃತಿಪ್ರತಿಪಾದ್ಯ.** ಸನಕಾದಿ ತಪಃ ಸಿದ್ಧರು ಅಧಿಕಾರ ನಿವೃತ್ತರು ಇರುವ ದೇಶ ತಪೋಲೋಕದಲ್ಲಿಯ **ಭಗವದ್ರೂಪ ತಪಃ ವ್ಯಾಹೃತಿಪ್ರತಿಪಾದ್ಯ.** ಬ್ರಹ್ಮದೇವರ ಲೋಕ ಸತ್ಯಲೋಕದಲ್ಲಿಯ ಭಗವದ್ರೂಪ **ಸತ್ಯಂ ವ್ಯಾಹೃತಿ ಪ್ರತಿಪಾದ್ಯ.**

ಬ್ರಹ್ಮಾಂಡದಲ್ಲಿಯ ಏಳು ಲೋಕಗಳು ಮನುಷ್ಯಶರೀರದಲ್ಲಿ ನಾಡೀಚಕ್ರಗಳಲ್ಲಿವೆ. ಆ ಏಳು ಚಕ್ರಗಳಲ್ಲಿಯ ಭಗವಂತನ ವಾಸುದೇವಾದಿ ರೂಪಗಳು ಆಯುರಾರೋಗ್ಯವನ್ನು ಪ್ರಾಣಾಯಾಮದಿಂದ ನೀಡುತ್ತವೆ.

**ತತ್ಸವಿತುಃ ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್** ಎಂಬ ಗಾಯತ್ರೀ ಮಂತ್ರದಿಂದ ಸೂರ್ಯಮಂಡಲ ಮಧ್ಯವರ್ತಿಯಾದ ನಾರಾಯಣನು ಆಯುರಾರೋಗ್ಯವನ್ನು ನೀಡುವನು. ಬ್ರಹ್ಮಾಂಡದ ನಡುವೆ ಇರುವ ಉರಿಯುವ ಸೂರ್ಯನೊಳಗಿನ ಭಗವಂತ ಜಗತ್ತಿಗೆ ಚಿಂತಕನಿಗೆ ಶಕ್ತಿಯನ್ನು ಕರುಣಿಸುವನು. ಗಾಯತ್ರೀಮಂತ್ರಪದಪ್ರತಿಪಾದ್ಯಗಳಾದ ಹತ್ತು ಭಗವದವತಾರರೂಪಗಳೂ ಸಾಧಕನನ್ನು ಹತ್ತು ಕಡೆಯಿಂದ ರಕ್ಷಿಸಿ ಸಾಧಕನ ದಶೇಂದ್ರಿಯಗಳನ್ನು ಚುರುಕುಗೊಳಿಸಿ ಸಾಧನೆಯಲ್ಲಿ ತೊಡಗಿಸುತ್ತವೆ. ಹಯಗ್ರೀವರೂಪಿಯಾದ ಭಗವಂತನು ಗಾಯತ್ರೀಪ್ರತಿಪಾದ್ಯನಾಗಿ ಜ್ಞಾನವನ್ನು ನೀಡುತ್ತಾನೆ. ಅಕ್ಷರವಾಚ್ಯಗಳಾದ ಕೇಶವಾದಿ 24 ಭಗವದ್ರೂಪಗಳು 24 ತತ್ವಗಳನ್ನು ಚೆನ್ನಾಗಿ ಅಭಿವ್ಯಕ್ತಿಗೊಳಿಸುವವು.



16 ಅಕ್ಷರಗಳ ಗಾಯತ್ರೀ ಶಿರೋಮಂತ್ರಕ್ಕೆ ಪ್ರಜಾಪತಿ ಋಷಿ. ಅಗ್ನಿವಾಯುಸೂರ್ಯರ ಜತೆ ಬ್ರಹ್ಮದೇವನು ದೇವತೆ –

**ಷೋಡಶಾಕ್ಷರಕಂ ಬ್ರಹ್ಮ ಗಾಯತ್ರ್ಯಾಃ ತಚ್ಛಿರಃ ಸ್ಮೃತಮ್**

**ಬ್ರಹ್ಮಾಗ್ನಿವಾಯುಸೂರ್ಯಾಶ್ಚ ದೈವತ್ಯಂ ಸಮುದಾಹೃತಮ್**

ಶಿರೋಮಂತ್ರ ಗದ್ಯಭಾಗವಾದ್ದರಿಂದ ಛಂದಸ್ಸು ಇಲ್ಲ –

**ಆಪೋ ಜ್ಯೋತೀ ರಸ ಇತಿ ಗಾಯತ್ರ್ಯಾಸ್ತು ಶಿರಃ ಸ್ಮೃತಮ್**

**ಋಷಿಃ ಪ್ರಜಾಪತಿಸ್ತಸ್ಯ ಛಂದೋಹೀನಂ ಯಜುರ್ಯತಃ**

**ಬ್ರಹ್ಮಾಗ್ನಿವಾಯುಸೂರ್ಯಾಶ್ಚ ದೇವತಾಃ ಪರಿಕೀರ್ತಿತಾಃ** (ಅಗ್ನಿಪುರಾಣ)

ಮೂರು ವ್ಯಾಹೃತಿಗಳ ಜತೆಗಿರುವ ಐದು ಪದಗಳು ಭಗವಂತನ ಪಂಚರೂಪಗಳನ್ನು ಹೇಳಿವೆ. ಪಾಲನೆಗೈಯುವ ಅನಿರುದ್ಧ – **ಆಪಃ**, ಸಂಹಾರ ಶಕ್ತಿ ಸಂಕರ್ಷಣ – **ಜ್ಯೋತಿಃ**, ಸೃಷ್ಟಿಸಾರನೆನಿಸಿದ ಪ್ರದ್ಯುಮ್ನ – **ರಸಃ**, ಮೋಕ್ಷಪ್ರದನಾದ ವಾಸುದೇವ – **ಅಮೃತಂ**, ಗುಣಪೂರ್ಣಾರ್ಥ ನಾರಾಯಣ – **ಬ್ರಹ್ಮ**. ಪಂಚಭೂತಮಯ ಶರೀರದ ಶುದ್ಧಿಯನ್ನು ಈ ಭಗವದ್ರೂಪಗಳು ನಡೆಸಿಕೊಡುತ್ತವೆ. ಜತೆಗೆ ಪಂಚವಿಷಯಗಳಿಂದ ಮೋಕ್ಷವನ್ನು ಕರುಣಿಸುತ್ತವೆ. ಸಕಲಶಾಸ್ತ್ರಗಳ ಸಾರವನ್ನಿಲ್ಲಿ ಪ್ರಾಣಾಯಾಮದ ಮಂತ್ರ ಒಳಗೊಂಡಿದೆ –

**ಸಾರಭೂತಾಸ್ತು ವೇದಾನಾಂ ಗುಹ್ಯೋಪನಿಷದಃ ಸ್ಮೃತಾಃ**

**ತಾಭ್ಯಃ ಸಾರಂ ತು ಗಾಯತ್ರೀ ಗಾಯತ್ರ್ಯಾ ವ್ಯಾಹೃತಿತ್ರಯಮ್**

**ವ್ಯಾಹೃತಿಭ್ಯಸ್ತಥೋಂಕಾರಃ ತ್ರಿವೃದ್ಬ್ರಹ್ಮ ಸ ಉಚ್ಯತೇ**

ಮೂರು ಹೊತ್ತಿನ ಜಪಾನುಷ್ಠಾನದಲ್ಲಿ ಪ್ರಾಣಾಯಾಮಗಳನ್ನು ನಡೆಸುವ ಮೂಲಕ ಆ ದಿನ ಪೂರ್ತಿ ಮಾಡಿದ ಪಾಪಗಳಿಂದ ಆತ ಮುಕ್ತನಾಗುವನೆಂದು ಸ್ಮೃತಿ ಸಾರಿದೆ – **ಯದಹ್ನಾ ಕುರುತೇ ಪಾಪಂ ಕರ್ಮಣಾ ಮನಸಾ ಗಿರಾ**

**ತ್ರಿಕಾಲಸಂಧ್ಯಾಕರಣಾತ್ ಪ್ರಾಣಾಯಾಮೈರ್ವ್ಯಪೋಹತಿ**

ಪ್ರಣವಗಳಿಂದಲೆ ತುಂಬಿರುವ ಪ್ರಣವಾರ್ಥವಿಸ್ತಾರವಾದ ವ್ಯಾಹೃತಿಗಳಿಂದ ಗಾಯತ್ರಿಯಿಂದ ಕೂಡಿರುವ ಪ್ರಾಣಾಯಾಮಮಂತ್ರಕ್ಕೆ ಸಾಮಾನ್ಯವಾಗಿ ಇಂದು



ಪರಬ್ರಹ್ಮನನ್ನೆ ಋಷಿಯನ್ನಾಗಿ ದೈವೀಗಾಯತ್ರೀ ಛಂದಸ್ಸನ್ನಾಗಿ ಪರಮಾತ್ಮನನ್ನೆ ದೇವತೆಯನ್ನಾಗಿ ಸ್ಥೂಲವಾಗಿ ಹೇಳಬಹುದು. ಹೀಗೆಯೆ **ತಂತ್ರಸಾರಸಂಗ್ರಹ**ದಲ್ಲಿ ಆಚಾರ್ಯರು ಓಂಕಾರಕ್ಕೆ ಋಷ್ಯಾದಿಗಳನ್ನು ಹೇಳಿದ್ದಾರೆ–

**ಋಷಿಶ್ಚ ದೇವತೈಕೋಽಹಂ ತಾರಾದೀನಾಂ ವಿಶೇಷತಃ**

**ಛಂದೋ ಮದೀಯಾ ಗಾಯತ್ರೀ ತಾರಾಷ್ಟಾಕ್ಷರಯೋರ್ಮತಾ**

ನಾರಾಯಣನ ಅನಂತರದಲ್ಲಿ ಚತುರ್ಮುಖಬ್ರಹ್ಮನನ್ನು ಋಷಿಯಾಗಿ **ಶೇಷಸಂಹಿತೆ** ಹೇಳಿದೆ – **ಪ್ರಣವಸ್ಯ ಋಷಿರ್ಬ್ರಹ್ಮಾ ದೈವೀ ಗಾಯತ್ರ್ಯಥೋಚ್ಯತೇ**

**ಛಂದೋ ವಿಷ್ಣುರ್ದೇವತಾ ಚ**

**ಪ್ರಣವಸ್ಯ ಋಷಿರ್ಬ್ರಹ್ಮಾ ಗಾಯತ್ರೀ ಛಂದ ಉಚ್ಯತೇ**

**ನಾರಾಯಣಃ ಪರಂಬ್ರಹ್ಮ ದೇವತೇತಿ ಚತುರ್ಮುಖ**

ಇಲ್ಲಿ ದೈವೀ ಗಾಯತ್ರೀ ಛಂದಃ ಎನ್ನುವುದರಿಂದ ಲಕ್ಷ್ಮೀಯನ್ನು ನೆನೆದಂತಾಗುವುದು. ಕೇವಲ **ಗಾಯತ್ರೀಛಂದಃ** ಎನ್ನುವಲ್ಲಿ ಭಾರತೀದೇವಿಯ ಸ್ಮರಣೆಯನ್ನು ಮಾಡಿದಂತಾಗುವುದು ಎಂದು **ವಿಷ್ಣುತೀರ್ಥ**ರು ಹೇಳಿದ್ದಾರೆ–

**ಗಾಯತ್ರೀ ನಾಮ ಬ್ರಹ್ಮಾಣೀ ದೈವೀ ಲಕ್ಷ್ಮೀಃ ಪ್ರಕೀರ್ತಿತಾ**

**ಗಾಯತ್ರೀ ಯತ್ರ ದೈವೀ ಸ್ಯಾತ್ ತತ್ರ ಶ್ರೀಃ ಪರಿಕೀರ್ತಿತಾ**

ಎಲ್ಲ ಮಂತ್ರಗಳೂ ಪ್ರಣವದಿಂದ ಉದ್ಗತವಾದ್ದರಿಂದ ಎಲ್ಲ ಮಂತ್ರಗಳಿಗೂ ಮುಖ್ಯವಾಗಿ ಪರಮಾತ್ಮನೇ ಋಷಿ ಹಾಗೂ ದೇವತೆ ಎನ್ನುವುದನ್ನು **ಋಗ್ಭಾಷ್ಯ**ದಲ್ಲಿ ಆಚಾರ್ಯರು ಹೇಳಿರುತ್ತಾರೆ–

**ಮುನಿಸ್ತು ಸರ್ವವಿದ್ಯಾನಾಂ ಭಗವಾನ್ ಪುರುಷೋತ್ತಮಃ**

**ದೇವತಾಽಖಿಲವಿದ್ಯಾನಾಂ ಸ್ವಯಂ ನಾರಾಯಣಃ ಪ್ರಭುಃ**

ಪ್ರಾಣಾಯಾಮದ ರೇಚಕಪೂರಕಕುಂಭಕಗಳಲ್ಲೂ ಬ್ರಹ್ಮವಿಷ್ಣು ರುದ್ರರಚಿಂತನೆಯನ್ನು, ಅದೃಶ್ಯನಾಗುವ ಲಘಿಮಾದಿಯೋಗಸಿದ್ಧಿಯನ್ನೀವ ಇತರ ತಂತ್ರಗಾರಿಕೆಯನ್ನೆಲ್ಲ ಇಲ್ಲಿ ಸಂಧ್ಯಾಚಿಂತನೆಯಲ್ಲಿ ನೀಡಲಾಗಿಲ್ಲ. ಶಾಸ್ತ್ರಕಾರರು ಈ ನಿಟ್ಟಿನಲ್ಲಿಯೂ ವ್ಯಾಪಕವಾದ ಚಿಂತನೆ ನೀಡಿರುತ್ತಾರೆ.



# ಋಷಿ ಛಂದಸ್ ದೇವತೆ ವಿನಿಯೋಗ ಬ್ರಾಹ್ಮಣ

ಯಾವುದೇ ವೇದಮಂತ್ರವನ್ನು ಹೇಳುವಲ್ಲಿ ಆ ಮಂತ್ರವನ್ನು ಮೊದಲು ಕಂಡ ಋಷಿಗಳು ಯಾರೆಂದು ತಿಳಿಯಬೇಕು. ಆ ಮಂತ್ರದಲ್ಲಿ ಎಷ್ಟು ಅಕ್ಷರಗಳಿವೆ ಎಂದು ತಿಳಿದರೆ ಛಂದಸ್ ತಿಳಿದಂತೆ ಆಗುವುದು. ಆ ಮಂತ್ರವಾಚ್ಯ ದೇವತೆ ಯಾರೆಂದು ತಿಳಿದು ಜಪಿಸಬೇಕು. ಯಾವ ಮಂತ್ರವನ್ನು ಎಲ್ಲಿ ಯಾವ ಕರ್ಮದಲ್ಲಿ ಪ್ರಯೋಗಿಸಬೇಕೆಂದೂ ತಿಳಿದಿರಬೇಕು. ಇದನ್ನು ವಿನಿಯೋಗ ಎನ್ನುವರು. ಕಡೆಗೆ ಆ ಮಂತ್ರದ ಅರ್ಥವನ್ನು ತಿಳಿಯಬೇಕು. ಇದನ್ನು ಬ್ರಾಹ್ಮಣ ಎನ್ನುವರು. ಬ್ರಹ್ಮ ಎಂದರೆ ವೇದ. ಅದನ್ನು ಅಣನ ಎಂದರೆ ತಿಳಿಯುವುದು. ವೇದಮಂತ್ರದ ಅರ್ಥ ಚಿಂತನೆ ಬ್ರಾಹ್ಮಣ ಎನಿಸಿದೆ. ತಿಳಿದವನು ಬ್ರಾಹ್ಮಣ ಎನಿಸುವನು.

ಬೃಹದ್ಯೋಗಿ ಯಾಜ್ಞವಲ್ಕ್ಯಸ್ಮೃತಿಯಲ್ಲಿ ಇದನ್ನು ಸ್ಪಷ್ಟಪಡಿಸಲಾಗಿದೆ–

ಯೇನ ಯದೃಷಿಣಾ ದೃಷ್ಟಂ ಸಿದ್ಧಿಃ ಪ್ರಾಪ್ತಾ ಚ ಯೇನ ವೈ
ಮಂತ್ರೇಣ ತಸ್ಯ ತತ್ಪ್ರೋಕ್ತಂ ಋಷಿಭಾವಸ್ತದಾರ್ಷಕಮ್
ಛಾದನಾಚ್ಛಂದ ಉದ್ದಿಷ್ಟಂ ಆಕೃತೇರ್ವಾಸಸೀ ಯಥಾ
ಆತ್ಮಾ ಸಂಛಾದಿತೋ ದೇವೈಃ ಮೃತ್ಯುಭೀತೈಶ್ಚ ವೈ ಪುರಾ
ಆದಿತ್ಯೈರ್ವಸುಭೀ ರುದ್ರೈಃ ತೇನ ಛಂದಾಂಸಿ ತಾನಿ ವೈ
ಯಸ್ಯಯಸ್ಯ ತು ಮಂತ್ರಸ್ಯ ಉದ್ದಿಷ್ಟಾ ದೇವತಾ ತು ಯಾ
ತದಾಕಾರಂ ಭವೇತ್ತಸ್ಯ ದೈವತಂ ದೇವತೋಚ್ಯತೇ
ಪುರಾಕಲ್ಪೇ ಸಮುದ್ದಿಷ್ಟಾ ಮಂತ್ರಾಃ ಕರ್ಮಾರ್ಥಸಿದ್ಧಯೇ
ಅನೇನೇದಂ ತು ಕರ್ತವ್ಯಂ ವಿನಿಯೋಗಃ ಸ ಉಚ್ಯತೇ
ನಿರುಕ್ತಂ ಯತ್ರ ಮಂತ್ರಸ್ಯ ಸಮುತ್ಪತ್ತಿಃ ಪ್ರಯೋಜನಮ್
ಪ್ರತಿಷ್ಠಾನಂ ಸ್ತುತಿಶ್ಚೈವ ಬ್ರಾಹ್ಮಣಂ ತದಿಹೋಚ್ಯತೇ
ಏತತ್ಪಂಚವಿಧಂ ಯೋಗಂ ಜಪಕಾಲೇ ಹ್ಯನುಸ್ಮರೇತ್
ಹೋಮೇ ಚಾಂತರ್ಜಪೇ ಯೋಗೇ ಸ್ವಾಧ್ಯಾಯೇ ಯಜನೇ ತಥಾ



ವೇದದ ಬ್ರಾಹ್ಮಣಭಾಷ್ಯಗಳಲ್ಲಿ ಇದನ್ನು ವಿಧಿಯಾಗಿ ಹೇಳಿದ್ದಾರೆ–

**ಯೋ ಹವಾ ಅವಿದಾತಾರ್ಷಚ್ಛಂದೋದೈವತಬ್ರಾಹ್ಮಣೇನ ಮಂತ್ರೇಣ ಯಜತಿ ಯಾಜಯತಿ ವಾಽಧ್ಯಾಪಯತಿ ಸ್ಥಾಣುಂ ವರ್ಚ್ಛತಿ ಗರ್ತ್ತೇ ವಾ ಪದ್ಯತೇ ಪ್ರವಾಮೀಯತೇ ಪಾಪೀಯಾನ್ ಭವತೀತಿ ತಸ್ಮಾದೇತಾನಿ ಮಂತ್ರೇ ವಿದ್ಯಾತ್**

ತಿಳಿದು ನಡೆಸಿದಾಗ ದೇವತೆಗಳ ಅನುಗ್ರಹಕ್ಕೆ ಪಾತ್ರನಾಗುವುದನ್ನೂ **ತೈತ್ತಿರೀಯಸಂಹಿತೆ**ಯಲ್ಲಿ ತಿಳಿಸಿದ್ದಾರೆ–

**ಯೋ ಹ ವಾ ಅಯಥಾದೈವತಂ ಯಜ್ಞಮುಪಚರತಿ**
**ಆ ದೇವತಾಭ್ಯೋ ವೃಕ್ಷ್ಯತೇ ಪಾಪೀಯಾನ್ ಭವತಿ**
**ಯೋ ಯಥಾದೈವತಂ ನ ದೇವತಾಭ್ಯೋ ವೃಕ್ಷ್ಯತೇ ವಸೀಯಾನ್ ಭವತಿ**

ಇವನ್ನೆಲ್ಲಾ ಉದಾಸೀನದಿಂದ ತಿಳಿಯದೇ, ಹೇಳದೇ ಜಪ ನಡೆಸಿದಲ್ಲಿ ಫಲ ಸಿಗಲಾರದೆಂದು **ಲಘುಶೌನಕಸ್ಮೃತಿ** –

**ಬ್ರಾಹ್ಮಣಂ ವಿನಿಯೋಗಂ ಚ ಛಂದಾರ್ಷಂ ಚ ಸದೈವತಮ್**
**ಅಜ್ಞಾತ್ವಾ ಚ ಜಪನ್ಮಂತ್ರಂ ನ ತಸ್ಯ ಫಲಮಶ್ನುತೇ**

ಋಷ್ಯಾದಿಗಳನ್ನು ತಿಳಿಯದವ ಜಪಕ್ಕೆ ಅಯೋಗ್ಯನೆಂದೇ **ವರ್ಣರತ್ನ ಪ್ರದೀಪಿಕಾ**ದ ಮಾತು

**ರಹಸ್ಯಂ ಯೋ ನ ಜಾನಾತಿ ಲಕ್ಷಣಂ ಚಾರ್ಷದಾದಿಕಮ್**
**ಸೋಽಧ್ಯಾಪನೇ ನ ಯೋಗ್ಯಃ ಸ್ಯಾತ್ ಜಪಹೋಮಾದಿಕರ್ಮ್ಮಸು**

ಮಂತ್ರಗಳ ಋಷ್ಯಾದಿಗಳನ್ನು ಅರಿಯದೆ ಇದ್ದಲ್ಲಿ ರೋಗ, ಮರಣ ಮುಂತಾದ ಅನರ್ಥಗಳು ಉಂಟಾಗುವುದೆಂದು **ನಾರದೀಯಪುರಾಣ** –

**ನ್ಯಾಸಹೀನೇ ಕ್ಷಯೇದಾಯುಃ ಧ್ಯಾನಹೀನೇ ತು ನಿಷ್ಫಲಮ್**
**ಮೃತ್ಯುಃ ಸ್ಯಾದ್ದೇವತಾಜ್ಞಾನೇ ಛಂದೋಹೀನೇ ತು ನಿಷ್ಫಲಮ್**
**ಋಷಿಹೀನೇ ಮಹಾವ್ಯಾಧಿಃ ಭವತ್ಯೇವ ನ ಸಂಶಯಃ**

ಋಷ್ಯಾದಿಗಳನ್ನು ತಿಳಿಯದೆ ವೇದಮಂತ್ರವನ್ನು ಜಪ–ಹೋಮಗಳಲ್ಲಿ ಪ್ರಯೋಗಿಸಿದರೆ ಪಾಪಿಯಾಗುವನೆಂದು ವ್ಯಾಸರು ಎಚ್ಚರಿಸಿದ್ದಾರೆ –



**ಅವಿದಿತ್ವಾ ಋಷಿಂ ಛಂದಃ ದೈವತಂ ಯೋಗಮೇವ ಚ**

**ನಾಧ್ಯಾಪಯೇದ್ ಜಪೇದ್ವಾಪಿ ಪಾಪೀಯಾನ್ ಜಾಯತೇ ತು ಸಃ**

ಋಷಿಯೆಂದರೆ ಮಂತ್ರದೃಷ್ಟ ಎಂದಿಷ್ಟೆ ಅಲ್ಲ. ಆ ಮಂತ್ರದಿಂದ ಫಲ ಕಂಡವನೂ ಆಗುತ್ತಾನೆ. ಹಾಗೆಯೇ ದೇವತೆಯೆನ್ನುವಾಗ ಪ್ರತಿಪಾದ್ಯನಷ್ಟೇ ಅಲ್ಲದೆ ಅವನಿಗೂ ಸ್ವಾಮಿಯಾಗಿ ಫಲ ನೀಡುವ ಭಗವಂತನೇ ಅರ್ಥವಾಗುತ್ತಾನೆಂದು **ತತ್ವಕಣಿಕಾ** ತಿಳಿಸಿದೆ –

**ದರ್ಶನಂ ಚ ಫಲಸ್ಯಾಹುಃ ನ ಪುನರ್ಮ್ಮಂತ್ರದರ್ಶನಾತ್**

**ದೇವತಾ ಮಂತ್ರಫಲದಾ ಮಂತ್ರೇಣ ಪ್ರತಿಪಾದಿತಾ**

ಎಲ್ಲ ಮಂತ್ರಗಳಿಗೂ ಹಯಗ್ರೀವರೂಪೀ ಭಗವಂತನೇ ಮೊದಲ ಋಷಿ ಎನ್ನುವುದನ್ನು ಆಚಾರ್ಯರು **ಪ್ರಮಾಣವಿವೇಕ**ದ ಮೂಲಕ ತಿಳಿಸಿರುವರು –

**ವೇದದ್ರಷ್ಟಾ ಪರಮರ್ಷಿಃ ಹಯಾಸ್ಯಃ ಪುರುಷೋತ್ತಮಃ**

**ತತ್ಪ್ರಸಾದಾದ್ಧಿ ತಪಸಾ ಪಶ್ಚಾನ್ಮಂತ್ರಾನ್ ಪ್ರಪೇದಿರೇ**

ಮತ್ತೆ ಹಯಗ್ರೀವನ ಅನುಗ್ರಹದಿಂದ ಉಳಿದವರು ಕೆಲವು ಕೆಲವು ಮಂತ್ರಗಳನ್ನು ಕಂಡರು. ಹಯಗ್ರೀವನ ಬಳಿಕ ಎಲ್ಲ ಮಂತ್ರಗಳನ್ನು ಕಂಡವ ಚತುರ್ಮುಖ ಬ್ರಹ್ಮಾ; ಮತ್ತೆ ಕ್ರಮವಾಗಿ ರುದ್ರ–ಇಂದ್ರ–ಗುರು–ಚಂದ್ರ–ವರುಣ–ಅಗ್ನಿ ಮುಂತಾದ ದೇವತೆಗಳು.

ಆಮೇಲೆ ಕೆಲವು ಋಷಿಗಳು ಕೆಲವು ಮಂತ್ರಗಳನ್ನು ಕಂಡು ಲೋಕದಲ್ಲಿ ಪ್ರಯೋಗಕ್ಕೆ ತಂದರು. ನಾವಿಂದು ನಮ್ಮ ಹತ್ತಿರಕ್ಕೆ ತಂದು ನೀಡಿದ ಪ್ರತ್ಯೇಕ ಋಷಿಗಳನ್ನಷ್ಟೆ ಮಂತ್ರದ್ರಷ್ಟಾರರನ್ನಾಗಿ ತಿಳಿದಿರುವೆವು. ಅದನ್ನಷ್ಟೆ ಹೇಳುತ್ತಿರುವೆವು. ಇದರಿಂದ ಮೊದಲು ಕಂಡವರ ದೊಡ್ಡವರ ನೆನಪು ಇಲ್ಲವಾಗುವುದು ಸಾಧನೆಯ ದೃಷ್ಟಿಯಿಂದ ಲೋಪವೆ ಆದಂತೆ. ಅದೂ ಕೆಲವೆಡೆ ಪರಂಪರೆಯಲ್ಲಿ ತಪ್ಪಾಗಿ ನುಸುಳಿ ಬಂದದ್ದೂ ಇವೆ. ಆದರೆ ಸಾಮಾನ್ಯವಾಗಿ ಜಪದಲ್ಲಿ ಸೇರಿರುವ ಮಂತ್ರಗಳ ಋಷ್ಯಾದಿಗಳನ್ನು ತಕ್ಕಮಟ್ಟಿಗೆ ಶುದ್ಧವಾಗಿ ಉಳಿಸಿಕೊಂಡಿದ್ದೇವೆ.

**ಋಷಿರ್ಗ್ಗುರುತ್ವಾತ್ ಶಿರಸ್ಯೈವ ಧಾರ್ಯಃ**



**ಛಂದೋಕ್ಷರತ್ವಾತ್ ವದನಾಗತಂ ಸ್ಯಾತ್**

**ಧಿಯಾವಗಂತವ್ಯತಯಾ ಸದೈವ**

**ಹೃದಿ ಪ್ರದಿಷ್ಟಾ ಮನುದೇವತಾ ಚ** (ಮಂತ್ರಪ್ರಕಾಶಿಕಾ)

ಮಂತ್ರಪ್ರಯೋಗದ ಮೊದಲು ಋಷಿಯನ್ನು ನೆನೆದು ತಲೆಮುಟ್ಟಿಕೊಳ್ಳ ಬೇಕು. ಮಂತ್ರವನ್ನು ಕಂಡು ನೀಡಿದ ಆ ಋಷಿಗೆ ನಾನು ತಲೆಬಾಗಿರುವೆನು, ಋಣಿಯಾಗಿರುವೆನು ಎಂದು ಇದರ ಅರ್ಥ. ಮಂತ್ರ ಉಚ್ಚಾರಣೆಗೆ ಛಂದೋಭಿಮಾನಿಗಳು ಅನುಗ್ರಹಿಸಲೆಂದು ಆ ಮಂತ್ರದ ಛಂದಸ್ಸನ್ನು ಹೇಳುತ್ತ ಬಾಯಿ ಮುಟ್ಟಬೇಕು. ಮಂತ್ರ ಪ್ರತಿಪಾದ್ಯ ದೇವತೆಯನ್ನು ಧ್ಯಾನಿಸುವೆನೆಂಬ ಆಶಯದಲ್ಲಿ ದೇವತಾನಾಮ ಹೇಳುತ್ತಾ ಹೃದಯವನ್ನು ಸ್ಪರ್ಶಿಸಬೇಕು–

**ಋಷಿಂ ಮೂರ್ಧನಿ ಸಂನ್ಯಸ್ಯ ವಕ್ತ್ರೇ ಛಂದಸ್ತಥೈವ ಚ**

**ತತ್ತನ್ಮಂತ್ರೋಕ್ತವಿಧಿನಾ ದೇವತಾಂ ಹೃದಯೇ ಸ್ಮರೇತ್** (ಶೇಷಸಂಹಿತಾ)

ತಂತ್ರಾಂತರದಲ್ಲಿ ಋಷ್ಯಾದಿಗಳ ನ್ಯಾಸದಲ್ಲಿನ ವಿವರಣೆ –

**ಮಹೇಶ್ವರಮುಖಾತ್ ಜ್ಞಾತ್ವಾ ಯಃ ಸಾಕ್ಷಾತ್ತಪಸೇ ಮನುಮ್**

**ಸಂಸಾಧಯತಿ ಶುದ್ಧಾತ್ಮಾ ಸ ತಸ್ಯ ಋಷಿರೀರಿತಃ**

**ಗುರುತ್ವಾನ್ಮಸ್ತಕೇ ಚಾಸ್ಯ ನ್ಯಾಸಸ್ತು ಪರಿಕೀರ್ತಿತಃ**

**ಸರ್ವೇಷಾಂ ಮಂತ್ರತತ್ವಾನಾಂ ಛಾದನಾತ್ ಛಂದ ಉಚ್ಯತೇ**

**ಅಕ್ಷರತ್ವಾತ್ ಪದತ್ವಾಚ್ಚ ಮುಖೇ ಛಂದಃ ಸಮೀರಿತಮ್**

**ಸರ್ವೇಷಾಮೇವ ಜಂತೂನಾಂ ಭಾಷಣಾತ್ ಪ್ರೇರಣಾತ್ತಥಾ**

**ಹೃದಯಾಂಭೋಜಮಧ್ಯಸ್ಥಾ ದೇವತಾ ತತ್ರ ತಾಂ ನ್ಯಸೇತ್**

ಯಜುರ್ವೇದಿಗಳಿಗೆ ಯಾಜುಷಮಂತ್ರಗಳ ವಿನಿಯೋಗದಲ್ಲಿ ಋಷ್ಯಾದಿಗಳನ್ನು ಹೇಳುವಲ್ಲಿ ರಿಯಾಯಿತಿ ಇದ್ದಂತೆ ಕಂಡುಬಂದರೂ ಋಷ್ಯಾದಿಗಳ ಪರಿಜ್ಞಾನದಲ್ಲಿ ರಿಯಾಯಿತಿ ಇಲ್ಲ. ಋಷ್ಯಾದಿ ಹೇಳದಿದ್ದರೆ ಮಂತ್ರ ವಿಫಲವಾಗುವುದಲ್ಲ. ಋಷ್ಯಾದಿಗಳ ಜ್ಞಾನವಿಲ್ಲದಿದ್ದರೆ ಮಂತ್ರ ಫಲ ನೀಡದು. ಹಾಗಾಗಿ ಯಾವುದೇ ಮಂತ್ರವಿರಲಿ ಅದನ್ನು ನೀಡಿದವರ ಬಗ್ಗೆ ಪ್ರತಿಪಾದ್ಯನ ಬಗ್ಗೆ



ಚೆನ್ನಾಗಿ ತಿಳಿದೆ ಜಪಿಸಬೇಕೆಂಬಲ್ಲಿ ಎಲ್ಲ ಪ್ರಮಾಣವಾಕ್ಯಗಳೂ ಸಂವಾದಿಯಾಗಿವೆ.

ವೇದದಲ್ಲಿ ಮುಖ್ಯವಾಗಿ ೭ ಛಂದಸ್ಸುಗಳಿವೆ –

**ಗಾಯತ್ರ್ಯುಷ್ಣಿಗನುಷ್ಟುಪ್‌ಬೃಹತೀಪಂಕ್ತಿಸ್ತ್ರಿಷ್ಟುಜ್ಜಗತ್ಯೈ** (ಅಥರ್ವವೇದ)

ಮಂತ್ರದಲ್ಲಿ ಅಕ್ಷರಗಳು 24ರಿಂದ ಆರಂಭಿಸಿ 48ರವರೆಗೆ ಇರುವುದನ್ನು ಗಮನಿಸಿ ಈ ವಿಭಾಗವನ್ನು ನಡೆಸಲಾಗಿದೆ. ಒಂದೆರೆಡು ಅಕ್ಷರ ಹೆಚ್ಚುಕಡಿಮೆ ಇದ್ದರೂ ಆಯಾ ಛಂದಸ್ಸಿನಿಂದಲೆ ಅದನ್ನು ಗುರುತಿಸಲಾಗುವುದು. ಕೆಲವು ಒತ್ತಕ್ಷರವನ್ನು ವಿಶ್ಲೇಷಿಸಿ ಪಠಿಸುವ ಮೂಲಕ ಸಂಖ್ಯೆಯನ್ನು ತುಂಬಲಾಗುವುದು.

ಪ್ರಸಿದ್ಧ ಗಾಯತ್ರೀಮಂತ್ರದಲ್ಲಿಯೇ **ವರೇಣ್ಯಂ** ಶಬ್ದವನ್ನು ಬಿಡಿಸಿ ವರೇಣಿಯಂ ಎನ್ನುವ ಮೂಲಕ 24 ಅಕ್ಷರ ಎಂದು ಪರಿಗಣಿಸಲಾಗುವುದು. ಛಂದಸ್ಸಿಗೂ ಸ್ವರಕ್ಕೂ ಸಂಬಂಧವನ್ನು ಪ್ರಾಚೀನ ವೇದಜ್ಞರು ಗುರುತಿಸಿದ್ದಾರೆ. ಈ ಏಳು ಛಂದಸ್ಸುಗಳಿಗೂ ದೇವತಾಸ್ತ್ರೀಯರು ಅಭಿಮಾನಿನಿಯರು. ಮುಖ್ಯವಾಗಿ ಎಲ್ಲ ಮಂತ್ರಗಳಿಗೂ ದೇವತೆ ನಾರಾಯಣನಿರುವಂತೆ ಸಕಲ ಛಂದೋಭಿಮಾನಿನಿ ಲಕ್ಷ್ಮೀ ಆಗಿದ್ದಾಳೆ. ವೇದಪುರುಷ ಗರುಡ ಗಾಯತ್ರೀಬೃಹತೀಛಂದಸ್ಸುಗಳಿಗೆ ವಿಶೇಷಾಭಿಮಾನಿಯು.

| **ಛಂದಸ್** | **ಅಕ್ಷರಗಳು** | **ಇತರ ಅಭಿಮಾನಿನಿಯರು** |
|---|---|---|
| ಗಾಯತ್ರೀ | 24 | ಸರಸ್ವತೀ, ಭಾರತೀ, ಸ್ವಾಹಾ |
| ಉಷ್ಣಿಕ್ | 28 | ಸಂಜ್ಞಾ |
| ಅನುಷ್ಟುಪ್ | 32 | ರೋಹಿಣೀ, ಸರಸ್ವತೀ |
| ಬೃಹತೀ | 36 | ಸರಸ್ವತೀ, ಭಾರತೀ, ತಾರಾ |
| ಪಂಕ್ತಿ | 40 | ಶಚೀ, ಮಿತ್ರಾವರುಣರ ಪತ್ನೀ |
| ತ್ರಿಷ್ಟುಪ್ | 44 | ಶಚೀ |
| ಜಗತೀ | 48 | ವಾರುಣೀ, ಸರ್ವದೇವತಾಸ್ತ್ರೀಯರು |

**ಋಗ್ಭಾಷ್ಯದಲ್ಲಿ** ಆಚಾರ್ಯ ಮಧ್ವರು ಇದನ್ನು ಸಂಗ್ರಹಿಸಿರುತ್ತಾರೆ–

**ಗಾಯತ್ರೀ ಬೃಹತೀ ಚೈವ ತಾಃ ಸರ್ವಾ ಗರುಡಸ್ತಥಾ**



**ಬ್ರಹ್ಮಾಣ್ಯನುಷ್ಟುಬಿಂದ್ರಾಣೀ ತ್ರಿಷ್ಟುಪ್ ಸ್ವಾಹೇತಿ ಚೋಚ್ಯತೇ**

**ಗಾಯತ್ರೀ ಜಗತೀ ಚೈವ ವಾರುಣೀ ರೋಹಿಣೀ ತಥಾ**

**ಅನುಷ್ಟುಪ್ ಬೃಹತೀ ಚೈವ ತಾರಾ ಪಂಕ್ತಿಃ ಶಚೀ ತಥಾ**

**ಉಷ್ಣಿಕ್ ಸೌರೀ ಜಗತ್ಯಶ್ಚ ಸರ್ವದೇವಸ್ತ್ರಿಯೋ ಮತಾಃ**

**ವಿರಾಣ್ಮಿತ್ರಾವರುಣಯೋಃ ಭಾರ್ಯೇ ಇತಿ ಚ ಕೀರ್ತ್ತಿತೇ**

ಇದನ್ನು ವೇದಮಂತ್ರವು ಛಂದಃ ಕಿಮಾಸೀತ್ ಎಂದು ಪ್ರಶ್ನಿಸಿ ಉತ್ತರಿಸಿದೆ–

**ಅಗ್ನೇರ್ಗಾಯತ್ರ್ಯಭವತ್ಸಯುಗ್ವಾ ಉಷ್ಣಿಹಯಾ ಸವಿತಾ ಸಂಬಭೂವ**

**ಅನುಷ್ಟುಭಾ ಸೋಮ ಉಕ್ಥೈರ್ಮಹಸ್ವಾನ್ ಬೃಹಸ್ಪತೇರ್ಬೃಹತೀ ವಾಚಮಾವತ್**

**ವಿರಾಣ್ಮಿತ್ರಾವರುಣಯೋರಭಿಶ್ರೀಃ ಇಂದ್ರಸ್ಯ ತ್ರಿಷ್ಟುಬಿಹ ಭಾಗೋ ಅಹ್ನಃ**

**ವಿಶ್ವಾನ್ ದೇವಾನ್ ಜಗತ್ಯಾವಿವೇಶ ತೇನ ಚಾಕ್ಲ್ಪ್ರ ಋಷಯೋ ಮನುಷ್ಯಾಃ**

ಮೈತ್ರಾಯಣೀಯ, ತೈತಿರೀಯ, ಕಾಠಕ, ವಾಜಸನೇಯ, ಕಾಣ್ವ ಸಂಹಿತೆಗಳಲ್ಲಿ ದೇವಪತ್ನಿಯರನ್ನು ಹೇಳಿದ್ದಾರೆ –

**ಗಾಯತ್ರೀ ತ್ರಿಷ್ಟುಪ್ ಜಗತ್ಯನುಷ್ಟುಪ್ ಪಂಕ್ತ್ಯಾ ಸಹ**

**ಬೃಹತ್ಯುಷ್ಣಿಹಾ ಕಕುಪ್ ದೇವಾನಾಂ ಪತ್ನಯೋ**

**ವಿಶಃ ಸೂಚೀಭಿಃ ಶಮಯಂತು ತ್ವಾ**

ತೈತ್ತಿರೀಯಸಂಹಿತೆಯಲ್ಲಿ ಬರುವ ಛಂದೋಭಿಮಾನಿಯರಲ್ಲಿನ ಪ್ರಾರ್ಥನೆಯಲ್ಲಿ ಭಾರ್ಯಾಸಹಿತರಾದ ಸುರರಲ್ಲಿ ಕೇಳಿಕೊಂಡಂತೆ ಅರ್ಥೈಸಬೇಕು–

**ಸಮಿಧಮಾತಿಷ್ಠ**

**ಗಾಯತ್ರೀ ತ್ವಾ ಛಂದಸಾಮವತು ಅಗ್ನಿರ್ದೇವತಾ**

**ತ್ರಿಷ್ಟುಪ್ ತ್ವಾ ಛಂದಸಾಮವತು ಇಂದ್ರೋ ದೇವತಾ**

**ಜಗತೀ ತ್ವಾ ಛಂದಸಾಮವತು ಮರುತೋ ದೇವತಾ**

**ಅನುಷ್ಟುಪ್ ತ್ವಾ ಛಂದಸಾಮವತು ಮಿತ್ರಾವರುಣೌ ದೇವತಾ**

**ಪಂಕ್ತಿಸ್ತ್ವಾ ಛಂದಸಾಮವತು ಬೃಹಸ್ಪತಿರ್ದೇವತಾ**

ಎಲ್ಲ ಮಂತ್ರಕ್ಕೆ ಮುಖ್ಯವಾಗಿ ಭಗವಂತ ಬ್ರಹ್ಮ ರುದ್ರರ ಬಳಿಕ ಋಗ್ವೇದಕ್ಕೆ



ಇಂದ್ರನನ್ನು ಋಷಿಯನ್ನಾಗಿ ತಿಳಿಯಬೇಕು. ಯಜುರ್ವೇದಕ್ಕೆ ಸೂರ್ಯನನ್ನೂ ಸಾಮವೇದಕ್ಕೆ ಚಂದ್ರನನ್ನೂ ಋಷಿಯನ್ನಾಗಿ ತಿಳಿದಿರಬೇಕು–

**ಋಚಾಮೃಷಿಸ್ತತಃ ಶಕ್ರೋ ಯಜುಷಾಂ ಸೂರ್ಯ ಏವ ಚ**
**ಸೋಮಃ ಸಾಮ್ನಾಂ ತೃತೀಯಸ್ತೇ ಪ್ರತಿಪತ್ತಾರ ಈರಿತಾಃ**

ಭಗವಂತನನ್ನೆ ಮಂತ್ರದಿಂದ ಪ್ರಧಾನವಾಚ್ಯನಾಗಿ ಧ್ಯಾನಿಸಬೇಕು. ಪ್ರಣವದ ವಿಸ್ತಾರವೆ 51 ಅಕ್ಷರಗಳಾದ್ದರಿಂದ, ಎಲ್ಲ ಮಂತ್ರಗಳೂ ಈ 51 ಅಕ್ಷರಗಳಲ್ಲಿಯೆ ಸೇರಿರುವುದರಿಂದ ಪ್ರಣವವಾಚ್ಯನಾದ ಭಗವಂತನೆ ಎಲ್ಲ ಮಂತ್ರಗಳಿಂದಲೂ ಮುಖ್ಯ ಪ್ರತಿಪಾದ್ಯನು. ಅವನ ಪೂರ್ಣಾನುಗ್ರಹಪ್ರಾಪ್ತಿಯೆ ಮಂತ್ರೋಚ್ಚಾರಣೆಯ ಉದ್ದೇಶ. ಈ ನಿಟ್ಟಿನಲ್ಲಿಯೇ ಸಂಧ್ಯಾವಂದನೆಯ ಎಲ್ಲ ಮಾಂತ್ರಿಕಕ್ರಿಯೆಯೂ ನಡೆದಿದೆ.

**ಛಂದಸ್ಸು ಸಂಸ್ಥಿತೋ ವಿಷ್ಣುಃ ಗೋಪಾಯೇತ್ಯೇವ ತದ್ವಿದಮ್**
**ಛಂದಸ್ಸು ಸಂಸ್ಥಿತೋ ವಾಯುಃ ವಾಯೌ ಸ ಚ ಜನಾರ್ದನಃ**

ಐತರೇಯಭಾಷ್ಯದಲ್ಲಿ ಆಚಾರ್ಯಮಧ್ವರು ಛಂದಸ್ಸುಗಳಲ್ಲಿ ವಾಯುದೇವತೆ ಇರುವನು; ಆ ವಾಯುವಿನಲ್ಲಿ ಭಗವಂತನಿರುವನೆಂಬ ಪ್ರಮಾಣ ನೀಡಿರುತ್ತಾರೆ. ಗಾಯತ್ರ್ಯಾದಿ ಛಂದಸ್ಸುಗಳೂ ಅನಿರುದ್ಧಾದಿ ಭಗವದ್ರೂಪಗಳೆಂದೂ ತಿಳಿಸಿರುತ್ತಾರೆ–

**ಗಾಯತ್ರೀ ತ್ವನಿರುದ್ಧೋऽಸೌ ತ್ರಿಕಾಲೇ ಗೀಯತೇ ಯತಃ**
**ಉಷ್ಣಿಗುಷ್ಣಸ್ವರೂಪತ್ವಾತ್ ಪ್ರದ್ಯುಮ್ನೋऽಗ್ನ್ಯಾದಿಸಂಸ್ಥಿತಃ**
**ಸ್ತ್ರೀರೂಪೋ ಬೃಹತೀನಾಮಾ ಬೃಹತ್ಸಂಕರ್ಷಣಃ ಪ್ರಭುಃ**
**ವಾಸುದೇವಸ್ತಥಾ ತ್ರಿಷ್ಟುಪ್ ತ್ರಿವೇದ್ಯೈಃ ಸ್ತೂಯತೇ ಯತಃ**
**ನಾರಾಯಣಸ್ತು ಸ್ತ್ರೀರೂಪೋ ದ್ವಿಧೈವಾಸೌ ವ್ಯವಸ್ಥಿತಃ**
**ದ್ವಿಪದೇತಿ ತತೋ ನಾಮ ಸರ್ವೇ ಛಂದೋಭಿಧಾ ಇಮೇ**
**ಅಭಿಮಾನೀ ಬೃಹತ್ಯಾಸ್ತು ವಾಯುರೇವ ಯತಃ ಪ್ರಭುಃ**
**ಸಪ್ತಛಂದಾಂಸಿ ಚೈವಂ ಹಿ ಪ್ರತಿಮಾ ವೈಷ್ಣವೀ ಮತಾ**

# ಕಾಲ ಪುರುಷ

| | | |
|---|---|---|
| 1 ಪರಮಾಣು ಕಾಲ | = | 16/18225 ಸೆಕೆಂಡು |
| 1 ತ್ರುಟಿ | = | 32/675 ಸೆಕೆಂಡು |
| 1 ವೇಧ | = | 32/2025 ಸೆಕೆಂಡು |
| 1 ಲವ | = | 32/225 ಸೆಕೆಂಡು |
| 1 ನಿಮೇಷ | = | 32/75 ಸೆಕೆಂಡು |
| 1 ಕ್ಷಣ | = | 1/725 ನಿಮಿಷ |
| 1 ಘಳಿಗೆ | = | 24 ನಿಮಿಷಗಳು |
| 1 ಮುಹೂರ್ತ | = | 48 ನಿಮಿಷಗಳು |
| 30 ಮುಹೂರ್ತ | = | ಒಂದು ದಿನ |
| 7 ದಿನ | = | ಒಂದು ವಾರ |
| 15 ದಿನ | = | ಒಂದು ಪಕ್ಷ |
| 30 ದಿನ | = | ಒಂದು ಮಾಸ |
| 2 ಮಾಸ | = | ಒಂದು ಋತು |
| 3 ಋತು | = | ಒಂದು ಅಯನ |
| 2 ಅಯನ | = | ಒಂದು ವರುಷ |
| 360 ವರುಷ (ಮಾನುಷ) | = | ಒಂದು ದೇವವರ್ಷ |
| 4000 ದೇವವರ್ಷ | = | ಒಂದು ಕೃತಯುಗ |
| 400 + 400 ದೇವವರ್ಷ | = | ಕೃತಯುಗ ಸಂಧಿಕಾಲ |
| 3000 ದೇವವರ್ಷ | = | ಒಂದು ತ್ರೇತಾಯುಗ |
| 300 + 300 ದೇವವರ್ಷ | = | ತ್ರೇತಾಯುಗ ಸಂಧಿಕಾಲ |
| 2000 ದೇವವರ್ಷ | = | ಒಂದು ದ್ವಾಪರಯುಗ |
| 200 + 200 ದೇವವರ್ಷ | = | ದ್ವಾಪರಯುಗ ಸಂಧಿಕಾಲ |
| 1000 ದೇವವರ್ಷ | = | ಒಂದು ಕಲಿಯುಗ |



| | | |
|---|---|---|
| 100 + 100 | = | ಕಲಿಯುಗ ಸಂಧಿಕಾಲ |
| ಮನುಷ್ಯಮಾನದ ಕಲಿಯುಗ | = | 1200 X 360 = 4,32,000 ವರುಷ |
| " ದ್ವಾಪರಯುಗ | = | 8,64,000 ವರುಷ |
| " ತ್ರೇತಾಯುಗ | = | 12,96,000 ವರುಷ |
| " ಕೃತಯುಗ | = | 17,28,000 ವರುಷ |
| " ಒಂದು ಚತುರ್ಯುಗಕಾಲ | = | 43,20,000 ವರುಷ |
| " ಒಂದು ಮನ್ವಂತರಕಾಲ | = | 71 ಚತುರ್ಯುಗ + 18,50,000 ವರುಷ |
| ಬ್ರಹ್ಮದೇವರ ಒಂದು ದಿನ | = | 864,00,00,000 ವರುಷ (ಮಾನುಷ) |
| 14 ಮನ್ವಂತರದ ಮಧ್ಯ ಪ್ರಳಯಕಾಲ | = | 20,000 ವರುಷ (ಮಾನುಷ) |
| ಬ್ರಹ್ಮದೇವರ ಆಯುಷ್ಯ | = | 31,104 ಸಾವಿರ ಕೋಟಿ ವರುಷ |

ಈಗ ಚತುರ್ಮುಖನ 51ನೆಯ ವರುಷದ ಮೊದಲ ದಿನದಲ್ಲಿ ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಪಸ, ರೈವತ, ಚಾಕ್ಷುಷಗಳೆಂಬ 6 ಮನ್ವಂತರಗಳು ಕಳೆದಿವೆ. 7ನೆಯ ವೈವಸ್ವತಮನ್ವಂತರದ 28ನೆಯ ಕಲಿಯುಗ ಈಗ ನಡೆಯುತ್ತಲಿದೆ. ಅಂದರೆ ಈಗ ಭೂಮಿ ಸೃಷ್ಟಿಯಾಗಿ 197 ಕೋಟಿ ವರ್ಷಗಳು ಸಂದವು. (6 ಮನ್ವಂತರಗಳು+6 ಮನ್ವಂತರಗಳ ಪ್ರಳಯಕಾಲ + 7ನೆಯ ಮನ್ವಂತರದ 27 ಚತುರ್ಯುಗಗಳು + ಕೃತ ತ್ರೇತಾ ದ್ವಾಪರಯುಗಗಳು + ಈಗಿನ ಕಲಿಯುಗದ ಸಂದ 5121 ವರುಷಗಳು) (ಭೂಮಿಯ ಇಂದಿನವರೆಗಿನ ಆಯುಷ್ಯಕ್ಕೆ ದಾಖಲೆಯಾಗಿ ವಿಶ್ವದಲ್ಲಿ ಮೂರು ಕಡೆ ಇರುವ ಶಿಲೆಯನ್ನು ವಿಜ್ಞಾನಿಗಳು ಪತ್ತೆಹಚ್ಚಿದ್ದಾರೆ. ಅದರಲ್ಲೊಂದು ತಿರುಪತಿಯ ಶಿಲಾತೋರಣ.) ಇನ್ನು ಮನ್ವಂತರಪ್ರಳಯಕ್ಕೆ 18 ಕೋಟಿಗಳಷ್ಟು ವರುಷಗಳಿವೆ. ಈ ಭೂಮಿಯ ಇನ್ನುಳಿದ ಆಯುಷ್ಯ 235 ಕೋಟಿವರುಷಗಳು. ಅಂದರೆ ಉಳಿದ ಸೂರ್ಯಸಾವರ್ಣಿ ಮುಂತಾದ 7 ಮನ್ವಂತರಗಳು. ಆನಂತರ ಬ್ರಹ್ಮನ 51ನೆಯ ದಿನಕಲ್ಪ ಪ್ರಳಯ ಆಗಲಿದೆ. ಆ ಪ್ರಳಯಕಾಲದ ಅವಧಿಯು 432 ಕೋಟಿ ವರ್ಷಗಳು. ಹೀಗೆ ಬ್ರಹ್ಮನ ಆಯುಷ್ಯ 100 ವರುಷ.

# ಸಂಕಲ್ಪ

**ಸ್ಮೃತಿಸಾರದಲ್ಲಿ** ಪ್ರಾಣಾಯಾಮದ ಬಳಿಕ ಸಂಕಲ್ಪ ಮಾಡಲು ಹೇಳಿದ್ದಾರೆ- **ಪ್ರಾಣಾನಾಯಮ್ಯ ವಿಧಿವತ್ ವಾಗ್ಯತಃ ಸಂಯತೇಂದ್ರಿಯಃ**

**ಅಥ ಸಂಧ್ಯಾಮುಪಾಸಿಷ್ಯ ಇತಿ ಸಂಕಲ್ಪಮಾಚರೇತ್**

ಕೈಗಳಲ್ಲಿ ದರ್ಭೆಯನ್ನು ಹಿಡಿದುಕೊಂಡು ಪ್ರಾಣಾಯಾಮದ ಬಳಿಕ ಇಂದಿನ ದಿನದ ಕಾಲಿಕ ಪರಿಚಯವನ್ನು ಪ್ರದೇಶದೊಡನೆ ಶಾಬ್ದಿಕವಾಗಿ ಹೇಳುವ ಸಂಕಲ್ಪಕ್ರಿಯೆಯನ್ನು ನಡೆಸಬೇಕು –

**ಕರಾಭ್ಯಾಂ ಧಾರಯೇದ್ದರ್ಭಾನ್ ಶಿಖಾಬಂಧಂ ವಿಧಾಯ ಚ**

**ಪ್ರಾಣಾಯಾಮಾನ್ ತಥಾ ಕುರ್ಯಾತ್ ಕಾಲಜ್ಞಾನಂ ಯಥಾವಿಧಿ**

ಸಂಧ್ಯಾವಂದನೆಯ ಮೊದಲು ಹೀಗೆಲ್ಲ ಸಂಕಲ್ಪ ಮಾಡಲಿದೆ –

**ಪ್ರಾತಃಸಂಧ್ಯಾಮುಪಾಸಿಷ್ಯೇ**

**ಮಧ್ಯಾಹ್ನಸಂಧ್ಯಾಮಹಂ ಕರಿಷ್ಯೇ**

**ಸಾಯಂ ಸಂಧ್ಯಾವಂದನಮಹಂ ಕರೋಮಿ**

ಇಲ್ಲಿ ರಾತ್ರಿ-ಬೆಳಗಿನ, ಹಗಲು-ರಾತ್ರಿಯ, ಪೂರ್ವಾಹ್ಣ-ಅಪರಾಹ್ಣಗಳ ಸಂಧಿಕಾಲವನ್ನು ಗುರುತಿಸಿ ಬ್ರಹ್ಮಚಿಂತನೆಯನ್ನು ಮಾಡುವ ವಿಚಾರ ನಡೆದಿದೆ. ವಿಶ್ವದ ಬೆಳಕಿನ ಗತಿಯಿಂದ ಪ್ರಾದೇಶಿಕವಾಗಿ ನಡೆಯುವ ಏರುಜಾರುಗಳನ್ನು ಗುರುತಿಸಿ ದೇವತಾದಿಗಳೂ ಕೂಡಾ ಆ ಸಮಯದಲ್ಲಿ ನಡೆಸುವ ಬ್ರಹ್ಮಚಿಂತನೆಯನ್ನಿಲ್ಲಿ ಮನುಷ್ಯರಿಗೂ ವಿಧಿಸಲಾಗಿದೆ. ಇದನ್ನು **ಸಂಸ್ಕಾರರತ್ನಮಾಲೆಯಲ್ಲಿ** ಕಾಣಬಹುದು-

**ಸಂಧ್ಯೇತಿ ಸೂರ್ಯಗಂ ಬ್ರಹ್ಮ ಸಂಧಾನಾದಿವಿಧಾನತಃ**

**ಬ್ರಹ್ಮಾದ್ಯೈಃ ಸಕಲೈರ್ಭೂತೈಃ ಸ್ತಂಬಾಂತೈಃ ಸಚ್ಚಿದಾತ್ಮನಃ**

ಪ್ರತಿ ಯಾಮದ ದೇವತೆಗಳ ಜತೆಗೆ ಮೂರು ಹೊತ್ತಿನ ಪ್ರಧಾನ ನಿಯಾಮಕರಾದ ಬ್ರಹ್ಮವಿಷ್ಣುಮಹೇಶ್ವರರ ಸಮಾಗಮದ ಕ್ಷಣಗಳನ್ನು ಗುರುತಿಸಿ



ಸಂಧ್ಯೆ ಎಂದು ಕರೆದು ಉಪಾಸನೆಯ ಕ್ರಮವನ್ನು ಸಾರಲಾಗಿದೆ. ಇದನ್ನು **ಯಾಜ್ಞವಲ್ಕ್ಯ**ರು ಹೀಗೆ ಹೇಳಿದ್ದಾರೆ -

**ತ್ರಯಾಣಾಂ ಚೈವ ವೇದಾನಾಂ ಬ್ರಹ್ಮಾದೀನಾಂ ಸಮಾಗಮಃ**

**ಸಂಧಿಃ ಸರ್ವಸುರಾಣಾಂ ಚ ತೇನ ಸಂಧ್ಯಾ ಪ್ರಕೀರ್ತಿತಾ**

ಜ್ಞಾನದಿಂದ ಮರುಹುಟ್ಟು ಪಡೆದವನು ಸಂಸ್ಕಾರವುಳ್ಳ ಬುದ್ಧಿವಂತನು ಸಂಧ್ಯಾವಂದನೆಯನ್ನು ಎಂದೂ ಬಿಡಬಾರದು-

**ನ ಸ ದ್ವಿಜೋ ಯೋ ನ ಕರೋತಿ ಸಂಧ್ಯಾಮ್**

ಸಂಧ್ಯಾದಿಕರ್ಮಗಳಲ್ಲಿ ನಡುವೆ ಹರಟೆ, ಪಟ್ಟಾಂಗ, ಮಾತುಕತೆ ನಡೆಸಬಾರದೆಂದು **ಆಚಾರಪ್ರದೀಪ** ಎಚ್ಚರಿಸಿದೆ-

**ಸಂಧ್ಯಯೋರುಭಯೋರ್ಜಾಪ್ಯೇ ಭೋಜನೇ ದಂತಧಾವನೇ**

**ಪಿತೃಕಾರ್ಯೇ ಚ ದೈವೇ ಚ ತಥಾ ಮೂತ್ರಪುರೀಷಯೋಃ**

**ಗುರೂಣಾಂ ಸನ್ನಿಧೌ ದಾನೇ ಯೋಗೇ ಚೈವ ವಿಶೇಷತಃ**

**ಏಷು ಮೌನಂ ಸಮಾತಿಷ್ಠನ್ ಸ್ವರ್ಗಂ ಪ್ರಾಪ್ನೋತಿ ಮಾನವಃ**

ಮನಸ್ಸಿನಲ್ಲಿ ಮಾಡುವೆನೆಂದು ಹೇಳಿದ ಕರ್ಮಕ್ಕೆ ಸಂಬಂಧಿಸಿದಂತೆ ಮಾತ್ರ ಚಿಂತನೆ ನಡೆಯುತ್ತಿರಬೇಕು. ಅದಕ್ಕಾಗಿಯೇ ಕರ್ಮಪೂರ್ವದಲ್ಲಿ ಸಂಕಲ್ಪ ಪ್ರಧಾನ ಪಾತ್ರವನ್ನು ವಹಿಸಿದೆ. ಎಲ್ಲ ಕ್ರಿಯೆಯ ಮೊದಲೂ ಸಂಕಲ್ಪ ಬೇಕೇಬೇಕೆಂದು **ಮಾರ್ಕಂಡೇಯ**ರು ಹೇಳುವರು -

**ಸಂಕಲ್ಪಮೂಲಃ ಕಾಲೋ ವೈ ಯಜ್ಞಾಃ ಸಂಕಲ್ಪಸಂಭವಾಃ**

**ವ್ರತಂ ನಿಯಮಧರ್ಮೌ ಚ ಸರ್ವೇ ಸಂಕಲ್ಪಜಾಃ ಸ್ಮೃತಾಃ**

**ಮಾರ್ಕಂಡೇಯಪುರಾಣ**ವು ಸಂಕಲ್ಪ ಇಲ್ಲದ ಕರ್ಮಕ್ಕೆ ಫಲವಿರದೆಂದು ಸಾರಿದೆ - **ಸಂಕಲ್ಪ್ಯ ಚ ತಥಾ ಕುರ್ಯಾತ್ ಸ್ನಾನದಾನವ್ರತಾದಿಕಮ್**

**ಅನ್ಯಥಾ ಪುಣ್ಯಕರ್ಮಾಣಿ ನಿಷ್ಫಲಾನಿ ಭವಂತಿ ಚ**

**ಭವಿಷ್ಯತ್ಪುರಾಣ**ವು ಸಂಕಲ್ಪವಿಲ್ಲದೆ ಮಾಡಿದ ಕರ್ಮಕ್ಕೆ ಅತ್ಯಲ್ಪಫಲವನ್ನು ಮಾತ್ರ ಹೇಳಿದೆ - **ಸಂಕಲ್ಪೇನ ವಿನಾ ರಾಜನ್ ಯತ್ಕಿಂಚಿತ್ಕುರುತೇ ನರಃ**



**ಫಲಂ ಚಾಲ್ಪಾಲ್ಪಕಂ ತಸ್ಯ ಧರ್ಮಸ್ಯಾರ್ಥಕ್ಷಯೋ ಭವೇತ್**

ಸಂಕಲ್ಪ ಮಾಡುವಾಗ ಪೂರ್ವ ಅಥವಾ ಉತ್ತರದಿಕ್ಕಿಗೆ ಮುಖಹಾಕಿ ನೀರನ್ನು ಈಶಾನ್ಯಕ್ಕೆ ಬಿಡಬೇಕೆಂದು **ಬ್ರಹ್ಮಪುರಾಣ** ಹೇಳಿದೆ–

**ಜಲಾಶಯಾರಾಮಕೂಪೇ ಸಂಕಲ್ಪೇ ಪೂರ್ವದಿಙ್ಮುಖಃ**

**ಸಾಧಾರಣೇ ಚೋತ್ತರಾಸ್ಯ ಐಶಾನ್ಯಾಂ ನಿಕ್ಷಿಪೇಜ್ಜಲಮ್**

ಎಲ್ಲ ಕರ್ಮಗಳನ್ನೂ ಭಗವಂತನ ಬ್ರಹ್ಮರುದ್ರಾದಿಗಳ ನಿಯಾಮಕನ ಆರಾಧನೆಯಾಗಿ ನಡೆಸುವೆನೆಂದು ಮುಖ್ಯವಾಗಿ ಸಂಕಲ್ಪವಾಗಿರಬೇಕು –

**ಪ್ರಾತಃ ಕಾಲಾದಿಕಂ ಕರ್ಮ ನಿತ್ಯನೈಮಿತ್ತಿಕಾತ್ಮಕಮ್**

**ಕೇಶವಾರಾಧನಾರ್ಥಾಯ ಕರಿಷ್ಯೇಽಹಂ ತವಾಜ್ಞಯಾ**

ಇದನ್ನೆ **ಯಾಜ್ಞೀಯಮಂತ್ರೋಪನಿಷತ್** ಕರ್ಮಸಿದ್ಧಾಂತವಾಗಿ ಹೇಳಿದ್ದು–

**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ**

ಭಗವಂತನ ನೆನಪಲ್ಲಿ ಕರ್ಮಗಳನ್ನೆಲ್ಲ ಮಾಡುತ್ತ ನೂರುಕಾಲ ಬದುಕಬೇಕು.

ಮಾನಸಸಿದ್ಧತೆಯ ಜತೆ ಮನೋಬಲದಿಂದ ಕರ್ಮಪೂರ್ತಿಯು ಸಂಕಲ್ಪದ ಹಿನ್ನಲೆಯಲ್ಲಿ ಸೇರಿದೆ. ಋಷಿಭಟ್ಟೀಯ **ಸಂಧ್ಯಾರತ್ನ**ದಲ್ಲಿ ಸಂಕಲ್ಪದ ತಂತ್ರಗಾರಿಕೆ ಹೇಳಲಾಗಿದೆ –

**ಸಂಕಲ್ಪಶ್ಚೇನ್ಮನಸಿ ಮನನಂ ಪ್ರೋಕ್ತರೀತ್ಯಾಽಥ ವಾಚಾ**

**ವ್ಯಾಹರ್ತವ್ಯಂ ತದನು ಚ ಕರೇಣಾಂಬುಸೇಕಸ್ತ್ರಿಧೇತಿ**

ಮೊದಲು ಯಾವ ಕರ್ಮವನ್ನು ನಡೆಸುವೆನೆಂದು ಯೋಚಿಸುವುದು. ಅನಂತರ ಬಾಯಿಂದ ಈ ಕರ್ಮವನ್ನು ಮಾಡುವೆನೆಂದು ಹೇಳುವುದು. ಕಡೆಯಲ್ಲಿ ಬಲಕೈಯಿಂದ ನೀರನ್ನು ಕೆಳಗೆ ಬಿಡುವುದು.

**ಯಾಂ ತಿಥಿಂ ಸಮನುಪ್ರಾಪ್ಯ ಉದಯಂ ಯಾತಿ ಭಾಸ್ಕರಃ**

**ಸಾ ತಿಥಿಃ ಸಕಲಾ ಜ್ಞೇಯಾ ಸ್ನಾನದಾನವ್ರತಾದಿಷು**

ಜಪಮಾಡುವುದು ಯಾವ ದಿನವೆಂದರೆ ಸೂರ್ಯೋದಯದಲ್ಲಿ ಆ



ದಿನ ಯಾವ ತಿಥಿ ಇರುವುದೋ ಅಂದು. ಆ ತಿಥಿ ಕೃಷ್ಣಪಕ್ಷದ್ದೋ ಶುಕ್ಲಪಕ್ಷದ್ದೋ ಆಗಿರುತ್ತದೆ. ಆ ಪಕ್ಷವು ಚೈತ್ರಾದಿ ಹನ್ನೆರಡು ಮಾಸಗಳಲ್ಲಿ ಒಂದಾಗಿರುವುದು. ಆ ಮಾಸಗಳು ಒಂದು ಸಂವತ್ಸರದಲ್ಲಿ ಬಂದಿರುವುದು. ಹೀಗೆ ಸಂಕಲ್ಪಕ್ಕೆ ದಿನದ ಸಂಬಂಧ. ಸೂರ್ಯೋದಯದಲ್ಲಿ ಇರುವ ತಿಥಿ ಬೆಳಗಿನ ಜಪಕ್ಕೆ, ಸೂರ್ಯೋದಯಕ್ಕಿಂತ ಮೊದಲು ಮಾಡಿದ ಅಂದಿನ ಸ್ನಾನಕ್ಕೆ ಸಂಕಲ್ಪದಲ್ಲಿ ಹೇಳಬೇಕಾದ ತಿಥಿಯಾಗಿರುತ್ತದೆ. ಸಂಜೆಯ ಜಪಕ್ಕೆ ಅಥವಾ ಮಧ್ಯಾಹ್ನದ ಜಪಕ್ಕೆ ಆ ತಿಥಿ ಇಲ್ಲದಿರಬಹುದು. ಆದರೆ ಮುಂದಿನ ಸಂಧ್ಯಾವಂದನೆಗಳಲ್ಲಿ ಬೆಳಗ್ಗಿನ ಜಪಕ್ಕೆ ಹೇಳಿದ ತಿಥಿಯನ್ನೇ ಬಳಸಬೇಕು. ಮರುದಿನ ತಿಥಿಯೊಂದು ಬಿಟ್ಟುಹೋಗಿರಬಹುದು, ತಪ್ಪಿಲ್ಲ. ಹಾಗೆಯೇ ಎರಡು ಸೂರ್ಯೋದಯಕ್ಕೆ ಒಂದೇ ತಿಥಿ ಬಂದಿರಬಹುದು. ಆಗಲೂ ತಿಥಿ ಬದಲಿಸುವಂತಿಲ್ಲ. ಒಂದು ತಿಥಿಯ ಎರಡು ಬೆಳಗಿನ ಜಪಗಳು ಆದರೇನೂ ಅಡ್ಡಿಯಿಲ್ಲ. ಹೀಗೆ ಜಪದ ಸಂಕಲ್ಪದಲ್ಲಿ ತಿಥಿಯ ಬಿತ್ತರ.

ಯಾವ ದಿನದಂದು ಕರ್ಮವನ್ನು ನಡೆಸುವೆನೆಂದು ಹೇಳದೆ ಹೋದಲ್ಲಿ ಕರ್ಮದ ಫಲ ಸಿಗಲಾರದೆಂದು ಬೃಹದ್ಯಮರು ಎಚ್ಚರಿಸಿದ್ದಾರೆ–

**ಮಾಸಪಕ್ಷತಿಥೀನಾಂ ಚ ನಿಮಿತ್ತಾನಾಂ ಚ ಸರ್ವಶಃ**

**ಉಲ್ಲೇಖನಮಕುರ್ವಾಣೋ ನ ತಸ್ಯ ಫಲಭಾಗ್ಭವೇತ್** (ಪ್ರಯೋಗದೀಪಿಕಾ)

ಇದನ್ನು ವೈದ್ಯನಾಥೀಯದಲ್ಲಿ ಕ್ರಮವಿಶೇಷದೊಂದಿಗೆ ಸ್ಪಷ್ಟಪಡಿಸಲಾಗಿದೆ–

**ಸದರ್ಭಹಸ್ತೌ ಜಾನೂರ್ಧ್ವೇ ದಕ್ಷಿಣೇ ದಕ್ಷಿಣೋತ್ತರೌ**

**ಕೃತ್ವಾ ವಾರಾದಿ ಸಂಸ್ಮೃತ್ಯ ಏತತ್ಕರ್ಮ ಕರೋತಿ ಯತ್**

**ಸ್ವಮಾನಸೇ ಸಂಸ್ಮರಣಂ ತತ್ಸಂಕಲ್ಪ ಇತೀರಿತಃ**

ಕೈಯಲ್ಲಿ ದರ್ಭೆ ಹಿಡಿದುಕೊಂಡು ಸಂಕಲ್ಪ ತರ್ಪಣ ಅರ್ಘ್ಯ ಜಪಗಳನ್ನೆಲ್ಲ ಮಾಡಬೇಕು. ಎಡಕಾಲ ಮೇಲೆ ಬಲಕಾಲು ಬರುವಂತೆ ಕುಳಿತುಕೊಳ್ಳಬೇಕು. ಸಂಕಲ್ಪ ಮಾಡುವಾಗ ಬಲಗಾಲ ಗಂಟಿನ ಮೇಲೆ ಎರಡೂ ಕೈಗಳನ್ನು ಸಂಪುಟದಂತೆ ಹಿಡಿದುಕೊಳ್ಳಬೇಕು.



ದೇವರ ನಿರ್ಮಾಲ್ಯತುಳಸಿಯನ್ನು ಹಿಡಿದುಕೊಂಡು ಜಪ, ಪೂಜೆ, ಶ್ರಾದ್ಧ, ಹೋಮ, ದಾನ, ಸ್ನಾನ, ತರ್ಪಣ, ಮಾರ್ಜನ ಇವುಗಳನ್ನು ನಡೆಸಬೇಕು ಎಂದು ವಿಧಿಗೆ ನಾರಾಯಣನ ಉಪದೇಶ. ತೋರುಬೆರಳು ಮತ್ತು ನಡುಬೆರಳ ನಡುವೆ ನಿರ್ಮಾಲ್ಯವನ್ನು ಹಿಡಿದುಕೊಳ್ಳಬೇಕು.

**ಯಜ್ಞಂ ದಾನಂ ಜಪಂ ತೀರ್ಥಂ ಶ್ರಾದ್ಧಂ ವೈ ದೇವತಾರ್ಚನಮ್**
**ತರ್ಪಣಂ ಮಾರ್ಜನಂ ಚಾನ್ಯತ್ ನ ಕುರ್ಯಾತ್ತುಳಸೀಂ ವಿನಾ**

ದಿನವನ್ನು ಶಾಸ್ತ್ರೀಯವಾಗಿ ಹೇಳಬೇಕು. ಸಂಕ್ಷೇಪವಾಗಿ ಕಾಲವನ್ನು ಆರು ಬಗೆಯಿಂದ ವಿಭಾಗಿಸಲಾಗಿದೆ – ಸಂವತ್ಸರ, ಅಯನ, ಋತು, ಮಾಸ, ಪಕ್ಷ, ತಿಥಿ, ಮತ್ತಲ್ಲಿ ದಿನ(ತಿಥಿ)ವನ್ನು ವಾರದಿಂದಲೂ ಗುರುತಿಸಲಾಗಿದೆ. ಆ ದಿನ ಇರುವ ನಕ್ಷತ್ರ–ಯೋಗ–ಕರಣಗಳನ್ನೂ ಸಂಕಲ್ಪದಲ್ಲಿ ಹೇಳಬೇಕು –

**ಅಬ್ದಾಯನರ್ತುಮಾಸಾಂಶ್ಚ ಪಕ್ಷತಿಥ್ಯೃಕ್ಷವಾಸರಾನ್**
**ಯೋಗಂ ಚ ಕರಣಂ ಚೈವ ಸಂಕಲ್ಪೇ ಸಮುದಾಹರೇತ್** (ಬ್ರಹ್ಮಪುರಾಣ)

**ಕಾಲೋಽಸ್ಮಿ ಲೋಕಕ್ಷಯಕೃತ್** ಎನ್ನುವುದಾಗಿ ಕೃಷ್ಣ ಗೀತೆಯಲ್ಲಿ ತನ್ನನ್ನು ಕಾಲನೆಂದೇ ಪರಿಚಯಿಸಿದ್ದಾನೆ. ಹತ್ತು ಕಾಲದ ಅವಯವಗಳನ್ನು ಗುರುತಿಸಿದ ಪುರಾಣವು ಇವೆಲ್ಲ ಕಾಲ ವಿಷ್ಣುವೆಂದೇ ಹೇಳಿದೆ –

**ತಿಥಿರ್ವಾರಶ್ಚ ನಕ್ಷತ್ರಂ ಯೋಗಃ ಕರಣ ಏವ ಚ**
**ಕಾಲೋ ವಿಷ್ಣುಮಯಃ ಪಕ್ಷಮಾಸರ್ತ್ವಬ್ದಾಯನಾಭಿಧಃ**

ಇಂದು ಮಾಸದ ಉಲ್ಲೇಖದಲ್ಲಿ ಸೌರಮಾನವನ್ನೂ ತಿಳಿಸಲಾಗುವುದು. ಸೂರ್ಯ ಖಗೋಳದಲ್ಲಿ ಯಾವ ರಾಶಿಯಲ್ಲಿದ್ದುಕೊಂಡು ನಮ್ಮನ್ನು ನಿಯಮಿಸುತ್ತಿರುವನೆಂದು ಇಲ್ಲಿ ಚಿಂತಿಸಲಾಗುವುದು. ಯೋಗಕರಣನಕ್ಷತ್ರಗಳನ್ನು ಸಂಕಲ್ಪದಲ್ಲಿ ಹೆಚ್ಚಾಗಿ ಹೇಳಲಾಗುವುದಿಲ್ಲ. ಆದರೆ ಕಾಲಘಟಕಗಳಿಗೆಲ್ಲ ಪ್ರತ್ಯೇಕ ದೇವತೆಗಳು ವಿಶೇಷ ಅಭಿಮಾನಿಗಳಾಗಿರುವುದರಿಂದ ಆಯಾ ಕಾಲಾವಯವಗಳ ಉಲ್ಲೇಖದಿಂದ ಸಂಬಂಧಿಸಿದ ದೇವತೆಗಳ ಅನುಗ್ರಹವಿಶೇಷವು ದೊರಕಲಿದೆ. ಆದ್ದರಿಂದ ಯೋಗಾದಿಗಳೂ ಉಲ್ಲೇಖನಾರ್ಹಗಳೇ ಆಗಿವೆ. ಶ್ರೀವಾದಿರಾಜರು



ಸಂಕಲ್ಪಪದ್ಧತಿಯಲ್ಲಿ ಕರಣನಕ್ಷತ್ರಗಳನ್ನೂ ಹೇಳಿರುತ್ತಾರೆ.

ಗಾರ್ಗ್ಯರು 60 ಸಂವತ್ಸರಗಳನ್ನು ಪಟ್ಟಿ ಮಾಡಿರುತ್ತಾರೆ –

**ಪ್ರಭವೋ ವಿಭವಃ ಶುಕ್ಲಃ ಪ್ರಮೋದೋಽಥ ಪ್ರಜಾಪತಿಃ**

**ಅಂಗಿರಾ ಶ್ರೀಮುಖೋ ಭಾವೋ ಯುವಾ ಧಾತೇಶ್ವರಸ್ತಥಾ**

**ಬಹುಧಾನ್ಯಃ ಪ್ರಮಾಥೀ ಚ ವಿಕ್ರಮೋಽಥ ವೃಷಸ್ತಥಾ**

**ಚಿತ್ರಭಾನುಃ ಸುಭಾನುಶ್ಚ ತಾರಣಃ ಪಾರ್ಥಿವೋಽವ್ಯಯಃ**

**ಸರ್ವಜಿತ್ಸರ್ವಧಾರೀ ಚ ವಿರೋಧೀ ವಿಕೃತಿಃ ಖರಃ**

**ನಂದನೋ ವಿಜಯಶ್ಚೈವ ಜಯೋ ಮನ್ಮಥದುರ್ಮುಖೌ**

**ಹೇಮಲಂಬೀ ವಿಲಂಬೀ ಚ ವಿಕಾರೀ ಶಾರ್ವರೀ ಪ್ಲವಃ**

**ಶುಭಕೃತ್ ಶೋಭನಃ ಕ್ರೋಧೀ ವಿಶ್ವಾವಸುಪರಾಭವೌ**

**ಪ್ಲವಂಗಃ ಕೀಲಕಃ ಸೌಮ್ಯಃ ಸಾಧಾರಣವಿರೋಧಕೃತ್**

**ಪರಿಧಾವೀ ಪ್ರಮಾದೀ ಚ ಆನಂದೋ ರಾಕ್ಷಸೋ ನಲಃ**

**ಪಿಂಗಲಃ ಕಾಲಯುಕ್ತಶ್ಚ ಸಿದ್ಧಾರ್ಥೀ ರೌದ್ರದುರ್ಮತೀ**

**ದುಂದುಭೀ ರುಧಿರೋದ್ಗಾರೀ ರಕ್ತಾಕ್ಷೀ ಕ್ರೋಧನಃ ಕ್ಷಯಃ**

ಸಂವತ್ಸರದ ಬಗ್ಗೆ ವಿಶೇಷವಾದ ಮಾಹಿತಿಯನ್ನು ನೀಡುತ್ತಾ, ಸಂವತ್ಸರವನ್ನು ಮುಖ್ಯವಾಗಿ ಪಂಚಕಾಲಾವಯವವನ್ನಾಗಿ **ವಾಯುಪುರಾಣ** ಹೇಳಿದೆ – **ಪಂಚಾನಾಂ ಪ್ರವಿಭಕ್ತಾನಾಂ ಕಾಲಾವಸ್ಥಾಂ ನಿಬೋಧತ**

**ದಿನಾರ್ಧಮಾಸಮಾಸೈಸ್ತು ಋತುಭಿಸ್ತ್ವಯನೈಸ್ತಥಾ**

ಪ್ರಭುವಾದಿ 60 ಸಂವತ್ಸರಗಳಿಗೆ ಆಯಾ ನಾಮದ ಭಗವಂತನೆ ಮುಖ್ಯವಾಗಿ ದೇವತೆಯಾಗಿದ್ದಾನೆ. ಆತನ ಗುಣವನ್ನೆ ಸಂವತ್ಸರನಾಮಗಳಿಂದ ಚಿಂತಿಸಬೇಕು. ಸಂವತ್ಸರ ಎಂದರೇನೆ ಪ್ರಜಾಪಾಲಕ, ತಂದೆ ಎಂದು ಅರ್ಥ.

**ಸ್ವಯಂ ಸಂವತ್ಸರೋ ಹರಿಃ** (ವರಾಹಪುರಾಣ)

**ಪುರುಷೋ ವೈ ಸಂವತ್ಸರಃ** (ಶತಪಥಬ್ರಾಹ್ಮಣ)

ಎಲ್ಲಾ ಕಾಲಾವಯವಗಳ ಅರಸ ಸಂವತ್ಸರವೆಂದು **ಹರಿವಂಶ** –



**ಋತೂನಾಮಥ ಮಾಸಾನಾಂ ದಿವಸಾನಾಂ ತಥೈವ ಚ**

**ಪಕ್ಷಾಣಾಂ ಚ ಕ್ಷಪಾಣಾಂ ಚ ಮುಹೂರ್ತ್ತತಿಥಿಪರ್ವಣಾಮ್**

**ಕಲಾಕಾಷ್ಠಾಪ್ರಮಾಣಾನಾಂ ಗತೇರಯನಯೋಸ್ತಥಾ**

**ಕರಣಸ್ಯಾಥ ಯೋಗಸ್ಯ ಚಕ್ರೇ ಸಂವತ್ಸರಂ ಪ್ರಭುಮ್**

ವರ್ಷಕಾಲವನ್ನು ಐದು ರೀತಿಯಿಂದ ಪುರಾಣಕಾರರು ಗುರುತಿಸಿದ್ದಾರೆ. ಅದರ ಲಕ್ಷಣವನ್ನು ಬ್ರಹ್ಮತರ್ಕದ ಮೂಲಕ ಸ್ಪಷ್ಟವಾಗಿ ಮೊದಲು ಪ್ರಕಾಶಪಡಿಸಿದವರು ಆಚಾರ್ಯಮಧ್ವರು. ಸೂರ್ಯನ ಪೂರ್ಣ ಸಂಚಾರದಿಂದ ಸಂದ ಒಂದು ವರ್ಷ ಕಾಲಕ್ಕೆ ಸಂವತ್ಸರವೆಂದು ಹೆಸರು. ಗುರುವಿನ ಪೂರ್ಣ ಸಂಚಾರದಿಂದ ಸಂದ ಒಂದು ವರ್ಷ ಕಾಲಕ್ಕೆ ಪರಿವತ್ಸರವೆಂದು ಹೆಸರು. ಹನ್ನೆರಡು ಬಾರಿ ಇಪ್ಪತ್ತೇಳು ನಕ್ಷತ್ರಗಳ ಆವೃತ್ತಿಯಲ್ಲಿ ಸಂದ ಕಾಲಕ್ಕೆ ಇಡಾವತ್ಸರವೆಂದು ಹೆಸರು. ಮೂವತ್ತು ತಿಥಿಗಳ ಹನ್ನೆರಡು ಬಾರಿ ಆವೃತ್ತಿ ಕಾಲಕ್ಕೆ ಅನುವತ್ಸರವೆಂದು ಹೆಸರು. ಮುನ್ನೂರ ಅರವತ್ತು ದಿನದ ಕಾಲಕ್ಕೆ ವತ್ಸರವೆಂದು ಹೆಸರು. ಈ ಐದು ನಾಮಗಳೂ ಭಗವಂತನ ಹೆಸರುಗಳು.

**ಇಡಾವತ್ಸರನಾಮಾಽಸೌ ನಕ್ಷತ್ರದ್ವಾದಶಾಸ್ಥಿತಃ**

**ತಿಥೀನಾಂ ದ್ವಾದಶಾವರ್ತ್ತೇ ಯೋ ಹರಿಃ ಸೋಽನುವತ್ಸರಃ**

**ವತ್ಸರೋ ಯಃ ಸ್ಥಿತಸ್ತ್ವಹ್ನಾಂ ಷಷ್ಟ್ಯುತ್ತರಶತತ್ರಯೇ**

**ಗುರ್ವಾವರ್ತ್ತದ್ವಾದಶಾಂಶೇ ಯಃ ಸ್ಥಃ ಸ ಪರಿವತ್ಸರಃ**

**ಸೌರದ್ವಾದಶಕೇ ಮಾಸೇ ಯಃ ಸ್ಥಃ ಸಂವತ್ಸರೋ ಹರಿಃ**

**ಏವಂ ಸ ಕಾಲನಾಮಾಽಪಿ ಕಾಲಸ್ಥಃ ಪರಮೇಶ್ವರಃ**

ಇಲ್ಲಿನ ಭಗವಂತನ ಪಂಚರೂಪನಾಮಗಳು ವಿಷ್ಣುಧರ್ಮೋತ್ತರದಲ್ಲಿ –

**ಪುರುಷಂ ವಾಸುದೇವಂ ಚ ತಥಾ ಸಂಕರ್ಷಣಂ ವಿಭುಮ್**

**ಪ್ರದ್ಯುಮ್ನಂ ಚಾನಿರುದ್ಧಂ ಚ ಕ್ರಮಾದಬ್ದೇಷು ಕೀರ್ತ್ತಯೇತ್**

ಪಂಚರೂಪವರ್ಷಕ್ಕೆ ದೇವತೆಗಳು ಹೀಗಿದ್ದಾರೆ –

**ಆದೌ ಸಂವತ್ಸರೋ ಜ್ಞೇಯೋ ಯುಗಶ್ಚಾನಲದೈವತಃ**



**ಭಾನುಮದ್ದೈವತಃ ಪ್ರೋಕ್ತೋ ದ್ವಿತೀಯಃ ಪರಿವತ್ಸರಃ**

**ಇಡಾವತ್ಸರಸಂಜ್ಞಶ್ಚ ತೃತೀಯಃ ಸೋಮದ್ದೈವತಃ**

**ಅನುವತ್ಸರಕಶ್ಚೈವ ಪ್ರಾಜಾಪತ್ಯಃ ಸಮೀರಿತಃ**

**ತಥೈವ ವತ್ಸರೋ ಗೌರೀದ್ದೈವತಃ ಸ ತು ಪಂಚಮಃ**

ಕಾರಣಾಗಮದಲ್ಲಿ ಮದನರತ್ನದಲ್ಲಿ 60 ಸಂವತ್ಸರಗಳ ಲಕ್ಷಣಗಳಿವೆ. ಜಾತಕಾಭರಣದಲ್ಲಿ ಆಯಾ ವರ್ಷದಲ್ಲಿ ಹುಟ್ಟಿದವನ ಗುಣಲಕ್ಷಣಗಳನ್ನು ಹೇಳಲಾಗಿದೆ. ಮುಹೂರ್ತಗಣಪತಿಯಲ್ಲಿ ಪಂಚವರ್ಷಗಳು ಕ್ರಮವಾಗಿ 60 ಸಂವತ್ಸರಕ್ಕೆ ಸಂಬಂಧಿಸುವಂತೆ ಹೇಳಲಾಗಿದೆ. ದೈವಜ್ಞವಿಲಾಸದಲ್ಲಿ ಸಂವತ್ಸರಗಳ ಪಟ್ಟಿ ಬಂದಿದೆ. ಶೈವಾಗಮದಲ್ಲಿ ಅಭಿಮಾನಿಗಳ ಉಲ್ಲೇಖವಿದ್ದರೂ ಅದರಲ್ಲಿ ದೇವರ ಅವತಾರಗಳೂ ಸೇರಿರುವುದರಿಂದ ಅದು ಪರಮಪ್ರಮಾಣವೆನಿಸದು.

ಎರಡು ಅಯನದ ದೇವರು **ಬಲರಾಮ** ಮತ್ತು **ಕೃಷ್ಣ** ಎನ್ನುವುದಾಗಿ **ವಿಷ್ಣುಧರ್ಮೋತ್ತರ – ಬಲಭದ್ರಂ ತಥಾ ಕೃಷ್ಣಂ ಕೀರ್ತ್ತಯೇದಯನದ್ವಯೇ**

ಕಾಲದ ಪ್ರಧಾನ ಬದಲಾವಣೆಗಳನ್ನು ಸೂಚಿಸುವ ಆರು ಋತುಗಳಿಗೆ ಋತುಚಕ್ರಗಳಿಗೆ ಏನೂ ಬದಲಾಗದ ಆನಂದಮಯನಾದ ಭಗವಂತನೇ ಅರ್ಥನಾಗಿ ಲೀಲಾಲೋಲನಿದ್ದಾನೆ ಎನ್ನುವ ಗೀತಿಯನ್ನು **ಸಾಮವೇದ** ಹೇಳಿದೆ –

**ವಸಂತ ಇನ್ನು ರಂತ್ಯೋ ಗ್ರೀಷ್ಮ ಇನ್ನು ರಂತ್ಯಃ**

**ವರ್ಷಾಣ್ಯನು ಶರದೋ ಹೇಮಂತಃ ಶಿಶಿರ ಇನ್ನು ರಂತ್ಯಃ**

**ಶತಪಥಬ್ರಾಹ್ಮಣದಲ್ಲಿ** ಷಡ್ವಾ ಋತವಃ ಸಂವತ್ಸರಸ್ಯ ಎನ್ನುವುದಾಗಿ ಆರು ಹೇಳಿದ್ದರೂ ಚಳಿಯ ಗುಣವನ್ನು ಏಕೀಕರಿಸಿ ಐದು ಋತುವನ್ನೇ ಆರನ್ನಾಗಿ ಹೇಳಲಾಗಿದೆ ಎನ್ನುತ್ತಾ ಸಂವತ್ಸರದ ಸಾಧನೆಗೆ ಸ್ವರ್ಗಕ್ಕೋ ದೇವರೆಡೆಗೋ ಪಯಣಕ್ಕೆ ಪಂಚಋತುಗಳೂ ಬಾಗಿಲುಗಳು ಎನ್ನುವುದಾಗಿ ಹೇಳಲಾಗಿದೆ – **ವಸಂತ ಏವ ದ್ವಾರಂ ಹೇಮಂತೋ ದ್ವಾರಂ**

ತಂ ವಾ ಏತಂ ಸಂವತ್ಸರಂ **ಸ್ವರ್ಗಂ ಲೋಕಂ ಪ್ರಪದ್ಯತೇ**

**ತಾಂಡ್ಯಬ್ರಾಹ್ಮಣದಲ್ಲಿ** ವರ್ಷಕ್ಕೆ ಋತುಗಳನ್ನು ಶರೀರವಾಗಿ ಪರಿಚಯಿಸಿ



ವರ್ಷಪೂರ್ತಿ ಸಾಧನೆಗೆ ಪೂರ್ಣತೆಯನ್ನು ಸೂಚಿಸಿದ್ದಾರೆ. ಪುಚ್ಛ ಶಬ್ದವು ಮನುಷ್ಯರ ಶರೀರದಲ್ಲಿ ಪಾದವನ್ನು ತಿಳಿಸಿದೆ –

**ಸಂವತ್ಸರೋ ವೈ ವ್ರತಮ್ । ತಸ್ಯ ವಸಂತ ಋತುರ್ಮ್ಮುಖಮ್**

**ಗ್ರೀಷ್ಮಶ್ಚ ವರ್ಷಾಶ್ಚ ಪಕ್ಷೌ । ಶರನ್ಮಧ್ಯಮ್ । ಹೇಮಂತಃ ಪುಚ್ಛಮ್**

ಪಂಚೇಂದ್ರಿಯಗಳ ಸಮಾವೇಶದಲ್ಲಿ ಪಂಚಪ್ರಾಣರೊಳಗಿನ ಪಂಚಋಷಿಭಗವಂತನ ಚಿಂತನೆಯಲ್ಲಿ ಛಂದಸ್ಸುಗಳೈದರ ಸಂಪರ್ಕದಲ್ಲಿ ಋತುಗಳ ಅನುಸಂಧಾನ **ಕಾಣ್ವಸಂಹಿತೆಯಲ್ಲಿ** –

**ವಸಂತಃ ಪ್ರಾಣಾಯನಃ । ಗಾಯತ್ರೀ ವಾಸಂತೀ । ವಸಿಷ್ಠ ಋಷಿಃ ....**

**ಪ್ರಾಣಂ ಗೃಹ್ಣಾಮಿ ಪ್ರಜಾಭ್ಯಃ**

**ಗ್ರೀಷ್ಮೋ ಮಾನಸಃ । ತ್ರಿಷ್ಟುಪ್ ಗ್ರೈಷ್ಮೀ । ಭರದ್ವಾಜ ಋಷಿಃ... ಮನೋ ಗೃಹ್ಣಾಮಿ**

**ವರ್ಷಾಃ ಚಾಕ್ಷುಷ್ಯಃ । ಜಗತೀ ವಾರ್ಷೀ । ಜಮದಗ್ನಿಃ ಋಷಿಃ ... ಚಕ್ಷುರ್ಗೃಹ್ಣಾಮಿ**

**ಶರತ್ ಶ್ರೌತ್ರ್ಯಮ್ । ಅನುಷ್ಟುಪ್ ಶಾರದೀ । ವಿಶ್ವಾಮಿತ್ರ ಋಷಿಃ... ಶ್ರೋತ್ರಂ ಗೃಹ್ಣಾಮಿ**

**ಹೇಮಂತೋ ವಾಚ್ಯಃ । ಪಂಕ್ತಿರ್ಹೇಮಂತೀ । ವಿಶ್ವಕರ್ಮ್ಮಾ ಋಷಿಃ...**

**ವಾಚಂ ಗೃಹ್ಣಾಮಿ**

ದೇವರ ರೂಪಗಳು ಆರು ಋತುಗಳಲ್ಲಿ ಹೀಗಿವೆ –

**ಮಾಧವಂ ಪುಂಡರೀಕಾಕ್ಷಂ ತಥಾ ವೈ ಭೋಗಶಾಯಿನಮ್**

**ಪದ್ಮನಾಭಂ ಹೃಷೀಕೇಶಂ ತಥಾ ದೇವಂ ತ್ರಿವಿಕ್ರಮಮ್**

**ಕ್ರಮೇಣ ರಾಜಶಾರ್ದೂಲ ವಸಂತಾದಿಷು ಕೀರ್ತ್ತಯೇತ್**

ಋತು ಎಂದರೆ ಭಗವಂತ ಎಂದೇ ಅರ್ಥ. ಹೇಮಂತ ಶಿಶಿರಗಳ ಧರ್ಮ ಒಂದೇ – ಚಳಿಯಾಗುವುದು. ಹಾಗಾಗಿ ಐದು ಋತುಗಳೆಂದೇ ವೇದಗಳಲ್ಲಿ ಹೇಳಲಾಗಿದೆ. ಪಂಚರ್ತುಗಳಲ್ಲಿ ವಾಸುದೇವಾದಿ ಪಂಚವ್ಯೂಹರೂಪಗಳನ್ನು ತಿಳಿಯಬೇಕು. ಇದನ್ನು **ಛಂದೋಗೋಪನಿಷತ್** ತಿಳಿಸಿದೆ.

**ಋತುಷು ಪಂಚವಿಧಂ ಸಾಮೋಪಾಸೀತ**

**ವಸಂತೋ ಹಿಂಕಾರೋ ಗ್ರೀಷ್ಮಃ ಪ್ರಸ್ತಾವಃ**



ವರ್ಷಾ ಉದ್ಗೀಥಃ ಶರತ್ ಪ್ರತಿಹಾರಃ

ಹೇಮಂತೋ ನಿಧನಂ ಕಲ್ಪಂತೇ ಹಾಸ್ಮೈ

ಋತವ ಋತುಮಾನ್ ಭವತಿ ಯ ಏತದೇವಂ

ವಿದ್ವಾನೃತುಷು ಪಂಚವಿಧಂ ಸಾಮೋಪಾಸ್ತೇ

ಆಚಾರ್ಯಮಧ್ವರ ಭಾಷ್ಯದಲ್ಲಿ ಪಂಚರ್ತುಗಳ ನಾಮಗಳಲ್ಲಿ ಭಗವಂತನ ಗುಣಚಿಂತನೆ ಸ್ಪಷ್ಟವಾಗಿದೆ.

ಋತುನಾಮಾನಮೃತುಗಂ ಋತತ್ವಾದೃತುನಾಮಕಮ್

ಇತ್ಯುಪಾಸೀತ ಯೋ ವಿಷ್ಣುಂ ಪಂಚಾತ್ಮಾನಮಮುಷ್ಯ ಹಿ

ಮೋಕ್ಷಾದೀನ್ ಕಲ್ಪತೇ ಚಾಸ್ಯ ಋತುಸಂಸ್ಥೋ ಜನಾರ್ದನಃ

ರಕ್ಷ್ಯತ್ವಾತ್ತೇನ ತದ್ವಾಂಶ್ಚ ಸದೈವ ಸ್ಯಾದುಪಾಸಕಃ

ವಾಸಸ್ಯ ಸುಖಕಾರಿತ್ವಾತ್ ವಸಂತಃ ಪುರುಷೋತ್ತಮಃ

ನೀರಾದೇರ್ಗ್ಗರಣಾದ್ಗ್ರೀಷ್ಮೋ ವರ್ಷಣಾದ್ವರ್ಷ ಉಚ್ಯತೇ

ಶಂ ರಾತೀತಿ ಶರತ್ ಪ್ರೋಕ್ತೋ ಹೇಮಂತೋ ಹಿಮಕಾರಣಾತ್

ಸೃಷ್ಟಿ-ಸ್ಥಿತಿ-ಸಂಹಾರಕರೆನಿಸಿಕೊಂಡ ಬ್ರಹ್ಮ-ವಿಷ್ಣು-ಮಹೇಶ್ವರರು ಋತುಧರ್ಮಗಳಿಗನುಗುಣವಾಗಿ ಸ್ಕಾಂದಪುರಾಣದಲ್ಲಿ ಗುರುತಿಸಲ್ಪಟ್ಟಿದ್ದಾರೆ. ಹತ್ತಿರದ ಋತುಗಳೂ ಅವರ ಧರ್ಮವನ್ನೇ ಹೇಳಿವೆ –

ಪ್ರಾವೃಟ್ಕಾಲೋ ಹ್ಯಹಂ ಬ್ರಹ್ಮಾ ಆಪಶ್ಚೈವ ಪ್ರಕೀರ್ತಿತಾಃ

ಮೇಘರೂಪೋ ಹ್ಯಹಂ ಪ್ರೋಕ್ತೋ ವರ್ಷಯಾಮಿ ಚ ಭೂತಳೇ

ಹೇಮಂತಶ್ಚ ಭವೇದ್ವಿಷ್ಣುಃ ವಿಶ್ವರೂಪಂ ಚರಾಚರಮ್

ಪಾಲನಾಯ ಜಗತ್ಸರ್ವಂ ವಿಷ್ಣೋರ್ಮ್ಮಾಹಾತ್ಮ್ಯಮುತ್ತಮಮ್

ಗ್ರೀಷ್ಮಕಾಲೋ ಹ್ಯಹಂ ಪ್ರೋಕ್ತಃ ಸರ್ವಭೂತಕ್ಷಯಂಕರಃ

ಕರ್ಷಯಾಮಿ ಜಗತ್ಸರ್ವಂ ರುದ್ರರೂಪಸ್ತಪಸ್ವಿನಿ

ಸಂವತ್ಸರದ ಘಟಕಗಳು 6 ಋತುಗಳು ಭಗವಂತನ ಪರಿಚಾರಕ ದೇವತೆಗಳು, ಕಾಮಾದಿಗಳು –



**ಷಡ್ ವಾ ಋತವಃ ಸಂವತ್ಸರಸ್ಯ । ಋತವೋ ವೈ ದೇವಾಃ ।**

ಶೈವಾಗಮದಲ್ಲಿ ಆರು ಋತುದೇವತೆಗಳ ಹೆಸರಿವೆ –

**ಕಾಮೋಽಗ್ನಿರ್ವರುಣೋ ಗೌರೀ ಸರ್ಪ್ಪ ಈಶ್ವರ ಏವ ಚ**

**ಏತಾಃ ಪ್ರಕೀರ್ತ್ತಿತಾಃ ಷಣ್ಣಾಂ ಋತೂನಾಂ ಅಧಿದೇವತಾಃ**

ಚೈತ್ರಾದಿಮಾಸಗಳಲ್ಲಿ ಭಗವಂತನ ರೂಪಗಳು –

**ವಿಷ್ಣುಂ ಚ ಮಧುಹಂತಾರಂ ತಥಾ ದೇವಂ ತ್ರಿವಿಕ್ರಮಮ್**

**ವಾಮನಂ ಶ್ರೀಧರಂ ಚೈವ ಹೃಷೀಕೇಶಂ ತಥೈವ ಚ**

**ದಾಮೋದರಂ ಪದ್ಮನಾಭಂ ಕೇಶವಂ ಚ ಯದೂತ್ತಮಮ್**

**ನಾರಾಯಣಂ ಮಾಧವಂ ಚ ಗೋವಿಂದಂ ಚ ತಥಾ ಕ್ರಮಾತ್**

**ಚೈತ್ರಾದಿಷು ಚ ಮಾಸೇಷು ದೇವದೇವಮನುಸ್ಮರೇತ್**

ಅವಾಂತರ ದೇವತೆಗಳಾಗಿ ಹನ್ನೆರಡು ಮಾಸಾಧಿಪರನ್ನು ಅಧಿಕಮಾಸ ಸೇರಿ 13 ಮಂದಿಯನ್ನು ಸಂವತ್ಸರನ ಸೇವಕರನ್ನಾಗಿ ಇಲ್ಲಿ ಹೇಳಲಾಗಿದೆ.

**ದ್ವಾದಶ ವಾ ವೈ ತ್ರಯೋದಶ ವಾ ಸಂವತ್ಸರಸ್ಯ ಮಾಸಾಃ.**

ಇದರಿಂದ ಸಂವತ್ಸರವನ್ನು ಚಾಂದ್ರಮಾನದಂತೆಯೇ ಪರಿಚಯಿಸಿದ್ದಾರೆ ಎಂದು ತಿಳಿಯಬಹುದು. ಇದರಿಂದ ಚೈತ್ರಾದಿಯಂದೇ ಸಂವತ್ಸರ ನಾಮವನ್ನು ಸಂಕಲ್ಪದಲ್ಲಿ ಬದಲಿಸಿಕೊಳ್ಳಬೇಕು.

**ಅಥರ್ವವೇದವು** ಕಾಲಸ್ವರೂಪನಾದ ಭಗವಂತನನ್ನೂ ಇತರ ಪರಿವಾರರಾದ ಕಾಲಪತಿಗಳನ್ನೂ ನೆನೆಯುವಂತೆ ಹೇಳಿದೆ –

**ಋತೂನ್ ಯಜ ಋತುಪತೀನಾರ್ತ್ತವಾನುತ ಹಾಯನಾನ್**

**ಸಮಾಃ ಸಂವತ್ಸರಾನ್ ಮಾಸಾನ್ ಭೂತಸ್ಯ ಪತಯೇ ಯಜ**

ಇಲ್ಲಿ ನೂರು ಕಾಲ ಬದುಕಲು ಕಾಲಚಕ್ರನ ಉಪಾಸನೆಯೂ ಬಂದಿದೆ –

**ಯಸ್ಮಾನ್ಮಾಸಾ ನಿರ್ಮ್ಮಿತಾಸ್ತ್ರಿಂಶದರಾಃ**

**ಸಂವತ್ಸರೋ ಯಸ್ಮಾನ್ನಿರ್ಮ್ಮಿತೋ ದ್ವಾದಶಾರಃ**

**ಅಹೋರಾತ್ರಾ ಯಂ ಪರಿಯಂತೋ ನಾಪುಃ**



**ತೇನೌದನೇನಾತಿತರಾಣಿ ಮೃತ್ಯುಮ್**

**ಕೌಷೀತಕೀಬ್ರಾಹ್ಮಣವು** ಸಂವತ್ಸರನ 360 ದಿನಪ ಪರಿವಾರರನ್ನು ಹೇಳಿದೆ –

**ತ್ರೀಣಿ ವೈ ಷಷ್ಟಿ ಶತಾನಿ ಸಂವತ್ಸರಸ್ಯಾಹ್ನಾಮ್**

**ತೈತ್ತಿರೀಯಬ್ರಾಹ್ಮಣವು** ಸಂವತ್ಸರನ ನಾರಾಯಣನ ರೂಪವಿಶೇಷಗಳನ್ನು ನಕ್ಷತ್ರಗಳಲ್ಲಿಯೂ ಕಾಣುವಂತೆ ತಿಳಿಸಿದೆ. ಹೀಗೆ ಋತುಮಾಸಗಳಲ್ಲಿಯೂ ಭಗವಂತನ ವಿಶೇಷ ರೂಪಗಳು ನೆಲೆನಿಂತಿವೆ. ಬಳಿಕ ದೇವರ ಪರಿವಾರದವರ ಚಿಂತನೆ – **ಸಂವತ್ಸರೋಽಸಿ ನಕ್ಷತ್ರೇಷು ಶ್ರಿತಃ । ಋತೂನಾಂ ಪ್ರತಿಷ್ಠಾ**

ಎರಡು ಪಕ್ಷಗಳಲ್ಲಿ ಪ್ರದ್ಯುಮ್ನ ಅನಿರುದ್ಧರು –

**ಪ್ರದ್ಯುಮ್ನಮನಿರುದ್ಧಂ ಚ ಪಕ್ಷಯೋಃ ಕೃಷ್ಣಶುಕ್ಲಯೋಃ**

27 ನಕ್ಷತ್ರಗಳಲ್ಲಿ ಭಗವಂತನ ರೂಪಗಳು –

**ವಿಶ್ವಂ ವಿಷ್ಣುರ್ವಷಟ್ಕಾರೋ ಭೂತಭವ್ಯಭವತ್ಪ್ರಭುಃ**
**ಭೂತಕೃದ್ಭೂತಭೃದ್ಭಾವೋ ಭೂತಾತ್ಮಾ ಭೂತಭಾವನಃ**
**ಅವ್ಯಕ್ತಃ ಪುಂಡರೀಕಾಕ್ಷೋ ವಿಶ್ವಕರ್ಮಾ ಶುಚಿಃಶ್ರವಾಃ**
**ಸಂಭವೋ ಭಾವನೋ ಭರ್ತಾ ಪ್ರಭವಃ ಪ್ರಭುರೀಶ್ವರಃ**
**ಅಪ್ರಮೇಯೋ ಹೃಷೀಕೇಶಃ ಪದ್ಮನಾಭೋಽಮರಪ್ರಭುಃ**
**ಅಗ್ರಾಹ್ಯಃ ಶಾಶ್ವತೋ ಧಾತಾ ಕೃಷ್ಣಶ್ಚೈನಾನ್ಯನುಸ್ಮರೇತ್**
**ದೇವದೇವಸ್ಯ ನಾಮಾನಿ ಕೃತ್ತಿಕಾದಿಷು ಯಾದವ**

16 ತಿಥಿಗಳಲ್ಲಿ ಭಗವಂತನ ನಾಮವಿಶೇಷಗಳು –

**ಬ್ರಹ್ಮಾಣಂ ಶ್ರೀಪತಿಂ ವಿಷ್ಣುಂ ಕಪಿಲಂ ಶ್ರೀಧರಂ ಪ್ರಭುಮ್**
**ದಾಮೋದರಂ ಹೃಷೀಕೇಶಂ ಗೋವಿಂದಂ ಮಧುಸೂದನಮ್**
**ಭೂಧರಂ ಗದಿನಂ ದೇವಂ ಶಂಖಿನಂ ಪದ್ಮಿನಂ ತಥಾ**
**ಚಕ್ರಿಣಂ ಚ ಮಹಾರಾಜ ಪ್ರಥಮಾದಿಷು ಸಂಸ್ಮರೇತ್**

ದೈವಜ್ಞವಿಲಾಸ, ದಾನಚಿಂತಾಮಣಿ, ಶೈವಾಗಮ, ಜ್ಯೋತಿಷಾರ್ಣವಗಳಲ್ಲಿ 27 ಯೋಗಗಳ ಬಗ್ಗೆ ಚಿಂತನೆ ಬಂದಿವೆ –



ವಿಷ್ಕಂಭಃ ಪ್ರೀತಿರಾಯುಷ್ಮಾನ್ ಸೌಭಾಗ್ಯಂ ಶೋಭನಸ್ತಥಾ

ಅತಿಗಂಡಃ ಸುಕರ್ಮ್ಮಾ ಚ ಧೃತಿಃ ಶೂಲಸ್ತಥೈವ ಚ

ಗಂಡೋ ವೃದ್ಧಿರ್ಧ್ರುವಶ್ಚೈವ ವ್ಯಾಘಾತೋ ಹರ್ಷಣಸ್ತಥಾ

ವಜ್ರಃ ಸಿದ್ಧಿರ್ವ್ಯತೀಪಾತೋ ವರೀಯಾನ್ ಪರಿಘಃ ಶಿವಃ

ಸಿದ್ಧಃ ಸಾಧ್ಯಃ ಶುಭಃ ಶುಕ್ಲೋ ಬ್ರಹ್ಮ ಚೈಂದ್ರಶ್ಚ ವೈಧೃತಿಃ

ಏತೇ ಪ್ರಕೀರ್ತ್ತಿತಾ ಯೋಗಾಃ ಸಪ್ತವಿಂಶತಿಸಂಖ್ಯಯಾ

ನಾರದೀಯಪುರಾಣದಲ್ಲಿ ಬಂದ ಯೋಗೇಶರಾದ ದೇವತೆಗಳ ಸಂಗ್ರಹ ಜ್ಯೋತಿಷರತ್ನಾಕರದಲ್ಲಿದೆ –

ಯೋಗೇಶಾ ಯಮವಿಷ್ಣ್ವಿಂದುಧಾತೃಜೀವನಿಶಾಚರಾಃ

ಇಂದ್ರತೋಯಾಹಿವಹ್ನ್ಯರ್ಕ್ಕಭೂಮರುದ್ಭಗತೋಯಪಾಃ

ಗಣೇಶರುದ್ರಧನದತ್ವಷ್ಟೃಮಿತ್ರಷಡಾನನಾಃ

ಸಾವಿತ್ರೀ ಕಮಲಾ ಗೌರೀ ನಾಸತ್ಯೌ ಪಿತರೋ ದಿತಿಃ

ವಿಷ್ಕಂಬಾದಿಕಯೋಗಾನಾಂ ಅಧಿದೇವವರಾ ಅಮೀ

ಒಂದು ತಿಥಿಗೆ ಎರಡು ಕರಣ. ಶುದ್ಧ ಪಾಡ್ಯ ಉತ್ತರಾರ್ಧದಿಂದ ಕೃಷ್ಣ ಚತುರ್ದಶಿ ಪೂರ್ವಾರ್ಧದವರೆಗೆ ಮೊದಲ ಏಳು ಕರಣಗಳು – ಬವ, ಬಾಲವ ಕೌಲವ, ತೈತಿಲ, ಗರಿಜ, ವಣಿಜ, ಭದ್ರೆ(ವಿಷ್ಟಿ)ಗಳು. ಎಂಟು ಬಾರಿ ಬರುವವು. ಇನ್ನು ನಾಲ್ಕು ಧ್ರುವ ಕರಣಗಳು – ಶಕುನಿಕರಣವು ಕೃಷ್ಣ ಚತುರ್ದಶಿ ಉತ್ತರಾರ್ಧಕ್ಕೆ, ಚತುಷ್ಪಾತ್ ಮತ್ತು ನಾಗ – ಅಮಾವಾಸ್ಯೆಗೆ, ಶುದ್ಧ ಪಾಡ್ಯದ ಪೂರ್ವಾರ್ಧಕ್ಕೆ ಕಿಂಸ್ತುಘ್ನ ಕರಣ. ಕರಣಗಳ ಬಗ್ಗೆ ಕಾಲಪ್ರಕಾಶಿಕಾದಲ್ಲಿ ಸಂಹಿತಾರ್ಣವದಲ್ಲಿ ವಿಶೇಷ ಚಿಂತನೆಗಳಿವೆ.

ಬವಬಾಲವಕೌಲವತೈತಿಲಗರಿಜವಣಿಜವಿಷ್ಟಿನಾಮಾನಿ

ಚರಕರಣಾನಿ ವಿದುಃ ಶುಕ್ಲಪ್ರಥಮಾಂತ್ಯಾರ್ಧಪೂರ್ವಾಣಿ

ಸ್ಥಿರಕರಣಾನ್ಯಸಿತಚತುರ್ದ್ದಶ್ಯಪರಾರ್ಧಾದಿಕಾನಿ ಚತ್ವಾರಿ

ಪ್ರಾಹುಶ್ಶಕುನಿಚತುಷ್ಪಾತ್ಸನಾಗಕಿಂಸ್ತುಘ್ನನಾಮಾನಿ

ಕರಣದೇವತೆಗಳು –

**ಇಂದ್ರಃ ಕಮಲಜೋ ಮಿತ್ರೋಽರ್ಯಮಾ ಭೂಃ ಶ್ರೀಃ ಯಮಃ ಕಲಿಃ**

**ವೃಷಃ ಫಣೀ ಮಾರುತಶ್ಚ ಕ್ರಮಾತ್ಕರಣದೇವತಾಃ**

**ನಾರದೀಯವೂ** ಕರಣ ದೇವತೆಗಳನ್ನು ಸ್ವಲ್ಪ ವ್ಯತ್ಯಾಸವಾಗಿ ತಿಳಿಸಿದೆ. ಅರ್ಯಮಾ ಬದಲಿಗೆ ಪಿತೃಗಳನ್ನು ಹೇಳಿದೆ. ಅರ್ಯಮನು ಪಿತೃಪತಿಯೇ ಆಗಿದ್ದಾನೆ. ಯಮ ಕಲಿ ವೃಷರ ಬದಲಿಗೆ ವಿಷ್ಣು ಯಮ ಮಾಣಿಭದ್ರರನ್ನು ತಿಳಿಸಲಾಗಿದೆ. ಮಾಣಿಭದ್ರನು ಕುಬೇರನ ಸೈನ್ಯಪನು.

ಹನ್ನೆರಡು ಮಾಸಗಳಿಗೆ ದ್ವಾದಿಶಾದಿತ್ಯರು ದೇವತೆಗಳಾಗುವಂತೆ ಹನ್ನೊಂದು ಕರಣಗಳಿಗೆ ಏಕಾದಶ ರುದ್ರರನ್ನೂ ದೇವತೆಗಳಾಗಿ ಹೇಳಲಾಗಿದೆ.

**ವಿಷ್ಣುಧರ್ಮೋತ್ತರ** ಸಾದರಪಡಿಸಿದ ವಾರದೇವತೆಗಳು –

**ಸರ್ವಃ ಶರ್ವಃ ಶಿವಃ ಸ್ಥಾಣುಃ ಭೂತಾದಿರ್ನ್ನಿಧಿರವ್ಯಯಃ**

**ಆದಿತ್ಯಾದಿಷು ವಾರೇಷು ಕ್ರಮಾದೇವಮನುಸ್ಮರೇತ್**

**ಅಗ್ನಿಪುರಾಣ** ಹೇಳಿದಂತೆ ವಾರಗಳಿಗೆ ಸೂರ್ಯಾದಿ ಗ್ರಹರಷ್ಟೆ ಅಲ್ಲದೆ ರುದ್ರಾದಿಗಳು ಪ್ರಧಾನದೇವತೆಗಳೆನಿಸಿರುತ್ತಾರೆ.

**ಹರೋ ದುರ್ಗಾ ಗುರುರ್ವಿಷ್ಣುರ್ಬ್ರಹ್ಮಾ ಲಕ್ಷ್ಮೀರ್ಧನೇಶ್ವರಃ**

**ಏತೇ ಸೂರ್ಯಾದಿವಾರೇಶಾಃ ....**

ಇಂದು ಬುಧಶುಕ್ರವಾರಗಳಿಗೆ ವಿಷ್ಣುಲಕ್ಷ್ಮಿಯರನ್ನು ಚಿಂತನೆ ಮಾಡುವರು. ಇದು ಅಗ್ನಿಪುರಾಣದ ಈ ಮೇಲಿನ ಮಾತಿನಿಂದ ಸ್ಪಷ್ಟವಾಗಿದೆ. ಅದರಂತೆ ಉಳಿದ ಭಾನು, ಸೋಮ, ಮಂಗಳ, ಗುರು, ಶನಿವಾರಗಳಲ್ಲೂ ಹರ, ದುರ್ಗೆ, ಗುರು, ಬ್ರಹ್ಮಾ, ಕುಬೇರರನ್ನು ನೆನೆಯಬೇಕು.

ಇದಲ್ಲದೆ ಮಂಗಳವಾರಕ್ಕೆ ಷಣ್ಮುಖನನ್ನೂ ಶುಕ್ರವಾರಕ್ಕೆ ಇಂದ್ರನನ್ನೂ ಶನಿವಾರಕ್ಕೆ ಯಮನನ್ನೂ ಕೆಲವೆಡೆ ಬೇರೆಯಾಗಿ ತಿಳಿಸಲಾಗಿದೆ.

**ಅಂಗಾರಕಾಧಿನಾಥಂ ತಂ ಈಡೇ ಷಣ್ಮುಖಮಾದರಾತ್**

**ಇಂದ್ರಂ ಗಜವರಾರೂಢಂ ಶುಕ್ರಾಧೀಶ್ವರಮಾಶ್ರಯೇ**



**ಯಮಂ ನೀಲತನುಂ ಭೀಮಂ ಶನಿವಾರಾಧಿಪಂ ಭಜೇ**

ಈ ಮಾತು ಆದಿತ್ಯಾದಿಗ್ರಹಗಳ ಪ್ರತ್ಯಧಿದೇವತೆಗಳ ವಿಷಯಕ್ಕೆ ಅನುಗುಣವಾಗಿದೆ.

**ಶಿವೋ ದುರ್ಗಾ ಗುಹೋ ವಿಷ್ಣುಃ ಬ್ರಹ್ಮೇಂದ್ರೋ ಕಾಲಸಂಜ್ಞಕಃ**

**ಸೂರ್ಯಾದೀನಾಂ ಕ್ರಮಾದೇತೇ ಪ್ರೋಕ್ತಾಃ ಪ್ರತ್ಯಧಿದೇವತಾಃ**

ಹೀಗೆಯೇ ಏಳು ವಾರಗಳ ಅಧಿದೇವತೆಗಳನ್ನು **ಶಾಂತಿಕಲ್ಪದಲ್ಲಿ** ಹೇಳಲಾಗಿದೆ.

**ಅಗ್ನ್ಯಾಪೋ ಭೂಮಿವಿಷ್ಣ್ವೀಂದ್ರಾ ಇಂದ್ರಾಣೀ ಚ ಪ್ರಜಾಪತಿಃ**

**ಭಾನ್ವಾದಿವಾರಾಧೀಶಾನಾಂ ಕ್ರಮೋಕ್ತಾ ಅಧಿದೇವತಾಃ**

ಅಲ್ಲಿಯೇ ವಾರೇಶರ ಸಂಗ್ರಹಶ್ಲೋಕವೂ ಇದೆ –

**ಆದಿತ್ಯ ಇಂದುರಂಗಾರೋ ಬುಧಶ್ಚೈವ ಬೃಹಸ್ಪತಿಃ**

**ಶುಕ್ರಃ ಶನಿಃ ಕ್ರಮಾದೇತೇ ಕಥಿತಾ ವಾರದೇವತಾಃ**

ಭಗವಂತನ ಮೊದಲ ಮತ್ತು ಉತ್ತಮ ಮಗನಾಗಿ ಸೃಷ್ಟಿಗೊಂಡವ ಚತುರ್ಮುಖ ಬ್ರಹ್ಮಾಂಡದಲ್ಲಿ ಸಂವತ್ಸರ ಎಂದು ಹೆಸರು ಪಡೆದಿದ್ದಾನೆ –

**ನೈವಾಸೀತ್ಕಿಂಚನಾಪ್ಯಾದೌ ಮೃತ್ಯುರಾಸೀದ್ಧರಿಸ್ತದಾ**

**ಸೋಽಽತ್ಮನೋ ಮನಸಾಽಸ್ರಾಕ್ಷೀತ್ ಅಪ ಏವ ಜನಾರ್ದನಃ**

**ಶಯಾನಸ್ತಾಸು ಭಗವಾನ್ ನಿರ್ಮ್ಮಮೇಽಂಡಂ ಮಹತ್ತರಮ್**

**ತತ್ರ ಸಂವತ್ಸರಂ ನಾಮ ಬ್ರಹ್ಮಾಣಮಸೃಜದ್ವಿಭುಃ** (ಬೃಹದಾರಣ್ಯಕಭಾಷ್ಯ)

**ಬ್ರಹ್ಮ ಸಂವತ್ಸರಂ ಮಮೇ** (ಅಥರ್ವವೇದ)

ದಕ್ಷಿಣಾಯನ – ಉತ್ತರಾಯಣಗಳಿಗೆ ಲಕ್ಷ್ಮೀನಾರಾಯಣರ ಬಳಿಕ ಭಾರತೀ ಪ್ರಾಣರು ಅಭಿಮಾನಿಗಳಾಗಿದ್ದಾರೆ. ಇದನ್ನು ಪ್ರಶ್ನೋಪನಿಷತ್ ತಿಳಿಸಿದೆ.

**ಸಂವತ್ಸರೋ ವೈ ಪ್ರಜಾಪತಿಃ**

**ತಸ್ಯಾಯನೇ ದಕ್ಷಿಣಂ ಚೋತ್ತರಂ ಚ**

**ಏಷ ವೈ ರಯಿರ್ಯಃ ಪಿತೃಯಾಣಃ**



ಆಚಾರ್ಯಮಧ್ವರು ಪ್ರಜಾಪತಿಸಂಹಿತೆಯ ಮಾತನ್ನಿಲ್ಲಿ ಸ್ಪಷ್ಟತೆಗಾಗಿ ಉದ್ಧರಿಸಿದ್ದಾರೆ.

**ಸಂವತ್ಸರಸ್ಥೋ ಭಗವಾನ್ ವಾಗೀರಾವಯನಸ್ಥಿತೌ**

**ಮಾಸಸ್ಥಿತಃ ಸ ಭಗವಾನ್ ಪಕ್ಷಯೋರ್ವಾಕ್ ಚ ಮಾರುತಃ**

**ಅಹೋರಾತ್ರೇ ತು ಭಗವಾನ್ ಪ್ರಾಣೋಽಹ್ನ್ಯಥ ಚ ವಾಙ್ನಿಶಿ**

ಪ್ರತಿ ಮಾಸವು ಭಗವಂತ. ಅಲ್ಲಿಯ ಕೃಷ್ಣಪಕ್ಷ – ಶುಕ್ಲಪಕ್ಷಗಳು ಭಾರತೀಪ್ರಾಣರು, ಪ್ರಾತಃಕಾಲದಲ್ಲಿ ಪ್ರಾಣ ಸಾಯಂಕಾಲದಲ್ಲಿ ಭಾರತಿ ಅಭಿಮಾನಿಯರಾಗಿರುವರು. ಇದನ್ನೂ **ಉಪನಿಷತ್** ತಿಳಿಸಿದೆ.

**ಮಾಸೋ ವೈ ಪ್ರಜಾಪತಿಃ**

**ತಸ್ಯ ಕೃಷ್ಣಪಕ್ಷ ಏವ ರಯಿಃ ಶುಕ್ಲಃ ಪ್ರಾಣಃ**

**ಅಹೋರಾತ್ರೇ ವೈ ಪ್ರಜಾಪತಿಃ**

**ತಸ್ಯ ಅಹರೇವ ಪ್ರಾಣೋ ರಾತ್ರಿರೇವ ರಯಿಃ**

ವಿಶೇಷವಾಗಿ ತಿಥಿಗಳಲ್ಲಿ ಆರಾಧನೆಗೊಳ್ಳುವ ದೇವತೆಗಳು ಆಯಾ ತಿಥಿಯಂದು ಪ್ರಸನ್ನರಾಗುವರು. ಇದನ್ನು **ಗರುಡಪುರಾಣ** ಹೇಳಿದೆ.

**ಧನದೋಽಗ್ನಿಃ ಪ್ರತಿಪದಿ ನಾಸತ್ಯೋ ದಸ್ರ ಅರ್ಚಿತಃ**

**ಶ್ರೀರ್ಯಮಶ್ಚ ದ್ವಿತೀಯಾಯಾಂ ಪಂಚಮ್ಯಾಂ ಪಾರ್ವತೀ ಶ್ರಿಯಾ**

**ನಾಗಾಃ ಷಷ್ಠ್ಯಾಂ ಕಾರ್ತಿಕೇಯಃ ಸಪ್ತಮ್ಯಾಂ ಭಾಸ್ಕರೋಽರ್ಥದಃ**

**ದುರ್ಗಾಷ್ಟಮ್ಯಾಂ ಮಾತರಶ್ಚ ನವಮ್ಯಾಮಥ ತಕ್ಷಕಃ**

**ದಶಮ್ಯಾಮಿಂದ್ರಧನದೌ ಏಕಾದಶ್ಯಾಂ ಮುನೀಶ್ವರಾಃ**

**ದ್ವಾದಶ್ಯಾಂ ಚ ಹರಿಃ ಕಾಮಃ ತ್ರಯೋದಶ್ಯಾಂ ಮಹೇಶ್ವರಃ**

**ಚತುರ್ದಶ್ಯಾಂ ಪಂಚದಶ್ಯಾಂ ಬ್ರಹ್ಮಾ ಚ ಪಿತರೋಽಪರೇ**

ಇನ್ನೊಂದೆಡೆ **ಗರುಡಪುರಾಣವು** ಆಯಾ ತಿಥಿಗಳಲ್ಲಿ ಆಯಾ ದೇವತೆಗಳನ್ನು ಆರಾಧಿಸಬೇಕೆಂದಿದೆ. ಇಲ್ಲಿ ಹೇಳದ ಕೆಲವು ತಿಥಿದೇವತೆಗಳನ್ನು ಅಲ್ಲಿ ತಿಳಿಸಲಾಗಿದೆ–

**ತೃತೀಯಾಯಾಂ ತ್ರಿದೇವಾಂಶ್ಚ ಗೌರೀವಿಘ್ನೇಶಶಂಕರಾನ್**



**ಚತುರ್ಥ್ಯಾಂ ಚ ಚತುರ್ವ್ಯೂಹಃ ಪಂಚಮ್ಯಾಮರ್ಚಿತೋ ಹರಿಃ**

**ನಕ್ಷತ್ರಾಣಿ ಚ ಯೋಗಾಶ್ಚ ಪೂಜಿತಾಃ ಸರ್ವದಾಯಕಾಃ**

**ಕಾಲಾಮೃತದಲ್ಲಿ** 16 ತಿಥಿಗಳ ದೇವತೆಗಳು –

**ವಹ್ನಿತ್ವಷ್ಟೃಹಿಮಾದ್ರಿಜಾ ಗಣಪತಿಃ ಸರ್ಪಃ ಕುಮಾರೋ ರವಿಃ**

**ಗೌರೀಶೋ ವಸುನಾಗಧರ್ಮ್ಮಹರಯಃ ವಾಮಃ ಕಲೀಂದೂ ಪಿತಾ**

**ಏತೇ ಸರ್ವದಿನಾಧಿಪಾಃ ಸ್ಯುಃ .....**

ತಿಥೀಶರನ್ನು ತಂತ್ರಗ್ರಂಥಗಳಲ್ಲಿ ಹೀಗೆ ಸಂಗ್ರಹಿಸಲಾಗಿದೆ –

**ವಹ್ನಿರ್ದಸ್ರಾವುಮಾ ವಿಘ್ನೋ ಭುಜಂಗಃ ಷಣ್ಮುಖೋ ರವಿಃ**

**ಮಾತರಶ್ಚ ತಥಾ ದುರ್ಗಾ ದಿಶೋ ಧನದಕೇಶವೌ**

**ಯಮೋ ಹರಃ ಶಶೀ ಚೇತಿ ತಿಥೀಶಾಃ ಪರಿಕೀರ್ತಿತಾಃ**

ಹೀಗೆಯೇ ಅಗ್ನಿಪುರಾಣದಲ್ಲಿ ತಿಥಿದೇವತೆಗಳನ್ನು ಹೇಳುತ್ತಾ, ಕೊನೆಗೆ ಅಮಾಕ್ಕೆ ಪಿತೃಗಳನ್ನು ದೇವತೆಗಳಾಗಿ ಹೇಳಿದ್ದಿದೆ.

ತಿಥಿದೇವತೆಗಳಂತೆ ನಕ್ಷತ್ರಯೋಗದೇವತೆಗಳೂ ಪೂಜಿತರಾದಾಗ ಅಭೀಷ್ಟದರಾಗುವರೆಂದಲ್ಲಿ ಹೇಳಲಾಗಿದೆ. ನಕ್ಷತ್ರಗಳ ದೇವತೆಗಳನ್ನು ತೈತ್ತಿರೀಯ ಸಂಹಿತಾದಲ್ಲಿ ನೋಡಬಹುದು–

**ಕೃತ್ತಿಕಾ ನಕ್ಷತ್ರಮಗ್ನಿರ್ದೇವತಾ । ರೋಹಿಣೀ ನಕ್ಷತ್ರಂ ಪ್ರಜಾಪತಿರ್ದೇವತಾ**

**ಮೃಗಶೀರ್ಷಂ ನಕ್ಷತ್ರಂ ಸೋಮೋ ದೇವತಾ । ಆರ್ದ್ರಾ ನಕ್ಷತ್ರಂ ರುದ್ರೋ ದೇವತಾ**

**ಪುನರ್ವಸೂ ನಕ್ಷತ್ರಮದಿತಿರ್ದೇವತಾ । ತಿಷ್ಯೋ ನಕ್ಷತ್ರಂ ಬೃಹಸ್ಪತಿರ್ದೇವತಾ**

**ಆಶ್ರೇಷಾ ನಕ್ಷತ್ರಂ ಸರ್ಪಾ ದೇವತಾ । ಮಘಾ ನಕ್ಷತ್ರಂ ಪಿತರೋ ದೇವತಾ**

**ಫಲ್ಗುನೀ ನಕ್ಷತ್ರಂ ಅರ್ಯಮಾ ದೇವತಾ । ಫಲ್ಗುನೀ ನಕ್ಷತ್ರಂ ಭಗೋ ದೇವತಾ**

**ಹಸ್ತೋ ನಕ್ಷತ್ರಂ ಸವಿತಾ ದೇವತಾ । ಚಿತ್ರಾ ನಕ್ಷತ್ರಮಿಂದ್ರೋ ದೇವತಾ**

**ಸ್ವಾತೀ ನಕ್ಷತ್ರಂ ವಾಯುರ್ದೇವತಾ । ವಿಶಾಖೇ ನಕ್ಷತ್ರಮಿಂದ್ರಾಗ್ನೀ ದೇವತಾ**

**ಅನೂರಾಧಾ ನಕ್ಷತ್ರಂ ಮಿತ್ರೋ ದೇವತಾ । ರೋಹಿಣೀ ನಕ್ಷತ್ರಮಿಂದ್ರೋ ದೇವತಾ**

**ವಿಚೃತೌ ನಕ್ಷತ್ರಂ ಪಿತರೋ ದೇವತಾ । ಅಷಾಢಾ ನಕ್ಷತ್ರಮಾಪೋ ದೇವತಾ**



ಅಷಾಢಾ ನಕ್ಷತ್ರಂ ವಿಶ್ವೇದೇವಾ ದೇವತಾ । ಶ್ರೋಣಾ ನಕ್ಷತ್ರಂ ವಿಷ್ಣುರ್ದೇವತಾ ಶ್ರವಿಷ್ಠಾ ನಕ್ಷತ್ರಂ ವಸವೋ ದೇವತಾ । ಶತಭಿಷಜ್ ನಕ್ಷತ್ರಮಿಂದ್ರೋ ದೇವತಾ ಪ್ರೋಷ್ಠಪದಾ ನಕ್ಷತ್ರಮಜ ಏಕಪಾದ್ದೇವತಾ । ಪ್ರೋಷ್ಠಪದಾ ನಕ್ಷತ್ರಮಹಿರ್ಬುಧ್ನಿಯೋ ದೇವತಾ । ರೇವತೀ ನಕ್ಷತ್ರಂ ಪೂಷಾ ದೇವತಾ

ಅಶ್ವಯಜೌ ನಕ್ಷತ್ರಮಶ್ವಿನೌ ದೇವತಾ । ಅಪಭರಣೀರ್ನಕ್ಷತ್ರಂ ಯಮೋ ದೇವತಾ

ಮೈತ್ರಾಯಣೀಯಸಂಹಿತೆಯಲ್ಲಿ ನಡುವೆ ಅಭಿಜಿತ್ ನಕ್ಷತ್ರವನ್ನು ಬ್ರಹ್ಮದೇವತೆಯಾಗಿ ಹೇಳಿದ್ದಾರೆ. ಕೊನೆಯಲ್ಲಿ ಈ ಎಲ್ಲ ನಕ್ಷತ್ರಗಳ ಒಡೆಯನಾದ ಚಂದ್ರನನ್ನು ನೆನಪಿಸಿದ್ದಾರೆ –

ಕೃತ್ತಿಕಾನಕ್ಷತ್ರಮಗ್ನಿರ್ದೇವತಾ ಅಗ್ನೇಃ ರುಚಃ ಸ್ಥ
ರೋಹಿಣೀನಕ್ಷತ್ರಂ ಪ್ರಜಾಪತಿರ್ದೇವತಾ....
ಅಭಿಜಿನ್ನಕ್ಷತ್ರಂ ಬ್ರಹ್ಮಾ ದೇವತಾ ....
ಭರಣೀರ್ನಕ್ಷತ್ರಂ ಯಮೋ ದೇವತಾ
ಬ್ರಾಹ್ಮಣೋ ನಕ್ಷತ್ರಂ ಸೋಮೋ ದೇವತಾ ಅಗ್ನೇಃ ರುಚಃ ಸ್ಥ

ಗರುಡಪುರಾಣದಲ್ಲಿ ಹರಿಯು ಹರನಿಗೆ ಹೇಳಿದ ನಕ್ಷತ್ರದೇವತೆಗಳು –

ಕೃತ್ತಿಕಾಸ್ತ್ವಗ್ನಿದೈವತ್ಯಾ ರೋಹಿಣ್ಯೋ ಬ್ರಹ್ಮಣಃ ಸ್ಮೃತಾಃ
ಇಲ್ವಲಾಃ ಸೋಮದೈವತ್ಯಾ ರೌದ್ರಂ ಚಾರ್ದ್ರಮುದಾಹೃತಮ್
ಪುನರ್ವಸುಸ್ತಥಾದಿತ್ಯ ತಿಷ್ಯಶ್ಚ ಗುರುದೈವತಃ
ಆಶ್ಲೇಷಾ ಸರ್ಪದೈವತ್ಯಾ ಮಘಾಶ್ಚ ಪಿತೃದೇವತಾಃ
ಭಾಗ್ಯಾಶ್ಚ ಪೂರ್ವಫಲ್ಗುನ್ಯಃ ಅರ್ಯಮಾ ಚ ತಥೋತ್ತರಃ
ಸಾವಿತ್ರಶ್ಚ ತಥಾ ಹಸ್ತಾ ಚಿತ್ರಾ ತ್ವಷ್ಟಾ ಪ್ರಕೀರ್ತಿತಃ
ಸ್ವಾತೀ ಚ ವಾಯುದೈವತ್ಯಾ ನಕ್ಷತ್ರಂ ಪರಿಕೀರ್ತಿತಮ್
ಇಂದ್ರಾಗ್ನೀದೇವತಾ ಪ್ರೋಕ್ತಾ ವಿಶಾಖಾ ವೃಷಭಧ್ವಜ
ಮೈತ್ರಮೃಕ್ಷಮನೂರಾಧಾ ಜ್ಯೇಷ್ಠಾ ಶಾಕ್ರಂ ಪ್ರಕೀರ್ತಿತಮ್
ತಥಾ ನಿರ್ಋತಿದೈವತ್ಯೋ ಮೂಲಸ್ತಜ್ಜ್ಞೈರುದಾಹೃತಃ



**ಆಪ್ಯಾಸ್ತ್ವಾಷಾಢಪೂರ್ವಾಸ್ತು ಉತ್ತರಾ ವೈಶ್ವದೇವತಾಃ**

**ಬ್ರಾಹ್ಮಶ್ಚೈವಾಭಿಜತ್ಪ್ರೋಕ್ತಃ ಶ್ರವಣಾ ವೈಷ್ಣವಃ ಸ್ಮೃತಃ**

**ವಾಸವಸ್ತು ತಥಾ ಋಕ್ಷಂ ಧನಿಷ್ಠಾ ಪ್ರೋಚ್ಯತೇ ಬುಧೈಃ**

**ತಥಾ ಶತಭಿಷಾ ಪ್ರೋಕ್ತಂ ನಕ್ಷತ್ರಂ ವಾರುಣಂ ಶಿವ**

**ಆಜ್ಯಂ ಭಾದ್ರಪದಾ ಪೂರ್ವಾ ಅಹಿರ್ಬ್ರಧ್ನಾ ತಥೋತ್ತರಾ**

**ಪೌಷ್ಣಂ ಚ ರೇವತೀ ಋಕ್ಷಂ ಅಶ್ವಯುಕ್ಚಾಶ್ವದೈವತಮ್**

**ಭರಣ್ಯಶ್ಚ ತಥಾ ಯಾಮ್ಯಂ ಪ್ರೋಕ್ತಾಸ್ತೇ ಋಕ್ಷದೇವತಾಃ**

ತಂತ್ರ ಪರಿಚಯಿಸುವ ನಕ್ಷತ್ರೇಶರ ಸಂಗ್ರಹ **ಅಗ್ನಿಪುರಾಣ**ದಲ್ಲಿ ಬಂದಂತೆ ಇಲ್ಲಿದೆ –

**ಅಶ್ವಿನೌ ಚ ಯಮೋ ವಹ್ನಿರ್ಧಾತಾ ಚಂದ್ರಃ ಶಿವೋಽದಿತಿಃ**

**ಗುರುಃ ಸರ್ಪಾಶ್ಚ ಪಿತರಃ ತ್ವರ್ಯಮಾ ಭಗ ಏವ ಚ**

**ದಿನಕೃಚ್ಚ ತಥಾ ತ್ವಷ್ಟಾ ಮರುದಿಂದ್ರಾಗ್ನಿಮಿತ್ರಕಾಃ**

**ಇಂದ್ರೋ ನಿಋತಿಸ್ತೋಯಾಖ್ಯೋ ವಿಶ್ವದೇವಾ ಹರಿಸ್ತಥಾ**

**ವಸವೋ ವರುಣಃ ಪಶ್ಚಾತ್ ಅಜ ಏಕಪದಸ್ತಥಾ**

**ಅಹಿರ್ಬುಧ್ನ್ಯಸ್ತಥಾ ಪೂಷಾ ಪ್ರೋಕ್ತಾ ನಕ್ಷತ್ರದೇವತಾಃ**

ನಕ್ಷತ್ರದೇವತೆಗಳ ಸಂಗ್ರಹ ಪದ್ಯವಿದು –

**ಭಾನಾಂ ಅಶ್ವಿಯಮಾಗ್ನಿಧಾತೃಶಶಿನೋ ರುದ್ರೋಽದಿತಿರ್ಗೀಷ್ಪತಿಃ**

**ಸರ್ಪೌಘಾಃ ಪಿತರೋಽರ್ಯಮಾ ಭಗರವೀ ತ್ವಷ್ಟಾಶುಗೇಂದ್ರಾಗ್ನಯಃ**

**ಮಿತ್ರೇಂದ್ರೌ ನಿರ್ಋತಿಃ ಪಯೋದಕುಸುಮಂ ವಿಶ್ವೇ ಮುಕುಂದೋ ವಸು**

**ಕ್ಷೀರೇಶೌ ಅಜಏಕಪಾತ್ ಪುನರಹಿರ್ಬುಧ್ನ್ಯಶ್ಚ ಪೂಷಾಧಿಪಾಃ**

**ನಾರದೀಯಪುರಾಣ**ದಲ್ಲಿ ಬಂದ ನಕ್ಷತ್ರದೇವತೆಗಳನ್ನು **ಜ್ಯೋತಿಷರತ್ನಾಕರ** ಸಂಗ್ರಹಿಸಿದೆ.

**ತೈತ್ತಿರೀಯಬ್ರಾಹ್ಮಣ**ವು ಸಾಧಕನಿಗೆ ಈ ಲೋಕ ಸಿಗಲಿದೆ ಎಂಬ ಅರ್ಥ ದಲ್ಲಿ ನಕ್ಷತ್ರದ ಅರ್ಥವನ್ನು ತಿಳಿಸಿದೆ.



**ಯೋ ವಾ ಇಹ ಯಜತೇ । ಅಮುಂ ಸ ಲೋಕಂ ನಕ್ಷತೇ ।**

**ತನ್ನಕ್ಷತ್ರಾಣಾಂ ನಕ್ಷತ್ರತ್ವಮ್ ।**

**ತಾಂಡ್ಯಬ್ರಾಹ್ಮಣವು** ಅಭಿಜಿತ್ ನಕ್ಷತ್ರವನ್ನು ಸಂಕಲ್ಪದಲ್ಲಿ ಸೇರಿಸಿಕೊಂಡಿಲ್ಲ. ಇಪ್ಪತ್ತೇಳೇ ನಕ್ಷತ್ರಗಳು – **ಸಪ್ತವಿಂಶತಿಃ ನಕ್ಷತ್ರಾಣಿ**

**ಯಾವಂತ್ಯೇತಾನಿ ನಕ್ಷತ್ರಾಣಿ ತಾವಂತೋ ಲೋಮಗರ್ತಾಃ**

**ಯಾವಂತೋ ಲೋಮಗರ್ತಾಸ್ತಾವಂತಃ**

**ಸಹಸ್ರಸಂವತ್ಸರಸ್ಯ ಮುಹೂರ್ತಾಃ** (ಶತಪಥಬ್ರಾಹ್ಮಣ)

ಚೈತ್ರಾದಿ ಮಾಸಗಳನ್ನು ಮಧುಮಾಧವಾದಿ ನಾಮಗಳಿಂದ ವೇದಗಳಲ್ಲಿ ಕರೆಯಲಾಗಿದೆ. ಉತ್ತಮ ಮನು ತನ್ನ ಹತ್ತು ಮಕ್ಕಳಿಗೆ ಇವೇ ಹೆಸರನ್ನಿಟ್ಟಿದ್ದಾನೆ–

**ಮಧುಶ್ಚ ಮಾಧವಶ್ಚ ವಾಸಂತಿಕಾವೃತೂ**

**ಶುಕ್ರಶ್ಚ ಶುಚಿಶ್ಚ ಗ್ರೈಷ್ಮಾವೃತೂ**

**ನಭಶ್ಚ ನಭಸ್ಯಶ್ಚ ವಾರ್ಷಿಕಾವೃತೂ**

**ಇಷಶ್ಚೋರ್ಜಶ್ಚ ಶಾರದಾವೃತೂ**

**ಸಹಶ್ಚ ಸಹಸ್ಯಶ್ಚ ಹೈಮಂತಿಕಾವೃತೂ**

**ತಪಶ್ಚ ತಪಸ್ಯಶ್ಚ ಶೈಶಿರಾವೃತೂ**

ವೈದಿಕ ಮಾಸನಾಮಕ ಭಗವಂತನಿಗೆ ಸಮರ್ಪಣೆಯ ಚಿಂತನೆಯು **ಮೈತ್ರಾಯಣೀಯಸಂಹಿತೆಯಲ್ಲಿದೆ** –

**ಮಧವೇ ತ್ವಾ ಮಾಧವಾಯ ತ್ವಾ ಶುಕ್ರಾಯ ತ್ವಾ ಶುಚಯೇ ತ್ವಾ**

**ನಭಸೇ ತ್ವಾ ನಭಸ್ಯಾಯ ತ್ವೇಷಾಯ ತ್ವೋರ್ಜ್ಯಾಯ ತ್ವಾ**

**ಸಹಸೇ ತ್ವಾ ಸಹಸ್ಯಾಯ ತ್ವಾ ತಪಸೇ ತ್ವಾ ತಪಸ್ಯಾಯ ತ್ವಾ**

**ವಾಯುಪುರಾಣವು** ಅಯನಗಳಿಗೆ ಸಂಬಂಧಿಸಿದಂತೆ ಋತುಗಳನ್ನು ತಿಳಿಸುತ್ತಾ ಪಂಚರೂಪದ ವರ್ಷಗಳು ಚತುರ್ಮುಖನ ಮಕ್ಕಳು ಎಂಬ ವಿಶೇಷ ಮಾಹಿತಿಯನ್ನು ನೀಡಿದೆ. ಅವರಿಂದ ಋತುಗಳ ಹುಟ್ಟನ್ನೂ ಋತುಗಳಿಂದ ಮುಂದೆ ಇತರ ಕಾಲಾಯವಗಳ ಸೃಷ್ಟಿಯನ್ನೂ ಬಿತ್ತರಿಸಿದೆ –

**ತಪಸ್ತಪಸ್ಯೌ ಮಧುಮಾಧವೌ ಚ**

**ಶುಕ್ರಃ ಶುಚಿಶ್ಚಾಯನಮುತ್ತರಂ ಸ್ಯಾತ್**

**ನಭೋ ನಭಸ್ಯೋऽಥ ಇಷುಃ ಸಹೋರ್ಜಃ**

**ಸಹಃಸಹಸ್ಯಾವಿತಿ ದಕ್ಷಿಣಂ ಸ್ಯಾತ್**

**ಸಂವತ್ಸರಾಸ್ತತೋ ಜ್ಞೇಯಾಃ ಪಂಚಾಬ್ದಾ ಬ್ರಹ್ಮಣಃ ಸುತಾಃ**

**ತಸ್ಮಾತ್ತು ಋತವೋ ಜ್ಞೇಯಾ ಋತವೋ ಹ್ಯಂತರಾಃ ಸ್ಮೃತಾಃ**

ಕಾಲಾಯವಗಳಲ್ಲಿನ ವಿಭೂತಿರೂಪಗಳನ್ನು ವಾಯುಪುರಾಣ ತೋರಿಸಿದೆ.

**ನಕ್ಷತ್ರಾಣಾಂ ಶ್ರವಿಷ್ಠಾ ಸ್ಯಾತ್ ಅಯನಾನಾಂ ತಥೋತ್ತರಮ್**

**ವರ್ಷಾಣಾಂ ಚಾಪಿ ಪಂಚಾನಾಂ ಆದ್ಯಃ ಸಂವತ್ಸರಃ ಸ್ಮೃತಃ**

**ಋತೂನಾಂ ಶಿಶಿರಂ ಚಾಪಿ ಮಾಸಾನಾಂ ಮಾಘ ಏವ ಚ**

**ಪಕ್ಷಾಣಾಂ ಶುಕ್ಲಪಕ್ಷಸ್ತು ತಿಥೀನಾಂ ಪ್ರತಿಪತ್ತಥಾ**

**ಅಹೋರಾತ್ರವಿಭಾಗಾನಾಂ ಅಹಶ್ಚಾಪಿ ಪ್ರಕೀರ್ತ್ತಿತಮ್**

**ಭಾ**ಗವತದಲ್ಲಿನ ಕಾಲವಿಭೂತಿಗಳು –

**ಸಂವತ್ಸರೋऽಸ್ಮ್ಯನಿಮಿಷಾಂ ಋತೂನಾಂ ಮಧುಮಾಧವೌ**

**ಮಾಸಾನಾಂ ಮಾರ್ಗಶೀರ್ಷೋऽಹಂ ನಕ್ಷತ್ರಾಣಾಂ ತಥಾऽಭಿಜಿತ್**

ವೇದಗಳಲ್ಲಿ ಕಾಲದ ಅವಯವಗಳ ದೇವತೆಗಳಿಗೆಲ್ಲ ನಮಸ್ಕಾರಾದಿಗಳ ಜತೆಗೆ ಉಪಾಸನೆಯ ಮಂತ್ರಗಳನ್ನು ಕಾಣಬಹುದು. ಕೆಲವೆಡೆ ಸಂಖ್ಯಾವಾಚಕ ವಾಗಿಯೂ ಮಂತ್ರಗಳು ಬಂದಿವೆ –

**ಅಹೋರಾತ್ರೇಭ್ಯಃ ಸ್ವಾಹಾ । ಅರ್ಧಮಾಸೇಭ್ಯಃ ಸ್ವಾಹಾ । ಮಾಸೇಭ್ಯಃ ಸ್ವಾಹಾ । ಋತುಭ್ಯಃ ಸ್ವಾಹಾ । ನಕ್ಷತ್ರೇಭ್ಯಃ ಸ್ವಾಹಾ । ಶರದ್ಭ್ಯಃ ಸ್ವಾಹಾ । ಸಂವತ್ಸರಾಯ ಸ್ವಾಹಾ ಪಂಚಭ್ಯಃ ಸ್ವಾಹಾ । ಷಡ್ಭ್ಯಃ ಸ್ವಾಹಾ । ಸಪ್ತಭ್ಯಃ ಸ್ವಾಹಾ । ದ್ವಾದಶೇಭ್ಯಃ ಸ್ವಾಹಾ ....**

*(ಸಂಧ್ಯಾಸಮೀಕ್ಷೆಯ ಮೊದಲಮುದ್ರಣದಲ್ಲಿ ಪ್ರಮೇಯಚಿಂತನೆಯಲ್ಲಿ ಶ್ರೀಯುತ ಸಗ್ರಿ ರಾಘವೇಂದ್ರ ಉಪಾಧ್ಯಾಯರು ಸಂಕಲ್ಪದ ಬಗ್ಗೆ ನೀಡಿರುವ* **ಸಂಕಲ್ಪದ ಮೇಲೆ ಕಣ್ವಸ್ಮೃತಿಯ ಬೆಳಕು** *ಲೇಖನ ಮುಂದೆ ಇದೆ)*



**ದೇಶಃ ಕಾಲಶ್ಚ ವಕ್ತವ್ಯಃ ಕರ್ಮಾದೌ ಪ್ರತ್ಯಹಂ ದ್ವಿಜೈಃ**

ಸಂಕಲ್ಪದಲ್ಲಿ ದೇಶ ಮತ್ತು ಕಾಲಗಳ ಉಲ್ಲೇಖ ಆಗಬೇಕು. ಇದನ್ನು ಸ್ಪಷ್ಟವಾಗಿ ಸಾರಿರುವ ಕಣ್ವಸ್ಮೃತಿಯಲ್ಲಿ ಹದಿನೆಂಟನೆಯ ಶ್ಲೋಕದಿಂದ ಆರಂಭಿಸಿ ದೇಶವನ್ನು, ಕಾಲವನ್ನು ಹೇಗೆ ಅಂದರೆ ಅವುಗಳ ಯಾವ ಯಾವ ಘಟಕವನ್ನು ಉಲ್ಲೇಖಿಸಬೇಕೆಂದೂ ತಿಳಿಸಲಾಗಿದೆ. ಮೇರುಪರ್ವತದ ದಕ್ಷಿಣ ಭಾಗದಲ್ಲಿ ಉಳ್ಳದ್ದಾಗಿ 56 ಪ್ರಭೇದಗಳಿಂದ ದೇಶವು ಹೇಳಲ್ಪಟ್ಟಿರುವುದರಿಂದ **ಮೇರೋಃ ದಕ್ಷಿಣಪಾರ್ಶ್ವೇ** ಎಂದೇ ಪ್ರಾರಂಭಿಸಬೇಕು.

**ತತ್ರ ದೇಶಾಖಿಲಾನಾಂ ಚ ಮೇರುದಕ್ಷಿಣಭಾಗಗಃ**
**ಷಟ್‌ಪಂಚಾಶತ್‌ಪ್ರಭೇದೇನ ಕಥಿತಸ್ತಂ ತಥಾ ವದೇತ್**

ಜಂಬೂದ್ವೀಪ, ಭಾರತವರ್ಷ ಹಾಗೂ ಭರತಖಂಡ ಇವು ಎಲ್ಲರ ಸಂಕಲ್ಪದಲ್ಲಿ ಉಲ್ಲೇಖಿಸಲ್ಪಡಬೇಕು – **ಜಂಬೂದ್ವೀಪಂ ಭಾರತಸ್ಯ ವರ್ಷಂ ಭರತಖಂಡಕಮ್ । ಸರ್ವಸಾಧಾರಣಂ ಪ್ರೋಕ್ತಂ ಇದಂ ಸಂಕಲ್ಪಮಾತ್ರಕೇ**

ಗಂಡಕಿಯ, ಗಂಗೆಯ ನರ್ಮದೆಯ ಗೋದಾವರಿಯ ಕೃಷ್ಣೆಯ ಕಾವೇರಿಯ ತಾಮ್ರಪರ್ಣಿಯ ಹಾಗೂ ರಾಮೇಶ್ವರದ ಮಧ್ಯಭಾಗವನ್ನೂ ಉಲ್ಲೇಖಿಸಬೇಕು – **ಗಂಡಕ್ಯಾ ಅಪಿ ಗಂಗಾಯಾ ನರ್ಮದಾಯಾಸ್ತಥೈವ ಚ**

**ಗೋದಾವರ್ಯಾಶ್ಚ ಕೃಷ್ಣಾಯಾಃ ಕಾವೇರ್ಯಾಶ್ಚ ತತಃ ಪರಮ್**
**ತಾಮ್ರಪರ್ಣ್ಯಾಶ್ಚ ಸೇತೋಶ್ಚ ಮಧ್ಯಭಾಗಂ ಪಠೇದ್ಧಿ ಸಃ**

ನಮ್ಮಲ್ಲಿ **ಗೋದಾವರ್ಯಾಃ ದಕ್ಷಿಣೇ ಕೂಲೇ** ಎಂದು ಗೋದಾವರಿ ಬಲಭಾಗದ ತೀರದಲ್ಲಿರುವುದಾಗಿಯಷ್ಟೇ ಉಲ್ಲೇಖಿಸಲಾಗುವುದು. ಯಾವ ಪ್ರದೇಶದಲ್ಲಿದ್ದುಕೊಂಡು ಕರ್ಮವನ್ನು ನಡೆಸಲಾಗುವುದೋ ತನ್ನ ಮನೆಯವರೆಗಿನ ಆ ಎಲ್ಲ ಪ್ರದೇಶಭೇದವನ್ನು ಸಂಕಲ್ಪದಲ್ಲಿ ಉಲ್ಲೇಖಿಸಬೇಕು. ಪಿತೃಕರ್ಮಗಳಲ್ಲಿ ಮಾತ್ರ ಹೀಗೆ, ಬೇರೆ ಕರ್ಮಗಳಲ್ಲಿ ಬೇಕಿಲ್ಲ ಎಂದು ಜ್ಞಾನಿಗಳು ಅಭಿಪ್ರಾಯಪಡುವರೆಂದು ತಿಳಿಸಲಾಗಿದೆ.

**ಯಸ್ಮಿನ್ ದೇಶೇ ಸ್ಥಿತೋ ಮರ್ತ್ಯಃ ತಂ ದೇಶಂ ಸ್ವಗೃಹಾವಧಿ**
**ಸಮುಚ್ಚರೇತ್ ಪೈತೃಕೇಷು ನಾನ್ಯತ್ರೈವಂ ವಿದುರ್ಬುಧಾಃ**



ಆದರೆ ನಮ್ಮಲ್ಲಿ ಪರಶುರಾಮಕ್ಷೇತ್ರೇ ಅಥವಾ ರಾಮಕ್ಷೇತ್ರೇ ಎಂಬುದಾಗಿ ಎಲ್ಲ ಕರ್ಮಗಳ ಸಂಕಲ್ಪದಲ್ಲಿಯೂ ಉಲ್ಲೇಖಿಸಲಾಗುವುದು. ಕಾಲದ ಘಟಕಗಳಾಗಿ ಪರಾರ್ಧ, ಕಲ್ಪ, ಮನ್ವಂತರ, ಯುಗ, ಅದರ ಪಾದ, ಸಂವತ್ಸರ, ಮಾಸ, ಋತು, ಪಕ್ಷ, ತಿಥಿ ಹಾಗೂ ವಾರ – ಇವಿಷ್ಟನ್ನು ಸಪ್ತಮೀವಿಭಕ್ತ್ಯಂತವಾದ ಅವುಗಳ ನಾಮದಿಂದ ಉಲ್ಲೇಖಿಸಿ, ಮಾಡಹೊರಟ ಕರ್ಮದ ಹೆಸರನ್ನು ನಮೂದಿಸಿ, ಕರಿಷ್ಯಾಮಿ ನಡೆಸುವೆನು ಎಂದು ಹೇಳಬೇಕು. ಇದೇ ಸಂಕಲ್ಪ ಎನಿಸುವುದು.

ಕಾಲಂ ಪರಾರ್ಧಂ ಪ್ರಥಮಂ ಕಲ್ಪಂ ಮನ್ವಂತರಂ ಯುಗಮ್

ತತ್ಪಾದಂ ವತ್ಸರಂ ಮಾಸಂ ಋತುಂ ಪಕ್ಷಂ ತಿಥಿಂ ತತಃ

ಕ್ರಮಾದ್ವಾರೇಣ ಸಂಯುಕ್ತಂ ಸಮುಚ್ಚಾರ್ಯ ಚ ತಾದೃಶೇ

ಸಪ್ತಮ್ಯಂತೇನ ಚ ತಿಥೌ ಕರಿಷ್ಯಾಮೀತಿ ಕರ್ಮ್ಮಣಃ

ನಾಮೋಚ್ಚಾರ್ಯ ವದೇದೇವಂ ಏತತ್ ಸಂಕಲ್ಪಮುಚ್ಯತೇ

ಚಂದ್ರನ ಚಲನೆಯನ್ನು ಅವಲಂಬಿಸಿ ತಿಥಿ, ಪಕ್ಷ, ಮಾಸ, ಋತು, ವರ್ಷ ಇವು ವ್ಯವಸ್ಥಿತಗಳಾಗಿವೆ. ಇವಿಷ್ಟನ್ನು ಸಂಕಲ್ಪದಲ್ಲಿ ಅವಶ್ಯವಾಗಿ ಉಲ್ಲೇಖಿಸಬೇಕು. ಸೂರ್ಯನ ಚಲನೆಯನ್ನು ಅವಲಂಬಿಸಿರುವ ರಾಶಿ, ಅಯನಗಳಲ್ಲಿ ವ್ಯತ್ಯಾಸವು ಸಂಭವಿಸುವುದರಿಂದ ಅವುಗಳ ನಕ್ಷತ್ರಗಳ ಉಲ್ಲೇಖ, ಸಂಕಲ್ಪದಲ್ಲಿ ಬೇಕಿಲ್ಲ ಎಂದು ಅಭಿಪ್ರಾಯಪಡಲಾಗಿದೆ.

ಸಂವತ್ಸರ ಋತುರ್ಮ್ಮಾಸೋ ಯುಗಃ ಪಕ್ಷಸ್ತಿಥಿಸ್ತಥಾ

ತ ಏತೇ ಕಾಲಭೇದಾಃ ಸ್ಯುಃ ಚಂದ್ರಗತ್ಯಾ ಸಮುದ್ಭವಾಃ

ಯುಗಾಬ್ದಮಾಸರ್ತುಪಕ್ಷತಿಥಯಸ್ತತ್ರ ಮುಖ್ಯತಃ

ಚಾಂದ್ರಮಾನೇ ಸಂಭವಂತಿ ಕ್ಲೃಪ್ತಾಶ್ಚ ನಿಯತಾಃ ಪುನಃ

ಯ ಏತೇ ಕಥಿತಾ ಸದ್ಭಿಃ ಅನ್ಯೇ ಹ್ಯನಿಯತಾಃ ಕಿಲ

ಅಯನಸ್ಯ ಪ್ರಭೇದೋಕ್ತಿಃ ನ ದೋಷಾಯ ಭವೇತ್ಕಿಲ

ಯತೋಽಯನಸ್ಯ ಸತತಂ ಕ್ಲೃಪ್ತಿರ್ನಾಸ್ತಿ ತತಸ್ತಥಾ

ಮೇಷಾದೀನಾಮನೇನೈವ ನಕ್ಷತ್ರಸ್ಯ ಚ ಸರ್ವದಾ

ಪ್ರಭೇದೋಕ್ತೌ ನ ದೋಷೋಽಸ್ತಿ ತೇನ ತೇಷಾಂ ಕದಾಚನ



**ಉಕ್ತಿರಾವಶ್ಯಕೀ ನೇತಿ ಸಂಕಲ್ಪೇ ಶ್ರುತಿರಾಹ ಹಿ**

**ತಸ್ಮಾದಬ್ದಮೃತುಂ ಮಾಸಂ ಪಕ್ಷಂ ತಸ್ಯ ತಿಥಿಂ ಶಿವಾಮ್**

**ಸಂಕಲ್ಪೇ ಹ್ಯತ್ಯಜನ್ ಸರ್ವಾನ್ ಪ್ರವದೇತ್ಸರ್ವಕರ್ಮ್ಮಸು**

ಮಾಸ ಪಕ್ಷಾದಿಗಳನ್ನು ಚೆನ್ನಾಗಿ ಯೋಚನೆ ಮಾಡಿ, ವ್ಯತ್ಯಾಸ ಆಗದಂತೆ ಸಂಕಲ್ಪದಲ್ಲಿ ಉಲ್ಲೇಖಿಸಬೇಕು. ಒಂದೊಮ್ಮೆ ಸಂಕಲ್ಪದಲ್ಲಿ ತಪ್ಪಾಗಿ ಹಾಗೂ ಹೆಚ್ಚು ಅಥವಾ ಕಡಿಮೆ ಉಲ್ಲೇಖಿಸಿದಲ್ಲಿ ಆ ಸಂಕಲ್ಪಪೂರ್ವಕ ನಡೆಸಿದ ಕರ್ಮವೇ ನಷ್ಟವಾಗುವುದರಿಂದ ಅದನ್ನು ಪುನಃ ಆಚರಿಸಬೇಕಾಗುವುದು.

**ಮಾಸಂ ಪಕ್ಷಂ ತಿಥಿಂ ಚಾಪಿ ಮಾರ್ಗ್ಗೇಣಾನೇನ ಸಂತತಮ್**

**ಸಮ್ಯಗಾಲೋಚ್ಯ ಸಂಕಲ್ಪ್ಯೇತ್ ವ್ಯತ್ಯಾಸೋ ನ ಭವೇದ್ಯಥಾ**

**ತಥಾ ಸಮುಚ್ಚರೇತ್ಸರ್ವಾನ್ ಅನ್ಯೂನಾನತಿರಿಕ್ತತಃ**

**ತಿಥ್ಯಾದೀನ್ ಯದಿ ಸಂಕಲ್ಪೇ ವ್ಯತ್ಯಾಸೇನೋಚ್ಚರೇತ್ತದಾ**

**ಪುನಃ ಕುರ್ಯಾತ್ತು ತತ್ಕರ್ಮ ನಷ್ಟಂ ತತ್ತೇನ ತಾವತಾ**

**ಏತೇಷಾಮನ್ಯಥೋಕ್ತೌ ಚೇತ್ ಸಂಕಲ್ಪೇ ತಚ್ಚ ಕರ್ಮ್ಮ ವೈ**

**ನಷ್ಟಮೇವ ಪ್ರಭವತಿ ತೇನ ತಚ್ಚ ಪುನಶ್ಚರೇತ್**

**ಅನ್ಯಥಾ ದೋಷಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ**

ಹೀಗೆ ಸಂಕಲ್ಪದಲ್ಲಿ ಕಾಲ, ದೇಶ, ವಿಶೇಷಗಳನ್ನು ಗಟ್ಟಿಯಾಗಿ ಹೇಳಬೇಕು. ಹೀಗೆ ಹೇಳುವುದೇ ಸಂಕಲ್ಪ ಹೊರತು ಬರೇ ಮನಸ್ಸಿನಲ್ಲಿ ಯೋಚಿಸಿದರೆ ಅದು ಕರ್ಮಾದಿಗಳ ಸಂಕಲ್ಪ ಎನಿಸದು – **ದೇಶಂ ಕಾಲವಿಶೇಷಾಂಸ್ತಾನ್ ಸಂಕಲ್ಪೇ ಪ್ರವದೇದ್ಭೃಶಮ್ । ಉಕ್ತಿರೇವ ಹಿ ಸಂಕಲ್ಪಃ ಕರ್ಮ್ಮಾದಿಷು ನ ಮಾನಸಃ**

ಸಂಕಲ್ಪದಲ್ಲಿ ಕಾಲಾದಿಗಳ ಉಲ್ಲೇಖಕ್ಕೆ ಒತ್ತು ಕೊಟ್ಟಿರುವ ಈ ಸ್ಮೃತಿಯಲ್ಲಿ ಒಂದು ವೇಳೆ ಎಲ್ಲ ದೇಶಕಾಲಗಳ ಉಲ್ಲೇಖಕ್ಕೆ ಬೇಕಾಗುವಷ್ಟು ಅವಕಾಶ ಇದ್ದಿಲ್ಲ ಎಂದರೆ **....ಸಂಪ್ರಾಪ್ತಾಸ್ಮದ್ದುರಿತಕ್ಷಯದ್ವಾರಾ ಪರಮೇಶ್ವರತುಷ್ಟ್ಯರ್ಥಂ ಕರಿಷ್ಯಾಮಿ** ಅಥವಾ **ಕರಿಷ್ಯೇ** ಎಂದು ಸೂಕ್ಷ್ಮವಾಗಿಯೂ ಮುಗಿಸಿಬಿಡಬಹುದು. ಆದರೆ ಇದು ಸಂಧ್ಯಾವಂದನೆಯೇ ಮುಂತಾದ ನಿತ್ಯಕರ್ಮಗಳ ಮಟ್ಟಿಗೆ ಮಾತ್ರ ಎಂದು ತಿಳಿಸಲಾಗಿದೆ. – **.....ತ್ವರನ್ ಯದಿ ತದಾ ಪುನಃ**



**ಸಂಪ್ರಾಪ್ತಾಸ್ಮದ್ದುರಿತಕ್ಷಯದ್ವಾರೇತಿ ತತಃ ಪುನಃ**
**ಪರಮೇಶ್ವರತುಷ್ಟ್ಯರ್ಥಂ ಕರಿಷ್ಯಾಮೀತಿ ವಾ ವದೇತ್**
**ಕರಿಷ್ಯೇ ವೇತಿ ವಾ ನಿತ್ಯಂ ನಿತ್ಯಕರ್ಮ್ಮಸು ಕೇವಲಮ್**
**ಅಲಮೇತಾವದೇವೇತಿ ರಹಸ್ಯಂ ಶ್ರುತಿತನ್ಮನಃ**

ಕಣ್ವಸ್ಮೃತಿಯಲ್ಲಿ ಸಂಕಲ್ಪದ ಬಗ್ಗೆ ಎತ್ತಿ ತೋರಿಸಲಾದ ಮತ್ತೊಂದು ಅಂಶ ಎಂದರೆ ಭಗವಂತನ ಪ್ರೀತಿಗಾಗಿ ಕರ್ಮವನ್ನು ನಡೆಸಲಾಗುವುದೆಂಬ ಅನುಸಂಧಾನಕ್ಕೆ ಪೂರಕವಾಗಿ **ಪರಮೇಶ್ವರತುಷ್ಟ್ಯರ್ಥಂ** ಎಂಬ ಉದ್ದೇಶವನ್ನು ಸಂಕಲ್ಪದಲ್ಲಿ ಉಲ್ಲೇಖಿಸಬೇಕೆಂಬುದು. (ಪರಮೇಶ್ವರ = ಪರಮಾತ್ಮ)

ಮುಂದೆ ನಡೆಸಲಾಗುವ ಕ್ರಿಯೆ ಅದರ ಕರ್ತಾ, ಪ್ರೇರಕ, ಕಾರಣ, ಫಲ – ಇವೆಲ್ಲಾ ಭಗವಂತನ ಅತ್ಯಂತಾಧೀನ. ಆದುದರಿಂದ ಏನೇ ಕರ್ಮ ಮಾಡಿದಾಗ ಅದು ಭಗವಂತನ ಪ್ರೀತಿಗಾಗಿ ಎಂಬ ಉದ್ದೇಶವನ್ನೊಳಗೊಂಡಿದ್ದಿರಬೇಕು. ಹೀಗೆ ಭಗವಂತನ ಪ್ರೀತಿಗಾಗಿ ಕರ್ಮವನ್ನು ನಡೆಸಿದಲ್ಲಿ, ಒಂದೊಮ್ಮೆ ಅದರಲ್ಲಿ ಯಾವುದೇ ಬಗೆಯ ನ್ಯೂನತೆ ಕಾಣಿಸಿಕೊಂಡರೂ, ಅದು ಪರಿಹರಿಸಲ್ಪಡುವುದು. ಇದರಿಂದಾಗಿ ಆಯಾ ಕರ್ಮ ಮೋಕ್ಷಪರ್ಯವಸಾಯಿ ಫಲಪ್ರದವೆನಿಸುವುದು.

**ಕ್ರಿಯಾ ಕರ್ತ್ತಾ ಕಾರಯಿತಾ ಕಾರಣಂ ತತ್ಫಲಂ ಹರಿಃ**
**ಸರ್ವಮೀಶ್ವರಮೇವೇತಿ ಬುದ್ಧಿರ್ಯಸ್ಯ ಸದಾ ಸ್ಥಿರಾ**
**ಸ ಏವ ಕೃತಕೃತ್ಯೋ ಹಿ ಸ ತು ಜ್ಞಾನಸ್ಯ ಭಾಜನಮ್**
**ತತ್ಕೃತಸ್ಯ ಚ ಕಾರ್ಯಸ್ಯ ವೈಗುಣ್ಯಂ ನೈವ ಜಾಯತೇ**
**ಕದಾಚಿದಪಿ ಕೇನಾಪಿ ನಾತ್ರ ಕಾರ್ಯಾ ವಿಚಾರಣಾ**
**ಯತ್ಕಿಂಚಿದ್ವಾ ಕೃತಂ ತೇನ ಪಾರಮೇಶ್ವರತುಷ್ಟಯೇ**
**ತದಕ್ಷಯಮಮೋಘಂ ಸ್ಯಾತ್ ಬ್ರಹ್ಮಜ್ಞಾನೈಕಸಾಧಕಮ್**
**ಯಥಾ ಶಾಸ್ತ್ರಕೃತಂ ಚ ಸ್ಯಾತ್ ಅಶಾಸ್ತ್ರಕೃತಮಪ್ಯಲಮ್**
**ಪರಮೇಶ್ವರತುಷ್ಟ್ಯರ್ಥಕೃತಂ ತಸ್ಮಾತ್ತಥಾ ಚರೇತ್**
**ತಸ್ಮಾದಹಂ ತು ಸರ್ವತ್ರ ಪರಮೇಶ್ವರತುಷ್ಟಯೇ**
**ಕರಿಷ್ಯೇ ಕರ್ಮ್ಮ ಚೇತ್ಯುಕ್ತ್ವಾ ಸರ್ವಕರ್ಮ್ಮಾಣ್ಯುಪಕ್ರಮೇತ್**

# ಮಾರ್ಜನ

ಜಪತಪೋನುಷ್ಠಾನಕ್ಕೆ ದೇಹ ಶುದ್ಧಿಯಾಗಿರಬೇಕು. ಅದಕ್ಕಾಗಿ ನೀರಿನಿಂದ ದೇಹವನ್ನು ಪ್ರೋಕ್ಷಿಸಿಕೊಳ್ಳಬೇಕು. ಕಾಲ, ಅಗ್ನಿ, ಜ್ಞಾನ ಇವೆಲ್ಲ ಹೇಗೆ ಶುದ್ಧಿಕಾರಕಗಳೋ ಹಾಗೆ ನೀರೂ ಶುದ್ಧಿಯನ್ನು ಮಾಡುವುದೆಂದು **ಯಾಜ್ಞವಲ್ಕ್ಯಸ್ಮೃತಿ** ಹೇಳಿದೆ–

**ಕಾಲೋಽಗ್ನಿಃ ಕರ್ಮ್ ಮೃದ್ವಾಯುಃ ಮನೋ ಜ್ಞಾನಂ ತಪೋ ಜಲಮ್**
**ಪಶ್ಚಾತ್ತಾಪೋ ನಿರಾಹಾರಃ ಸರ್ವೇಽಮೀ ಶುದ್ಧಿಹೇತವಃ**

ಈ ಸ್ಮೃತಿವಾಕ್ಯ ಹೇಳಿದ ಶುದ್ಧಿಯನ್ನೀವ ಎಲ್ಲ ವಸ್ತುಗಳೂ ಸಂಧ್ಯಾವಂದನೆಯಲ್ಲಿ ಯಾವುದೊಂದಾದರೂ ವಿಧದಲ್ಲಿ ಪ್ರಯೋಗದಲ್ಲಿವೆ. ಸಂಕಲ್ಪದಲ್ಲಿ ಚಿಂತಿಸಲಾದ ಕಾಲ, ಸ್ನಾನದಲ್ಲಿ ಉಪಯುಕ್ತವಾದ ಮಣ್ಣು, ಪ್ರಾಣಾಯಾಮದಲ್ಲಿಯ ಗಾಳಿ, ಮಂತ್ರಚಿಂತನೆ, ಸಂಧ್ಯಾಕರ್ಮದ ಕಡೆಯಲ್ಲಿ ಹೇಳಲಾಗುವ **(ಪಾಪೋಽಹಂ ಪಾಪಕರ್ಮಾಹಂ)** ತ್ರಿಕರಣಪೂರ್ವಕವಾದ ಅಪರಾಧಿ ವಿಶ್ಲೇಷಣೆಯ ಪಶ್ಚಾತ್ತಾಪದ ಪ್ರಾರ್ಥನೆ, ಜಪಕಾಲದಲ್ಲಿಯ ಉಪವಾಸಾದಿಗಳು ಇವೆಲ್ಲವು ಜಪಾನುಷ್ಠಾನದಲ್ಲಿ ನಮ್ಮ ದೇಹ–ಮನಸ್ಸನ್ನು ಶುಚಿಗೊಳಿಸುವವುಗಳು.

ಮಂತ್ರಸಹಿತವಾಗಿ ನೀರಿನಿಂದ ಪ್ರೋಕ್ಷಣೆಯನ್ನು ಆಚಾರ್ಯಮಧ್ವರು **ಸದಾಚಾರಸ್ಮೃತಿಯಲ್ಲಿ** ಉಲ್ಲೇಖಿಸಿದ್ದಾರೆ –

**ಪ್ರೋಕ್ಷ್ಯಾಚಮ್ಯ ಚ ಮಂತ್ರತಃ**

ಮಾರ್ಜನದ ಮಂತ್ರವನ್ನು ಉಲ್ಲೇಖಿಸಿ ವರ್ಷದಲ್ಲಿ ಮಾಡಿದ ಪಾಪವು ಅಪ್‌ಸೂಕ್ತದಿಂದ ನಾಶವಾಗಲಿದೆ ಎನ್ನುವುದನ್ನು **ಶೌನಕರು** ಸಾರಿದ್ದಾರೆ –

**ನವಪ್ರಣವಯುಕ್ತೇನ ಆಪೋಹಿಷ್ಠೇತ್ಯೃಚೇನ ಚ**
**ಸಂವತ್ಸರಕೃತಂ ಪಾಪಂ ಮಾರ್ಜನಾಂತೇ ವಿನಶ್ಯತಿ**

ಆಪ್ಯಸೂಕ್ತದ ಮೂರು ಮಂತ್ರಗಳ ಪ್ರತಿಯೊಂದು ಪಾದದಿಂದ 8 ಅಕ್ಷರಗಳಿಂದ ದೇಹವನ್ನು ಪ್ರೋಕ್ಷಿಸಿಕೊಳ್ಳಬೇಕು. ಪ್ರತಿಯೊಂದು ಪಾದಮಂತ್ರವನ್ನು ಪ್ರಣವದೊಂದಿಗೆ ಹೇಳಬೇಕು. ಇದರಿಂದ ತ್ರಿಕರಣದಿಂದ ನಡೆಸಲಾದ ತಪ್ಪು



ಕ್ಷಮ್ಯವಾಗಲಿದೆ. ಅವಸ್ಥಾತ್ರಯದಿಂದ ನಡೆದ ಅನ್ಯಾಯಗಳು ದೂರವಾಗಲಿವೆ. ರಾಜಸ, ತಾಮಸ, ಮೋಹಜ ಕರ್ಮಗಳು ನಶಿಸಲಿವೆ ಎಂದು ಪಾರಾಶರ್ಯದಲ್ಲಿ **ಗರುಡಪುರಾಣದ** ಮಾತನ್ನು ತಿಳಿಸಲಾಗಿದೆ –

**ಆಪೋಹಿಷ್ಠೇತ್ಯೃಚಾ ಕುರ್ಯಾತ್ ಮಾರ್ಜ್ಜನಂ ತು ಕುಶೋದಕೈಃ**

**ಪ್ರಣವೇನ ತು ಸಂಯುಕ್ತಂ ಕ್ಷಿಪೇದ್ವಾರಿ ಪದೇಪದೇ**

**ರಜಸ್ತಮೋಮೋಹಜಾತಾನ್ ಜಾಗ್ರತ್ಸ್ವಪ್ನಸುಷುಪ್ತಿಜಾನ್**

**ವಾಙ್ಮನಃಕಾಯಜಾನ್ ದೋಷಾನ್ ನವೈತಾನ್ನವಭಿರ್ದ್ದಹೇತ್**

ಯಾವ ಮಂತ್ರಖಂಡದಿಂದ ದೇಹದ ಯಾವ ಭಾಗವನ್ನು ಪ್ರೋಕ್ಷಿಸಬೇಕೆಂದು **ಬೃಹಸ್ಪತಿ** ಸಂಗ್ರಹವಾಗಿ ಹೇಳಿದ್ದಾನೆ –

**ಭುವಿ ಮೂರ್ಧ್ನಿ ತಥಾಕಾಶೇ ಮೂರ್ಧ್ನ್ಯಾಕಾಶೇ ತಥಾ ಭುವಿ**

**ಆಕಾಶೇ ಭುವಿ ಮೂರ್ಧ್ನಿ ಸ್ಯಾತ್ ಮಂತ್ರಸ್ನಾನಂ ವಿಧೀಯತೇ**

ನೆಲ, ತಲೆ, ಆಕಾಶ, ತಲೆ, ಆಕಾಶ, ನೆಲ, ಆಕಾಶ, ನೆಲ, ತಲೆ – ಹೀಗೆ ಒಂಭತ್ತು ಕಡೆ ಪ್ರೋಕ್ಷಿಸುವುದು ಮಂತ್ರಸ್ನಾನ ಎನಿಸಿದೆ ಎನ್ನುವ ಈ ಮಾತಿನಲ್ಲಿ ನೆಲ–ಆಕಾಶ ಶಬ್ದಗಳು ಯಾವ ಅಂಗವನ್ನು ತಿಳಿಸಿವೆ ಎಂದು ತಿಳಿಯದು. ಇದನ್ನು ಮಾರ್ಜನದ ತಂತ್ರಗಾರಿಕೆ ಬಲ್ಲವರು **ಸ್ಕಾಂದಪುರಾಣ** ವಚನದಿಂದ ತಿಳಿಸಿದ್ದಾರೆ –

**ಭೂಮಿಶಬ್ದೇನ ಚರಣೌ ಆಕಾಶಂ ಹೃದಯಂ ಸ್ಮೃತಮ್**

**ಶಿರಸ್ಯೇವ ಶಿರಃ ಶಬ್ದೋ ಮಾರ್ಜ್ಜನಜ್ಞೈರುದಾಹೃತಃ**

ನೆಲ ಎಂದು ಕಾಲುಗಳನ್ನು, ಆಕಾಶ ಎಂದು ಹೃದಯವನ್ನು ಪ್ರಮಾಣದಲ್ಲಿ ಹೇಳಲಾಗಿದೆ. ಸಾಧಕನ ದೇಹದಲ್ಲಿ ಲೋಕಗಳನ್ನು ಗುರುತಿಸಲಾಗಿದೆ. ಪಾದಸ್ಥಾನದಲ್ಲಿ ಭೂಲೋಕವನ್ನು ಹೇಳಿದ್ದರಿಂದ ಇಲ್ಲಿ ನೆಲ ಎಂದು ಕಾಲನ್ನು ತಿಳಿಸಲಾಗಿದೆ. ಹಾಗೆಯೆ ಹೃದಯದೊಳಗಿನ ಆಕಾಶವನ್ನು ಗುರುತಿಸಿ, ಇಲ್ಲಿ ಹೃದಯಕ್ಕೆ ಪ್ರೋಕ್ಷಣೆಯನ್ನು ತಿಳಿಸಿದ್ದು.

ಸ್ಮೃತಿಕಾರರಲ್ಲಿನ ಸಂಗ್ರಹದ ಮಾತು –



**ಆಕಾಶಂ ಹೃದಯಂ ಪ್ರೋಕ್ತಂ ಭೂಮಿಃ ಪಾದಾವಿತಿ ಸ್ಮೃತಮ್**

**ಸಚ್ಚರಿತ್ರಸುಧಾನಿಧಿಯಲ್ಲಿ** ಸ್ಪಷ್ಟವಾಗಿ ದೇಹಭಾಗವನ್ನು ಉಲ್ಲೇಖಿಸಲಾಗಿದೆ –

**ಪಾದಯೋರ್ಮೂರ್ಧ್ನಿ ಹೃದಯೇ ಮೂರ್ಧ್ನಿ ವಕ್ಷಸಿ ಪಾದಯೋಃ**

**ಹೃದಯೇ ಪಾದಯೋರ್ಮೂರ್ಧ್ನಿ ನವಭಿಃ ಪ್ರಣವಾದಿಕೈಃ**

**ಆಪೋಹಿಷ್ಠಾದಿಭಿರ್ಮಂತ್ರೈಃ ಇತಿ ಸಂಪ್ರೋಕ್ಷಯೇತ್ ಕ್ರಮಾತ್**

ಸ್ಥಾನವ್ಯತ್ಯಾಸದಲ್ಲಿ ಪ್ರೋಕ್ಷಣೆಯನ್ನು **ಸ್ಕಾಂದಪುರಾಣದಲ್ಲಿ** ತಿಳಿಸಿದ್ದುಂಟು–

**ಭೂಮೌ ಶಿರಸಿ ಚಾಕಾಶೇ ಆಕಾಶೇ ಭುವಿ ಮಸ್ತಕೇ**

**ಮಸ್ತಕೇ ಚ ತಥಾಕಾಶೇ ಭೂಮೌ ಚ ನವಧಾ ಕ್ಷಿಪೇತ್**

ಈ ಪ್ರಮಾಣದಂತೆ ಪಾದ–ತಲೆ–ಎದೆ ಪ್ರೋಕ್ಷಣೆಗೈಯುವಲ್ಲಿ ಮತ್ತೆ ಅದೇ ಸ್ಥಾನದಿಂದ ಪ್ರೋಕ್ಷಣೆ ಆರಂಭವಾಗುವುದು. ಹಿಂದಿನ ಪ್ರಮಾಣದಂತೆ ಪ್ರೋಕ್ಷಣೆಯ ಕ್ರಮದಲ್ಲಿ ನಡುವಿನ ಸ್ಥಾನದಿಂದ ಪ್ರೋಕ್ಷಣೆಯ ಆವೃತ್ತಿ ಇರುವುದು. ಮೂರು ಆವೃತ್ತಿಯ ಮಾರ್ಜನದಲ್ಲಿನ ದೇಹದ ಸ್ಥಾನವನ್ನು ಹೀಗೆ ಸಂಗ್ರಹಿಸಬಹುದು –

ಮೊದಲ ಮೂರು ಮಂತ್ರಗಳಿಂದ – ಕಾಲು, ತಲೆ, ಎದೆ.

ನಡುವಿನ ಮೂರು ಮಂತ್ರಗಳಿಂದ – ಎದೆ, ಕಾಲು, ತಲೆ.

ಕಡೆಯ ಮೂರು ಮಂತ್ರಗಳಿಂದ – ತಲೆ, ಎದೆ, ಕಾಲು.

ಪ್ರದಕ್ಷಿಣೆಯಾಗಿ ಕಾಲು–ತಲೆ–ಎದೆ–ಕಾಲು–ತಲೆ–ಎದೆ–ಕಾಲುಗಳನ್ನು ಈ ಪ್ರಮಾಣದಂತೆ ಗುರುತಿಸಲಾಗಿದೆ. ಮೂರನೆಯ ಮಂತ್ರಸ್ಥಾನವೆ ನಾಲ್ಕನೆಯ ಮಂತ್ರಕ್ಕೆ ಆರಂಭವಾಗುವುದು. ಹಾಗೆಯೆ ಆರನೆಯ ಸ್ಥಾನ ಏಳನೆಯ ಅಂದರೆ ಕಡೆಯ ಆವೃತ್ತಿಯಲ್ಲಿ ಆರಂಭದ ಸ್ಥಾನಕ್ಕೆ ಬರುವುದು. ಈಗ ಇದೇ ಕ್ರಮ ಹೆಚ್ಚು ಬಳಕೆಯಲ್ಲಿದೆ.

ಕಡೆಯ ಪಕ್ಷ ತಲೆಗಾದರೂ ಪ್ರೋಕ್ಷಣೆಯನ್ನು ಮಾಡಬೇಕೆಂದು **ಆಹ್ನಿಕಾಚಾರದಲ್ಲಿ** ಹೇಳಲಾಗಿದೆ. ಅದರಂತೆ ಒಂಭತ್ತು ಬಾರಿ ಅಲ್ಲದಿದ್ದರೂ ಮೂರು ಮಂತ್ರಗಳಿಂದ ಮೂರು ಬಾರಿಯಾದರೂ ಪ್ರೋಕ್ಷಣೆಯನ್ನು ಮಾಡಬೇಕು –



**ಋಗಂತೇ ಮಾರ್ಜನಂ ಕುರ್ಯಾತ್ ಪಾದಾಂತೇ ವಾ ಸಮಾಹಿತಃ**

**ಆಪೋಹಿಷ್ಠೇತ್ಯೃಚಾ ಕಾರ್ಯಂ ಮಾರ್ಜನಂ ತು ಕುಶೋದಕೈಃ**

**ಪ್ರತಿಪ್ರಣವಸಂಯುಕ್ತಂ ಕ್ಷಿಪೇನ್ಮೂರ್ಧ್ನಿ ಪದೇಪದೇ**

ಸ್ಮೃತಿಯಲ್ಲಿ ಆಪೋಹೀಷ್ಠಾ... ಮಂತ್ರಗಳಿಂದ ಮಾರ್ಜನವನ್ನು ನಡೆಸುವ ಮೊದಲು ಪ್ರಣವ, ವ್ಯಾಹೃತಿ, ಗಾಯತ್ರೀಮಂತ್ರಗಳಿಂದ ಮಾರ್ಜನವನ್ನು ನಡೆಸಲು ಹೇಳಿದ್ದಾರೆ –

**ಶಿರಸೋ ಮಾರ್ಜನಂ ಕುರ್ಯಾತ್ ಕುಶೈಃ ಸೋದಕಬಿಂದುಭಿಃ**

**ಪ್ರಣವೋ ಭೂರ್ಭುವಃಸ್ವಶ್ಚ ಸಾವಿತ್ರೀ ಚ ತೃತೀಯಕಾ**

**ಅಬ್ದೈವತ್ಯಂ ಋಚಂ ಚೈವ ಚತುರ್ಥಮಿತಿ ಮಾರ್ಜನಮ್**

ಈ ಬಗೆಯ ಮಾರ್ಜನವು ಸಂಧ್ಯಾವಂದನೆಯ ಸಂದರ್ಭದಲ್ಲಿ ಚಾಲ್ತಿಯಲ್ಲಿಲ್ಲದಿದ್ದರೂ ಯಾಜುಷದಲ್ಲಿ ಸ್ನಾನಪವನಮಂತ್ರಾಚಮನದಲ್ಲಿ ಬಳಕೆಯಲ್ಲಿದೆ. ಪ್ರಯೋಗಪಾರಿಜಾತ ತಿಳಿಸಿದಂತೆ ಈಗ ಜಪದಲ್ಲಿ ಸಂಕಲ್ಪದ ಬಳಿಕ ಆಪೋಹಿಷ್ಠಾದಿ ಮೂರು ಮಂತ್ರಗಳಿಂದ ಮಾತ್ರವೇ ಮಾರ್ಜನ ನಡೆಸಲ್ಪಡುವುದು –

ಸಂಕಲ್ಪ್ಯ ಮಾರ್ಜನಂ ಕುರ್ಯಾದಾಪೋಹಿಷ್ಠಾದಿಭಿಸ್ತ್ರಿಭಿಃ

ಓಂ ಆಪೋಹಿಷ್ಠಾ ಮಯೋ ಭುವಃ

ಓಂ ತಾನ ಊರ್ಜೇ ದಧಾತನ

ಓಂ ಮಹೇರಣಾಯ ಚಕ್ಷಸೇ

ಓಂ ಯೋ ವಃ ಶಿವತಮೋ ರಸಃ

ಓಂ ತಸ್ಯ ಭಾಜಯತೇಹ ನಃ

ಓಂ ಉಶತೀರಿವ ಮಾತರಃ

ಓಂ ತಸ್ಮಾ ಅರಂ ಗಮಾಮ ವಃ

ಓಂ ಯಸ್ಯ ಕ್ಷಯಾಯ ಜಿನ್ವಥ

ಓಂ ಆಪೋ ಜನಯಥಾ ಚ ನಃ



ಎಲ್ಲಾ ವೇದಗಳಲ್ಲಿ ಬಂದ ಆಪ್ಯಸೂಕ್ತ ಇದು. ಆಪೋಹಿಷ್ಠೀಯಂ ಎಂದು ಪ್ರೋಕ್ಷಣೆಗೆ ಇದರಿಂದ ಹೆಸರು ಬಂದಿದೆ. ಅಂಬರೀಷನ ಮಗ ಸಿಂಧುದ್ವೀಪನಂತೆ 'ತ್ವಷ್ಟೃಮಗ ವಿಶ್ವರೂಪನೂ ಈ ಸೂಕ್ತದ ಋಷಿ. ಪ್ರೋಕ್ಷಣೆಯ ವಸ್ತು ಜಲ. ಜಲಕ್ಕೆ ಬುಧವರುಣರು ಅಭಿಮಾನಿಗಳು. ಒಂಭತ್ತು ಖಂಡವಾಕ್ಯಗಳಾಗಿ **ಮಹಾನಾರಾಯಣೋಪನಿಷತ್ತು** ಇದನ್ನೇ ಹೇಳಿದೆ. ಋಗ್ವೇದ ಇದನ್ನು ಮಹಾಸೂಕ್ತ ಎಂದು ಕರೆದಿದೆ.

ಆಪಃ ಶಬ್ದದಿಂದ ಮುಖ್ಯವಾಗಿ ಎಲ್ಲೆಡೆ ನಿಂತು ರಕ್ಷಣೆಗೈವ ನೀರಿನಲ್ಲಿ ಪವಡಿಸಿರುವ ನಾರಾಯಣನೆ ಬಹುರೂಪದಿಂದ ಅರ್ಥನಾಗುತ್ತಾನೆ. ಮತ್ತೆ ದಿಕ್ಪಾಲರೆಲ್ಲರೂ ಬ್ರಹ್ಮಶೇಷರುದ್ರೇಂದ್ರಾದಿಗಳು ಆಪಃ ಶಬ್ದದಿಂದ ಅರ್ಥರಾಗುತ್ತಾರೆ ಎಂದು **ಐತರೇಯಭಾಷ್ಯ**ದಲ್ಲಿದೆ –

**ಬ್ರಹ್ಮಶೇಷಸುಪರ್ಣೇಂದ್ರಶಿವಾದ್ಯಾ ಆಪ ಈರಿತಾಃ**

**ತೇ ವಿಷ್ಣೋರ್ಮ್ಮನಸಾ ಜಾತಾಃ ಸರ್ವೇ ಚಾಬಭಿಮಾನಿನಃ**

ಇವರೆಲ್ಲರೂ ನನಗೆ ಆನಂದವನ್ನು (**ಸುಖಂ ಮಯಃ**–ನಿಘಂಟು) ನೀಡಲಿ, ಇವರು ಅನ್ನ ನೀಡಲಿ, ಮನಸ್ಸಿಗೂ ಆಹಾರ ದೊರಕಿಸಿ ಕೊಡಲಿ. ಜ್ಞಾನಯುದ್ಧಕ್ಕೆ ನನ್ನನ್ನು ತೊಡಗಿಸಲಿ, ಅಲ್ಲಿ ಸಂತೋಷ ಸಿಗುವಂತೆ ಮಾಡಲಿ.

ಅವರ ಯಾವೊಂದು ಕರುಣಾರಸವಿದೆಯೋ ಅದಿಲ್ಲಿ ನನ್ನಲ್ಲಿ ಇರಲಿ. ನನ್ನೆಡೆಗೆ ಹರಿಯಲಿ – ವಾತ್ಸಲ್ಯ ತುಂಬಿದ ತಾಯಂದಿರಂತೆ

ನಿಮ್ಮಲ್ಲಿರುವ ಮಂಗಳಪ್ರದವಾದ ಜ್ಞಾನಸಾರವನ್ನು ಒಳಗೆ ಬೆಳಕನ್ನುಂಟು ಮಾಡುವ ಮಾತುಗಳಿಂದ ನನಗೆ ಸಿಗುವಂತೆ ಮಾಡಿರಿ. ಅಪ್ ದೇವತೆಗಳೆ, ನೀವು ಯಾರ ಬಳಿಗೆ ಮನೆಗೆ ಯಾರ ಮನಸ್ಸಿಗೆ ಅನುಗ್ರಹಮಾಡಿ ಸೇರಿದ್ದೀರೋ ಅವರನ್ನು ನಾನು ಚೆನ್ನಾಗಿ ಶರಣು ಹೊಂದಿರುವೆನು. ನಮಗೂ ಅನುಗ್ರಹಮಾಡಿ ನೀವು ನಮ್ಮನ್ನು ಎತ್ತರಕ್ಕೆ ಒಯ್ಯಿರಿ.

**ಮೈತ್ರಾಯಣೀಯಸಂಹಿತೆ**ಯಲ್ಲಿ ಆಪ್ಯಸೂಕ್ತದ ಚಿಂತನೆ –

**ಆಪೋಹಿಷ್ಠಾ ಮಯೋ ಭುವಾ ಇತ್ಯಪ ಉಪಸೃಜತಿ**



**ಆಪೋ ವಾ ಅಶಾಂತಸ್ಯ ಶಮಯಿತ್ರಿಕಾಃ**

**ತಸ್ಮಾದಪ ಉಪಸೃಜತಿ ಶಾಂತ್ಯೈ**

**ತಿಸೃಭಿರುಪಸೃಜತಿ ತ್ರಿವೃದ್ಧಿ ಅಗ್ನಿಃ**

ಆಪ್ಯಸೂಕ್ತದಲ್ಲಿ ನಾರಾಯಣ ಚಿಂತನೆಯನ್ನು ವಸಿಷ್ಠಸ್ಮೃತಿ ಸೂಚಿಸಿದೆ–

**ಮಂತ್ರೈಃ ಸಂಮಾರ್ಜ್ಜಯೇದದ್ಭಿಃ ಶುಚಿರಬ್ದೈವತ್ಯೈರ್ದ್ವಿಜಃ**

**ಧ್ಯಾಯನ್ನಾರಾಯಣಂ ದೇವಂ ಮಂತ್ರರತ್ನೇನ ಮಾರ್ಜ್ಜಯೇತ್**

**ಅಭಿಮಂತ್ರ್ಯ ಜಲಂ ಪ್ರಾಶ್ಯ ಪಶ್ಚಾದಾಚಮನಂ ಚರೇತ್**

ಒಂದೊಂದೇ ಮಂತ್ರವನ್ನು ಪೂರ್ತಿ ಹೇಳಿ ಪ್ರೋಕ್ಷಿಸಿಕೊಳ್ಳಬೇಕು. ಮಂತ್ರದ ನಡುವೆ ಪ್ರೋಕ್ಷಣೆ ನಿಷಿದ್ಧ ಎಂದು **ಶೌ**ನಕರ ಮಾತಿದೆ –

**ಅಷ್ಟಾಕ್ಷರಂ ನವಪಾದಂ ಪಾದಾಂತೇ ವಾರಿ ಚೋತ್ಸಜೇತ್**

**ಅಪಾದಾಂತೇ ತು ಯದ್ವಾರಿ ತತ್ತೋಯಂ ರುಧಿರಂ ಭವೇತ್**

ಈ ಮಾರ್ಜನವನ್ನು ಬ್ರಹ್ಮಸ್ನಾನವೆಂದು **ಸ್ಕಾಂದಪುರಾಣ**ವು ಹೆಸರಿಸಿದೆ. ಇದು ಎಲ್ಲಕ್ಕಿಂತ ಶ್ರೇಷ್ಠ ಎಂದಿದೆ –

**ವಾರುಣಾದಪಿ ಚಾಗ್ನೇಯಾತ್ ವಾಯುವ್ಯಾದಪಿ ಚೈಂದ್ರತಃ**

**ಮಂತ್ರಸ್ನಾನಾದಪಿ ಪರಂ ಬ್ರಾಹ್ಮಂ ಸ್ನಾನಮಿದಂ ಪರಮ್**

**ಬ್ರಾಹ್ಮಸ್ನಾನೇನ ಯಃ ಸ್ನಾತಿ ಸ ಬಾಹ್ಯಾಭ್ಯಂತರೇ ಶುಚಿಃ**

**ಸರ್ವತ್ರ ಚಾರ್ಹತಾಮೇತಿ ದೇವಪೂಜಾದಿಕರ್ಮ್ಮಣಿ**

ಆಪ್ಯಸೂಕ್ತದಿಂದ ಇಂದ್ರನು ವೃತ್ರಾಸುರನ ವಧೆಯಿಂದಾದ ಬ್ರಹ್ಮಹತ್ಯೆಯಿಂದ ಮುಕ್ತನಾದನೆಂಬ ಮಾತನ್ನು **ಋಗ್ವಿಧಾನ**ದಲ್ಲಿ ಕಾಣಬಹುದು –

**ಬ್ರಹ್ಮಹಾ ತು ಪುರಾ ಶಕ್ರಃ ತ್ವಾಷ್ಟ್ರಂ ಹತ್ವಾ ತ್ವಷಿಂ ಪ್ರಭುಮ್**

**ಸಿಂಧುದ್ವೀಪಸ್ತಮೇತಾಭಿಃ ಅಭಿಷಿಚ್ಯ ವ್ಯಮೋಚಯತ್**

ಹೀಗೆಯೇ ಕಳ್ಳತನದ, ಸುರಾಪಾನದ ಪಾಪಗಳೂ ಆಪ್ಯಸೂಕ್ತಜಪದಿಂದ ನಿವೃತ್ತಿಗೊಳ್ಳಲಿವೆ. ಪ್ರತಿನಿತ್ಯದ ಹಗಲು–ರಾತ್ರಿಯ ಮಾರ್ಜನದಿಂದ ರಾತ್ರಿ–ಹಗಲು ತಿಳಿಯದೇ ಮಾಡಿದ ಪಾಪಗಳಿಂದ ನಿವೃತ್ತಿಯನ್ನೂ ಇಲ್ಲಿ **ಶೌ**ನಕರು ಹೇಳಿದ್ದಾರೆ.



**ಪ್ರಾತರುತ್ಥಾಯ ಸತತಂ ಕುರ್ಯಾನ್ಮಾರ್ಜ್ಜನಮಾತ್ಮನಃ**

**ರಾತ್ರೌ ಕೃತಸ್ಯ ಪಾಪಸ್ಯ ಅವಿಜ್ಞಾತಸ್ಯ ನಿಷ್ಕೃತಿಃ**

**ಸಾಯಂ ಚ ನಿತ್ಯಮೇತಾಭಿಃ ಕುರ್ಯಾನ್ಮಾರ್ಜ್ಜನಮಾತ್ಮನಃ**

**ದಿವಾಕೃತಸ್ಯ ಪಾಪಸ್ಯ ಅವಿಜ್ಞಾತಸ್ಯ ನಿಷ್ಕೃತಿಃ**

ಜಪಕಾಲದಲ್ಲಿ ತುಳಸಿಯನ್ನು ಹಿಡಿದಿರಬೇಕು. ನೀರನ್ನು ಹರಿ ನಿರ್ಮಾಲ್ಯ ತುಳಸಿಯಿಂದಲೆ ಪ್ರೋಕ್ಷಿಸಿಕೊಳ್ಳಬೇಕು. ಇಲ್ಲವಾದರೆ ದುಷ್ಟಶಕ್ತಿಗಳು ಮಾರ್ಜನವನ್ನು ಕೆಡಿಸುವರು –

**ವಿನಾ ಯಸ್ತುಳಸೀಂ ಕುರ್ಯಾತ್ ಸಂಧ್ಯಾಕಾಲೇಷು ಮಾರ್ಜ್ಜನಮ್**

**ತತ್ಸರ್ವಂ ರಾಕ್ಷಸಹೃತಂ ನರಕಂ ಚ ಪ್ರಯಚ್ಛತಿ**

ಸಂಧ್ಯಾವಂದನೆ ಹೊರತು ಬೇರೆ ಸಂದರ್ಭಗಳಲ್ಲಿ ಶುದ್ಧ್ಯಂಗವಾಗಿ ಮಾರ್ಜನವನ್ನು ದರ್ಭೆ ಹಿಡಿದುಕೊಂಡು ನಡೆಸಿದರೂ ಆಗುವುದು. ಸಂಧ್ಯಾವಂದನೆಯಲ್ಲಿ ದರ್ಭೆಗಿಂತ ತುಳಸಿಗೆ ಹೆಚ್ಚು ಮಹತ್ತ್ವವನ್ನು ಕೊಡಲಾಗಿದೆ.

**ಕುಶಾ ಏವ ಸಮಾಖ್ಯಾತಾ ಮುಖ್ಯಾಃ ಸ್ನಾನಾದಿಕರ್ಮ್ಮಣಿ**

**ನ ತಥಾ ತುಳಸೀ ಜ್ಞೇಯಾ ತದಭಾವೇ ಸಮಾ ಮತಾ**

**ತುಳಸೀಮೃತ್ತಿಕಾ ಲೇಪೇ ಮಾರ್ಜ್ಜನೇ ತುಳಸೀದಳಮ್** (ಬೃಹತ್‌ಬ್ರಹ್ಮಸಂಹಿತೆ)

**ಸಂಧ್ಯಾಯಾಂ ಮಾರ್ಜ್ಜನೇ ಚೈವ ತರ್ಪ್ಪಣಾದಿಷು ಕರ್ಮ್ಮಸು**

**ದರ್ಭಾಭಾವೇ ತಿಲಾಭಾವೇ ತುಳಸ್ಯೇವ ಫಲಪ್ರದಾ** (ಸಂಗ್ರಹ)

ತುಳಸಿ ಹಿಡಿದರೆ ಲಾಭವನ್ನು ಈ ಪ್ರಮಾಣ ಹೇಳಿದೆ –

**ತುಳಸೀಪತ್ರಗಳಿತಂ ಯತ್ತೋಯಂ ಶಿರಸಾ ವಹೇತ್**

**ಗಂಗಾಪುಣ್ಯಮವಾಪ್ನೋತಿ ಶತಧೇನುಫಲಂ ಲಭೇತ್**

ಹರಿಯ ನಿರ್ಮಾಲ್ಯವನ್ನಷ್ಟೇ ತುಳಸಿಯನ್ನು ಜಪಕಾಲದಲ್ಲಿ ಉಪಯೋಗಿಸಬೇಕು. ಒಂದಿಡಿ ದಿನ ನಾರಾಯಣನ ಮೇಲಿದ್ದ ತುಳಸಿಯು ನಿರ್ಮಾಲ್ಯವೆನಿಸುವುದು. ಅಂತಹ ತುಳಸಿಯನ್ನು ಮಾತ್ರವೇ ನಾವು ಜಪತರ್ಪಣಾದಿಗಳಲ್ಲಿ ಬಳಸಲು ಯೋಗ್ಯ. ಆಗಷ್ಟೇ ದೇವರ ಮೇಲೆ ಹಾಕಿ



ತೆಗೆದ ತುಳಸಿ ಉಪಯೋಗಕ್ಕೆ ಬರಲಾಗದು –

**ವಿಷ್ಣುಪಾದಾಬ್ಜಸಂಲಗ್ನಾಂ ಅಹೋರಾತ್ರಾರ್ಪಿತಾಂ ಶುಭಾಮ್**

**ತುಳಸೀಂ ಧಾರಯೇದ್ಯಸ್ತು ತಸ್ಯ ಪುಣ್ಯಮನಂತಕಮ್** (ವಾಯುಪುರಾಣ)

ಆಪ್ಯಸೂಕ್ತದ ಋಷಿ ಸಿಂಧುದ್ವೀಪ, ಗಾಯತ್ರೀ ಛಂದಸ್, ಆಪರು ದೇವತೆಗಳು ಎಂದು **ಸ್ಮೃತಿರತ್ನಾಕರ** ಹೇಳಿದೆ –

**ಆಪೋಹಿಷ್ಠಾದಿಮಂತ್ರಸ್ಯ ಸಿಂಧುದ್ವೀಪ ಋಷಿಃ ಸ್ಮೃತಃ**

**ಛಂದೋ ಗಾಯತ್ರಮಾಪಸ್ತು ದೇವತಾ ಪ್ರೋಕ್ಷಣೇ ಚ ಸಃ**

**ಸಂಸ್ಕಾರವಿಧಿಯಲ್ಲಿ** ಬೇರೆ ಮಂತ್ರಗಳಿಂದ ಬೇರೆ ಬಗೆಯ ಮಾರ್ಜನವನ್ನು ಹೇಳಲಾಗಿದೆ. ಇದು ಈಗ ಬಳಕೆಯಲ್ಲಿಲ್ಲ –

**ಓಂ ಭೂಃ ಪುನಾತು** (ಶಿರಸಿ) **ಓಂ ಭುವಃ ಪುನಾತು** (ನೇತ್ರಯೋಃ)

**ಓಂ ಸ್ವಃ ಪುನಾತು** (ಕಂಠೇ) **ಓಂ ಮಹಃ ಪುನಾತು** (ಹೃದಯೇ)

**ಓಂ ಜನಃ ಪುನಾತು** (ನಾಭ್ಯಾಂ) **ಓಂ ತಪಃ ಪುನಾತು** (ಪಾದಯೋಃ)

**ಓಂ ಸತ್ಯಂ ಪುನಾತು** (ಶಿರಸಿ) **ಓಂ ಖಂ ಬ್ರಹ್ಮ ಪುನಾತು** (ಸರ್ವತ್ರ)

ಸಪ್ತವ್ಯಾಹೃತಿಯೊಡನೆ ಶರೀರವ್ಯಾಪಿ ಭಗವಂತನ ನೆನಪಿನಲ್ಲಿ ಸರ್ವಾಂಗಗಳ ಮಾರ್ಜನೆಯ ಈ ಕ್ರಮವು ಹಿಂದೆ ಯಾಜುಷರಲ್ಲಿ ಕೆಲವೊಂದು ಹೋಮಹವನಗಳ ಸಂದರ್ಭಗಳಲ್ಲಿ ಕಂಡುಬರುತ್ತಿತ್ತು. ಈಗ ನಶಿಸಿ ಹೋದಂತಿದೆ.

ಮಾರ್ಜನೆಯ ಬಳಿಕ ಜಲಪ್ರಾಶನದ ಅನಂತರ ಮತ್ತೆ ಮಾರ್ಜನೆ ಮಾಡಲಿದೆ. ಪುನರ್ಮಾರ್ಜನದಲ್ಲಿಯೂ ಇವೇ ಆಪೋಹಿಷ್ಠಾದಿ ಮಂತ್ರಗಳು ವಿಹಿತವಾಗಿವೆ. ಅದಕ್ಕೂ ಮೊದಲು **ದಧಿಕ್ರಾವ್ಣೋ ಅಕಾರಿಷಮ್** ಎಂಬ ಒಂದು ಋಕ್ ಮಂತ್ರದಿಂದ ಮಾರ್ಜನವನ್ನು ಹೇಳಿದ್ದಾರೆ. ಆ ಮಂತ್ರಕ್ಕೆ ಹೇಳಲಾದ ಋಷ್ಯಾದಿಗಳನ್ನು **ಭರದ್ವಾಜರು** ಹೀಗೆ ಸಂಗ್ರಹಿಸಿ ಹೇಳಿದ್ದಾರೆ –

**ದಧಿಕ್ರಾವ್ಣ ಇತ್ಯಸ್ಯ ವಾಮದೇವ ಋಷಿಃ ಸ್ಮೃತಃ**

**ಛಂದೋಽನುಷ್ಟುಪ್ ವಿಶ್ವದೇವಾ ದೇವತಾಃ ಪ್ರೋಕ್ಷಣೇ ವಿದುಃ**

ಎಲ್ಲ ಸೋಮಪಾನಾರ್ಹ ದೇವತೆಗಳೂ ಇಲ್ಲಿ ಚಿಂತನೆಯಲ್ಲಿ



ಇರಬೇಕಾದವರು. ಇವರು ನಮ್ಮನ್ನು ಪಾವನಗೊಳಿಸಿ ಉತ್ಕೃಷ್ಟವಾದ ಪರಮಾತ್ಮಜ್ಞಾನಕ್ಕೆ ಅಧಿಕಾರಿಗಳನ್ನಾಗಿಸುವರು. ಮುಂದೆ ನಡೆಸಲಿರುವ ಜಪಾನುಷ್ಠಾನಕ್ಕೆ ಬೇಕಾದ ಅವಕಾಶಗಳನ್ನು ಕಲ್ಪಿಸಿಕೊಡುವರು.

**ಆಹ್ನಿಕಮಂಜರಿಯಲ್ಲಿ** ಪುನರ್ಮಾರ್ಜನಕ್ಕೆ **ಶನ್ನೋ ದೇವೀಃ** ಮುಂತಾದ ಏಳು ಮಂತ್ರಗಳನ್ನೂ ತಿಳಿಸಿರುತ್ತಾರೆ. ಆಯಾ ಶಾಖೆಯವರು ತಮ್ಮ ಗುರೂಪದೇಶದಂತೆ ಮಂತ್ರಗಳಿಂದ ಮಾರ್ಜನವನ್ನು ಮಾಡಬಹುದು. (ಬೇರೆ ಬೇರೆ ವೇದಶಾಖೆಯವರಿಗೆ ಮಂತ್ರಗಳನ್ನು ಬೇರೆ ಬೇರೆಯಾಗಿ ಆಯಾ ಸೂತ್ರಕಾರರು ತಿಳಿಸಿದ್ದಾರೆ.) ಆಪ್ಯಸೂಕ್ತ ಎಲ್ಲರಿಗೂ ಸಮಾನವಾದದ್ದು. ಇದನ್ನು ಯಾರೂ ಬಿಡುವಂತಿಲ್ಲ.

ಮೂರು ಸಂಧ್ಯೆಯಲ್ಲಿಯೂ ಆಪ್ಯಸೂಕ್ತದಿಂದ ಮಾರ್ಜನ ಮಾಡಬೇಕೆಂದು **ಲೌಗಾಕ್ಷಿಸ್ಮೃತಿಯು** ಸಾರಿದೆ–

**ಸಂಧ್ಯಾತ್ರಯೇಽಪಿ ಕರ್ತವ್ಯಂ ಆಪೋಹಿಷ್ಠಾದಿ ಮಾರ್ಜನಮ್**

ಮಾರ್ಜನದ ಬಳಿಕ ಯಜುರ್ವೇದದ ಒಂದು ಮಂತ್ರದಿಂದ ಶಿರಸ್ಸೇಕವನ್ನು ಕೆಲವರು ಸಂಧ್ಯಾವಂದನೆಯಲ್ಲಿ ನಡೆಸುತ್ತಾರೆ. ಇದು ಕೆಲವು ಶಾಖೆಯವರಿಗೆ ಸೀಮಿತವಾಗಿ ಹೇಳಲಾಗಿದೆ.

ಇದರಂತೆ **ಉತ್ತಮೇ ಶಿಖರೇ ದೇವೀ** ಇತ್ಯಾದಿ ಗಾಯಿತ್ರೀವಿಸರ್ಜನಮಂತ್ರವನ್ನೂ ತೈತ್ತಿರೀಯಾರಣ್ಯಕದಲ್ಲಿ ಹೇಳಿದ್ದನ್ನು ಕೆಲವರು ಸಂಧ್ಯೋಪಾಸನೆಯಲ್ಲಿ ಹೇಳುತ್ತಾರೆ.

ಇದರಂತೆ ಉಪಸ್ಥಾನದಲ್ಲಿಯೂ ಯಜುರ್ವೇದದ **ಪಶ್ಯೇಮ ಶರದಃ ಶತಮ್** ಮಂತ್ರವನ್ನು ಪಾಠಾಂತರದಲ್ಲಿ ಪಠಿಸುವವರೂ ಇದ್ದಾರೆ.

ಮಂತ್ರವ್ಯತ್ಯಾಸಗಳನ್ನು ಕೆಲವು ವಿಶೇಷ ಮಂತ್ರಪಠನವನ್ನು ಕೆಲವು ಸ್ಮೃತಿಗಳು ಹೇಳಿವೆಯಾದರೂ ಸಾಮಾನ್ಯವಾಗಿ ಪುರಾಣಸಂಹಿತಾಗಳ ಆಧಾರ ದಲ್ಲಿನ ನಿತ್ಯಜಪವಿಧಿಯನ್ನಿಲ್ಲಿ ಹೆಚ್ಚು ಅಳವಡಿಸಿ ಚಿಂತನೆ ನಡೆಸಲಾಗಿದೆ.



# ಮಂತ್ರಾಚಮನ

ಮಂತ್ರ ಹೇಳಿ ಜಲವನ್ನು ಪ್ರಾಶನ ಮಾಡುವುದಕ್ಕೆ ಮಂತ್ರಾಚಮನ ಎನ್ನುವರು. ಮೂರು ಕಾಲದ ಜಪದಲ್ಲಿ ಹೇಳಬೇಕಾದ ಮೂರು ಮಂತ್ರಗಳನ್ನು **ಗರುಡಪುರಾಣ**ದಲ್ಲಿ ಸಂಗ್ರಹವಾಗಿ ಹೇಳಲಾಗಿದೆ–

**ಸಾಯಮಗ್ನಿಶ್ಚ ಮೇತ್ಯುಕ್ತ್ವಾ ಪ್ರಾತಃ ಸೂರ್ಯೇತ್ಯಪಃ ಪಿಬೇತ್**

**ಆಪಃ ಪುನಂತು ಮಧ್ಯಾಹ್ನೇ ಉಪಸ್ಪೃಶ್ಯ ಯಥಾವಿಧಿ**

ಪ್ರಾತಃಸಂಧ್ಯಾವಂದನೆಯಲ್ಲಿ –

**ಸೂರ್ಯಶ್ಚ ಮಾ ಮನ್ಯುಶ್ಚ ಮನ್ಯುಪತಯಶ್ಚ**

**ಮನ್ಯುಕೃತೇಭ್ಯಃ ಪಾಪೇಭ್ಯೋ ರಕ್ಷಂತಾಮ್**

**ಯದ್ರಾತ್ರ್ಯಾ ಪಾಪಮಕಾರ್ಷಂ ಮನಸಾ ವಾಚಾ ಹಸ್ತಾಭ್ಯಾಂ**

**ಪದ್ಭ್ಯಾಮುದರೇಣ ಶಿಶ್ನಾ ರಾತ್ರಿಸ್ತದವಲುಂಪತು**

**ಯತ್ಕಿಂಚ ದುರಿತಂ ಮಯಿ**

**ಇದಮಹಂ ಮಾಂ ಅಮೃತಯೋನೌ**

**ಸೂರ್ಯೇ ಜ್ಯೋತಿಷಿ ಜುಹೋಮಿ ಸ್ವಾಹಾ**

ಜ್ಞಾನಿಪ್ರಾಪ್ತ ಸೂರ್ಯಾಂತರ್ಯಾಮಿ ನಾರಾಯಣ, ಮನ್ಯುನಾಮಕ ರುದ್ರ, ಕ್ರೋಧಾಭಿಮಾನಿದೇವತೆಗಳು ಕೋಪದಿಂದ ನನ್ನಿಂದಾದ ಪಾಪಕರ್ಮಗಳಿಂದ ನನ್ನನ್ನು ಕಾಪಾಡಲಿ. ನನ್ನಿಂದ ತಿಳಿಯದೇ ತ್ರಿಕರಣಗಳಿಂದ ಮಾಡಲ್ಪಟ್ಟ ಪಾಪಗಳನ್ನು ಕಾಲು–ಹೊಟ್ಟೆ–ಗುಹ್ಯೇಂದ್ರಿಯಗಳಿಂದೆಲ್ಲ ಮಾಡಿದ ಎಲ್ಲ ಪಾಪ ಗಳನ್ನು ವೇದಪ್ರತಿಪಾದ್ಯ ಆನಂದಮೂರುತಿ ರಾತ್ರಿನಾಮಕನಾದ ಹರಿಯು ಪರಿ ಹರಿಸಲಿ. ಹುಟ್ಟಿಲ್ಲದ, ಸೂರ್ಯನಿಗೂ ಬೆಳಕು ನೀಡಿದ ಭಗವಂತನಲ್ಲಿ ನನ್ನನ್ನೇ ನಾನು ಅರ್ಪಿಸುವೆನು. ನಾನು ನಿನಗೆ.

ಸಾಯಂ ಸಂಧ್ಯಾವಂದನೆಯಲ್ಲಿ –

**ಅಗ್ನಿಶ್ಚ ಮಾ ಮನ್ಯುಶ್ಚ...**

**ಯದಹ್ನಾ ಪಾಪಮಕಾರ್ಷಮ್**

**ಅಹಸ್ತದವಲುಂಪತು.......**

**ಇದಮಹಂ ಮಾಮಮೃತಯೋನೌ**

**ಸತ್ಯೇ ಜ್ಯೋತಿಷಿ ಜುಹೋಮಿ ಸ್ವಾಹಾ**

ಜಗನ್ನಿಯಾಮಕ ಅಗ್ನ್ಯಂತರ್ಯಾಮಿ ನಾರಾಯಣ ನನ್ನನ್ನು ಕಾಪಾಡಲಿ. ತಿಳಿದು ನನ್ನಿಂದಾದ ಪಾಪಗಳನ್ನು ದೋಷದೂರನಾದ ಅಹರ್ನಾಮಕನಾದ ಹರಿ ಪರಿಹರಿಸಲಿ. ನಾನು ನನ್ನನ್ನೇ ಗುಣಪೂರ್ಣನಲ್ಲಿ ಹೋಮಿಸುವೆನು. ನಾನು ನಿನಗೆ.

**ಸ ಯತ್ಕಿಂಚಿದಾದಿತ್ಯೋಽಹ್ನಾ ಪಾಪಂ ಕರೋತಿ ತದಸ್ಯಾಗ್ನೀ ರಾತ್ರ್ಯಾಪಹಂತಿ**

**ಸ ಯತ್ಕಿಂಚಾಗ್ನೀ ರಾತ್ರ್ಯಾ ಪಾಪಂ ಕರೋತಿ ತದಸ್ಯಾದಿತ್ಯೋಽಹ್ನಾಪಹಂತಿ**

(ಜೈಮಿನೀಯಬ್ರಾಹ್ಮಣ)

ಮಧ್ಯಾಹ್ನ ಸಂಧ್ಯಾವಂದನೆಯಲ್ಲಿ –

**ಆಪಃ ಪುನಂತು ಪೃಥಿವೀಂ ಪೃಥಿವೀ ಪೂತಾ ಪುನಾತು ಮಾಮ್**

**ಪುನಂತು ಬ್ರಹ್ಮಣಸ್ಪತಿಃ ಬ್ರಹ್ಮ ಪೂತಾ ಪುನಾತು ಮಾಮ್**

**ಯದುಚ್ಛಿಷ್ಟಮಭೋಜ್ಯಂ ಯದ್ವಾ ದುಶ್ಚರಿತಂ ಮಮ**

**ಸರ್ವಂ ಪುನಂತು ಮಾಮಾಪೋ ಅಸತಾಂ ಚ ಪ್ರತಿಗ್ರಹಂ ಸ್ವಾಹಾ**

ಎಲ್ಲೆಡೆ ರಕ್ಷಕರಾದ ದೇವತೆಗಳು ಸರ್ವಪಾಲಕನಾದ ಭಗವಂತನ ರೂಪಗಳು ದೇಹವನ್ನು ಶುದ್ಧಿಗೊಳಿಸಲಿ. ದೇಹಶುದ್ಧಿಯ ಜತೆ ನಾನು ಶುದ್ಧನಾಗಲಿ. ವೇದದೊಡೆಯ ಪರಬ್ರಹ್ಮ ನನ್ನನ್ನು ಪಾವನಗೊಳಿಸಲಿ. ಎಂಜಲು ತಿಂದ, ತಿನ್ನಬಾರದ್ದನ್ನು ತಿಂದ, ಮಾಡಬಾರದ್ದನ್ನು ಮಾಡಿದ, ಪಡೆಯಬಾರದ್ದನ್ನು ಪಡೆದ ನನ್ನನ್ನು ಎಲ್ಲ ಪಾಪಗಳಿಂದ ಶುದ್ಧಿಗೊಳಿಸಲಿ. ಓ ಪಾಲಕರೆ ನಿಮಗೆ ನನ್ನನ್ನೆ ಅರ್ಪಿಸಿರುವೆನು.

ಈ ಮೂರೂ ಮಂತ್ರಗಳು **ತೈತ್ತಿರೀಯಾರಣ್ಯಕದಲ್ಲಿ** ಇವೆ. ಸೂರ್ಯಶ್ಚ ಮಂತ್ರಕ್ಕೆ ಹಿರಣ್ಯಗರ್ಭಃ ಋಷಿಃ, ಪ್ರಕೃತಿಃ ಛಂದಃ, ರಾತ್ರಿಃ ದೇವತಾ. ಅಗ್ನಿಶ್ಚ ಮಂತ್ರಕ್ಕೆ ಹಿರಣ್ಯಗರ್ಭ ಋಷಿಃ ಪ್ರಕೃತಿಃ ಛಂದಃ, ಅಹರ್ದೇವತಾ. ಆಪಃ ಮಂತ್ರಕ್ಕೆ ಪೂತ ಋಷಿಃ, ಅಷ್ಟಿಚ್ಛಂದಃ, ಆಪೋ ದೇವತಾ.



ಮಂತ್ರ ನೀಡಿದ ಋಷಿಯು ಗುರುವೆನಿಸುವನು. ಹಾಗಾಗಿ ಋಷಿ ಚಿಂತನೆ ಮಾಡಿದಾಗ ಮುಂದಲೆ ಮುಟ್ಟಬೇಕು. ಧ್ಯೇಯನಾಗಿ ದೇವತೆಯನ್ನು ಹೃದಯದಲ್ಲಿ ನ್ಯಾಸಮಾಡಬೇಕು. ಅಕ್ಷರ ಲೆಕ್ಕಾಚಾರದಲ್ಲಿ ಛಂದಸ್ಸನ್ನು ಹೇಳಲಾಗಿ ಬಾಯಿಯಲ್ಲಿ ನಾಲಗೆಯಲ್ಲಿ ನ್ಯಾಸ ಹೇಳಲಾಗಿದೆ –

**ಋಷಿರ್ಗುರುತ್ವಾಚ್ಛಿರಸಿ ಧ್ಯೇಯತ್ವಾದ್ದೇವತಾ ಹೃದಿ**

**ಛಂದೋಕ್ಷರತ್ವಾಜ್ಜಿಹ್ವಾಯಾಂ ನ್ಯಸ್ತವ್ಯಂ ಮಂತ್ರವಿತ್ತಮೈಃ**

**ಮಾರ್ಕಂಡೇಯಸ್ಮೃತಿಯಲ್ಲಿ** ಈ ಮಂತ್ರಗಳ ಅಕ್ಷರಗಣನೆಯ ಜತೆಗೆ ಅರ್ಥ ಚಿಂತನೆಯನ್ನು ಮಾಡಲಾಗಿದೆ–

**ಅಹಂ ಕರ್ತ್ರೇತಿ ಸುಸ್ಪಷ್ಟಂ ಮಾಂ ಕರ್ಮೇತಿ ತಥೈವ ಹಿ**

**ಸ್ವಾಹಾಶಬ್ದೇನ ಹೋಮಸ್ಸ್ಯಾತ್ ಅತ್ರ ಪಾನಂ ಸ್ಮೃತಂ ಕಿಲ**

**ಯಥಾ ಕಥಂಚಿದ್ದ್ರವ್ಯಸ್ಯ ತ್ಯಾಗೋ ಹೋಮ ಇತೀರಿತಃ**

**ಸೂರ್ಯಃ ಪ್ರಸಿದ್ಧಃ ಸರ್ವತ್ರ ಸತ್ಯಶಬ್ದಸ್ತದರ್ಥಕಃ**

ಪ್ರಾಶನಮಂತ್ರದಲ್ಲಿಯ ಮೂರು ವಾಕ್ಯಗಳಿಗೆ ಅರ್ಥ ಬರೆದಿದ್ದಾರೆ –

**ಪ್ರಥಮಃ ಪ್ರಾರ್ಥನಾರೂಪಃ ದ್ವಿತೀಯೋಽಪಿ ತಥಾವಿಧಃ**

**ತೃತಿಯೋ ಹೋಮರೂಪಃ ಸ್ಯಾತ್ ತ್ರಿಭಿಃ ಸಂಮಂತ್ರಿತಂ ಜಲಮ್**

**ಸರ್ವಪಾಪವಿನಾಶಾಯ ಪ್ರಾಶಯೇದಿತಿ ಸಾ ಶ್ರುತಿಃ**

ಪ್ರಾಶನಪ್ರಯೋಗ ಒಂದೇ ಆದಲ್ಲಿ ಮೂರು ಹೊತ್ತಿನ ಸಂಧ್ಯೆಗೆ ಬೇರೆ ಬೇರೆ ಮಂತ್ರ ಏಕೆ ಎನ್ನುವ ವಿಚಾರಕ್ಕೂ ಇಲ್ಲಿ ಉತ್ತರವಿದೆ –

**ಭಿನ್ನಕ್ರಿಯಾತ್ವಾನ್ಮಂತ್ರಾಣಾಂ ಮಂತ್ರಭೇದ ಉದಾಹೃತಃ**

**ಯತ್ರ ಭಿನ್ನಕ್ರಿಯಾ ತತ್ರ ಸರ್ವತ್ರ ಶ್ರೌತಕರ್ಮಣಿ**

**ಪ್ರದೃಶ್ಯತೇ ಮಂತ್ರಭೇದಃ ಪೂರ್ವಾರ್ಥಸ್ಯಾನಪೇಕ್ಷಣಾತ್**

**ಸದಾಚಾರಸ್ಮೃತಿಯಲ್ಲಿ** ಆಚಾರ್ಯಮಧ್ವರು ಮಂತ್ರಾಚಮನವನ್ನು ಸೂಚ್ಯವಾಗಿ ತಿಳಿಸಿದ್ದಾರೆ – **ಪ್ರೋಕ್ಷ್ಯಾಚಮ್ಯ ಚ ಮಂತ್ರತಃ**

ಮಂತ್ರಾಚಮನದ ಬಳಿಕ ಆಚಮನ ಮಾಡಿ ಪುನರ್ಮಾರ್ಜನೆಯನ್ನು

ವಸಿಷ್ಠಸ್ಮೃತಿ ಹೇಳಿದೆ –

ಮಂತ್ರರತ್ನೇನ ಸಂಪ್ರಾಶ್ಯ ಪಶ್ಚಾದಾಚಮನಂ ಚರೇತ್
ಆಪೋಹಿಷ್ಠೇತಿ ಮಂತ್ರೇಣ ಪುನಃ ಸಮ್ಮಾರ್ಜನಂ ತತಃ

ಸಾಯಂಕಾಲದ ಜಪದ ಸಂದರ್ಭದಲ್ಲಿಯೂ ಈ ಮಾತನ್ನು ಮತ್ತೆ ಸ್ಪಷ್ಟವಾಗಿ ಹೇಳಲಾಗಿದೆ –

ಅಸ್ತಂಗತೇ ದಿನಕರೇ ಸಂಧ್ಯಾಂ ಪೂರ್ವವದಾಚರೇತ್
ಶೌಚಾಚಮನಸ್ನಾನಾದಿ ಯಥಾವಿಧಿ ಸಮಾಚರೇತ್
ಶುಭ್ರವಸ್ತ್ರಧರಃ ಸಮ್ಯಕ್ ಆಚಮ್ಯ ವಿಜಿತಾತ್ಮವಾನ್
ಧೃತೋರ್ಧ್ವಪುಂಡ್ರದೇಹಶ್ಚ ಸಂಧ್ಯಾಂ ಕುರ್ಯಾದ್ಯಥಾವಿಧಿ
ಪ್ರಾಣಾಯಾಮಂ ಚ ವಿಧಿವತ್ ಪೂರ್ವವನ್ಮಾರ್ಜಯೇತ್ತತಃ
ಅಗ್ನಿಶ್ಚ ಮೇತಿ ಮಂತ್ರೇಣಾಪಃ ಪ್ರಾಶ್ಯಾಚಮನಂ ಚರೇತ್
ಪುನಃ ಸಮ್ಮಾರ್ಜನಂ ಕೃತ್ವಾ ಪಶ್ಚಾದರ್ಘ್ಯಂ ನಿವೇದಯೇತ್
ಪದ್ಮನಾಭಂ ಶ್ರಿಯಾ ಯುಕ್ತಂ ಧ್ಯಾಯೇತ್ಸವಿತೃಮಂಡಲೇ
ದದ್ಯಾದರ್ಘ್ಯತ್ರಯಂ ತಸ್ಮೈ ಗಾಯತ್ರ್ಯಾ ವಿನಯಾನ್ವಿತಃ
ಆಸೀನಶ್ಚ ಜಪಂ ಕುರ್ಯಾತ್ ಸ್ವಲ್ಪಮಷ್ಟೋತ್ತರಂ ಶತಮ್

ಇಲ್ಲಿ ಸಂಧ್ಯಾವಂದನೆಯ ಕ್ರಮವೂ ವಿಹಿತವಾದದ್ದನ್ನು ನಾವು ಕಾಣಬಹುದು. ಊರ್ಧ್ವಪುಂಡ್ರಧಾರಣೆಯನ್ನು ಸಂಜೆ ಮತ್ತೆ ಮಾಡಿಕೊಳ್ಳಲಿದೆ. ಅರ್ಘ್ಯೆಯನ್ನು ನೀಡುವಾಗ ಸೂರ್ಯಮಂಡಲದಲ್ಲಿ ಲಕ್ಷ್ಮೀನಾರಾಯಣರ ಚಿಂತನೆ ಮಾಡುವಂತೆ ಸ್ಪಷ್ಟವಾಗಿ ಹೇಳಿದ್ದಾರೆ. ಜಪಸಂಖ್ಯೆ ನೂರೆಂಟು ಇಲ್ಲಿದೆ. ಆಹಾರದ ಸ್ವೀಕಾರವು ಆ ದಿನ ನಡೆದಿರುತ್ತದೆ. ಮನಸ್ಸೂ ಶ್ರಮಪಟ್ಟಿರುತ್ತದೆ. ಸಂಜೆ ಜಪದಲ್ಲಿ ಸಾವಿರದ ಆವೃತ್ತಿಯನ್ನು ಇಲ್ಲಿ ಒತ್ತಾಯಿಸಲಿಲ್ಲ. ಹೀಗಾಗಿ ಮಧ್ಯಮಪಕ್ಷವನ್ನು ಜಪಸಂಖ್ಯೆಯಲ್ಲಿ ವಿಧಿಸಿದ್ದಾರೆ. ಸಂಜೆಯ ಜಪವನ್ನು ಕುಳಿತುಕೊಂಡೇ ನಡೆಸಲಿದೆ.

# ಅರ್ಘ್ಯಪ್ರದಾನ

**ಜಲಾರ್ಘ್ಯಂ ಜಾಹ್ನವೀತೀರಂ ಕಥಿತಂ ಜನ್ಮಮೋಚಕಮ್**

ಸಂಧ್ಯಾವಂದನೆಯಲ್ಲಿ ಅರ್ಘ್ಯನೀಡುವುದು ಮುಖ್ಯವಾಗಿದೆ. ಎರಡೂ ಕೈಗಳಿಂದ ಅರ್ಘ್ಯವನ್ನು ನೀಡಬೇಕು. ಬೊಗಸೆ ತುಂಬ ನೀರು ತುಂಬಿ ಅರ್ಘ್ಯ ಕೊಡಬೇಕು. ಬೊಗಸೆ ಕೈ ಮಾಡಿದಾಗ ಹೆಬ್ಬೆರಳುಗಳೆರಡು ಸನಿಹದ ತೋರು ಬೆರಳುಗಳಿಗೆ ತಾಗಕೂಡದು. ಹಾಗೆ ಜೋಡಿಸಿದ ಬೆರಳ ಕೈಯು ರಾಕ್ಷಸಮುದ್ರೆ ಎನಿಸುವುದು. ಇದರಿಂದ ಅರ್ಘ್ಯ ದುಷ್ಟವಾಗುವುದೆಂದು **ವಿಶ್ವಾಮಿತ್ರಸ್ಮೃತಿ**ಯಲ್ಲಿದೆ–

**ತರ್ಜನ್ಯಂಗುಷ್ಠಯೋರ್ಯೋಗೇ ರಾಕ್ಷಸೀ ಮುದ್ರಿಕಾ ಸ್ಮೃತಾ**

**ರಾಕ್ಷಸೀಮುದ್ರಿಕಾದತ್ತಂ ತತ್ತೋಯಂ ರುಧಿರಂ ಭವೇತ್**

ಗಾಯತ್ರೀಮಂತ್ರವನ್ನು ಪ್ರಣವವ್ಯಾಹೃತಿಗಳ ಜತೆ ಹೇಳಿ ಸೂರ್ಯನಿಗೆ ಮುಖಹಾಕಿ ನಿಂತು ಸಂಧ್ಯಾಕಾಲದಲ್ಲಿ ಎರಡೂ ಕೈಗಳಿಂದ ಅರ್ಘ್ಯ ನೀಡಬೇಕೆಂದು **ಚತುರ್ಮುಖ**ನೇ ಹೇಳಿರುತ್ತಾನೆ–

**ಉಭಾಭ್ಯಾಂ ತೋಯಮಾದಾಯ ಹಸ್ತಾಭ್ಯಾಂ ಸುಸಮಾಹಿತಃ**

**ಗಾಯತ್ರ್ಯಾ ಚಾಭಿಮಂತ್ರ್ಯಾಪಃ ತಾರವ್ಯಾಹೃತಿಪೂರ್ವಯಾ**

**ರವೇರಭಿಮುಖಸ್ತಿಷ್ಠನ್ ಊರ್ಧ್ವಂ ತ್ರಿಃ ಸಂಧ್ಯಯೋಃ ಕ್ಷಿಪೇತ್**

**ಛಾಂದೋಗ್ಯಬ್ರಾಹ್ಮಣ**ದ ಪ್ರಥಮ ಭಾಗದಲ್ಲಿ ಗಾಯತ್ರೀ ಮಂತ್ರವಿದೆ. ಮುಂದೆ ವ್ಯಾಹೃತಿ ಮತ್ತು ಕೊನೆಗೆ ಓಂಕಾರವು ಇದೆ. ಹೀಗೆ ವಿಪರೀತ ಕ್ರಮದಲ್ಲಿ ಮಂತ್ರೋದ್ಧಾರವನ್ನು ಅಲ್ಲಿ ನಡೆಸಲಾಗಿದೆ. ಬೆಳಿಗ್ಗೆ ಎದ್ದು ಒಳ್ಳೆಯದ್ದರ ನೆನಪು ಮಾಡಬೇಕಾದ ಸಂಗತಿಗಳಲ್ಲಿ ಗಾಯತ್ರೀಮಂತ್ರವನ್ನು, ಪ್ರಣವವನ್ನೂ **ಸ್ಕಾಂದಪುರಾಣ**ವು ಉಲ್ಲೇಖಿಸಿದೆ –

**ಗಾಯತ್ರೀಪ್ರಮುಖಾನ್ ಮಂತ್ರಾನ್.... ಪ್ರಣವಾದಿಮಹಾಬೀಜಮ್**

ಸೂರ್ಯನೊಳಗಿನ ಹರಿಯನ್ನು ನೆನೆದು ಅರ್ಘ್ಯ ನೀಡಲು ಆಚಾರ್ಯ ಮಧ್ವರು **ಸದಾಚಾರಸ್ಮೃತಿ**ಯಲ್ಲಿ ತಿಳಿಸಿದ್ದಾರೆ–



**ಗಾಯತ್ರ್ಯಾ ಚಾಂಜಲಿಂ ದತ್ವಾ ಧ್ಯಾತ್ವಾ ಸೂರ್ಯಗತಂ ಹರಿಮ್**

ಅರ್ಘ್ಯೆಯು ಶ್ರೀಹರಿಗೇನೇ ಎನ್ನುವುದು ಬ್ರಹ್ಮವೈವರ್ತ್ತದ ಮಾತು –

**ದತ್ವಾರ್ಘ್ಯಂ ಹರಯೇ ಭಕ್ತ್ಯಾ ಹರಿಸ್ಮರಣಪೂರ್ವಕಮ್**

ಭಗವಂತನೇ ತಾನು ಸೂರ್ಯಮಂಡಲಮಧ್ಯದಲ್ಲಿ ಇರುವೆನೆಂದು ಸ್ಕಂದಪುರಾಣದಲ್ಲಿ ತುಳಸೀಮಾಹಾತ್ಮ್ಯೆಯಲ್ಲಿ ತಿಳಿಸಿದ್ದಾನೆ–

**ಆಗಮಾನಾಂ ಯಥಾ ಮೂರ್ಧ್ನಿ ಭಕ್ತಾನಾಂ ಹೃದಯಾಂಬುಜೇ**

**ಭಾನುಮಂಡಲಮಧ್ಯೇ ತು ತವ ಮೂಲೇ ವಸಾಮ್ಯಹಮ್**

ವ್ಯಾಸಸ್ಮೃತಿಯು ಎಲ್ಲರೊಳಗಿನ ವಿಷ್ಣುವನ್ನು ಆದಿತ್ಯಮಂಡಲದೊಳಗೂ ಇರುವಂತೆ ನೆನಪಿಸಿದೆ –

**ತತ ಉತ್ಥಾಯ ಚಾರ್ಘ್ಯಂ ತು ಗಾಯತ್ರ್ಯಾ ಚಾಂಜಲಿಂ ಕ್ಷಿಪೇತ್**

**ಆದಿತ್ಯಮಂಡಲಾಂತಸ್ಥಂ ಧ್ಯಾತ್ವಾ ವಿಷ್ಣುಂ ಸನಾತನಮ್**

ನಾರದೀಯಪುರಾಣವು ಸೂರ್ಯನೊಳಗಿನ ದೇವರನ್ನು ನೆನಪಿಸಿದೆ. ತಾಮ್ರದ ಪಾತ್ರೆಯಲ್ಲಿ ಹೂ, ತುಳಸಿ, ದರ್ಭೆಗಳನ್ನೆಲ್ಲ ಹಾಕಿ ಅರ್ಘ್ಯ ನೀಡುವಂತೆ ವಿಶೇಷವಾಗಿ ತಿಳಿಸಿಕೊಟ್ಟಿದೆ –

**ರವಿಮಂಡಲಸಂಸ್ಥಾಯ ದೇವಾಯಾರ್ಘ್ಯಂ ಪ್ರಕಲ್ಪಯೇತ್**

**ದತ್ತ್ವಾರ್ಘ್ಯಂ ತ್ರಿರನೇನಾಥ ದೇವಂ ರವಿಗತಂ ಸ್ಮರೇತ್**

**ಸಮುತ್ಥಾಯ ಚ ಮಂತ್ರಜ್ಞಃ ತಾಮ್ರಪಾತ್ರೇ ಸುಮಾದಿಕಮ್**

**ಪ್ರಕ್ಷಿಪ್ಯಾರ್ಘ್ಯಂ ಪ್ರದದ್ಯಾದ್ವೈ ಮೂಲಾಂತೈರ್ಮ್ಮಂತ್ರಮುಚ್ಚರನ್**

ರಾಕ್ಷಸರ ನಾಶಕ್ಕೆ ಇದು ಬ್ರಹ್ಮಾಸ್ತ್ರ ಎಂದು **ವಿಶ್ವಾಮಿತ್ರಸ್ಮೃತಿ** ಬಾಹ್ಯ ಕಾರಣವನ್ನು ಸೂಚಿಸಿದೆ –

**ಅಸುರಾಣಾಂ ವಧಾರ್ಥಾಯ ಅರ್ಘ್ಯಕಾಲೇ ದ್ವಿಜನ್ಮನಾಮ್**

**ಪ್ರೋಕ್ತಂ ಬ್ರಹ್ಮಾಸ್ತ್ರಮೇತದ್ಧಿ ಸಂಧ್ಯಾವಂದನಕರ್ಮಸು**

**ಷಡ್ವಿಂಶಬ್ರಾಹ್ಮಣದಲ್ಲಿ** ಸಂಧ್ಯೆಯ ಬಗ್ಗೆ ಪ್ರಶ್ನೋತ್ತರವಿದೆ. ಅಲ್ಲಿ ಅರ್ಘ್ಯೆಯ ನೀರು ವಜ್ರಾಯುಧವಾಗುವುದನ್ನು ತಿಳಿಸಲಾಗಿದೆ.



ಅಥ ಯದಪಃ ಪ್ರಯುಂಕ್ತೇ ತಾ ವಿಪ್ರುಷೋ ವಜ್ರೀಭವಂತಿ

ತಾ ವಿಪ್ರುಷೋ ವಜ್ರೀಭೂತ್ವಾ ಅಸುರಾನಪಘ್ನಂತಿ

ಅಸುರರು ಮಂದೇಹರೆಂದು ಶ್ರೀಕೃಷ್ಣ ಧರ್ಮಜನಿಗೆ ಹೇಳಿದ ಮಹಾಭಾರತದ ಮಾತು –

ಮಂದೇಹಾನಾಂ ವಿನಾಶಾಯ ರಕ್ಷಸಾಂ ವಿಕ್ಷಿಪೇಜ್ಜಲಮ್

ತೈತ್ತಿರೀಯಾರಣ್ಯಕದಲ್ಲಿ ಮಂದೇಹ ರಾಕ್ಷಸರ ಕತೆ ವಿಸ್ತಾರವಾಗಿ ಇದೆ. ಅರ್ಘ್ಯ ವಜ್ರಾಯುಧವೆನಿಸಿ ಸೂರ್ಯನ ಜೊತೆಗೆ ಹೋರಾಟದಿಂದ ರಕ್ಕಸರನ್ನು ದೂರಗೊಳಿಸುವುದನ್ನಿಲ್ಲಿ ತಿಳಿಸಲಾಗಿದೆ –

ತಸ್ಮಾದುತ್ತಿಷ್ಠಂತಂ ಹ ವಾ ತಾನಿ ರಕ್ಷಾಂಸಿ ಆದಿತ್ಯಂ ಯೋಧಯಂತಿ

ಯಾವದಸ್ತಮನ್ವಗಾತ್ ತಾನಿ ಹ ವಾ ಏತಾನಿ ರಕ್ಷಾಂಸಿ

ಗಾಯತ್ರಿಯಾಭಿಮಂತ್ರಿತೇನಾಂಭಸಾ ಶಾಮ್ಯಂತಿ

ತದು ಹ ವಾ ಏತೇ ಬ್ರಹ್ಮವಾದಿನಃ ಪೂರ್ವಾಭಿಮುಖಾಃ ಸಂಧ್ಯಾಯಾಂ

ಗಾಯತ್ರಿಯಾಭಿಮಂತ್ರಿತಾ ಆಪ ಊರ್ಧ್ವಂ ವಿಕ್ಷಿಪಂತಿ

ತಾ ಏತಾ ಆಪೋ ವಜ್ರೀಭೂತ್ವಾ ತಾನಿ ರಕ್ಷಾಂಸಿ

ಮಂದೇಹಾನಾರುಣೇ ದ್ವೀಪೇ ಪ್ರಕ್ಷಿಪಂತಿ

ಅಥರ್ವವೇದದಲ್ಲಿ ರಾಕ್ಷಸರ ನಾಶದ ನುಡಿ –

ಉತ್ಸೂರ್ಯೋ ದಿವ ಏತಿ ಪುರೋ ರಕ್ಷಾಂಸಿ ನಿಜೂರ್ವನ್

ಮಂದೇಹರ ಕತೆ ನಾಶ ಹಾಗೂ ಅರ್ಘ್ಯಪ್ರದಾನವಿಚಾರ ವಿಷ್ಣುಪುರಾಣದ ದ್ವಿತೀಯಾಂಶದಲ್ಲಿಯೂ ಇದೆ. ವಾಯುಪುರಾಣ 30 ಕೋಟಿ ಮಂದೇಹರನ್ನೂ ತಿಳಿಸುತ್ತದೆ –

ತ್ರಿಂಶತ್ಕೋಟ್ಯಸ್ತು ವಿಖ್ಯಾತಾ ಮಂದೇಹಾ ನಾಮ ರಾಕ್ಷಸಾಃ

ತಾಪಯಂತೋ ದುರಾತ್ಮಾನಃ ಸೂರ್ಯಮಿಚ್ಛಂತಿ ಖಾದಿತುಮ್

ತತೋ ಬ್ರಹ್ಮಾ ಚ ದೇವಾಶ್ಚ ಬ್ರಾಹ್ಮಣಾಶ್ಚೈವ ಸತ್ತಮಾಃ

ಸಂಧ್ಯೇತಿ ಸಮುಪಾಸಂತಃ ಕ್ಷೇಪಯಂತಿ ಮಹಾಜಲಮ್



ಓಂಕಾರಬ್ರಹ್ಮಸಂಯುಕ್ತಗಾಯತ್ರ್ಯಾ ಚಾಭಿಮಂತ್ರಿತಮ್

ತೇನ ದಹ್ಯಂತಿ ತೇ ದೈತ್ಯಾ ವಜ್ರಭೂತೇನ ವಾರಿಣಾ

ದೈತ್ಯರು ಅದೃಶ್ಯರಾಗಿ ಆಕ್ರಮಣ ನಡೆಸುವುದನ್ನು ಪರಾಶರಸ್ಮೃತಿಯಲ್ಲಿ ತಿಳಿಸಲಾಗಿದೆ –

ದಿನೇದಿನೇ ಸಹಸ್ರಾಂಶುಃ ಅಲಕ್ಷ್ಯೈಸ್ತೈರಭಿದ್ರುತಃ

ಭಾನುರ್ಹೀನಃ ಕೃತಸ್ತೂರ್ಣ್ಣಂ ತದ್ವಶತ್ವಮಿವಾಗತಃ

ದೈತ್ಯರ ಮರುಹುಟ್ಟು, ಶಾಪ ಇವನ್ನೆಲ್ಲ ಬ್ರಹ್ಮಾಂಡಪುರಾಣ ತಿಳಿಸಿದೆ –

ಸೂರ್ಯಾಗ್ನಿಗ್ರಸಮಾನಾನಾಂ ಮಂದೇಹಾನಾಂ ಹಿ ರಕ್ಷಸಾಮ್

ಪ್ರಜಾಪತಿನಿಯೋಗೇನ ಶಾಪಸ್ತ್ವೇಷಾಂ ದುರಾತ್ಮನಾಮ್

ಅಕ್ಷಯತ್ವಂ ತು ದೇಹಸ್ಯ ಪ್ರಾಪಿತಾ ಮರಣಂ ತಥಾ

ಸ್ಕಂದಪುರಾಣದಲ್ಲಿ ನಾರದರು ಹೇಳುವ ಕಥೆಯಲ್ಲಿ ಮಂದೇಹರ ವರ–ಶಾಪ ವಿಚಾರ ಹೀಗಿದೆ –

ಸಂಧ್ಯಾಕಾಲೇ ಚ ಮಂದೇಹಾಃ ಸೂರ್ಯಮಿಚ್ಛಂತಿ ಖಾದಿತುಮ್

ಪ್ರಜಾಪತಿಕೃತಃ ಶಾಪಃ ತೇಷಾಂ ಫಾಲ್ಗುನ ರಕ್ಷಸಾಮ್

ಅಕ್ಷಯತ್ವಂ ಶರೀರಾಣಾಂ ಮರಣಂ ಚ ದಿನೇದಿನೇ

ತತಃ ಸೂರ್ಯಸ್ಯ ತೈರ್ಯುದ್ಧಂ ಭವತ್ಯತ್ಯಂತದಾರುಣಮ್

ತತೋ ಗಾಯತ್ರಿಪೂತಂ ಯತ್ ದ್ವಿಜಾಸ್ತೋಯಂ ಕ್ಷಿಪಂತಿ ಚ

ತೇನ ದಹ್ಯಂತಿ ತೇ ಪಾಪಾಃ ಸಂಧ್ಯೋಪಾಸನತಃ ಸದಾ

ಮೂರು ಅರ್ಘ್ಯೆಯನ್ನು ಸೂರ್ಯನೇ ನಿರೀಕ್ಷಿಸುವನೆಂಬ ಮಾತನ್ನು ಇನ್ನೊಂದೆಡೆ ಈ ಪುರಾಣವೇ ದೇವರಹಸ್ಯವನ್ನು ಬಹಿರಂಗಪಡಿಸಿದೆ –

ಮಂದೇಹದೇಹನಾಶಾರ್ಥಂ ಉದಯಾಸ್ತಮಯೇ ರವಿಃ

ಸಮೀಹತೇ ದ್ವಿಜೋತ್ಸೃಷ್ಟಂ ಮಂತ್ರತೋಯಾಂಜಲಿತ್ರಯಮ್

ಶೇಷಸಂಹಿತೆಯು ಮೂರು ಅರ್ಘ್ಯ ನೀಡಿದ್ದರಿಂದ ಸರ್ವಪಾಪಕ್ಷಯ ಫಲವನ್ನು ಹೇಳುತ್ತದೆ. ಅಷ್ಟೈಶ್ವರ್ಯಗಳು ಆತನಿಗೆ ಸಿಗಲಿವೆ, ಮೋಕ್ಷವೂ. ಈ



ಫಲದಾನವು ಸೂರ್ಯನಿಂದ ಸಾಧ್ಯವಿಲ್ಲದ್ದು. ಹಾಗಾಗಿ ನಾರಾಯಣನಿಂದ ಎಂದು ಮುಖ್ಯವಾಗಿ ಘೋಷಿಸಿದೆ. ಹೀಗೆ ಜಪದಲ್ಲಿ ಮುಖ್ಯ ನಿತ್ಯ ಅರ್ಘ್ಯದಾನ ಎನ್ನುವುದು ಸೂಚಿತ. ಏಕಾದಶಿಯಂದೂ ವಿಹಿತ ಎನ್ನುವುದು ತಿಳಿಯಲಿದೆ –

**ಏತದರ್ಘ್ಯತ್ರಯಾದ್ವಿಪ್ರಃ ಸರ್ವಪಾಪೈಃ ಪ್ರಮುಚ್ಯತೇ**
**ಸೂರ್ಯನಾರಾಯಣಸ್ಸದ್ಯಃ ಸುಪ್ರೀತಸ್ತಸ್ಯ ತದ್ಭವೇತ್**
**ಅಷ್ಟೈಶ್ವರ್ಯಾದಿಕಂ ಸರ್ವಂ ದದಾತಿ ಪರಮಂ ಪದಮ್**

ಸಮಯಕ್ಕೆ ಸರಿಯಾಗಿ ತನ್ನ ಒಳಿತಿಗಾಗಿಯೇ ಅರ್ಘ್ಯ ನೀಡದಿದ್ದರೆ ಮಂದೇಹರಾಕ್ಷಸನಾಗುವನೆಂದು **ಸ್ಕಾಂದಪುರಾಣ** ಎಚ್ಚರಿಸಿದೆ.

**ಗಾಯತ್ರೀಂ ಶಿರಸಾ ಹೀನಾಂ ಮಹಾವ್ಯಾಹೃತಿಪೂರ್ವಿಕಾಮ್**
**ಪ್ರಣವಾದ್ಯಾಂ ಜಪನ್ ತಿಷ್ಠನ್ ಕ್ಷಿಪೇದಂಭೋಂಜಲಿತ್ರಯಮ್**
**ತೇನ ವಜ್ರೋದಕೇನಾಶು ಮಂದೇಹಾ ನಾಮ ರಾಕ್ಷಸಾಃ**
**ಸೂರ್ಯಾರಯಃ ಪ್ರಲೀಯಂತೇ ಶೈಲಾ ವಜ್ರಹತಾ ಇವ**
**ವಿವಸ್ವತಃ ಸಹಾಯಾರ್ಥಂ ಯೋ ದ್ವಿಜೋ ನಾಂಜಲಿತ್ರಯಮ್**
**ಕ್ಷಿಪೇನ್ಮಂದೇಹನಾಶಾಯ ಸೋಽಪಿ ಮಂದೇಹತಾಂ ವ್ರಜೇತ್**
**ಕಾಲಲೋಪೋ ನ ಕರ್ತವ್ಯೋ ದ್ವಿಜೇನ ಸ್ವವಿಹಿತೇಪ್ಸುನಾ**
**ಅರ್ಘೋದಯಾಸ್ತಸಮಯೇ ತಸ್ಮಾದ್ವಜ್ರೋದಕಂ ಕ್ಷಿಪೇತ್**

ಅರ್ಘ್ಯ ನೀಡಿದ ಬಳಿಕ ಆಚಮನವನ್ನು ಮಾಡಬೇಕು –

**ಅರ್ಘ್ಯೇ ಸ್ನಾನೇ ತಥಾ ವಸ್ತ್ರೇ ಉಪವೀತೋಪಹಾರಯೋಃ**
**ಪಾದ್ಯೇ ಷ್ಠೀವನ ಉತ್ಸರ್ಗೇ ಕುರ್ಯಾದಾಚಮನೀಯಕಮ್**

ಅರ್ಘ್ಯಪ್ರದಾನದ ಬಳಿಕ ಅಸುರನಾಶದಿಂದ ಬಂದ ಏನಾದರೊಂದು ಸೋಂಕು ತಗಲದಂತೆ ನೀರಿನಿಂದ ತನ್ನ ಭೂಪ್ರದಕ್ಷಿಣೆಯನ್ನು ಹಾಕಲು **ಶಂಖಸ್ಮೃತಿ** ಹೇಳಿದೆ –

**ಮಂದೇಹಾನಾಂ ವಧಾರ್ಥಾಯ ಪ್ರಕ್ಷಿಪೇದುದಕಾಂಜಲಿಮ್**
**ತಾರವ್ಯಾಹೃತಿಭಿಶ್ಚೈವ ಕೃತ್ವಾಽಽತ್ಮಾನಂ ಪ್ರದಕ್ಷಿಣಮ್**



**ಪ್ರಾಯಶ್ಚಿತ್ತಾರ್ಥಮಾಚಮ್ಯ ಮುಚ್ಯತೇ ದೈತ್ಯಹತ್ಯಯಾ**

**ತೈತ್ತಿರೀಯಾರಣ್ಯಕವೂ** ಪ್ರದಕ್ಷಿಣೆಯ ಬಗ್ಗೆ ಹೇಳಿದೆ -

**ಯತ್ಪ್ರದಕ್ಷಿಣಂ ಪ್ರಕ್ರಮಂತಿ ತೇನ ಪಾಪ್ಮಾನಮವಧೂನ್ವಂತಿ**

**ಲಿಂಗಪುರಾಣವು** ಸ್ನಾನದ ಬಳಿಕದ ಕ್ರಿಯಾಕಲಾಪಗಳನ್ನು ಸಂಗ್ರಹಿಸಿದ್ದರಲ್ಲಿ ಆತ್ಮಪ್ರದಕ್ಷಿಣೆಯು ಪಾಪಶಾಂತಿಗೆ ಎಂದು ಬಿತ್ತರಿಸಿದೆ. ಉದಾಸೀನ ನಡೆಸದೇ ನಿಂತು ಸುತ್ತು ಬರುವಂತೆಯೂ ಇಲ್ಲಿ ಆದೇಶವಿದೆ. -

**ಪವಿತ್ರಹಸ್ತಃ ಸ್ವಾಸೀನಃ ಶುಚೌ ದೇಶೇ ಯಥಾವಿಧಿ**

**ಅಭ್ಯುಕ್ಷ್ಯ ಸಕುಶಂ ವಾಪಿ ದಕ್ಷಿಣೇನ ಕರೇಣ ತು**

**ಪಿಬೇತ್ ಪ್ರಕ್ಷಿಪ್ಯ ತ್ರಿಸ್ತೋಯಂ ಚಕ್ರೀಭೂತ್ವಾ ಹ್ಯತಂದ್ರಿತಃ**

**ಪ್ರದಕ್ಷಿಣಂ ತತಃ ಕುರ್ಯಾತ್ ಹಿಂಸಾಪಾಪಪ್ರಶಾಂತಯೇ**

**ಸದಾಚಾರಸ್ಮೃತಿಯಲ್ಲಿಯೂ** ಹೇಳಲಾಗಿದೆ -

**ಮಂತ್ರತಃ ಪರಿವೃತ್ಯಾಥ ಸಮಾಚಮ್ಯ**

ಪ್ರದಕ್ಷಿಣೆಯ ಬಳಿಕ ಆಚಮನವನ್ನು **ಸ್ಮೃತಿಚಂದ್ರಿಕಾ** ಹೀಗೆ ಸಂಗ್ರಹಿಸಿದೆ -

**ಸಾಯಂ ಮಂತ್ರವದಾಚಮ್ಯ ಪ್ರೋಕ್ಷ್ಯ ಸೂರ್ಯಸ್ಯ ಚಾಂಜಲಿಮ್**

**ದತ್ವಾ ಪ್ರದಕ್ಷಿಣಂ ಕೃತ್ವಾ ಜಲಂ ಸ್ಪೃಷ್ಟ್ವಾ ವಿಶುದ್ಧ್ಯತಿ**

ಸುತ್ತ ಪ್ರದಕ್ಷಿಣೆ ತೆಗೆಯುವಾಗ ನೀರನ್ನು ಹಾಕಿಕೊಳ್ಳಬೇಕು. ಆಗ ಗಾಯತ್ರೀ ಶಿರವನ್ನು ಹೇಳುವುದು ರೂಢಿಯಲ್ಲಿದೆ. **ಅಸಾವಾದಿತ್ಯೋ ಬ್ರಹ್ಮ** ಎನ್ನುವುದನ್ನು ಆ ವಿಷಯದಲ್ಲಿ ಸಂಗ್ರಹಿಸಿ ಹೇಳಿದ್ದಾರೆ -

**ಅಸಾವಾದಿತ್ಯೋ ಬ್ರಹ್ಮೇತಿ ಕೃತ್ವಾತ್ಮಾನಂ ಪ್ರದಕ್ಷಿಣಮ್**

**ದೈತ್ಯಹಿಂಸಾನಿವೃತ್ತ್ಯರ್ಥಂ ಉಪವಿಶ್ಯ ದ್ವಿರಾಚಮೇತ್**

ಸಪ್ತವ್ಯಾಹೃತಿಯೊಡನೆ ಗಾಯತ್ರೀ ಮತ್ತು ಶಿರೋಮಂತ್ರವೇ ಪ್ರಾಣಾಯಾಮದಲ್ಲಿಯೂ ಬರುವುದರಿಂದ ಜನರು ಹೆಚ್ಚಿನವರು ಭ್ರಮಿಸಿ ಪ್ರಾಣಾಯಾಮದ ಕಡೆಯಲ್ಲಿಯೂ ನೀರಿನ ಪ್ರದಕ್ಷಿಣೆಯನ್ನು ಕುಳಿತಲ್ಲೇ ನಡೆಸುವರು. ಇದು ಶುದ್ಧ ತಪ್ಪು. ಪ್ರಾಣಾಯಾಮದಲ್ಲಿ ಕುಂಭಕದಲ್ಲಿಯೆ



ಪೂರ್ತಿ ಮಂತ್ರ ಪಠಿಸಲಿದೆ. ಇಲ್ಲಿ ಗಾಯತ್ರಿಯಿಂದ ಅರ್ಘ್ಯಪ್ರದಾನ. ಪ್ರಾಯಶ್ಚಿತ್ತಾರ್ಘ್ಯದಲ್ಲಿ ಸಪ್ತವ್ಯಾಹೃತಿಸಹಿತವಾದ ಗಾಯತ್ರಿಯಿಂದ ಅರ್ಘ್ಯಪ್ರದಾನ. ಮತ್ತೆ ಶಿರೋಮಂತ್ರದಿಂದ ಪಾಪನಿವೃತ್ತಿಗೆ ಆತ್ಮಪ್ರದಕ್ಷಿಣೆ ಎಂದು ತಿಳಿಯಬೇಕು.

ದೀರ್ಘಪ್ರಯಾಣದ ಸಂದರ್ಭದಲ್ಲಿ ದಾರಿಯ ನಡುವೆ, ಸೆರೆಮನೆಯಲ್ಲಿ, ಅಶೌಚದಲ್ಲಿ, ಅಶುದ್ಧಿಯಲ್ಲಿ ನೀರು ಸಿಗದೆ ಹೋದಲ್ಲಿ ಮರಳಿನಿಂದಲಾದರೂ ಸಂಧ್ಯಾಕಾಲದಲ್ಲಿ ಅರ್ಘ್ಯ ನೀಡಬೇಕೆಂದು **ಅಗ್ನಿಸ್ಮೃತಿ** ಹೇಳಿದೆ. ಕಾಲ ವಿಳಂಬ ವಾಗಬಾರದೆಂದೂ ಇದರಿಂದ ಸೂಚಿಸಿದ್ದಾರೆ –

**ಜಲಾಭಾವೇ ಮಹಾಮಾರ್ಗೇ ಬಂಧನೇ ತ್ವಶುಚಾವಪಿ**

**ಉಭಯೋಃ ಸಂಧ್ಯಯೋಃ ಕಾಲೇ ರಜಸಾ ವಾರ್ಘ್ಯಮುಚ್ಯತೇ**

ಅರ್ಘ್ಯಪ್ರದಾನದ ಬಳಿಕ ಮತ್ತೆ ಗಾಯತ್ರಿಯನ್ನು ಹೃದಯದಲ್ಲಿ ನೆಲೆಸುವಂತೆ ಪ್ರಾರ್ಥನೆ ಮಾಡಲಿದೆ –

**ಹೃದಯಸ್ಥಾ ತು ಗಾಯತ್ರೀ ಹೃದ್ಗತಾ ಮುಖನಿಃಸೃತಾ**

**ಹತ್ವಾ ಆದಿತ್ಯಶತ್ರೂಂಶ್ಚ ಪ್ರವಿಶ್ಯ ಹೃದಯಂ ಮಮ**

ಅರ್ಘ್ಯ ಕೊಡಲು ನೀರನ್ನು ಸಂಸ್ಕರಿಸಬೇಕಾಗಿದೆ. ಎಲ್ಲೆಡೆಯೂ ಅಸುರರ ದೇವತೆಗಳ ಸನ್ನಿಧಾನವಿದ್ದೇ ಇರುವುದು. ನೀರಿನಲ್ಲಿಯೂ ಅಸುರರು ಇದ್ದಾರೆ. ನೀರು ಅಸುರಬಾಧೆಗೊಳಗಾಗದಂತೆ ಕೌಳಿಗೆಯಲ್ಲಿ ನೀರಿನ ಮೇಲೆ ಯಂತ್ರ ಬರೆಯಬೇಕು. ತ್ರಿಕೋಣಮಂಡಲ ದೇವತಾವಾಸಕ್ಕೆ ಯೋಗ್ಯ. ಅದರಲ್ಲಿ ಮಧ್ಯೆ ದುಷ್ಟಸಂಹಾರಕ ಹ್ರೀಂ ಬೀಜಾಕ್ಷರವನ್ನು ಬರೆಯಬೇಕು. ತ್ರಿಕೋಣದ ಮೇಲ್ತುದಿಯಲ್ಲಿ ಓಂಕಾರ ಬರೆಯಬೇಕು. ತ್ರಿಕೋಣದ 3 ಭುಜಗಳಲ್ಲಿ 3 ವ್ಯಾಹೃತಿಗಳನ್ನು ಬರೆಯಬೇಕು. ನಡುವೆ ವಂ ಎಂಬ ವರುಣಬೀಜಾಕ್ಷರವನ್ನು ಜಲತತ್ವವನ್ನು ಬರೆಯಬೇಕು. ಇಲ್ಲಿ ಬರೆಯಲು ಬಲಕೈ ಕಿರುಬೆರಳ ತುದಿಯನ್ನು ಉಪಯೋಗಿಸಬೇಕು –

**ದೈತ್ಯಾನಾಂ ರಕ್ಷಣಾರ್ಥಾಯ ವೇತ್ರಪಾಖ್ಯೋ ಮಹಾಸುರಃ**

**ಶುಕ್ರಸ್ಯೈವಾಜ್ಞಯಾ ನಿತ್ಯಂ ಜಲೇ ತಿಷ್ಠತಿ ಸರ್ವದಾ**



**ಅತಸ್ತಸ್ಯಾಪಕಾರಾರ್ಥಂ ಲಿಖೇದ್ವ್ಯಾಹೃತಿಯಂತ್ರಕಮ್**

**ತ್ರಿಕೋಣದೀರ್ಘರಮ್ಯಂ ಚ ದೇವಾನಾಂ ಸಿದ್ಧಿದಾಯಕಮ್**

**ಕೋಣಮಧ್ಯೇ ತು ಹ್ರೀಂಕಾರಂ ಕೋಣಾಗ್ರೇ ಪ್ರಣವಂ ನ್ಯಸೇತ್**

**ದಂಡೇ ತು ವ್ಯಾಹೃತೀಸ್ತಿಸ್ರಃ ಮಧ್ಯೇ ವರುಣಬೀಜಕಮ್**

**ಕನಿಷ್ಠಾಗ್ರೇಣ ವೈ ಸರ್ವಂ ಉಲ್ಲಿಖೇತ್ತು ಯಥಾಕ್ರಮಮ್**

**ಲಿಖಿತ್ವಾ ಮಂತ್ರರಾಜಂ ತು ಪಶ್ಚಾದರ್ಘ್ಯಂ ಸಮಾಚರೇತ್**

ವಿಶ್ವಾಮಿತ್ರಸಂಹಿತೆಯಲ್ಲಿ ತ್ರಿಕೋಣಯಂತ್ರವನ್ನು ಪುಂಡ್ರಧಾರಣೆಯಲ್ಲಿಯೂ ಮಂತ್ರಾಚಮನದಲ್ಲಿಯೂ ಬಳಸಲು ಹೇಳಲಾಗಿದೆ.

ನದೀಸರೋವರತಟಾಕಗಳಲ್ಲಿ ಎರಡೂ ಪಾದಗಳನ್ನೂ ನೀರೊಳಗೆ ಇಟ್ಟುಕೊಂಡೇ ಅರ್ಘ್ಯ ನೀಡುವಂತೆ **ಶೇಷಸಂಹಿತೆಯಲ್ಲಿ** ಹೇಳಲಾಗಿದೆ. ಗಾಯತ್ರೀಚಿಂತನೆಯಲ್ಲಿ ಬ್ರಹ್ಮಾಸ್ತ್ರದ ಯೋಚನೆ ಇರಬೇಕೆಂದಿದೆ –

**ಸಮ್ಯಗ್ಬ್ರಹ್ಮಾಸ್ತ್ರವದ್ಧ್ಯಾತ್ವಾ ಗಾಯತ್ರೀಮುಚ್ಚರನ್ ದ್ವಿಜಃ**

**ಉಭೌ ಪಾದೌ ಜಲೇ ನ್ಯಸ್ಯ ಪೂರಯೇದುದಕಾಂಜಲಿಮ್**

**ಗೋಶೃಂಗಮಾತ್ರಮುದ್ಧೃತ್ಯ ಜಲಮಧ್ಯೇ ಜಲಂ ಕ್ಷಿಪೇತ್**

ನೀರಿನ ಮೇಲೆಯೇ ಅರ್ಘ್ಯವನ್ನು ನೀಡಬೇಕು. ಇದು ನದೀ–ಸರೋವರಗಳಲ್ಲಿ ಆಗುತ್ತದೆ. ಇಲ್ಲವೆ ಶುಚಿಯಾದ ಸ್ಥಳದಲ್ಲಿ ಹರಿವಾಣದಲ್ಲಿ ಅರ್ಘ್ಯವನ್ನೀಯಬೇಕೆಂದು **ವ್ಯಾಸರು** –

**ಜಲೇಷ್ವರ್ಘ್ಯಂ ಪ್ರದಾತವ್ಯಂ ಜಲಾಭಾವೇ ಶುಚಿಸ್ಥಳೇ**

**ಸಂಪ್ರೋಕ್ಷ್ಯ ವಾರಿಣಾ ಸಮ್ಯಕ್ ತತೋಽರ್ಘ್ಯಂ ತು ಪ್ರದಾಪಯೇತ್**

ಬೆಳಗ್ಗೆ ನಿಂತು ಸ್ವಲ್ಪ ಬಗ್ಗಿ ಅರ್ಘ್ಯ ನೀಡಬೇಕು. ಮಧ್ಯಾಹ್ನ ನೇರ ನಿಂತು ಅರ್ಘ್ಯ ನೀಡಬೇಕು. ಸಂಜೆ ಕುಳಿತೇ ಅರ್ಘ್ಯ ನೀಡಬೇಕು –

**ಈಷನ್ನಮ್ರಃ ಪ್ರಭಾತೇ ವೈ ಮಧ್ಯಾಹ್ನೇ ಋಜುರಾಸ್ಥಿತಃ**

**ಸೂರ್ಯಾಯಾರ್ಘ್ಯಾಂಜಲೀನ್ ದದ್ಯಾತ್ ಸಾಯಂ ತೂಪವಿಶನ್ ಭುವಿ**

ಬೊಗಸೆಯಲ್ಲಿ ನೀರು ಹಿಡಿದು ಸ್ವಲ್ಪ ತಲೆ ತಗ್ಗಿಸಿ ಕೈಗಳೆರಡನ್ನು



ತಲೆಗಿಂತಲೂ ಸ್ವಲ್ಪ ಮೇಲೆ ಎತ್ತಿ ದನದ ಕೋಡಿನಂತೆ ಕೈಗಳನ್ನಾಗಿಸಿ ಪಾದಗಳೆರಡನ್ನೂ ಸಮನಾಗಿಸಿ ನಿಂತು, ಸ್ವಲ್ಪ ಹಿಮ್ಮಡಿ ಎತ್ತಿ ಬೆಳಗ್ಗೆ ಅರ್ಘ್ಯಪ್ರದಾನ ನಡೆಸಬೇಕೆಂದು ಆಶ್ವಲಾಯನರು ಹೇಳಿದ್ದಾರೆ –

**ಗೋಶೃಂಗಮಾತ್ರಮುದ್ಧೃತ್ಯ ರವಿಂ ವೀಕ್ಷ್ಯ ಜಲಾಂಜಲಿಮ್**
**ದ್ವೌ ಪಾದೌ ಚ ಸಮೌ ಕೃತ್ವಾ ಪಾರ್ಷ್ಣೀ ಉದ್ಧೃತ್ಯ ನಿಕ್ಷಿಪೇತ್**

**ದ್ವೌ ಹಸ್ತೌ ಯುಗ್ಮತಃ ಕೃತ್ವಾ ಪೂರಯೇದುದಕಾಂಜಲಿಮ್**
**ಗೋಶೃಂಗಮಾತ್ರಮುದ್ಧೃತ್ಯ ಜಲಮಧ್ಯೇ ಜಲಂ ಕ್ಷಿಪೇತ್** (ಯಮ)

**ಉಭಯೋರ್ಹಸ್ತಯೋಃ ಕೃತ್ವಾ ಸಲಿಲೈಃ ಪೂರ್ಣ್ಣಮಂಜಲಿಮ್**
**ಗೋಶೃಂಗಮಾತ್ರಮುದ್ಧೃತ್ಯ ಜಲಮಧ್ಯೇ ಜಲಂ ಕ್ಷಿಪೇತ್** (ಮತ್ಸ್ಯಪುರಾಣ)

**ದ್ವೌ ಹಸ್ತೌ ಸಂಯುತೌ ಕೃತ್ವಾ ಪೂರಯೇದುದಕಾಂಜಲಿಮ್**
**ಗೋಶೃಂಗಮಾತ್ರಮುದ್ಧೃತ್ಯ ಜಲಮಧ್ಯೇ ಕ್ಷಿಪೇಜ್ಜಲಮ್** (ಬೃಹದ್ಬ್ರಹ್ಮಸಂಹಿತಾ)

ಅರ್ಘ್ಯವನ್ನು ಬಿಡುವಾಗ ಅಂಗೈಗಳನ್ನು ಕೆಳಮುಖವಾಗಿ ತಿರುಗಿಸಬಾರದು. ಅಂಗೈ ತುದಿಯಿಂದ ನೀರು ಕೆಳಗೆ ಹರಿಯಬೇಕು –

**ಮಾರ್ಜ್ಜನಂ ಭೋಜನಂ ಹೋಮಂ ದಾನಮುತ್ತಾನಪಾಣಿನಾ**
**ಅರ್ಚ್ಚನಂ ದೇವಪೂಜಾಸು ಪ್ರೋಕ್ಷಣಂ ಚಾರ್ಘ್ಯಮೇವ ಚ**
**ಉತ್ತಾನಪಾಣಿನಾ ಕಾರ್ಯಂ ನಾಧೋರೂಪೇಣ ಕಾರಯೇತ್**

ಬೆರಳ ತುದಿ ದೇವತೀರ್ಥವಾದ್ದರಿಂದ ದೇವರಿಗೆ ನೀಡುವ ಅರ್ಘ್ಯೆಯನ್ನು ಬೆರಳ ತುದಿಯಿಂದಲೇ ನೀರು ಕೆಳಗೆ ಹರಿಯುವಂತೆ ನೀಡಬೇಕು –

**ಪೈತ್ರಂ ಮೂಲೇ ಪ್ರದೇಶಿನ್ಯಾಃ ಕನಿಷ್ಠಾಯಾಃ ಪ್ರಜಾಪತೇಃ**
**ಬ್ರಾಹ್ಮಮಂಗುಷ್ಠಮೂಲಸ್ಥಂ ತೀರ್ಥಂ ದೈವಂ ಕರಾಗ್ರತಃ** (ಬೃಹತ್‌ಬ್ರಹ್ಮಸಂಹಿತಾ)

ಮೂರು ಅರ್ಘ್ಯದಾನವು ವಾಹನಶಸ್ತ್ರಗಳ ಸಹಿತ ರಕ್ಕಸರ ನಾಶಕ್ಕೆಂದು ಶೇಷಸಂಹಿತೆಯಲ್ಲಿ ತಿಳಿಸಿರುತ್ತಾರೆ –

ಏಕಂ ಶಸ್ತ್ರಾಸ್ತ್ರನಾಶಾಯ ಏಕಂ ವಾಹನನಾಶನೇ
**ಅಸುರಾಣಾಂ ವಧಾಯೈಕಂ ದದ್ಯಾದರ್ಘ್ಯತ್ರಯಂ ಶುಚಿಃ**



ಸಂಧ್ಯಾಕಾಲ ಮೀರಿ ಅರ್ಘ್ಯ ನೀಡುವಂತಾದಲ್ಲಿ ನಾಲ್ಕನೆಯ ಅರ್ಘ್ಯವೊಂದನ್ನು ಪ್ರಾಯಶ್ಚಿತ್ತವಾಗಿ ನೀಡಬೇಕು. ಆಗ ಪ್ರತಿಪ್ರಣವದೊಡನೆ ಸಪ್ತವ್ಯಾಹೃತಿಗಳನ್ನು ಪಠಿಸಿ ಗಾಯತ್ರೀಮಂತ್ರ ಹೇಳಿ ನಾಲ್ಕನೆಯ ಪ್ರಾಯಶ್ಚಿತ್ತಾರ್ಘ್ಯವನ್ನು ನೀಡಬೇಕು. ಇದು ಮೂರು ಸಂಧ್ಯಾವಂದನೆಗೂ ಹೇಳಿದ್ದೆಂದು ವಸಿಷ್ಠರು ತಿಳಿಸಿರುತ್ತಾರೆ –

**ಕಾಲಾತಿಕ್ರಮಣೇ ಚೈವ ತ್ರಿಸಂಧ್ಯಮಪಿ ಸರ್ವದಾ**

**ಚತುರ್ಥಾರ್ಘ್ಯಂ ಪ್ರಕುರ್ವೀತ ಭಾನೋರ್ವ್ಯಾಹೃತಿಸಂಪುಟಮ್**

**ವರಾಹಪುರಾಣವು** ಅನಿವಾರ್ಯತೆಯಿಂದ ಸ್ವಲ್ಪವಷ್ಟೇ ಕಾಲ ಮೀರುವುದನ್ನು ಇಲ್ಲಿ ಸ್ಪಷ್ಟಪಡಿಸಿದೆ –

**ಕಾಲಾತಿಕ್ರಮಣೇ ಸ್ವಲ್ಪೇ ತ್ರಿಸಂಧ್ಯಮಪಿ ಸರ್ವದಾ**

**ಚತುರರ್ಘ್ಯಂ ಪ್ರಕುರ್ವೀತ ಶಿರೋವ್ಯಾಹೃತಿಪೂರ್ವಕಮ್**

ಸ್ಮೃತಿಕಾರರು ಪ್ರಾಯಶ್ಚಿತ್ತಾರ್ಘ್ಯಮಂತ್ರವನ್ನು ಬೇರೆ ಬೇರೆಯಾಗಿ ಹೇಳಿದ್ದಾರೆ. ಸೂರ್ಯದೇವತಾಕ ಮಂತ್ರಗಳನ್ನೇ ಉದ್ಧರಿಸಿದ್ದಾರೆ. ಇದರಿಂದ ಮಂತ್ರಗಳು ಬೇರೆ ಬೇರೆಯಾದರೂ ಚಿಂತನೆ ಧ್ಯಾನ ಒಂದೇ ಆಗಿದ್ದು ಕಂಡುಬರುತ್ತದೆ.

ಬೆಳಗ್ಗೆ ಸೂರ್ಯೋದಯದ ಅನಂತರ ಅರ್ಘ್ಯನೀಡುವಂತಾದರೆ ಹಾಗೆಯೇ ಸಂಜೆ ಸೂರ್ಯಾಸ್ತದ ಬಳಿಕ ಅರ್ಘ್ಯನೀಡುವಂತಾದರೆ ಕಾಲಾತೀತ ದೋಷ ಪರಿಹಾರಕ್ಕೆ ನೂರೆಂಟು ಬಾರಿ ಗಾಯತ್ರೀಮಂತ್ರವನ್ನು ಜಪಿಸಬೇಕು. ಸಂಧ್ಯಾಕಾಲವೇ ಕಳೆದುಹೋಗಿದ್ದರೆ ಪ್ರಾತಃಸಂಧ್ಯೆ ಯೋಗ್ಯ ಕಾಲದಲ್ಲಿ ಆಗದ್ದಕ್ಕೆ ಪ್ರಾಯಶ್ಚಿತ್ತವಾಗಿ ಮಧ್ಯಾಹ್ನ ಊಟ ಮಾಡಬಾರದು. ಸಾಯಂಸಂಧ್ಯೆ ಸಕಾಲದಲ್ಲಿ ಆಗದ್ದಕ್ಕೆ ರಾತ್ರಿ ಊಟ ಬಿಡಬೇಕು. ಹೀಗೆ ದೈಹಿಕ ಹಾಗೂ ಮಾನಸಿಕ ಸ್ವಶಿಕ್ಷೆಯ ಪ್ರಾಯಶ್ಚಿತ್ತವನ್ನು **ವಾಧೂಲಸ್ಮೃತಿ** ಬ್ರಾಹ್ಮಣ್ಯದ ಉಳಿವಿಗಾಗಿ ಹೇಳಿದೆ –

**ಅರ್ಘ್ಯಪ್ರದಾನತಃ ಪೂರ್ವಂ ಉದಯಾಸ್ತಮಯೇ ಸತಿ**

**ಗಾಯತ್ರ್ಯಷ್ಟಶತಂ ಜಪ್ಯಂ ಪ್ರಾಯಶ್ಚಿತ್ತಂ ದ್ವಿಜಾತಿಭಿಃ**



**ತತ್ರ ಪ್ರಾತರತಿಕ್ರಾಮೇತ್ ಉಪವಾಸೋಽಹರುಚ್ಯತೇ**

**ತಥಾ ಸಾಯಮತಿಕ್ರಾಮೇತ್ ರಾತ್ರಿಂ ಚೋಪವಸೇದ್ದ್ವಿಜಃ**

ಕಾಲ ಕಳೆಯಿತೆಂದು ಜಪ ಬಿಡುವಂತಿಲ್ಲ. ಪ್ರಾಯಶ್ಚಿತ್ತ ಮಾಡಿ ಮತ್ತೆ ಮಾಡಲಿದೆ –

**ಸಂಧ್ಯಾಯಾಂ ಪತಿತಾಯಾಂ ತು ಗಾಯತ್ರೀಂ ಶತಧಾ ಜಪೇತ್**

**ತತಃ ಕಾಲೋಚಿತಾಂ ಸಂಧ್ಯಾಂ ಕೃತ್ವಾ ಕರ್ಮ್ಮ ಸಮಾಪಯೇತ್** (ಯೋಗಿನೀತಂತ್ರ)

ಗೃಹಸ್ಥನಿಗೆ ಬೆಳಿಗ್ಗೆ ಮತ್ತು ಮಧ್ಯಾಹ್ನ ಸ್ನಾನ ವಿಹಿತವಾಗಿದೆ. ರಾತ್ರಿ ಸ್ನಾನ ಬೇಕಾಗಿಲ್ಲ –

**ಪ್ರಾತರ್ಮಧ್ಯಾಹ್ನಯೋಃ ಸ್ನಾನಂ ವಾನಪ್ರಸ್ಥಗೃಹಸ್ಥಯೋಃ**

**ಯತೇಸ್ತ್ರಿವಾರಂ ಸ್ನಾನಂ ಸ್ಯಾತ್ ಸಕೃತ್ತು ಬ್ರಹ್ಮಚಾರಿಣಃ**

ಹೀಗಾಗಿ ಸಂಜೆ ಜಪವನ್ನು ಮಾಡಲೆಂದು ಕೈಕಾಲು ಮುಖ ತೊಳೆದುಕೊಂಡರಾಯಿತು. ಇದನ್ನು ಪಾದಸ್ನಾನವೆಂದೂ ಗುರುತಿಸಿದ್ದಾರೆ –

**ಸೂರ್ಯೇಽಸ್ತಶಿಖರಂ ಪ್ರಾಪ್ತೇ ಪಾದಶೌಚಕ್ರಿಯಾನ್ವಿತಃ**

**ಬಹಿಃ ಸಂಧ್ಯಾಮುಪಾಸೀತ ಕುಶಪಾಣಿಃ ಸಮಾಹಿತಃ** (ವ್ಯಾಸ)

ಮಧ್ಯಾಹ್ನ ಉಂಡ ಬಳಿಕ ಕೈಕಾಲು ಮುಖ ತೊಳೆದು ಪುರಾಣ ಕೇಳಬೇಕು. ಹೀಗೆ ಉಳಿದ ಹಗಲನ್ನು ಕಳೆದು ಸಂಜೆ ಜಪವನ್ನು ಮಾಡಬೇಕು. ಪುರಾಣಚಿಂತನೆಗೆ ಮನೆಯಿಂದ ಹೊರಗೆ ಹೋದಲ್ಲಿ ಅಲ್ಲಿನ ಪಕ್ಕದ ಜಲಾಶಯದಲ್ಲಿ ಜಪ ನಡೆಸಿದರೂ ಯೋಗ್ಯವೇ. ಹೀಗೆ ಪುರಾಣಚಿಂತನೆಯನ್ನು ಮಧ್ಯಾಹ್ನದ ಬಳಿಕ ಸಂಜೆ ತನಕ ನಡೆಸುವಂತೆ ಸ್ಕಾಂದಪುರಾಣವು ಆದೇಶಿಸಿದೆ.

**ಮುಖಶುದ್ಧಿಂ ತತಃ ಕೃತ್ವಾ ಪುರಾಣಶ್ರವಣಾದಿಭಿಃ**

**ಅತಿವಾಹ್ಯ ದಿವಾಶೇಷಂ ತತಃ ಸಂಧ್ಯಾಂ ಸಮಾರಭೇತ್**

**ಗೃಹೇ ಗೋಷ್ಠೇ ನದೀತೀರೇ ಸಂಧ್ಯಾ ದಶಗುಣಾ ಕ್ರಮಾತ್**

ನದೀತೀರದಲ್ಲಿ ಜಪಗೈದರೆ ಇನ್ನೂ ಉತ್ತಮ. ಗಂಗಾತಟದಲ್ಲಿ ಬಹಳ ವಿಶೇಷ ಎಂದು ವ್ಯಾಸರ ಮಾತು –



**ಬಹಿಸ್ಸಂಧ್ಯಾ ದಶಗುಣಾ ಗರ್ತಪ್ರಸ್ರವಣಾದಿಷು**

**ತೀರ್ಥೇ ದಶಗುಣಂ ಜ್ಞೇಯಂ ಸಹಸ್ರಂ ಜಾಹ್ನವೀಜಲೇ**

ಮಧ್ವಾಚಾರ್ಯರು ಮಧ್ಯಾಹ್ನ ಊಟದ ಬಳಿಕ ಶಾಸ್ತ್ರಚಿಂತನೆಯನ್ನು ಹೇಳಿದ್ದಾರೆ. ಮತ್ತೆ ಸಾಯಂ ಸಂಧ್ಯಾವಂದನೆಯನ್ನು ಆದೇಶಿಸಿದ್ದಾರೆ –

**ವೇದಶಾಸ್ತ್ರವಿನೋದೇನ ಪ್ರೀಣಯನ್ ಪುರುಷೋತ್ತಮಮ್**

**ಅಹಃಶೇಷಂ ನಯೇತ್ಸಂಧ್ಯಾಂ ಉಪಾಸೀತಾಥ ಪೂರ್ವವತ್**

ಇದರ ಮೂಲವಾಕ್ಯ ವ್ಯಾಸರ ವಿಷ್ಣುಪುರಾಣದಲ್ಲಿ –

**ಸಚ್ಛಾಸ್ತ್ರಾದಿವಿನೋದೇನ ಸನ್ಮಾರ್ಗಾದವಿರೋಧಿನಾ**

**ದಿನಂ ನಯೇತ್ತತಃ ಸಂಧ್ಯಾಂ ಉಪತಿಷ್ಠೇತ್ಸಮಾಹಿತಃ**

ಸ್ಮೃತಿಗಳಲ್ಲಿ ದೇವರ ಮೇಲಿನ ಭಕ್ತಿಜಾಗೃತಿಗಾಗಿ ಶ್ರವಣಮನನಗಳನ್ನು ಊಟದ ಬಳಿಕ ನಡೆಸುವಂತೆ ಹೇಳಿದ್ದಾರೆ –

**ಭುಕ್ತ್ವೋಪವಿಷ್ಟೋ ವಿಶ್ರಾಂತೋ ಬ್ರಹ್ಮ ಕಿಂಚಿದ್ವಿಚಾರಯೇತ್**

**ಇತಿಹಾಸಪುರಾಣಾನಿ ಸ್ವಾಧ್ಯಾಯಂ ಚ ಪಠೇನ್ನರಃ**

**ಅಸ್ತಂಗತೇ ದಿನಕರೇ ಸಂಧ್ಯಾಂ ಕುರ್ವೀತ ಪೂರ್ವವತ್** (ವಿಷ್ಣು)

**ಭುಕ್ತ್ವೋಪಸ್ಥಾಯ ಮಾರ್ತಾಂಡಂ ಪುರಾಣಾದಿ ಸದಾ ಪಠೇತ್**

**ಕಲೌ ಭಕ್ತಿರ್ಭವೇನ್ನೃಣಾಂ ಪುರಾಣಶ್ರವಣಾತ್ಸದಾ** (ಶಂಖ)

**ವಿಚಾರ್ಯ ಚ ಪುರಾಣಾರ್ಥಾನ್ ವೇದಾರ್ಥಾನ್ ಭಕ್ತಿಮಾನ್ ದ್ವಿಜಃ**

**ವಿಷ್ಣುಂ ಸದಾ ಹೃದಿ ಧ್ಯಾಯನ್ ಅಹಃಶೇಷಂ ನಯೇದ್ಬುಧಃ** (ಲಿಖಿತ)

ಸದಾಚಾರದ ಬಗ್ಗೆ ಅನೇಕ ಮಾಹಿತಿಗಳನ್ನು ಹೇಳಿದ ವರಾಹರೂಪಿ ಹರಿಯು ಸಂಧ್ಯಾಕಾಲದ ಲೋಪದ ಬಗ್ಗೆ ವಿಶೇಷ ವಿಷಯವನ್ನೂ ಹೇಳಿದ್ದಾನೆ. ಮುಖ್ಯವಾಗಿ ಸಾಯಂಕಾಲ ಹರಿಯ ಕಥಾಶ್ರವಣದಲ್ಲಿ ಹಾಗೂ ವೇದಾಂತ ಚಿಂತನೆಯಲ್ಲಿ ತತ್ವಪಾಠದಲ್ಲಿ ತೊಡಗಿದ್ದರೆ ಹಾಗೆಯೇ ಧ್ಯಾನಾಸಕ್ತನಾಗಿದ್ದಲ್ಲಿ ಸಂಧ್ಯಾವಂದನೆ ನಡೆಸದೆ ಕಾಲ ಮೀರಿದರೂ ತಪ್ಪೆನಿಸದು. ಪ್ರಾಯಶ್ಚಿತ್ತ ಬೇಕಾಗಿಲ್ಲ. ಆತನ ಪರವಾಗಿ ಮೂರು ಕೋಟಿ ಋಷಿಗಳು ಸಂಧ್ಯಾವಂದನೆಯನ್ನು

ನಡೆಸುವರೆಂಬ ಅಪೂರ್ವ ಮಾಹಿತಿ ಇಲ್ಲಿದೆ.

**ಮತ್ಕಥಾಶ್ರವಣಾಸಕ್ತೋ ಮತ್ಕಥಾಪಠನೋಽಪಿ ವಾ**

**ಮಮ ಧ್ಯಾನರತೋ ಯಸ್ತು ಕಥಂಚಿತ್ಕರ್ಮ್ಮಲೋಪವಾನ್**

**ನ ದೋಷಸ್ತತ್ರ ತಸ್ಯಾಪಿ ಪ್ರಾಯಶ್ಚಿತ್ತಂ ಚ ತಸ್ಯ ನ**

**ಮತ್ಕರ್ಮ್ಮಕುರ್ವತಾಂ ಪುಂಸಾಂ ಕರ್ಮ್ಮಕಾಲೋ ಭವೇದ್ಯದಿ**

**ತೇಷಾಂ ಕರ್ಮ್ಮಾಣಿ ಕುರ್ವಂತಿ ತಿಸ್ರಃ ಕೋಟ್ಯೋ ಮಹರ್ಷಯಃ**

ಒಂದೊಮ್ಮೆ ಸೋಮಾರಿತನದಿಂದ ತಿಳಿದೇ ಬೇರೆ ಕೆಲಸ ನಡೆಸುತ್ತಾ ಸಂಧಿಕಾಲವನ್ನು ಮೀರಿದರೆ, ಹೇಳಿದ ಪ್ರಾಯಶ್ಚಿತ್ತವನ್ನು ಎರಡು ಪಾಲು ನಡೆಸುವಂತೆ ಇಲ್ಲಿ ಹೇಳಲಾಗಿದೆ –

**ವೃಥಾ ಕರ್ಮ್ಮರತೋ ಯಸ್ತು ನಿತ್ಯಕರ್ಮ್ಮವಿಲೋಪಕಃ**

**ಪ್ರಾಯಶ್ಚಿತ್ತಂ ತು ದ್ವಿಗುಣಂ ತಸ್ಯಃ ಪುಂಸಃ ಪ್ರಕೀರ್ತ್ತಿತಃ**

ಹೋಮಹವನಗಳಿಗಿಂತ ಜಪವು ಶ್ರೇಷ್ಠ. ಜಪಕ್ಕಿಂತ ಜ್ಞಾನಸಂಪಾದನೆ ಮಿಗಿಲು. ಶ್ರವಣ–ಮನನಗಳಿಗಿಂತ ಹೆಚ್ಚು ಶ್ರೇಷ್ಠ ಧ್ಯಾನವೆಂದು **ಲಿಂಗಪುರಾಣ** ಹೇಳಿದೆ. ಮುಖ್ಯವಾಗಿ ಹರಿಯ ನೆನಪೇ ಕರ್ಮಗಳಲ್ಲಿ ಪ್ರಧಾನಾಂಶ ಫಲ ನೀಡುವಲ್ಲಿ –

**ಯಜ್ಞಾತ್ ಜಾಪ್ಯಂ ಜ್ಞಾನಮಾಹುಶ್ಚ ಜಾಪ್ಯಾತ್**

**ಜ್ಞಾನಾದ್ಧ್ಯಾನಂ ಸಂಗರಾಗಾದಪೇತಮ್**

**ತಸ್ಮಿನ್ ಪ್ರಾಪ್ತೇ ಶಾಶ್ವತಸ್ಯೋಪಲಂಭಃ**

ಎಲ್ಲ ತಪಸ್ಸಿನಲ್ಲಿ ಶ್ರೇಷ್ಠವೆನಿಸಿದ್ದು ಪ್ರಾಣಾಯಾಮ ಮತ್ತು ಮಂತ್ರಗಳಲ್ಲೆಲ್ಲ ಮಿಗಿಲಾದ್ದು ಪ್ರಣವ ಎಂದು **ಸ್ಕಾಂದಪುರಾಣ**ದಲ್ಲಿ ಹೇಳಲಾಗಿದೆ –

**ಪ್ರಾಣಾಯಾಮಶ್ಚ ತಪಸಾಂ ಮಂತ್ರಾಣಾಂ ಪ್ರಣವೋ ಯಥಾ**

ಓಂಕಾರವು ಅವಧಾತುವಿನಿಂದ ಹುಟ್ಟಿದೆ. ಅವಧಾತುವಿಗೆ ಹತ್ತಿಪ್ಪತ್ತು ಅರ್ಥಗಳಿವೆ. ಆ ಎಲ್ಲ ಅರ್ಥದಲ್ಲಿಯೂ ಭಗವಂತನನ್ನು ಪರಿಚಯಿಸಿಕೊಳ್ಳಬೇಕು. (ಬನ್ನಂಜೆಯವರ ಅರವತ್ತರ ಹತ್ತಿರದಲ್ಲಿ ಬಿತ್ತರಗೊಂಡ ನನ್ನ **ಅರವತ್ತು**



ಹೊತ್ತಗೆಯಲ್ಲಿ ಅವರೇ ನುಡಿದ ಇದರ ಅರ್ಥವಿಸ್ತಾರವನ್ನು ಕಾಣಬಹುದು.) –

**ಅವ ರಕ್ಷೇ ಗತೇ ಕಾಂತೌ ತೃಪ್ತಾವವಗಮೇ ಶ್ರುತೌ**

**ಪ್ರೀತೌ ಪ್ರವೇಶೇ ಸಾಮರ್ಥ್ಯೇ ಪ್ರಾರ್ಥನೇ ಕರಣೇ ತಥಾ**

**ವ್ಯಾಪ್ತಾವವಾಪ್ತಾವಿಚ್ಛಾಯಾಂ ಹಿಂಸಾಲಿಂಗನದೀಪ್ತಿಷು**

**ವಿಭಾಗೇ ಗ್ರಹಣೇ ವೃದ್ಧೌ ಧಾತುರೇಷಃ ಪ್ರಯುಜ್ಯತೇ**

**ಪ್ರ**ಕಾಶಸಂಹಿತೆಯಲ್ಲಿ ಪ್ರಣವದ ಅರ್ಥ –

**ಓಂನಾಮಾ ಭಗವಾನ್ ವಿಷ್ಣುಃ ಅಖಿಲೋಚ್ಚಗುಣತ್ವತಃ**

**ಓತತ್ತ್ವವಾಚೀ ಹ್ಯೋಂಕಾರೋ ವಕ್ತ್ಯಸೌ ತದ್ಗುಣೋತತಾಮ್**

**ಓಮಶೇಷಗುಣಾಧಾರ ಇತಿ ಪೂರ್ಣ್ಣಗುಣೋ ಹ್ಯಸೌ**

**ಅನಂತಕಲ್ಯಾಣಗುಣೋ ವಿಷ್ಣುರೋಮಿತ್ಯುದಾಹೃತಃ**

ಶಾಸ್ತ್ರಗಳಲ್ಲಿ ಭಗವಂತನ ಸರ್ವಪಾರಮ್ಯ ತಿಳಿಯಲ್ಪಡುವುದೆನ್ನುವುದಾಗಿ ಓಂಕಾರದ ಅರ್ಥವನ್ನು ಮಧ್ವಾಚಾರ್ಯರು **ಛಂದೋಗಭಾಷ್ಯ**ದಲ್ಲಿ ನೀಡಿದ್ದಾರೆ

**ಅಕಾರೇಣಾಧಿಕಂ ಪ್ರೋಕ್ತಂ ಉಕಾರೇಣೋಚ್ಚಮುಚ್ಯತೇ**

**ತಥಾ ಮಿತಂ ಸರ್ವವೇದ್ಯೈಃ ಮಕಾರೇಣಾಭಿಧೀಯತೇ**

**ಅಧಿಕೋಚ್ಚಮಿತಿ ಜ್ಞಾತಂ ಓಮಿತ್ಯಸ್ಯಾರ್ಥ ಈರಿತಃ**

ಮುಖ್ಯವಾಗಿ ಓಂಕಾರದಿಂದ ಮೋಕ್ಷಪ್ರದನಾದ ವಾಸುದೇವನು ಪ್ರತಿಪಾದ್ಯನು. ಮೂರು ವ್ಯಾಹೃತಿಗಳಿಂದ ಸಂಕರ್ಷಣ ಪ್ರದುಮ್ನ ಅನಿರುದ್ಧರು ಪ್ರತಿಪಾದ್ಯರು. ಗಾಯತ್ರೀಮಂತ್ರದಿಂದ ಸವಿತ್ರಂತರ್ಗತ ನಾರಾಯಣನು ಪ್ರತಿಪಾದ್ಯ. ಹೀಗೆ ಪಂಚಪಾದಗಳಿಂದ ಪಂಚರೂಪನು ಪ್ರಪಂಚಿತನು –

**ಸಂಕರ್ಷಣಸ್ತು ಭೂರ್ನ್ನಾಮಾ ಭೂಷಯೇತ್ ಜ್ಞಾನತೋ ಯತಃ**

**ಪ್ರದ್ಯುಮ್ನಸ್ತು ಭುವೋ ನಾಮಾ ಸೃಷ್ಟ್ಯಾ ಯದ್ಭಾವಯೇಜ್ಜಗತ್**

**ಸ್ವರ್ಣ್ಣಾಮಾ ಹ್ಯನಿರುದ್ಧೋಽಸೌ ಪರಾನಂದಪ್ರದತ್ವತಃ**

**ಶಂಕರಭಾಷ್ಯ**ದಲ್ಲಿ ಸಚ್ಚಿದಾನಂದನನ್ನು ವ್ಯಾಹೃತ್ಯರ್ಥವಾಗಿ ತಿಳಿಸಲಾಗಿದೆ –

**ಭೂರಿತಿ ಸನ್ಮಾತ್ರಮುಚ್ಯತೇ**



**ಭುವ ಇತಿ ಸರ್ವಂ ಭಾವಯತಿ ಪ್ರಕಾಶಯತಿ ಇತಿ ವ್ಯುತ್ಪತ್ತ್ಯಾ ಚಿದ್ರೂಪಮುಚ್ಯತೇ**

**ಸುಪ್ರಿಯತ ಇತಿ ವ್ಯುತ್ಪತ್ತ್ಯಾ ಸ್ವರಿತಿ ಸುಷ್ಠು ಸರ್ವೈರ್ಪ್ರಿಯಮಾಣಸುಖ-ಸ್ವರೂಪಮುಚ್ಯತೇ**

ಪ್ರಣವವು ಪ್ರವೇಶವನ್ನು ಹೇಳುವುದರಿಂದ ಅಂತರ್ಯಾಮಿಯ ಅರ್ಥದಲ್ಲಿ ಆತ್ಮತ್ವದ ಚಿಂತನೆ ಸಾಗಿದೆ. ಹೀಗೆ ಸಚ್ಚಿದಾನಂದ ಆತ್ಮ ಎಂಬ ನಾಲ್ಕು ಗುಣಗಳ ಚಿಂತನೆ ಸಾಗಿದೆ. ಇದು ಮನುಷ್ಯರ ಉಪಾಸನೆಯ ಸಾಮಾನ್ಯ ಕ್ರಮ ಎನ್ನುವುದಾಗಿ **ಸರ್ವಶಾಸ್ತ್ರಾರ್ಥಸಂಗ್ರಹ**ದ ಮಾತು –

**ಸಚ್ಚಿದಾನಂದ ಆತ್ಮೇತಿ ಮಾನುಷೈಸ್ತು ....**

ಮೂರು ವೇದದ ಸಾರ ವ್ಯಾಹೃತಿ –

**ಭೂರಿತಿ ಋಗ್ಭ್ಯೋ ಭುವ ಇತಿ ಯಜುರ್ಭ್ಯಃ ಸ್ವರಿತಿ ಸಾಮಭ್ಯಃ** (ಛಂದೋಗ)

**ಭೂರಿತ್ಯೇವ ಋಗ್ವೇದೋ ಭುವ ಇತಿ ಯಜುರ್ವೇದಃ ಸ್ವರಿತಿ ಸಾಮವೇದಃ**

(ಐತರೇಯಾರಣ್ಯಕ)

**ಏವಮೇವೈತಾ ವ್ಯಾಹೃತಯಃ ತ್ರಯ್ಯೈ ವಿದ್ಯಾಯೈ ಸಂಶ್ಲೇಷಿಣ್ಯಃ** (ಕೌಷೀತಕೀ)

**ಭೂರಿತಿ ಋಗ್ಭ್ಯೋಽಕ್ಷರತ್ ಭುವ ಇತಿ ಯಜುರ್ಭ್ಯೋಽಕ್ಷರತ್**

**ಸ್ವ ಇತಿ ಸಾಮಭ್ಯೋಽಕ್ಷರತ್** (ಷಡ್ವಿಂಶಬ್ರಾಹ್ಮಣ)

**ಸ ಭೂರಿತ್ಯೇವ ಋಗ್ವೇದಸ್ಯ ರಸಮಾದತ್ತ ಭುವ ಇತ್ಯೇವ ಯಜುರ್ವೇದಸ್ಯ ರಸಮಾದತ್ತ ಸ್ವರಿತ್ಯೇವ ಸಾಮವೇದಸ್ಯ ರಸಮಾದತ್ತ** (ಜೈಮಿನೀಯೋಪನಿಷತ್)

ಮನು ಇದನ್ನು ಸ್ಪಷ್ಟಪಡಿಸಿರುವನು –

**ಅಕಾರಂ ಚಾಪ್ಯುಕಾರಂ ಚ ಮಕಾರಂ ಚ ಪ್ರಜಾಪತಿಃ**

**ವೇದತ್ರಯಾನ್ನಿರದುಹತ್ ಭೂರ್ಭುವಸ್ವರಿತೀತಿ ಚ**

ತಂತ್ರಗಳು ಚಕ್ರಸ್ಥಾನದಲ್ಲಿ ವ್ಯಾಹೃತಿಗಳನ್ನು ಕಂಡಿವೆ –

**ಮೂಲಪದ್ಮಶ್ಚ ಭೂರ್ಲೋಕೋ ವಿಶುದ್ಧಶ್ಚ ಭುವಸ್ತಥಾ**

**ಸುರಲೋಕಃ ಸಹಸ್ರಾರೋ ಗಾಯತ್ರೀಸ್ಥಾನನಿರ್ಣಯಃ**



ಭಾಗವತವು ಇಡಿಯ ದೇಹವನ್ನು ಮೂರು ಲೋಕಗಳಾಗಿ ಹೇಳಿದೆ –

**ಭೂರ್ಲೋಕಃ ಕಲ್ಪಿತಃ ಪದ್ಭ್ಯಾಂ ಭುವರ್ಲೋಕೋಽಸ್ಯ ನಾಭಿತಃ**

**ಸ್ವರ್ಲೋಕಶ್ಚ ತಥಾ ಶೀರ್ಷ್ಣಿ ಇತಿ ವಾ ಲೋಕಕಲ್ಪನಾ**

ಆಚಾರ್ಯಮಧ್ವರು ತಮ್ಮ ಕೃತಿಗಳಲ್ಲಿ ವರಾಹ ನರಸಿಂಹ ಕಪಿಲ ರೂಪಗಳನ್ನು ಇತರ ಅರ್ಥಗಳನ್ನೂ ವ್ಯಾಹೃತಿಯಲ್ಲಿ ತೋರಿಸಿದ್ದಾರೆ.

**ವರಾಹಸಿಂಹಕಪಿಲಾಃ ತೇಷಾಂ ಭೂರಾದಿನಾಮಕಾಃ** (ಛಂದೋಗಭಾಷ್ಯ)

**ಪೂರ್ಣೋ ಭೂತಿವರೋಽನಂತಸುಖೋ ಯದ್ವ್ಯಾಹೃತೀರಿತಃ** (ಋಗ್ಭಾಷ್ಯ)

**ವ್ಯಾಹೃತೀನಾಂ ಚ ಭೂಮತಃ । ಭಾವನಾಚ್ಛ್ರೈದ ಸುತ್ತ್ವಾಚ್ಚ** (ಅನುವ್ಯಾಖ್ಯಾನ)

**ಭೂರ್ನಾಮಾ ಸ್ಫೂರ್ತಿರೂಪತ್ವಾತ್ ಭೂರಿವೀರ್ಯತ್ವತೋ ಭುವಃ**

**ಸುವಃ ಸುಬಲರೂಪತ್ವಾತ್ ...** (ವ್ಯಾಹೃತಿಸಾರ)

**ಪುರಾಕಲ್ಪೇ ಸಮುತ್ಪನ್ನಾ ಭೂರ್ಭುವಃಸ್ವಃ ಸನಾತನಾಃ**

**ಮಹಾವ್ಯಾಹೃತಯಸ್ತಿಸ್ರಃ ಸರ್ವಾಶುಭನಿಬರ್ಹಣಾಃ**

**ಪ್ರಧಾನಂ ಪುರುಷಃ ಕಾಲೋ ವಿಷ್ಣುರ್ಬ್ರಹ್ಮಾ ಮಹೇಶ್ವರಃ**

**ಸತ್ವಂ ರಜಸ್ತಮಸ್ತಿಸ್ರಃ ಕ್ರಮಾದ್ವ್ಯಾಹೃತಯಃ ಸ್ಮೃತಾಃ** (ಕೂರ್ಮಪುರಾಣ)

ಬೃಹದಾರಣ್ಯಕವು ವ್ಯಾಹೃತಿಗಳಿಂದ ಅವಯವನಿರ್ದೇಶವನ್ನು ಹೇಳಿದೆ –

**ಯ ಏಷ ಏತಸ್ಮಿನ್ ಮಂಡಲೇ ಪುರುಷಸ್ತಸ್ಯ ಭೂರಿತಿ**

**ಶಿರ ಏಕಂ ಶಿರ ಏಕಮೇತದಕ್ಷರಮ್**

**ಭುವಃ ಇತಿ ಬಾಹೂ ದ್ವೌ ಬಾಹೂ ದ್ವೇ ಏತೇ ಅಕ್ಷರೇ**

**ಸುವರಿತಿ ಪ್ರತಿಷ್ಠಾ ದ್ವೇ ಪ್ರತಿಷ್ಠೇ ದ್ವೇ ಏತೇ ಅಕ್ಷರೇ**

**ತಸ್ಯ ವಿಷ್ಣೋಃ ಶಿರೋ ನಾಮ ಭಾವನಾತ್ ಭೂರಿತಿ ಸ್ಮೃತಮ್**

**ಭಾವನಂ ರಕ್ಷಣಂ ಪ್ರೋಕ್ತಂ ದೃಷ್ಟ್ಯಾ ವಾಚಾ ಚ ರಕ್ಷತಿ**

**ಉತ್ಪಾದನಾತ್ ಭುನಾಮಾ ಸ್ಯಾತ್ ದಕ್ಷಿಣೋ ಬಾಹುರಸ್ಯ ತು**

**ವಿನಾಶನಾತ್ ವ ಇತ್ಯುಕ್ತಃ ಸವ್ಯೋ ಬಾಹುಃ ಪರಾತ್ಮನಃ**

**ಸ್ಥಿತ್ಯಾನಂದಃ ಸಮುದ್ದಿಷ್ಟೋ ವರಿತಿ ಜ್ಞಾನಮುಚ್ಯತೇ**



**ಮುಕ್ತಿದಾನೇನ ತದ್ದಾನಾತ್ ಸುವರಸ್ಯ ಪದದ್ವಯಮ್**

**ದಕ್ಷಿಣಶ್ಚೈವ ಸವ್ಯಶ್ಚ ಕ್ರಮಾದ್ವರ್ಣ್ಣದ್ವಯೋದಿತೌ**

**ಪಾದಾವಸ್ಯ ಹಿ ತತ್ಪ್ರಾಪ್ತಿಃ ಮುಕ್ತಿರಿತ್ಯಬಿಧೀಯತೇ** (ಬೃಹದಾರಣ್ಯಕಭಾಷ್ಯ)

**ಅನಿರುದ್ಧಸ್ತು ಭೂರ್ನ್ನಾಮಾ ಹುತಾಶೇ ಸಂವ್ಯವಸ್ಥಿತಃ**

**ಪ್ರದ್ಯುಮ್ನೋ ಭಗವಾನ್ ವಾಯೌ ಭುವ ಇತ್ಯೇವ ಕೀರ್ತ್ತಿತಃ**

**ಸಂಕರ್ಷಣಸ್ಸುವರ್ನ್ನಾಮಾ ಸೂರ್ಯೇ ತಿಷ್ಠತಿ ಕೇಶವಃ** (ತೈತ್ತಿರೀಯಭಾಷ್ಯ)

**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ** (ಮಹಾಭಾರತ)

**ಭೂಃ ಪೂರ್ಣ್ಣಸ್ತು ಭುವಃ ಶ್ರೀಶಃ ಸಮ್ಯಗ್ ಜ್ಞಾನಾತ್ಮಕಃ ಸುವಃ** (ಪ್ರಕಾಶಸಂಹಿತೆ)

ಪರಮಾತ್ಮನ ಸಾವಿರ ರೂಪಗಳಲ್ಲಿ ವ್ಯಾಹೃತ್ಯಾದಿನಾಮ ಹೊತ್ತ ರೂಪವೂ ಇದೆ – **ಭೂರ್ಭುವಸ್ಸ್ವಸ್ತರುಸ್ತಾರಃ**

ಪಾಪರನ್ನು ನಾಶಮಾಡುವ ಮಂತ್ರ ಗಾಯತ್ರೀ ವೇದಸಾರಮಂತ್ರವಾದ್ದರಿಂದ ಸೂರ್ಯೋದಯಾಸ್ತಮಧ್ಯಗಳಲ್ಲಿ ವಾತಾವರಣದಲ್ಲಿ ಆಗುವ ಏರುಪೇರುಗಳ ಆಸುರಭಾವಗಳ ನಾಶಕ್ಕೆ ಈ ಮಂತ್ರವನ್ನೆ ವಿನಿಯೋಗಿಸಲಾಗಿದೆ –

**ಗಾಯತ್ರೀ ವೇದಜನನೀ ಗಾಯತ್ರೀ ಪಾಪನಾಶಿನೀ**

**ಗಾಯತ್ರ್ಯಾಃ ಪರಮಂ ನಾಸ್ತಿ ದಿವಿ ಚೇಹ ಚ ಪಾವನಮ್** (ಶಂಖಸ್ಮೃತಿ)

ಅರ್ಘ್ಯದಿಂದ ರಾಕ್ಷಸರ ನಾಶ ಆಗಿದ್ದು ತಿಳಿಯದಿದ್ದರೂ ಆ ದಿನದ ಪೀಡೆ ನಿವೃತ್ತಿಯಾಗುವುದರಿಂದ ಇದೊಂದು ನಾರಾಯಣನ ಪೂಜೆ ಎನಿಸಿದೆ ಎಂದು **ಲೌಗಾಕ್ಷಿಸ್ಮೃತಿ** ಸಾರಿದೆ –

**ರಕ್ಷಃಪೀಡಾನಿವೃತ್ತಿಃ ಸ್ಯಾತ್ ಸೂರ್ಯಸ್ಯಾರ್ಘ್ಯತ್ರಯೇಣ ಯತ್**

**ಜಾಯತೇ ತೇನ ತಸ್ಯಾರ್ಘ್ಯಂ ಅರ್ಚ್ಚನಾರೂಪಮುಚ್ಯತೇ**

**ಕಣ್ವಸ್ಮೃತಿ**ಯು ಜಪಾನುಷ್ಠಾನದ ಹಿನ್ನೆಲೆಯಲ್ಲಿ ಬಂದ ಎಲ್ಲ ಕ್ರಿಯೆಗಳೂ ಭಗವದಾರಾಧನೆ ಎಂದೇ ಗುರುತಿಸಿ ಯಾವ ಅಂಶದ ಲೋಪವನ್ನೂ ನಡೆಸದಿರುವಂತೆ ಮನವರಿಕೆ ಮಾಡಿದೆ –

**ಸ್ನಾನಮಾಚಮನಂ ಚಾಽಪಿ ಪ್ರಾಣಾಯಾಮಸ್ತತಃ ಪುನಃ**



**ಸಂಕಲ್ಪೋ ನಿಖಿಲಂ ಚೈತತ್ ಸಂಧ್ಯಾನುಷ್ಠಾನಹೇತವೇ**

**ತತ್ಪೂಜಾರೂಪಮೇವ ಸ್ಯಾತ್ ಅರ್ಘ್ಯದಾನಂ ಸಮಂತ್ರಕಮ್**

**ರಕ್ಷೋನಿರಸನಾದನ್ಯತ್ ಅರ್ಚನಂ ತಸ್ಯ ಕಿಂ ಸ್ಮೃತಮ್**

**ವಿಶ್ವಾಮಿತ್ರಸ್ಮೃತಿ**ಯಲ್ಲಿ ಅರ್ಘ್ಯ ನೀಡಬೇಕಾದರೆ ಬ್ರಹ್ಮಾಸ್ತ್ರಾದಿಗಳ ಪರಿಚಯವಿರಬೇಕೆಂದು ತಿಳಿಸಿದ್ದಾರೆ. ಇಲ್ಲವಾದರೆ ಅರ್ಘ್ಯ ವ್ಯರ್ಥ ಎನ್ನಲಾಗಿದೆ.

ಬೆಳಗ್ಗೆ ಮತ್ತು ಸಂಜೆ ಮೂರು ಅರ್ಘ್ಯಗಳಿಗೂ ಒಂದೇ ಮಂತ್ರವಾದರೂ ಮಧ್ಯಾಹ್ನ ಸಂಧ್ಯಾವಂದನೆಗೆ ಮಂತ್ರಗಳು ಬೇರೆ ಇವೆ ಎಂಬುದನ್ನು **ವಿಶ್ವಾಮಿತ್ರಸ್ಮೃತಿ** ತಿಳಿಸಿದೆ –

**ಸಂಧ್ಯಾವಂದನವೇಲಾಯಾಂ ದದ್ಯಾದರ್ಘ್ಯತ್ರಯಂ ದ್ವಿಜಃ**

**ಸಾಯಂಪ್ರಾತಃ ಸಮಾನಂ ಸ್ಯಾತ್ ಮಧ್ಯಾಹ್ನೇ ತು ಪೃಥಕ್ಕ್ರಿಯಾ**

**ಲಘ್ವಾಶ್ವಲಾಯನಸ್ಮೃತಿ**ಯಲ್ಲಿ ಮಾಧ್ಯಾಹ್ನಿಕ ಸಂಧ್ಯೆಯ ಮೂರು ಅರ್ಘ್ಯ ಮಂತ್ರಗಳೂ ಹೇಳಲ್ಪಟ್ಟಿವೆ –

**ಮಧ್ಯಾಹ್ನೆ ತು ವಿಶೇಷೋऽಯಂ ಪ್ರದದ್ಯಾದ್ಧಂಸ ಇತ್ಯೃಚಾ**

**ಆ ಕೃಷ್ಣೇನ ದ್ವಿತೀಯಾರ್ಘ್ಯಂ ಗಾಯತ್ರ್ಯಾ ಚ ತೃತೀಯಕಮ್**

**ಶೇಷಸಂಹಿತೆ**ಯು ಮಧ್ಯಾಹ್ನದ ಅರ್ಘ್ಯೆಯಲ್ಲಿ ಒಂದು ಮಾತ್ರ ಗಾಯತ್ರೀಮಂತ್ರದಿಂದ ನಡೆಸಲಿರುವುದರಿಂದ ಮಂತ್ರೈಕ್ಯದ ಚಿಂತನೆಯಲ್ಲಿ ಮಧ್ಯಾಹ್ನ ಅರ್ಘ್ಯೆ ಒಂದೆಂದು ಹೇಳಿದೆ –

**ಸಂಧ್ಯಯೋರುಭಯೋಸ್ತ್ರಿಸ್ತ್ರಿಃ ಮಧ್ಯಾಹ್ನೇ ಏಕಮೇವ ಚ**

**ಸೂರ್ಯೋದಯೇ ಪ್ರಾಙ್ಮುಖಃ ಸ್ಯಾತ್ ಅಸ್ತೇ ಪಶ್ಚಿಮತೋ ಮುಖಃ**

ಸೂರ್ಯನಿಗೆ ಮುಖಮಾಡಿ ಅರ್ಘ್ಯಪ್ರದಾನ ಎರಡೂ ಹೊತ್ತು ನಡೆಸಬೇಕು. ಮಧ್ಯಾಹ್ನ ಉತ್ತರಕ್ಕೆಂದು ವಸಿಷ್ಠ ಮತ್ತು ಯಮ –

**ತ್ರಿಸಂಧ್ಯಾಸು ಚ ಗಾಯತ್ರ್ಯಾ ಪೂರಿತಂ ಚಾಂಜಲಿತ್ರಯಮ್**

**ಅಪ್ಸು ಕ್ಷಿಪೇದರ್ಕಮುಖೋ ಮಧ್ಯಾಹ್ನೇ ಚೋತ್ತರಾಮುಖಃ**

ಪ್ರಾತಃಕಾಲದಲ್ಲಿ ಕುಳಿತು ಅರ್ಘ್ಯ ನೀಡಿದರೆ ವ್ಯರ್ಥ ಎಂದು

ವ್ಯಾಘ್ರಪಾದಸ್ಮೃತಿ ಹೇಳಿದೆ–

**ಉಷ್ಣೋದಕೇನ ಯಾ ಸಂಧ್ಯಾ ಪದಮಧ್ಯೇ ತು ಮಾರ್ಜ್ಜನಮ್**

**ಉಪವಿಶ್ಯ ತು ಯತ್ರಾರ್ಘ್ಯಂ ತತ್ಸರ್ವಂ ನಿಷ್ಫಲಂ ಭವೇತ್**

**ಭವಿಷ್ಯಪುರಾಣದಲ್ಲಿ** ಅಂಗೈಯಲ್ಲಿನ ರೇಖೆಗಳನ್ನು ಗಂಗಾದಿ ತೀರ್ಥಗಳೆಂದು ಹೇಳಲಾಗಿದೆ. ಪರ್ವಗಳನ್ನು ಪರ್ವತಗಳಾಗಿ ತಿಳಿಸಲಾಗಿದೆ. ಹೀಗೆ ಬೊಗಸೆಯಿಂದ ಅರ್ಘ್ಯ ನೀಡುವಲ್ಲಿ ತೀರ್ಥಗಳ ಪಾತ್ರ –

**ಯಾಶ್ಚೈತಾಃ ಕರಮಧ್ಯೇ ತು ರೇಖಾಃ ವಿಪ್ರಸ್ಯ ಭಾರತ**

**ಗಂಗಾದ್ಯಾಃ ಸರಿತಃ ಸರ್ವಾಃ ಜ್ಞೇಯಾಃ ಭರತಸತ್ತಮ**

**ಯಾನ್ಯಂಗಲೀಷು ಪರ್ವಾಣಿ ಗಿರಯಸ್ತಾನಿ ಭಾರತ**

**ಸರ್ವದೇವಮಯೋ ರಾಜನ್ ಕರೋ ವಿಪ್ರಸ್ಯ ದಕ್ಷಿಣಃ**

ಗಂಗಾದಿ ತೀರ್ಥಗಳು **ನಾರದಪುರಾಣದ** ಮಾತಿನಲ್ಲಿ ಇಪ್ಪತ್ತೈದು ಇವೆ. ನಾವಿಂದು ಗಡಿಬಿಡಿಯಲ್ಲಿ ಏಳನ್ನು ಮಾತ್ರ ಹೇಳಿ ಹದಿನೆಂಟನ್ನು ಮರೆತಿದ್ದೇವೆ. ಅದರ ಮೂಲಪಾಠ ಇಲ್ಲಿದೆ –

**ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ**

**ನರ್ಮ್ಮದೇ ಸಿಂಧು ಕಾವೇರಿ ಚಂದ್ರಭಾಗೇ ಚ ಕೌಶಿಕಿ**

**ಸ್ವರ್ಣ್ಣಲೇಖೇ ಕನಖಲೇ ಪಾರಿಭದ್ರೇ ಚ ಗಂಡಕಿ**

**ಶ್ವೇತಗಂಗೇ ಚಂದ್ರಲೇಖೇ ಪಂಪೇ ಚಂಪೇ ಚ ಗೋಮತಿ**

**ಪದ್ಮಾವತಿ ವಿಪರ್ಣ್ಣಾಶೇ ವಿಪಾಶೇ ವಿರಜೇ ಪ್ರಭೇ**

**ಶತಹ್ರದೇ ಚೇಲಗಂಗೇ ಜಲೇಽಸ್ಮಿನ್ ಸನ್ನಿಧಿಂ ಕುರು**

ಸಾಯಂಕಾಲ ನೀರಿನ ಮೇಲೆ ಅರ್ಘ್ಯವನ್ನು ನೀಡಬಾರದು ಎನ್ನುವ ವಿಶೇಷ ವಿಚಾರದ ಜತೆ **ವಾಧೂಲಸ್ಮೃತಿ** ಮಂತ್ರಾಚಮನದಿಂದ ಅರ್ಘ್ಯದಾನದವರೆಗಿನ ಜಪಕ್ರಮಾಂಗವನ್ನು ಹೇಳಿದೆ –

**ಸೂರ್ಯಶ್ಚೇತಿ ಜಲಂ ಪೀತ್ವಾ ದಧಿಕ್ರಾವೇತಿ ಮಾರ್ಜ್ಜಯೇತ್**

**ಪಶ್ಚಾದುಭಾಭ್ಯಾಂ ಹಸ್ತಾಭ್ಯಾಂ ಹ್ಯಾದಾಯಾಪಃ ಸಮಾಹಿತಃ**



**ರವೇರಭಿಮುಖಸ್ತಿಷ್ಠನ್ ತಾರವ್ಯಾಹೃತಿಪೂರ್ವಯಾ**

**ಗಾಯತ್ರ್ಯಾ ಚಾಭಿಮನ್ತ್ರ್ಯಾಥ ನಿಕ್ಷಿಪೇದ್ದ್ವಿಜಸತ್ತಮ**

**ತಿಷ್ಠನ್ ಪಾದೌ ಸಮೌ ಕೃತ್ವಾ ಜಲೇನಾಂಜಲಿಪೂರಣಮ್**

**ಗೋಶೃಂಗಮಾತ್ರಮುದ್ಧೃತ್ಯ ಜಲಮಧ್ಯೇ ಜಲಂ ಕ್ಷಿಪೇತ್**

**ಸಾಯಂಕಾಲೇ ತು ಯೋ ವಿಪ್ರೋ ಜಲೇ ತ್ವರ್ಘ್ಯಂ ವಿನಿಕ್ಷಿಪೇತ್**

**ಸ ಮೂಢೋ ನರಕಂ ಯಾತಿ ಯಾವದಾಭೂತಸಂಪ್ಲವಮ್**

ಗುಡಾಕೇಶಾಸುರ ತಾಮ್ರನಾಗಿ ತಪಗೈದ. ಹರಿ ವರ ನೀಡಿದ ತಾಮ್ರಪಾತ್ರೆಯ ಉಪಯೋಗ ನನಗಿರಲಿ ಎಂದು. ಈ ಕಥೆ ವರಾಹಪುರಾಣದಲ್ಲಿದೆ. ಇದರಿಂದಾಗಿ ತಾಮ್ರದ ಗಿಂಡಿಯಿಂದ ನೀಡಿದ ಅರ್ಘ್ಯೆಯು ಫಲಪ್ರದ ಎನ್ನುವುದಾಗಿ **ಅನುಶಾಸನಪರ್ವ**ದ ಮಾತು –

**ಬಲಿರ್ಭಿಕ್ಷಾ ತಥಾಽರ್ಘ್ಯಂ ಚ ಪಿತೄಣಾಂ ಚ ತಿಲೋದಕಮ್**

**ತಾಮ್ರಪಾತ್ರೇಣ ದಾತವ್ಯಂ ಅನ್ಯಥಾಲ್ಪಫಲಂ ಭವೇತ್**

ತಾಮ್ರ ಬೆಳ್ಳಿ ಚಿನ್ನ ಲೋಹಗಳು ಕ್ರಮವಾಗಿ ಹೆಚ್ಚುಹೆಚ್ಚಿನ ಮೌಲ್ಯವನ್ನು ಲೋಕದಲ್ಲಿ ಪಡೆದಿವೆ. ಹೀಗಿರುವಾಗ ತಾಮ್ರಕ್ಕಿಂತ ಬೆಳ್ಳಿ ಪ್ರಶಸ್ತವೆಂದು ಜಪಾನುಷ್ಠಾನಗಳಲ್ಲಿ ಹರಿವಾಣ ಗಿಂಡಿ ಮುಂತಾದ ಪಾತ್ರೆಗಳಾಗಿ ಬೆಳ್ಳಿಯನ್ನು ಉಪಯೋಗಿಸುವಂತಿಲ್ಲ. **ಸುವರ್ಣ್ಣಂ ರಜತಂ ತಾಮ್ರಂ ಲೋಹಮಿತ್ಯಭಿಧೀಯತೇ** ಎನ್ನುವುದಾಗಿ ಲೋಹದ ತಾರತಮ್ಯವನ್ನು ಹೇಳಿದ್ದು ಪ್ರತಿಮೆಯ ನಿರ್ಮಾಣದಲ್ಲಿ. ತಾಮ್ರದ ಪ್ರತಿಮೆಗಿಂತ ಬೆಳ್ಳಿಯ ಪ್ರತಿಮೆಯು ಶ್ರೇಷ್ಠ. ಬೆಳ್ಳಿಯ ಪ್ರತಿಮೆಗಿಂತ ಚಿನ್ನದ ಪ್ರತಿಮೆಯು ಶ್ರೇಷ್ಠ.

### ತೀರ್ಥನಾಮಚಿಂತನೆ

ಸಂಸಾರಾಸುರನ ನಾಶದಿಂದ ಮೋಕ್ಷದೆಡೆಗೆ ಸಾಗಿಸುವ ಸೊತ್ತು ತೀರ್ಥವೆಂದು **ಪದ್ಮಪುರಾಣ**ವು ಅಕ್ಷರಾರ್ಥದಲ್ಲಿ ಗುರುತಿಸಿದೆ –

**ತೀಃಕಾರೋ ದೈತ್ಯನಾಶಾಯ ಥಕಾರೋ ಮೋಕ್ಷಸಾಧನಮ್**

**ಅಕ್ಷರದ್ವಯಸಂಯುಕ್ತಂ ತೀರ್ಥನಾಮ ಸದೋಚ್ಯತೇ**

# ತರ್ಪಣ

**ಸಂಧ್ಯಾಪೂರ್ವಂ ದ್ವಿರಾಚಾಮೇತ್ ಅರ್ಘ್ಯಾಂತೇ ಚ ದ್ವಿರಾಚಮೇತ್**

ಜಪದ ಆರಂಭದಲ್ಲಿ ಹೇಗೆ ಎರಡು ಬಾರಿ ಆಚಮನೆ ಮಾಡಲಿದೆಯೋ ಹಾಗೆಯೇ ಅರ್ಘ್ಯ ಕೊಟ್ಟ ಬಳಿಕವೂ ಎರಡು ಬಾರಿ ಆಚಮನೆ ನಡೆಸಬೇಕು.

**ತರ್ಪಣಂ ಕೇಶವಾದೀನಾಂ ಸಂಧ್ಯಾರ್ಘ್ಯಾನಂತರಂ ಚರೇತ್**

ವ್ಯಾಸರು ಸಂಧ್ಯಾವಂದನೆಯಲ್ಲಿ ಅರ್ಘ್ಯ ನೀಡಿದ ಬಳಿಕ ಕೇಶವಾದಿ ತರ್ಪಣವನ್ನು ಹೇಳಿದ್ದಾರೆ.

**ಪ್ರದಕ್ಷಿಣಮಥಾಚಾಮಂ ಕೇಶವಾದ್ಯಾದಿತರ್ಪಣಮ್**

**ಶೇಷಸಂಹಿತೆ** ಸದಾಚಾರವನ್ನು ಹೇಳುತ್ತಾ ಅರ್ಘ್ಯೆಯ ಬಳಿಕ ಆತ್ಮಪ್ರದಕ್ಷಿಣೆಯ ಬಳಿಕ ಆಚಮನ ಮಾಡಿ ಕೇಶವಾದಿ ತರ್ಪಣವನ್ನು ಹೇಳಿದೆ. ಇಲ್ಲಿಯೂ ಇತರ ರೂಪಗಳ ಇತರ ದೇವತೆಗಳ ತರ್ಪಣ ಆದಿಪದದೊಳಗೆ ಇಣುಕಿದೆ.

**ತರ್ಪಯೇನ್ಮಂತ್ರರತ್ನೇನ ಶಕ್ತ್ಯಾ ದೇವಂ ಜನಾರ್ದನಮ್** ಎಂದು **ವಸಿಷ್ಠಸ್ಮೃತಿ** ವರಾಹಪುರಾಣವನ್ನು ಉದ್ಧರಿಸಿ ದೇವರ ತರ್ಪಣವನ್ನು ಯಥಾ ಶಕ್ತಿ ನೀಡಲು ಹೇಳಿದೆ. ತರ್ಪಣದ ಸಂಖ್ಯೆಯು ದೇವರ ಅನೇಕ ರೂಪಗಳಿಗೆ ಸಂಬಂಧಿಸಿದೆಂದು ಸೂಚಿತವಾಗುವುದು.

ಗಾಯತ್ರೀಮಂತ್ರಪ್ರಧಾನವಾದ ಸಂಧ್ಯೋಪಾಸನೆಯಲ್ಲಿ ಮುಖ್ಯವಾಗಿ ಗಾಯತ್ರೀಮಂತ್ರಾಕ್ಷರಪ್ರತಿಪಾದ್ಯಗಳಾದ **ಭಗವಂತನ 24** ರೂಪಗಳ ಹೆಸರಿನಿಂದಲೆ ತರ್ಪಣ ನೀಡಬೇಕು. ಇದನ್ನು ಕೃಷ್ಣ–ಶುಕ್ಲ ಪಕ್ಷಭೇದದಿಂದ ಹನ್ನೆರಡು ಮಾತ್ರ ತರ್ಪಣ ಎನ್ನುವುದು ಮುಖ್ಯವೆನಿಸದು. ಹನ್ನೆರಡು ತರ್ಪಣ ಮಾತ್ರ ನೀಡಿದರೆ ಅರ್ಧಗಾಯತ್ರೀಮಂತ್ರೋಪಾಸನೆ ಮಾಡಿದಂತಾಗುವುದು. **ದ್ವಿಗುಣಾ ದ್ವಾದಶಾಕ್ಷರಾತ್** ಎಂದು ವಾಸುದೇವಮಂತ್ರದ ಸಂಬಂಧದಲ್ಲಿ ಗಾಯತ್ರಿಯನ್ನು ಕಂಡರೆ, ವಾಸುದೇವನ ಉಪಾಸನೆಯಂತೆ ಹನ್ನೆರಡು ರೂಪಗಳಿಗೆ ಮಾತ್ರವೇ



ತರ್ಪಣ ಸರಿಯೆನಿಸುವುದು. ಆದರೆ ಇಲ್ಲಿ ಪಕ್ಷಭೇದದಿಂದ ಸಂಕರ್ಷಣಾದಿಗಳನ್ನೂ ತರ್ಪಣಕ್ಕೆ ಉಪಯೋಗಿಸುವುದರಿಂದ 24 ರೂಪಗಳಿಗೂ ತರ್ಪಣವನ್ನು ನೀಡಬೇಕೆನ್ನುವುದು ಸಿದ್ಧಿಸುವುದು.

ಗಾಯತ್ರೀವರ್ಣವಾಚ್ಯಗಳಾದ ಅಗ್ನ್ಯಾದಿ ಬ್ರಹ್ಮಾಂತ 24 ಇತರ ದೇವತೆಗಳಿಗೂ ತರ್ಪಣ ನೀಡಬೇಕು. ದೇವತೆಗಳನ್ನು ಸೂರ್ಯನ ಜೊತೆಯಲ್ಲಿ ಸಂಚರಿಸುವಂತೆ ಶ್ರೀಕೃಷ್ಣನೇ ಆದೇಶಿಸಿರುವನು ಎನ್ನುವುದಾಗಿ ಮಧ್ವಾಚಾರ್ಯರು **ಪರಿಸ್ವಶೋ ಅದಧಾತ್ ಸೂರ್ಯೇಣ** ಎಂಬ ಮಂತ್ರದ ಭಾಷ್ಯದಲ್ಲಿ ತಿಳಿಸಿದ್ದಾರೆ –

**ಸಹೈವ ಸೂರ್ಯೇಣ ಚ ದೇವಸಂಘಾನ್**

**ಚರಾನಜ್ಞಾತ್ವಾನದಧಾತ್ ವಾಸುದೇವಃ**

**ತರ್ಪಯಿತ್ವಾ ಸುರಾದಿಕಾನ್** ಎಂದು ಮಧ್ವಾಚಾರ್ಯರು ಸಂಧ್ಯಾವಿಧಿಯಲ್ಲಿ ಹೇಳಿದ ಸುರಾದಿಗಳೇ ವೇದದಲ್ಲಿ ಸೂರ್ಯನ ಜೊತೆ ಹೇಳಲ್ಪಟ್ಟ ದೇವತೆಗಳು. ಇಲ್ಲದಿದ್ದರೆ ಕೇಶವಾದಿಗಳು ಮಾತ್ರ ತರ್ಪಣದವರಾಗಿದ್ದರೆ **ಕೇಶವಾದೀಂಶ್ಚ ತರ್ಪಯೇತ್, ತರ್ಪಯೇತ್ ಕೇಶವಾದಿಕಾನ್** ಎಂದೋ ಹೇಳಬಹುದಿತ್ತು. ಸುರಾದಿಕಾನ್ ಎನ್ನುವ ಪದದಿಂದ ಅಗ್ನಿ ಆರಂಭದವನಾಗುವನು. **ಅಗ್ನಿರ್ದೇವಾನಾಮಭವತ್ ಪುರೋಗಾಃ** ಎಂಬ ಶ್ರುತಿ ಸುರಾದಿ ಎನ್ನುವುದಾಗಿ ಅಗ್ನಿಯನ್ನು ಪರಿಚಯಿಸಿದೆ. **ಅಗ್ನಿಮುಖಾ ವೈ ದೇವಾಃ** ಎನ್ನುವುದು ಈ ಅಭಿಪ್ರಾಯದಿಂದಲೂ. ಯಕ್ಷನ ಪರೀಕ್ಷೆಯಲ್ಲಿ ಮೊದಲು ನಡೆದವನು ಅಗ್ನಿ. ಕಣ್ಮರೆಯಾದ ಇಂದ್ರನ ಅನ್ವೇಷಣೆಯಲ್ಲಿ ದೇವತೆಗಳಿಂದ ಕಳುಹಿಸಲ್ಪಟ್ಟವನು ಅಗ್ನಿ.

ನೀರ ತರ್ಪಣದಲ್ಲಿ ಅಗ್ನಿಗೇಕೆ ಮೊದಲ ಸತ್ಕಾರವೆಂಬ ಪ್ರಶ್ನೆಗೆ ಮಹಾಭಾರತ ಉತ್ತರಿಸಿದೆ. ಆತ ಭೂತಪ್ರಥಮನೆಂದೂ ಪ್ರಥಮಸ್ವೀಕೃತಿ ಯೋಗ್ಯನೆಂದೂ ಸಾಧಕನಿಗೆ ಅಗ್ರಪಟ್ಟ ನೀಡುವವನೆಂದೂ ಕೃಷ್ಣನೇ ತಿಳಿಸಿದ್ದಾನೆ–

**ಯಸ್ಮಾದಗ್ರೇ ಸ ಭೂತಾನಾಂ ಸರ್ವೇಷಾಂ ನಿರ್ಮ್ಮಿತೋ ಮಯಾ**

**ತಸ್ಮಾದಗ್ನೀತ್ಯಭಿಹಿತಃ ಪುರಾಣಜ್ಞೈರ್ಮ್ಮನೀಷಿಭಿಃ**



**ಯಸ್ಮಾತ್ತು ಸರ್ವಕೃತ್ಯೇಷು ಪೂರ್ವಮಸ್ಮೈ ಪ್ರದೀಯತೇ**

**ಆಹುತಿರ್ದ್ರೀಷ್ಯಮಾನಾಯ ತಸ್ಮಾದಗ್ನೀತಿ ಕಥ್ಯತೇ**

**ಯಸ್ಮಾಚ್ಚ ತು ನಯತ್ಯಗ್ರ್ಯಾಂ ಗತಿಂ ವಿಪ್ರಾನ್ ಸುಪೂಜಿತಃ**

**ಯಸ್ಮಾಚ್ಚ ನಯನಾದ್ರಾಜನ್ ದೇವೇಷ್ವಗ್ನೀತಿ ಕಥ್ಯತೇ**

ಹೀಗೆಯೇ ಸುರಾದಿಕ ಶಬ್ದವು ಆದಿಸುರನನ್ನು ಕಕಾರವಾಚ್ಯನನ್ನು ಹೇಳುವ ಮೂಲಕ ಬ್ರಹ್ಮನನ್ನು ಅರ್ಥೈಸುತ್ತದೆ. ಆತನು ದೇವೋತ್ತಮನು. ಹೀಗೆ ಅಗ್ನ್ಯಾದಿ ಬ್ರಹ್ಮಾಂತವಾದ ತರ್ಪಣವೂ ತಿಳಿದುಬರುವುದು. ಅವರ ಪಟ್ಟಿ ಇಲ್ಲಿದೆ. ಇದರಲ್ಲಿ ನಾರಾಯಣ ಬಂದಿಲ್ಲ. ದೇವತೆಗಳು ಮಾತ್ರ. ಕೆಲವರು ಸಮಷ್ಟಿಯಾಗಿ ಗುರುತಿಸಲ್ಪಟ್ಟಿದ್ದಾರೆ. ಅವರ ಗುಂಪನ್ನು ಒಂದಾಗಿ ಪರಿಗಣಿಸಬೇಕು. ವರುಣ ಪ್ರತ್ಯೇಕವಾಗಿ ನಾಮತಃ ಹೇಳಲ್ಪಟ್ಟಿದ್ದಾನೆ. ಆದ್ದರಿಂದ ಇಲ್ಲಿ ಜಲಪತಿ ಎಂದರೆ ಬುಧನಾಗುವನು. ಇಲ್ಲಿ ಹೇಳಿದ ಗಂಧರ್ವ ಪದದಿಂದ ಗರುಡನನ್ನು ಅರ್ಥೈಸಿಕೊಳ್ಳಬಹುದು. (ಕೆಲವೆಡೆ ವಿಷ್ಣುವನ್ನೂ ಅಕ್ಷರದೇವತೆಯಾಗಿ ಹೇಳಿದ್ದು ಕಂಡು ಬರಲಿದೆ. ಅಲ್ಲಿ ಜಲಪತಿ ಶಬ್ದದಿಂದ ಬುಧನನ್ನು ಪರಿಗ್ರಹಿಸಲಿಲ್ಲ. ಇದು ಪ್ರತ್ಯೇಕವಾದ ಉಪಾಸನೆಗೆ ಸಂಬಂಧಿಸಿದೆ).

**ಅಗ್ನಿರ್ವಾಯೂ ರವಿರ್ವಿದ್ಯುತ್ ಯಮೋ ಜಲಪತಿರ್ಗುರುಃ**

**ಪರ್ಜನ್ಯ ಇಂದ್ರೋ ಗಂಧರ್ವಃ ಪೂಷಾ ಚ ತದನಂತರಮ್**

**ಮಿತ್ರೋಽಥ ವರುಣಸ್ತ್ವಷ್ಟಾ ವಸವೋ ಮರುತಸ್ತಥಾ**

**ಸೋಮ ಆಂಗಿರಸಶ್ಚೈವ ವಿಶ್ವೇದೇವಾಸ್ತಥಾಶ್ವಿನೌ**

**ಪ್ರಜಾಪತಿಃ ಸರ್ವದೇವಾಃ ರುದ್ರೋ ಬ್ರಹ್ಮಾ ಚ ದೇವತಾಃ**

ಅಗ್ನಿಪುರಾಣವು ಅಕ್ಷರದೇವತೆಗಳಾಗಿ ಇವರನ್ನೇ ಹೇಳಿದೆ. ಅಲ್ಲಿ ಪ್ರಜಾಪತಿಯನ್ನು 'ಕ'ಕಾರದಿಂದ ತಿಳಿಸಿದೆ. ಅಂದರೆ ದಕ್ಷನೆಂದು ಅರ್ಥ.

ಗಾಯತ್ರೀ ಜತೆಗೆ ವ್ಯಾಹೃತಿ ಹಾಗೂ ಪ್ರಣವವನ್ನು ಸೇರಿಸಿ ವಿಶ್ವಾಮಿತ್ರ ಗಾಯತ್ರಿಯನ್ನೆ ಸಂಧ್ಯೆಯಲ್ಲಿ ಜಪಿಸುವುದರಿಂದ ವ್ಯಾಹೃತಿ ಪ್ರತಿಪಾದ್ಯಗಳಾದ ಭಗವಂತನ **ವಾಸುದೇವಾದಿ ನಾಲ್ಕು ಮೂರ್ತಿಗಳ** ಹೆಸರಿನಿಂದಲೂ



ಪ್ರಣವವಾಚ್ಯಗಳಾದ **ವಿಶ್ವಾದಿ 8 ರೂಪಗಳ** ಹೆಸರಿನಿಂದಲೂ ತರ್ಪಣ ಕೊಡಬೇಕು. (ಸಂಕರ್ಷಣ ಪ್ರದ್ಯುಮ್ನ ಅನಿರುದ್ಧರು ಮತ್ತು ವಿಶ್ವಾದಿಗಳು ಬೇರೆ ದೇವತೆಗಳೂ ಇದ್ದಾರೆ. ಅವರನ್ನಿಲ್ಲಿ ತರ್ಪಣಕ್ಕೆ ಹೇಳಿದ್ದಲ್ಲ.) ಪ್ರಣವದೊಳಗೆ ಐವತ್ತಕ್ಷರಗಳೂ ಸೇರಿವೆಯಾದ್ದರಿಂದ **ಅಜಾದಿಮೂರ್ತಿ**ಗಳನ್ನೂ ತರ್ಪಣದಲ್ಲಿ ಸೇರಿಸಬೇಕು, ಗಾಯತ್ರೀಮಂತ್ರಪದಪ್ರತಿಪಾದ್ಯ **ಮತ್ಸ್ಯಾದಿ ದಶನಾಮ**ಗಳಿಂದಲೂ ತರ್ಪಣವನ್ನು ನೀಡಬೇಕು. ಮಧ್ವಾಚಾರ್ಯರು ತಂತ್ರಸಾರಸಂಗ್ರಹದಲ್ಲಿ ಕಲಶದಲ್ಲಿ ನೋಡಬೇಕಾದ ನೂರು ರೂಪಗಳನ್ನು ಹೇಳುವಲ್ಲಿ ಇವನ್ನೆಲ್ಲಾ ತಿಳಿಸಿದ್ದಾರೆ. ಅಲ್ಲಿ ಹೇಳಿರುವ ಮತ್ತೆರಡು ವಿಶೇಷ ರೂಪಗಳು **ವ್ಯಾಸ** ಮತ್ತು **ದತ್ತ**. ವೇದವನ್ನು ನೀಡಿದ ಹಿನ್ನೆಲೆಯಲ್ಲಿ ಗಾಯತ್ರಿಯು ವೇದಸಾರವೆನಿಸಿ, ಅದರ ಮೂಲಗುರುಗಳಾಗಿ ವ್ಯಾಸರಿಗೂ ತರ್ಪಣ ಯೋಗ್ಯವೆನಿಸಿದೆ. ಗಾಯತ್ರಿಯ ಮಂತ್ರದಲ್ಲಿ ಪ್ರತ್ಯಾಹಾರದ ಜೊತೆಗೆ ಧ್ಯಾನವನ್ನು ಹೇಳಿದ್ದರಿಂದ ಈ ಯೋಗಕ್ಕೆ ಮೂಲಗುರುವಾದ ದತ್ತನೂ ಇಲ್ಲಿ ತರ್ಪಣಯೋಗ್ಯನು. ಯೋಗ ಶಬ್ದಕ್ಕೆ ಮಂತ್ರವೆಂದೂ ಅರ್ಥವಿದೆ ತಾನೆ. ಯತಿಪ್ರಣವಕಲ್ಪದಲ್ಲಿ ಆಚಾರ್ಯಮಧ್ವರು ಹೇಳಿದಂತೆ ಪ್ರಣವಮೂರ್ತಿಗಳೆನಿಸಿದ ರಾಮಕೃಷ್ಣವರಾಹನರಸಿಂಹರು ದಶಾವತಾರದಲ್ಲಿ ಸೇರುತ್ತಾರೆ. ಅವರನ್ನು ಹೊರತುಪಡಿಸಿ ಇನ್ನುಳಿದ ನಾಲ್ವರು **ವಿಷ್ಣು ಪರಂಜ್ಯೋತಿ ಪರಂಬ್ರಹ್ಮ ವಾಸುದೇವರು** ಇಲ್ಲಿ ತರ್ಪಣಕ್ಕೆ ಸೇರುವರು.

**ಭಾಗವತತಾತ್ಪರ್ಯ**ದಲ್ಲಿ ಆಚಾರ್ಯಮಧ್ವರು ನಾರಾಯಣನ ನವಶಕ್ತಿ ರೂಪಗಳನ್ನು ತಿಳಿಸಿರುತ್ತಾರೆ –

**ನಾರಾಯಣಃ ಪರಂಬ್ರಹ್ಮ ವಾಸುದೇವಾದಿಕಾಸ್ತಥಾ**
**ನಾರಸಿಂಹವರಾಹೌ ಚ ಪರಂಜ್ಯೋತಿರ್ಹರೇರ್ನ್ನವ**

ಇದರಲ್ಲಿ ಪ್ರಣವಪ್ರತಿಪಾದ್ಯಗಳಾದ ಪರಂಜ್ಯೋತಿ ಮತ್ತು ಪರಂಬ್ರಹ್ಮರೂಪಗಳು ಕಾಣಸಿಗುತ್ತವೆ. ಕೇಶವಾದೀನ್ ಎಂಬಲ್ಲಿನ ಆದಿಪದವು ಕೇಶವರೂಪಕ್ಕಿಂತಲೂ ಮೊದಲು ಅಭಿವ್ಯಕ್ತಗೊಂಡ ರೂಪಗಳು ಎಂಬ ಅರ್ಥವನ್ನೂ ಕೊಡಲಿವೆ. ಕೇಶವ ನಾರಾಯಣ ಮುಂತಾದ 24 ರೂಪಗಳು



ಗಾಯತ್ರಿಯಲ್ಲಿ ಅಭಿವ್ಯಕ್ತಗಳು. ಗಾಯತ್ರಿಗಿಂತ ಮೊದಲು ವಾಸುದೇವದ್ವಾದಶಾಕ್ಷರ, ನಾರಾಯಣಾಷ್ಟಾಕ್ಷರ, ಮಾತೃಕೆಗಳು ಮತ್ತು ಪ್ರಣವಮಂತ್ರಗಳು ಅಭಿವ್ಯಕ್ತಗಳಾಗಿವೆ. ಹೀಗೆ ಅವುಗಳ ರೂಪವಿಶೇಷಗಳೂ ಮೊದಲು ಅಭಿವ್ಯಕ್ತಗೊಂಡಿವೆ.

**ಬೃಹದಾರಣ್ಯಕಭಾಷ್ಯ**ದಲ್ಲಿ ಮಾಧವ, ಗೋವಿಂದ ವಿಷ್ಣು, ಮಧುಸೂದನ, ತ್ರಿವಿಕ್ರಮ, ವಾಮನ, ಶ್ರೀಧರ ಹೃಷೀಕೇಶರನ್ನು ಪ್ರಣವವಾಚ್ಯಗಳಾಗಿ ತಿಳಿಸಿದ್ದಾರೆ. ಇವರು 24 ರೂಪಗಳಲ್ಲಿಯೇ ಸೇರುವವರು. ಹೀಗಾಗಿ ಪ್ರತ್ಯೇಕ ತರ್ಪಣ ಬೇಕಾಗಿಲ್ಲ –

**ಪದ್ಮನಾಭಾದಿಕಾ ಏವ ಮೂರ್ತೀರ್ನ್ನಾರಾಯಣೋತ್ತರಾಃ**
**ಪ್ರಣವೋಽಯಂ ವದತ್ಯಷ್ಟೌ ತಸ್ಮಾನ್ಮಾಮಾನ್ಯಾಭಿಧಾಯಕಃ**

ಸೂರ್ಯಮಂಡಲದೊಳಗಿನ ನಾರಾಯಣನ ಚಿಂತನೆಯಲ್ಲಿ ಗಾಯತ್ರೀಮಂತ್ರ ಮಾಧ್ಯಮವೆನಿಸಿದೆ. ಗ್ರಹಮಂಡಲಗಳೆಲ್ಲಾ ಸೂರ್ಯಕೇಂದ್ರಿತ ವಾಗಿವೆ. ಇದರಿಂದ ನವಗ್ರಹಗಳಿಗೂ ತರ್ಪಣವಿದೆ. ಮುಖ್ಯವಾಗಿ ಗ್ರಹಗೋಳವನ್ನು ಹಿಡಿದಿಟ್ಟ **ಶಿಂಶುಮಾರ**ನಿಗೆ ತರ್ಪಣ ನೀಡಬೇಕು. ಹೀಗೆ ಕಲಶರೂಪಗಳು ನೂರು. ಕ ಎಂದರೆ ಉದಕ ಅಂದರೆ ನೀರು. ಹೀಗೆ ನೀರಿನಲ್ಲಿ ಪವಡಿಸಿದವನು ನಾರಾಯಣನು. ಕ ಎಂದರೆ ಕಿರಣವೂ. ಸೂರ್ಯಕಿರಣಗಳಲ್ಲಿ ಶೋಭಿಸುವವನು ನಾರಾಯಣನು. ಶ ಎಂದರೆ ಸುಖವು. ಕಲೆ ಎಂದರೆ ರೂಪವು. ಹೀಗೆ ಆನಂದಮಯವಾದ ನೂರು ರೂಪಗಳು ಶಕಲಗಳು, ಕಲಶಗಳು. ಕಲಶ ಶಬ್ದದ ಅರ್ಥವೇ ಸುರ. ರ ಎಂದರೆ ರಮಣ, ರತಿ, ಆನಂದ. ಸು+ರ ಸ್ವರೂಪಭೂತವಾದ ಪೂರ್ಣರೂಪದ ದೋಷವಿಲ್ಲದ ನಿತ್ಯವಾದ ಆನಂದವುಳ್ಳವನು ಸುರನು ಕಲಶನು. ಈ ಅರ್ಥದಲ್ಲಿ ತರ್ಪಣ ವಿಚಾರವನ್ನು **ಸುರಾದಿಕಾನ್ ತರ್ಪಯಿತ್ವಾ** ಎಂದೇ ಆಚಾರ್ಯಮಧ್ವರು ಸೂಚಿಸಿದ್ದಾರೆ. **ಕೇಶವಾದೀಂಶ್ಚ ತರ್ಪಯೇತ್** ಎಂದು ಹೇಳಲಿಲ್ಲ.

ಗಾಯತ್ರಿಯ ಮೂರು ಪಾದವು ಮೂರು ವೇದಗಳ ಸಾರವು. ಜಪದ ಗಾಯತ್ರಿಯಲ್ಲಿ ಸೇರಿದ ಪ್ರಣವ ಮತ್ತು ವ್ಯಾಹೃತಿಗಳು ಇನ್ನೆರಡು



ವೇದಗಳ ಸಾರಗಳು. ಹೀಗೆ ಪಂಚವೇದಗಳಿಗೂ ತರ್ಪಣವಿದೆ. ಪಂಚವೇದಗಳ ವಿನಿಯೋಗವು ಆಚಮನದಲ್ಲಿ ಮತ್ತೆ ಮತ್ತೆ ಬರಲಿದೆ. ಧಾರ್ಮಿಕ ಆಚರಣೆಗಳ ಮತ್ತು ಧರ್ಮಾಧ್ಯಕ್ಷನ ಯಥಾರ್ಥ ಚಿಂತನೆಯಲ್ಲಿ ಈ ಪಂಚವೇದಗಳನ್ನೇ ಪ್ರಮಾಣವನ್ನಾಗಿ ಉಪಯೋಗಿಸಿ ಬಿಡುಗಡೆಯನ್ನು ಪಡೆಯುವರೆನ್ನುವುದಾಗಿ **ಮಹಾಭಾರತ** –

**ಪ್ರಮಾಣಮಿತಿಹಾಸಂ ಚ ವೇದಾನ್ ಕುರ್ವಂತಿ ಯೇ ದ್ವಿಜಾಃ**

**ತೇ ಯಾಂತ್ಯಮರಸಾಯುಜ್ಯಂ ನಿತ್ಯಮಾಸ್ತಿಕ್ಯಬುದ್ಧಯಃ**

**ಕೂರ್ಮಪುರಾಣ** ಅರ್ಘ್ಯಾನಂತರ ಆತ್ಮಪರಿಷೇಕ ನಡೆಸಿದ ಮೇಲೆ ಕೇಶವಾದಿ ತರ್ಪಣವನ್ನು ನೀಡಲು ಸ್ಪಷ್ಟ ಹೇಳಿದೆ. ಬಳಿಕ ಆಚಮನವನ್ನು ಮಾಡಬೇಕು –

**ಪರಿಷೇಕಂ ತತಃ ಕುರ್ಯಾತ್ ಪ್ರಾದಕ್ಷಿಣ್ಯಂ ಸಮಾಚರೇತ್**

**ಸಂತರ್ಪ್ಯ ಕೇಶವಾದೀಂಸ್ತಾನ್ ಆಚಾಮಂ ತು ಸಮಾಚರೇತ್**

**ಗ್ರಹಾನ್ ವಾರಾದಿದೇವಾಂಶ್ಚ ವೇದಾದೀಂಶ್ಚ ಪ್ರತರ್ಪ್ಪಯೇತ್**

ವಾರೇಶರಾದ ಸೂರ್ಯಾದಿ ಗ್ರಹರನ್ನಷ್ಟೆ ಇಲ್ಲಿ ತಿಳಿಸಿದ್ದು. ಆದಿ ಪದದಿಂದ ದಿಗಧಿಪರೂ ಅರ್ಥವಾಗುತ್ತಾರೆ. ಕೇಶವಾದಿ ಮತ್ತು ನವಗ್ರಹಾದಿ ತರ್ಪಣಗಳನ್ನು ಎಲ್ಲ ಮತದವರೂ ನೀಡುತ್ತಾರೆ.

ಮಧ್ವಾಚಾರ್ಯರು ಹೇಳಿದ **ಸುರಾದಿಕ** ಶಬ್ದದಿಂದ ಇಂದ್ರಾದಿದಿಕ್ಪಾಲರನ್ನೂ, ನವಗ್ರಹರನ್ನೂ ಅರ್ಥೈಸಿಕೊಳ್ಳಬೇಕು. ಇಂದಿಗೂ ಈ ಎಲ್ಲ ರೂಪಗಳಿಗೆ ತರ್ಪಣ ನೀಡುವ ಜಪನಿಷ್ಠರನ್ನು ನಾವು ಅಲ್ಲಲ್ಲಿ ಕಾಣಬಹುದಾಗಿದೆ. ಇಂದ್ರಾದಿಗಳು ದಿಕ್ಪಾಲರಾಗಿ ತರ್ಪಣಕ್ಕೆ ಯೋಗ್ಯರಾಗುವುದಕ್ಕಿಂತ ಹೆಚ್ಚು ಗಾಯತ್ರಿಯ ಅಕ್ಷರದೇವತೆಗಳಾಗಿ ತರ್ಪಣದಲ್ಲಿ ಪ್ರವೇಶವನ್ನು ಪಡೆದಿದ್ದಾರೆ. ದಿಕ್ಪಾಲರಲ್ಲಿ **ನಿರ್ಋತಿ** ಮತ್ತು **ಕುಬೇರ** ಅಕ್ಷರದೇವತೆಗಳಾಗಿ ಬರಲಿಲ್ಲ. ಇವರಿಬ್ಬರಿಗೆ ಪ್ರತ್ಯೇಕ ತರ್ಪಣ. ನವಗ್ರಹಗಳಲ್ಲಿ ರವಿ–ಸೋಮ–ಬುಧ–ಗುರುಗಳು ಅಕ್ಷರದೇವತೆಗಳಾಗಿ ಬಂದದ್ದರಿಂದ ಅವರನ್ನು ಬಿಟ್ಟು 5 ಮಂದಿಗೆ–**ಕುಜ ಶುಕ್ರ ಶನಿ ರಾಹು ಕೇತು**ಗಳಿಗೆ



ತರ್ಪಣ. ಹೀಗೆ ತರ್ಪಣ ಸ್ಂಖ್ಯೆ 100 ಅಂದರೆ ಶತಕಲೆಗಳು+ನಾರಾಯಣ (ಮೂಲರೂಪ)+24 ಅಕ್ಷರದೇವತೆಗಳು+2 ದಿಗೀಶರು+5 ಗ್ರಹಗಳು.

ಗಾಯತ್ರೀಪ್ರತಿಪಾದ್ಯರೂಪಗಳು ಮಂತ್ರಮೂರ್ತಿಗಳಷ್ಟೇ ಅಲ್ಲದೆ, ಛಂದೋಗೋಪನಿಷತ್ತು ಹೇಳಿದಂತೆ **ಹಯಗ್ರೀವಸ್ತ್ರೀರೂಪ** ಮತ್ತು **ಗಾಯತ್ರೀನಾಮಕ ಸ್ತ್ರೀರೂಪ**. ಹಾಗೆಯೇ **ಪೃಥಿವೀನಾಮಕ ಸ್ತ್ರೀರೂಪ**, ಮತ್ತೆ ಶರೀರ – **ಹೃದಯ** ರೂಪಗಳು. ಇವನ್ನೆಲ್ಲಾ ಮಧ್ವಾಚಾರ್ಯರು ಭಾಷ್ಯದಲ್ಲಿ ಸತ್ತತ್ವಪ್ರಮಾಣದಿಂದ ಸಾದರಪಡಿಸಿದ್ದಾರೆ –

**ಗಾಯತ್ರ್ಯಾಂ ಸಂಸ್ಥಿತೋ ವಿಷ್ಣುಃ ಸ್ತ್ರೀರೂಪಃ ಸೂರ್ಯಸಪ್ರಭಃ**
**ದ್ವಿತೀಯಶ್ಚೈವ ಮತ್ಸ್ಯಾದಿಃ ಭೂತನಾಮಾವತಾರಗಃ**
**ತೃತೀಯೋ ವಾಚಿ ಸಂಸ್ಥಶ್ಚ ಸ್ತ್ರೀರೂಪೋ ಹಯಶೀರ್ಷಕಃ**
**ಚತುರ್ಥಃ ಪೃಥಿವೀಸಂಸ್ಥಃ ಸ್ತ್ರೀರೂಪಃ ಪೀತವರ್ಣ್ಣಕಃ**
**ಜೀವಸ್ಯಾಂತರ್ಗ್ಗತೋ ವ್ಯಾಪ್ಯ ಶರೀರಮಿತಿ ನಾಮಕಃ**
**ಪಂಚಮಃ ತದ್‌ಹೃದಿಸ್ಥಶ್ಚ ಷಷ್ಠೋ ಹೃದಯನಾಮಕಃ**
**ಗಾಯತ್ರೀನಾಮಕೋ ವಿಷ್ಣುಃ ಏವಂ ಷಡ್ವಿಧ ಉಚ್ಯತೇ**

ಹೃದಯ ಮತ್ತು ಶರೀರರೂಪ ಆತ್ಮಾಂತರಾತ್ಮ ರೂಪಗಳಂತೆ ಎಂದು ಅರ್ಥೈಸಬಹುದು. ಒಳಹೊರಗಿನ ಕಾಲಪುರುಷರೂಪಗಳೆಂದೂ ಪರಿಚಯಿಸಿಕೊಳ್ಳಬಹುದು. ಹೀಗೆ ತರ್ಪಣದಲ್ಲಿ ಹಯಗ್ರೀವ ಗಾಯತ್ರೀ ಪೃಥಿವೀ ಶರೀರ ಹೃದಯ ನಾಮಕರೈವರು ಸೇರುವರು.

**ಉಪಸ್ಥಾಯಾರ್ಕ್ಕಮುದ್ಯಂತಂ ತರ್ಪ್ಪಯಿತ್ವಾತ್ಮನಃ ಕಲಾಃ** ಎನ್ನುವುದಾಗಿ ಭಾಗವತವು ಕೃಷ್ಣನ ಜಪವನ್ನು ಉಲ್ಲೇಖಿಸಿದೆ. ಇಲ್ಲಿ ತನ್ನ ರೂಪಗಳಿಗೆ ಕೃಷ್ಣ ತರ್ಪಣ ನೀಡಿದ ಎನ್ನುವ ಮಾತು ಇದೆ. ಕೃಷ್ಣನ ಜಪದಲ್ಲಿ ಬೇರೆಯವರಿಗೆ ತರ್ಪಣ ಇರದು ಎನ್ನುವ ವಿಶೇಷಾಂಶದಲ್ಲಿ ತನ್ನ ರೂಪಗಳಿಗೇನೆ ತರ್ಪಣವಿತ್ತ ಎನ್ನುವುದು ಅರ್ಥೈಸಬಹುದು. ಆದರೆ ಅದಕ್ಕಿಂತ ಹೆಚ್ಚು ಸೂಕ್ತ ಅರ್ಥ ಎಲ್ಲರೂ ತನ್ನ ರೂಪಗಳಿಗೆ ತರ್ಪಣ ನೀಡಬೇಕೆನ್ನುವ ಸೂಚನೆ ಶ್ರೀಕೃಷ್ಣನದ್ದು. ಇದಕ್ಕಾಗಿ



ಭಾಗವತವು ರೂಪ, ಮೂರ್ತಿ ಈ ಪದಗಳ ಬದಲಿಗೆ ಕಲೆ ಶಬ್ದವನ್ನು ಬಳಸಿದೆ. ಇದು ಕಲಶಕ್ಕೆ ಹೇಳಿದ ಶಬ್ದ. ಹೀಗಾಗಿ **ಭಾಗವತ ಆರಂಭದಲ್ಲಿ ಸಾದರಪಡಿಸಿದ ಭಗವಂತನ ಇಪ್ಪತ್ನಾಲ್ಕು ರೂಪಗಳು** ಗಾಯತ್ರಿಯ ಇಪ್ಪತ್ನಾಲ್ಕು ಅಕ್ಷರಪ್ರತಿಪಾದ್ಯಗಳು ಮುಖ್ಯವಾಗಿ ಆಗಿವೆ. ಅಲ್ಲಿನ ಆವೇಶರೂಪಗಳನ್ನು ಹೊರತುಪಡಿಸಿ ಮುಂದೆ ಹೇಳುವ ಭಗವದ್ರೂಪಗಳನ್ನು ಸೇರಿಸಿ ಹೀಗೆ ಭಾಗವತದಲ್ಲಿ ಬಂದ ಭಗವಂತನ 24 ರೂಪಗಳಿಗೂ ತರ್ಪಣ ನೀಡಬೇಕು. **ಗರುಡಪುರಾಣವು** ಆರಂಭದಲ್ಲಿ ಈ ರೂಪಗಳನ್ನು ಬಣ್ಣಿಸಿದೆ. ಕೆಲವು ರೂಪಗಳು ಮತ್ಸ್ಯಾದಿಗಳಲ್ಲಿ ಸೇರಿಕೊಂಡಿವೆ. ಉಳಿದವುಗಳನ್ನು ಸೇರಿಸಿದರಾಯಿತು. **ಷಟ್ಕುಕ್ಷಿಃ** ಎಂಬ ಮಾತಿನಿಂದ ಗಾಯತ್ರಿಯ ಅರ್ಥರೂಪರಾಗಿ ಎಲ್ಲ ಅವತಾರಗಳು ಚಿಂತನೆಯಲ್ಲಿ ಬಂದಿವೆ.

ಧ್ಯಾನರೂಪದ ಗಾಯತ್ರೀ ಚಿಂತನೆಗೆ ಸಾಧನೆಗಳ ಸೋಪಾನವನ್ನು ನೀಡಿದ **ಕಪಿಲನೂ** ಅರ್ಥನಾಗುವನು. ಸಾಧನೆಯ ಯಮವಾಗಿ ಬ್ರಹ್ಮಚರ್ಯಕ್ಕೆ ಕಾರಣನಾಗಿ **ಸನತ್ಕುಮಾರನು,** ಜಪಯಜ್ಞಕ್ಕೆ **ಯಜ್ಞರೂಪನೂ** ನಿಲುಕುವನು. ಗಾಯತ್ರೀಮಂತ್ರದ ಮೂಲಸಂಹಿತೆಯಾದ ಐತರೇಯಸಂಹಿತೆಯ ಮೂಲ ಪುರುಷ **ಮಹಿದಾಸ** ಇಲ್ಲಿದ್ದಾನೆ. ಜಪ ಮಾಡುವ ನಮ್ಮ ನೆಲೆ ಭಾರತದೇಶ. ಅದರ ಒಡೆಯರಾಗಿ **ನರನಾರಾಯಣರು.** ಅವರ ಸಹೋದರರು **ಹರಿ-ಕೃಷ್ಣರು.** ಯಾದವಕೃಷ್ಣನ ಹಿಂದಿನ ಅವತಾರ **ಪೃಶ್ನಿಗರ್ಭ** - ವೇದಸಾರಗಾಯತ್ರಿಗೆ ವೇದಗರ್ಭನು. ಪೃಶ್ನಿಗರ್ಭನಾಗಿ ತಾನೇ ವಸುದೇವ - ದೇವಕಿಯರಿಗೆ ಹುಟ್ಟಿದ್ದೆ ವಾಮನನಂತೆ ಎನ್ನುವನು ಶ್ರೀಕೃಷ್ಣ. ಆತ್ಮಯೋಗವನ್ನು ಹೇಳಿದ **ಹಂಸ** ಧೀಪ್ರಚೋದನೆಗೆ. ಧೀಗತ ಮೋಹ ಅಪನಯಕ್ಕೆ **ಧನ್ವಂತರೀ ಮೋಹಿನಿಯರು.** ಜಪದಿಂದ ಬರಬಹುದಾದ ಸಕಲ ಗುಣಗಳ ಪ್ರದಾನ **ಋಷಭನಿಂದ.** ಜಪತಪಾನುಷ್ಠಾನಗಳಿಗೆ ಎಚ್ಚರ ನೀಡುವವ **ತಾಪಸ.** ನಮ್ಮೆಲ್ಲರ ರಕ್ಷಣೆಯಲ್ಲಿ ನೆಲೆಗೊಂಡ ತ್ರಿಮೂರ್ತಿಗಳಲ್ಲಿನ **ವಿಷ್ಣು.** ಎಲ್ಲರೊಳಗಿರುವ **ಪುರುಷ.**

**ತಸ್ಯಾಹಂ ಹಂಸರೂಪೇಣ ಸಕಾಶಮಗಮಂ ತದಾ** ಎನ್ನುವುದಾಗಿ ಕೃಷ್ಣ ತಾನೇ ಹಂಸನಾಗಿ ಚತುರ್ಮುಖನ ಬಳಿ ಸನಕಾದಿಗಳನ್ನೂ ಬೋಧಿಸಲು



ಬಂದಿದ್ದೇನೆ ಎನ್ನುವನು. ಹೀಗೆ ಇತರ ಅವತಾರರೂಪಗಳ ಬಗ್ಗೆ ಪುರಾಣಗಳಲ್ಲಿನ ಮಾತುಗಳನ್ನು ಮೇಳೈಸಿಕೊಳ್ಳಬೇಕು. ಹೀಗೆ ಪ್ರಾಚೀನ ಅವತಾರಗಳಿಗೆಲ್ಲ ಅರ್ಥ ಗಾಯತ್ರೀ ಆಗಲಿದೆ. ಈ ಎಲ್ಲ ರೂಪಗಳಿಗೂ ತರ್ಪಣ ಇದೆ.

ಅಜಾದಿ 51 ರೂಪಗಳ ಕೇಶವಾದಿ 24 ಮೂರ್ತಿಗಳ ದಶಾವ ತಾರಗಳ ಮತ್ತು ಇತರ ಅವತಾರಗಳ ಚತುರ್ವ್ಯೂಹರೂಪಗಳ ಮತ್ತು ವಿಶ್ವಾದ್ಯಷ್ಟರ ಚಿಂತನೆಗಳು, ಲಕ್ಷಣಗಳು, ರೂಪವೈವಿಧ್ಯಗಳು, ಆಯುಧಗಳು ನನ್ನ ಮೂರ್ತಿಸಮೀಕ್ಷಾಗಳಲ್ಲಿ ಮತ್ತು ತಂತ್ರಸಮೀಕ್ಷಾದಲ್ಲಿ ಹಾಗೂ ಅವತಾರಸಮೀಕ್ಷಾದಲ್ಲಿ ಬಂದಿರುವವುಗಳು ಇಲ್ಲಿ ಕಲೆತಿಲ್ಲ. ನನ್ನ **ಅಕ್ಷರ** ಹೊತ್ತಗೆಯಲ್ಲಿ ಅಜಾದಿನಾಮಗಳಿಗೆ ಪ್ರಮಾಣವಿದೆ.

ಜಪಕ್ರಮವನ್ನು ಹೇಳುವ ಕೆಲವು ಹೊತ್ತಗೆಗಳಲ್ಲಿ ಸಂಧ್ಯಾ ಗಾಯತ್ರೀ ಮುಂತಾದ ಸ್ತ್ರೀವಾಚಕಪದಗಳಿಂದ ತರ್ಪಣವನ್ನು ಹೇಳಲಾಗಿದೆ. ಗಾಯತ್ರ್ಯಾದಿಮಂತ್ರಗಳಿಂದ ವಾಚ್ಯನಾದ ಭಗವಂತನಿಗೆ ತರ್ಪಣವನ್ನು ಹೇಳಿದ್ದರಿಂದ ಸ್ಪಷ್ಟ ಪ್ರಮಾಣವೂ ಇರುವುದರಿಂದ ಕೇಶವಾದಿ ತರ್ಪಣವೆ ಸಮಂಜಸವೆನಿಸುವುದು.

**ನಾಗದೇವಾಹ್ನಿಕ**ದಲ್ಲಿ ಗಾಯತ್ರೀಜಪದ ಬಳಿಕ ಭೂರಾದಿ ಸಪ್ತವ್ಯಾಹೃತಿಗಳ ಜತೆಗೆ ಇಪ್ಪತ್ತನಾಲ್ಕು ತರ್ಪಣಗಳನ್ನು ತಿಳಿಸಿದ್ದಾರೆ. ಗಾಯತ್ರೀಕಲ್ಪ ಹೇಳಿರುವ ಈ ತರ್ಪಣಗಳು ಕಾಮ್ಯಜಪಕ್ಕೆಂದು ತಿಳಿಯಬೇಕು.

ಅರ್ಘ್ಯಾನಂತರ ನೀಡುವ ಈ ತರ್ಪಣ ತಟಾಕ – ನದೀಸ್ನಾನಾನಂತರ ಮಾಡಿದ ತರ್ಪಣದಂತೆ ಅಲ್ಲ ಅಥವಾ ಬ್ರಹ್ಮಯಜ್ಞಾನಂತರ ನೀಡುವ ದೇವ-ಋಷಿ–ಪಿತೃತರ್ಪಣಗಳಂತೆಯೂ ಅಲ್ಲ. ಕೇಶವಾದಿತರ್ಪಣ ಈ ಎರಡೂ ಸಂದರ್ಭಗಳಲ್ಲಿಯೂ ನಿತ್ಯದಲ್ಲಿ ಬಾರದು. ಇದು ಗಾಯತ್ರೀಜಪಾಧಿಕಾರಕ್ಕೆ ಜಪದ ಮೊದಲು ನೀಡುವ ತರ್ಪಣವೆನಿಸಿದೆ.

ಮುಂದೆ ಗಾಯತ್ರೀಜಪದ ಅನಂತರ ಹಾಗೂ ಅಷ್ಟಾಕ್ಷರಜಪದ ಬಳಿಕವೂ ಇದೇ ರೀತಿಯಾಗಿ ಆಯಾ ಮಂತ್ರದೇವತಾನಾಮದಿಂದ ತರ್ಪಣ ನೀಡಬೇಕು. (**ಓಂ ಗಾಯತ್ರೀಂ ತರ್ಪಯಾಮಿ । ಓಂ ನಾರಾಯಣಂ ತರ್ಪಯಾಮಿ**)



ಮೊದಲು ಓಂಕಾರ ಮತ್ತೆ ದೇವತಾನಾಮ. ಕಡೆಗೆ ತರ್ಪಯಾಮಿ ಎನ್ನಬೇಕು–

**ನಾಮಾಂತೇ ತರ್ಪ್ಪಯಾಮೀತಿ ಆದಾವೋಮಿತಿ ಚ ಬ್ರುವನ್** (ಕಾತ್ಯಾಯನ)

**ಬೃಹದ್ಬ್ರಹ್ಮಸಂಹಿತೆಯು** ಅಂಗೈಯಲ್ಲಿ ಪಂಚತೀರ್ಥವನ್ನು ತಿಳಿಸಿ ಕೊಡುತ್ತಾ ದೇವತರ್ಪಣವನ್ನು ಬೆರಳ ತುದಿಯಿಂದ ನೀಡುವಂತೆ ಹೇಳಿದೆ. ದೇವತಾನಾಮವು ದ್ವಿತೀಯಾ ವಿಭಕ್ತಿಯಲ್ಲಿ ಇರಬೇಕು. ಮುಖ್ಯವಾಗಿ ಆ ದೇವತೆಯ ಚಿಂತನೆ ಚೆನ್ನಾಗಿರಲೆಂದು ಇಲ್ಲಿ ಆದೇಶಿಸಲಾಗಿದೆ.

**ಪಂಚತೀರ್ಥಾನಿ ವಿಪ್ರಸ್ಯ ಕರೇ ತಿಷ್ಠಂತಿ ದಕ್ಷಿಣೇ**

**ಬ್ರಾಹ್ಮಂ ಪಶ್ಚಿಮರೇಖಾಯಾಂ ದೈವಂ ಹ್ಯಂಗುಲಿಮೂರ್ಧನಿ**

**ಪ್ರಾಜಾಪತ್ಯಂ ಕನಿಷ್ಠಾದೌ ಮಧ್ಯೇ ಸೌಮ್ಯಂ ನಿಬೋಧತ**

**ಅಂಗುಷ್ಠಸ್ಯ ಪ್ರದೇಶಿನ್ಯಾ ಮಧ್ಯೇ ಪಿತ್ರ್ಯಂ ಪ್ರತಿಷ್ಠಿತಮ್**

**ಪ್ರಣವಾದಿ ದ್ವಿತೀಯಾಂತಂ ತರ್ಪ್ಪಯಾಮೀತಿ ಸಂಯುತೈಃ**

**ನಾಮಮಂತ್ರೈಃ ಪೃಥಕ್ಕುರ್ಯಾತ್ ತರ್ಪ್ಪಣಂ ಧ್ಯಾನತತ್ಪರಃ**

**ಆಪೋ ದೇವಗಣಾಃ ಸರ್ವೇ ಆಪಃ ಪಿತೃಗಣಾಃ ಸ್ಮೃತಾಃ**

**ತಸ್ಮಾಜ್ಜಲೇ ಜಲಂ ದೇಯಮ್** (ಕಾರ್ಷ್ಣಾಜಿನಿ)

ನೀರಿನಿಂದ ಅರ್ಘ್ಯಪ್ರದಾನ, ಆಚಮನ, ತರ್ಪಣ ನಡೆಯಬೇಕು, ಪ್ರಶಸ್ತ ವಸ್ತು ನೀರು ಎಂದು **ಶತಪಥಬ್ರಾಹ್ಮಣ** ಹೇಳಿದೆ–

**ಪವಿತ್ರಂ ವಾ ಆಪಃ**

ಅರ್ಘ್ಯದಿಂದ, ಆಚಮನದಿಂದ, ದೇವತರ್ಪಣದಿಂದ ಒಳ–ಹೊರಗಿನ ಆಸುರೀಶಕ್ತಿಗಳ ನಿರ್ಮೂಲನ ಆಗುವುದು. ಇದು ನೀರಿನಿಂದ ಸಾಧ್ಯವಾಗಿದೆ. ಜಲ ಎಂದರೆ ದುಷ್ಟರನ್ನು ಓಡಿಸುವುದು ಎಂದು ಅರ್ಥ.

**ಜಲತಿ ದುಷ್ಟಾನ್ ಘಾತಯತಿ** – ಜಲ ಘಾತನೇ

**ತೃಪ್ತ್ಯರ್ಥಂ ಕ್ರಿಯತೇ ಯತ್ತು ತರ್ಪ್ಪಣಂ ಸಮುದಾಹೃತಮ್** ಎಂದು ಸ್ಮೃತಿಯು ದೇವರನ್ನು ಸಂತೋಷಗೊಳಿಸುವುದೇ ತರ್ಪಣ ಶಬ್ದದ ಅರ್ಥ ಎಂದು ಹೇಳಿದೆ.



**ತರ್ಪಣಂ ಪಿತೃದೇವಾನಾಂ ವರ್ಜ್ಜಯೇದ್ಧರಿವಾಸರೇ**

ಏಕಾದಶಿಯಂದು ದೇವರ ರೂಪಗಳಿಗೆ ಮಾತ್ರ ತರ್ಪಣ, ಇತರ ದೇವತೆಗಳಿಗೆ ತರ್ಪಣ ಇಲ್ಲ. ದ್ವಾದಶಿಯಂದು ಬೆಳಗ್ಗಿನ ಜಪದಲ್ಲಿಯೂ ಹೀಗೆಯೇ ಎಂದು **ಮಾಧವೀಯದ**ಲ್ಲಿದೆ.

**ಧಾರಾಚ್ಯುತೇನ ತೋಯೇನ ಸಂಧ್ಯೋಪಾಸ್ತಿರ್ವಿಗರ್ಹಿತಾ**

ತರ್ಪಣವನ್ನು ಧಾರಾಕಾರವಾಗಿ ನೀಡಬಾರದು. ಇದರಿಂದ ಒಂದೇ ತರ್ಪಣ ಎಂದು ಗ್ರಹಿಸಲ್ಪಡುವುದು ಎಂದು **ಭೃಗು** ತಿಳಿಸಿರುವನು. ಹಾಗಾಗಿ ಪ್ರಪ್ರತ್ಯೇಕವಾಗಿ ಎಡಕ್ಕೈಯಿಂದ ಬಲಕ್ಕೈ ಮಧ್ಯಕ್ಕೆ **ತರ್ಪಯಾಮಿ** ಎಂದು ಹೇಳುತ್ತಾ ನೀರನ್ನು ಹಾಕಿಕೊಳ್ಳಬೇಕು. ಆ ನೀರು ಬಲಕ್ಕೈ ಬೆರಳ ತುದಿಯಿಂದ ಕೆಳಗೆ ಬೀಳುವಂತೆ ಕೈಯನ್ನು ಬಾಗಿಸಿ ಹಿಡಿದಿರಬೇಕು. ಕೇವಲ ಬಲಕ್ಕೈಯಿಂದ ಸೌಟಿನಲ್ಲಿ ನೀರು ತೆಗೆದು ಕೈಪಾತ್ರೆಗೆ ಹಾಕುವುದು ತರ್ಪಣ ಎನಿಸಲಾರದು.

**ಮಾರ್ಜ್ಜನಂ ತರ್ಪಣಂ ಶ್ರಾದ್ಧಂ ನ ಕುರ್ಯಾದ್ವಾರಿಧಾರಯಾ**

**ಕುರ್ಯಾಚ್ಚೇದ್ವಾರಿಧಾರಾಭಿಃ ತತ್ಸರ್ವಂ ನಿಷ್ಫಲಂ ಭವೇತ್**

ತರ್ಪಣವನ್ನು ನೆಲಕ್ಕೆ ಬಿಡಬಾರದು. ಕೈಪಾತ್ರೆಗೆ ತರ್ಪಣ ನೀಡಬೇಕೆಂದು **ಹಾರೀತಸ್ಮೃತಿ** ಸಾರಿದೆ –

**ಪಾತ್ರಾದ್ವೈ ಜಲಮಾದಾಯ ಶುಭೇ ಪಾತ್ರಾಂತರೇ ಕ್ಷಿಪೇತ್**

**ಜಲಪೂರ್ಣ್ಣೇಽಥವಾ ಗರ್ತ್ತೇ ನ ಸ್ಥಲೇ ತು ವಿಬರ್ಹಿಷಿ**

ಮಣ್ಣಿನ ಪಾತ್ರೆಯೂ ತರ್ಪಣಕ್ಕೆ ನಿಷಿದ್ಧ –

**ಹೇಮರೌಪ್ಯತಾಮ್ರಕಾಂಸ್ಯಮಯೇ ಪಾತ್ರೇ ನ ಮೃಣ್ಮಯೇ**

**ಯತ್ರ ಪೂತಸ್ಥಳಂ ತತ್ರ ತರ್ಪಣಂ ಸ್ಯಾನ್ನದೀಜಲೇ**

ತರ್ಪಣ ನೀಡುವಾಗ ಹೆಬ್ಬೆರಳು ತೋರುಬೆರಳಿಗೆ ತಾಗಿರಬಾರದೆಂದು **ಸಚ್ಚರಿತ್ರಸುಧಾನಿಧಿ** ತಿಳಿಸಿದೆ –

**ಅಂಗುಷ್ಠತರ್ಜ್ಜನೀಯೋಗಂ ತರ್ಪಣೇಽರ್ಘ್ಯೇ ವಿವರ್ಜ್ಜಯೇತ್**

ಸ್ನಾನಾಚಮನತರ್ಪಣಾದಿಗಳಿಗೆ ನಮಗೆ ಅಪರಿಚಿತರಾದವರು ತಂದ



ನೀರು ಉಪಯೋಗಕ್ಕೆ ಬಾರದು. ಅವರು ಸಂದಿಗ್ಧ ಸಂಸ್ಕೃತರೆನಿಸುವರು-

**ಸ್ನಾನಮಾಚಮನಂ ದಾನಂ ದೇವತಾಪಿತೃತರ್ಪಣಮ್**

**ಶೂದ್ರೋದಕೈರ್ನ್ನ ಕುರ್ವೀತ ತಥಾ ಮೇಘಾದ್ವಿನಿಃಸೃತೈಃ**

ಯಾವುದಾದರೂ ಜಾತಿಯ ದರ್ಭೆಯನ್ನು ಬಳಸಿ ತರ್ಪಣವನ್ನು ನೀಡಬೇಕು. ದರ್ಭೆಯೇ ಇಲ್ಲದಿದ್ದರೆ ತುಳಸೀಮಂಜರಿ ಇರಲೇಬೇಕು. ತುಳಸಿ ಎಲೆ, ಕಡೆಯ ಪಕ್ಷ ತುಳಸೀ ಕಾಷ್ಠವಾದರೂ ತರ್ಪಣಕ್ಕೆ ಬೇಕೇಬೇಕು. ದರ್ಭೆ ಇದ್ದರೂ ತುಳಸಿ ಇರಲೇಬೇಕು. ದರ್ಭೆಯನ್ನು ತರ್ಪಣಕ್ಕೆ ಉಪಯೋಗಿಸುವ ನೀರಿನ ಪಾತ್ರೆಯಲ್ಲಿಯೂ ಹಾಕಿರಬಹುದು (ಹಾಕಿರಬೇಕು). ಪಿತೃತರ್ಪಣದ ಸಂದರ್ಭದಲ್ಲಿ ಬಂದ ಬೃಹದ್ಬ್ರಹ್ಮಸಂಹಿತೆಯ ಪ್ರಮಾಣವಿದು ತಿಲಸಹಿತವಾಗಿಯೇ ತಿಳಿಸಿದೆ. ದೇವತರ್ಪಣದಲ್ಲಿ ತಿಲದ ಉಪಯೋಗವಿಲ್ಲ.

**ದರ್ಭೈರ್ಲ್ಲೋಹಿತದರ್ಭೈಶ್ಚ ಕಾಶವೀರಣಬಲ್ವಜೈಃ**

**ಶೂಕಧಾನ್ಯತೃಣೈರ್ವಾಪಿ ದರ್ಭಕಾರ್ಯಂ ಸಮಾಚರೇತ್**

**ಅಭಾವೇ ಸರ್ವದೈವೈಷಾಂ ಭಾವೇಽಪಿ ಮುನಿಸತ್ತಮಾಃ**

**ತುಳಸೀಮಂಜರೀಪತ್ರಕಾಷ್ಠೇಷ್ವೇಕತರೇಣ ವೈ**

**ನ ತರ್ಪ್ಪಯೇತ್ಪತಂತೀಭಿಃ ವಿದ್ವಾನದ್ಭಿಃ ಕಥಂಚನ**

**ಪಾತ್ರಸ್ಥಾಭಿಃ ಸದರ್ಭಾಭಿಃ ಸತಿಲಾಭಿಶ್ಚ ತರ್ಪ್ಪಯೇತ್**

ಚಿನ್ನದ ಬೆಳ್ಳಿಯ ಪವಿತ್ರ, ತಾಮ್ರಪಾತ್ರೆ, ಊರ್ಧ್ವಪುಂಡ್ರ, ತೀರ್ಥ, ತುಳಸಿ, ಎಳ್ಳು, ದರ್ಭೆ, ಮಂತ್ರ ಇವೆಲ್ಲ ಇದ್ದಾಗ ತರ್ಪಣ ತೃಪ್ತಿಯನ್ನು ನೀಡಲಿದೆ ಎನ್ನುವುದಾಗಿ **ಬೃಹದ್ಬ್ರಹ್ಮಸಂಹಿತೆ** ಪಿತೃತರ್ಪಣ ವಿಷಯದಲ್ಲಿ ಹೇಳಿದೆ. ದೇವತಾ ಪರವಾಗಿ ತರ್ಪಣಗೈದಾಗ ತಿಲ, ಬೆಳ್ಳಿಯ ಪವಿತ್ರ, ತೀರ್ಥಗಳ ಉಪಯೋಗ ಇಲ್ಲ – **ವಿನಾ ರೂಪ್ಯಸುವರ್ಣ್ಣಾಭ್ಯಾಂ ವಿನಾ ತಾಮ್ರತಿಲೈರಪಿ**

**ವಿನಾ ದರ್ಭೈಶ್ಚ ಮಂತ್ರೈಶ್ಚ ವಿನೋರ್ಧ್ವತಿಲಕಂ ತಥಾ**

**ವಿನಾ ಶ್ರೀಪಾದಸಲಿಲಂ ತುಳಸಿಮಿಶ್ರಿತಂ ವಿನಾ**

**ನೈವ ತೃಪ್ಯಂತಿ ಪಿತರಃ ಕೋಟಿತೀರ್ಥಜಲೈರಪಿ**



## ಪ್ರತಿದಿನದ ತರ್ಪಣ ಮಂತ್ರಗಳು

1. ಓಂ ಅಜಂ ತರ್ಪಯಾಮಿ
2. ಓಂ ಆನಂದಂ ತರ್ಪಯಾಮಿ
3. ಓಂ ಇಂದ್ರಂ ತರ್ಪಯಾಮಿ
4. ಓಂ ಈಶಂ ತರ್ಪಯಾಮಿ
5. ಓಂ ಉಗ್ರಂ ತರ್ಪಯಾಮಿ
6. ಓಂ ಊರ್ಜ್ಜಂ ತರ್ಪಯಾಮಿ
7. ಓಂ ಋತಂಭರಂ ತರ್ಪಯಾಮಿ
8. ಓಂ ೠಘಂ ತರ್ಪಯಾಮಿ
9. ಓಂ ಌಶಂ ತರ್ಪಯಾಮಿ
10. ಓಂ ೡಜಿಂ ತರ್ಪಯಾಮಿ
11. ಓಂ ಏಕಾತ್ಮಾನಂ ತರ್ಪಯಾಮಿ
12. ಓಂ ಐರಂ ತರ್ಪಯಾಮಿ
13. ಓಂ ಓಜೋಭೃತಂ ತರ್ಪಯಾಮಿ
14. ಓಂ ಔರಸಂ ತರ್ಪಯಾಮಿ
15. ಓಂ ಅಂತಂ ತರ್ಪಯಾಮಿ
16. ಓಂ ಅರ್ದ್ಧಗರ್ಭಂ ತರ್ಪಯಾಮಿ
17. ಓಂ ಕಪಿಲಂ ತರ್ಪಯಾಮಿ
18. ಓಂ ಖಪತಿಂ ತರ್ಪಯಾಮಿ
19. ಓಂ ಗರುಡಾಸನಂ ತರ್ಪಯಾಮಿ
20. ಓಂ ಘರ್ಮ್ಮಂ ತರ್ಪಯಾಮಿ
21. ಓಂ ಙಸಾರಂ ತರ್ಪಯಾಮಿ
22. ಓಂ ಚಾರ್ವಂಗಂ ತರ್ಪಯಾಮಿ
23. ಓಂ ಛಂದೋಗಮ್ಯಂ ತರ್ಪಯಾಮಿ

24. ಓಂ ಜನಾರ್ದನಂ ತರ್ಪಯಾಮಿ

25. ಓಂ ಝೂಟಿತಾರಿಂ ತರ್ಪಯಾಮಿ

26. ಓಂ ಞಮಂ ತರ್ಪಯಾಮಿ

27. ಓಂ ಟಂಕಿನಂ ತರ್ಪಯಾಮಿ

28. ಓಂ ಠಲಕಂ ತರ್ಪಯಾಮಿ

29. ಓಂ ಡರಕಂ ತರ್ಪಯಾಮಿ

30. ಓಂ ಢರಿಣಂ ತರ್ಪಯಾಮಿ

31. ಓಂ ಣಾತ್ಮಾನಂ ತರ್ಪಯಾಮಿ

32. ಓಂ ತಾರಂ ತರ್ಪಯಾಮಿ

33. ಓಂ ಥಭಂ ತರ್ಪಯಾಮಿ

34. ಓಂ ದಂಡಿನಂ ತರ್ಪಯಾಮಿ

35. ಓಂ ಧನ್ವಿನಂ ತರ್ಪಯಾಮಿ

36. ಓಂ ನಮ್ಯಂ ತರ್ಪಯಾಮಿ

37. ಓಂ ಪರಂ ತರ್ಪಯಾಮಿ

38. ಓಂ ಫಲಿನಂ ತರ್ಪಯಾಮಿ

39. ಓಂ ಬಲಿನಂ ತರ್ಪಯಾಮಿ

40. ಓಂ ಭಗಂ ತರ್ಪಯಾಮಿ

41. ಓಂ ಮನುಂ ತರ್ಪಯಾಮಿ

42. ಓಂ ಯಜ್ಞಂ ತರ್ಪಯಾಮಿ

43. ಓಂ ರಾಮಂ ತರ್ಪಯಾಮಿ

44. ಓಂ ಲಕ್ಷ್ಮೀಪತಿಂ ತರ್ಪಯಾಮಿ

45. ಓಂ ವರಂ ತರ್ಪಯಾಮಿ

46. ಓಂ ಶಾಂತಸಂವಿದಂ ತರ್ಪಯಾಮಿ

47. ಓಂ ಷಡ್ಗುಣಂ ತರ್ಪಯಾಮಿ



48. ಓಂ ಸಾರಾತ್ಮಾನಂ ತರ್ಪಯಾಮಿ

49. ಓಂ ಹಂಸಂ ತರ್ಪಯಾಮಿ

50. ಓಂ ಳಾಳುಕಂ ತರ್ಪಯಾಮಿ

51. ಓಂ ನೃಸಿಂಹಂ ತರ್ಪಯಾಮಿ

52. ಓಂ ಕೇಶವಂ ತರ್ಪಯಾಮಿ

53. ಓಂ ನಾರಾಯಣಂ ತರ್ಪಯಾಮಿ

54. ಓಂ ಮಾಧವಂ ತರ್ಪಯಾಮಿ

55. ಓಂ ಗೋವಿಂದಂ ತರ್ಪಯಾಮಿ

56. ಓಂ ವಿಷ್ಣುಂ ತರ್ಪಯಾಮಿ

57. ಓಂ ಮಧುಸೂದನಂ ತರ್ಪಯಾಮಿ

58. ಓಂ ತ್ರಿವಿಕ್ರಮಂ ತರ್ಪಯಾಮಿ

59. ಓಂ ವಾಮನಂ ತರ್ಪಯಾಮಿ

60. ಓಂ ಶ್ರೀಧರಂ ತರ್ಪಯಾಮಿ

61. ಓಂ ಹೃಷೀಕೇಶಂ ತರ್ಪಯಾಮಿ

62. ಓಂ ಪದ್ಮನಾಭಂ ತರ್ಪಯಾಮಿ

63. ಓಂ ದಾಮೋದರಂ ತರ್ಪಯಾಮಿ

64. ಓಂ ಸಂಕರ್ಷಣಂ ತರ್ಪಯಾಮಿ

65. ಓಂ ವಾಸುದೇವಂ ತರ್ಪಯಾಮಿ

66. ಓಂ ಪ್ರದ್ಯುಮ್ನಂ ತರ್ಪಯಾಮಿ

67. ಓಂ ಅನಿರುದ್ಧಂ ತರ್ಪಯಾಮಿ

68. ಓಂ ಪುರುಷೋತ್ತಮಂ ತರ್ಪಯಾಮಿ

69. ಓಂ ಅಧೋಕ್ಷಜಂ ತರ್ಪಯಾಮಿ

70. ಓಂ ನೃಸಿಂಹಂ ತರ್ಪಯಾಮಿ

71. ಓಂ ಅಚ್ಯುತಂ ತರ್ಪಯಾಮಿ

72. ಓಂ ಜನಾರ್ದನಂ ತರ್ಪಯಾಮಿ

73. ಓಂ ಉಪೇಂದ್ರಂ ತರ್ಪಯಾಮಿ

74. ಓಂ ಹರಿಂ ತರ್ಪಯಾಮಿ

75. ಓಂ ಕೃಷ್ಣಂ ತರ್ಪಯಾಮಿ

76. ಓಂ ಆತ್ಮಾನಂ ತರ್ಪಯಾಮಿ

77. ಓಂ ಅಂತರಾತ್ಮಾನಂ ತರ್ಪಯಾಮಿ

78. ಓಂ ಪರಮಾತ್ಮಾನಂ ತರ್ಪಯಾಮಿ

79. ಓಂ ಜ್ಞಾನಾತ್ಮಾನಂ ತರ್ಪಯಾಮಿ

80. ಓಂ ವಾಸುದೇವಂ ತರ್ಪಯಾಮಿ

81. ಓಂ ಸಂಕರ್ಷಣಂ ತರ್ಪಯಾಮಿ

82. ಓಂ ಪ್ರದ್ಯುಮ್ನಂ ತರ್ಪಯಾಮಿ

83. ಓಂ ಅನಿರುದ್ಧಂ ತರ್ಪಯಾಮಿ

84. ಓಂ ವಿಶ್ವಂ ತರ್ಪಯಾಮಿ

85. ಓಂ ತೈಜಸಂ ತರ್ಪಯಾಮಿ

86. ಓಂ ಪ್ರಾಜ್ಞಂ ತರ್ಪಯಾಮಿ

87. ಓಂ ತುರೀಯಂ ತರ್ಪಯಾಮಿ

88. ಓಂ ಮತ್ಸ್ಯಂ ತರ್ಪಯಾಮಿ

89. ಓಂ ಕೂರ್ಮಂ ತರ್ಪಯಾಮಿ

90. ಓಂ ವರಾಹಂ ತರ್ಪಯಾಮಿ

91. ಓಂ ನರಸಿಂಹಂ ತರ್ಪಯಾಮಿ

92. ಓಂ ವಾಮನಂ ತರ್ಪಯಾಮಿ

93. ಓಂ ಪರಶುರಾಮಂ ತರ್ಪಯಾಮಿ

94. ಓಂ ರಾಮಂ ತರ್ಪಯಾಮಿ

95. ಓಂ ವೇದವ್ಯಾಸಂ ತರ್ಪಯಾಮಿ



96. ಓಂ ಕೃಷ್ಣಂ ತರ್ಪಯಾಮಿ

97. ಓಂ ದತ್ತಾತ್ರೇಯಂ ತರ್ಪಯಾಮಿ

98. ಓಂ ಬುದ್ಧಂ ತರ್ಪಯಾಮಿ

99. ಓಂ ಕಲ್ಕಿನಂ ತರ್ಪಯಾಮಿ

100. ಓಂ ಶಿಂಶುಮಾರಂ ತರ್ಪಯಾಮಿ

101. ಓಂ ನಾರಾಯಣಂ ತರ್ಪಯಾಮಿ

102. ಓಂ ಹಯಗ್ರೀವಂ ತರ್ಪಯಾಮಿ

103. ಓಂ ಹಂಸಂ ತರ್ಪಯಾಮಿ

104. ಓಂ ಪೃಶ್ನಿಗರ್ಭಂ ತರ್ಪಯಾಮಿ

105. ಓಂ ತಾಪಸಂ ತರ್ಪಯಾಮಿ

106. ಓಂ ಧನ್ವಂತರಿಂ ತರ್ಪಯಾಮಿ

107. ಓಂ ಮೋಹಿನೀಂ ತರ್ಪಯಾಮಿ

108. ಓಂ ಪುರುಷಂ ತರ್ಪಯಾಮಿ

109. ಓಂ ವಿಷ್ಣುಂ ತರ್ಪಯಾಮಿ

110. ಓಂ ಸನತ್ಕುಮಾರಂ ತರ್ಪಯಾಮಿ

111. ಓಂ ಮಹಿದಾಸಂ ತರ್ಪಯಾಮಿ

112. ಓಂ ನರನಾರಾಯಣಂ ತರ್ಪಯಾಮಿ

113. ಓಂ ಹರಿಂ ತರ್ಪಯಾಮಿ

114. ಓಂ ಕೃಷ್ಣಂ ತರ್ಪಯಾಮಿ

115. ಓಂ ಕಪಿಲಂ ತರ್ಪಯಾಮಿ

116. ಓಂ ಯಜ್ಞಂ ತರ್ಪಯಾಮಿ

117. ಓಂ ಋಷಭಂ ತರ್ಪಯಾಮಿ

118. ಓಂ ವಿಷ್ಣುಂ ತರ್ಪಯಾಮಿ

119. ಓಂ ಪರಂಜ್ಯೋತಿಃ ತರ್ಪಯಾಮಿ

120. ಓಂ ಪರಂಬ್ರಹ್ಮ ತರ್ಪಯಾಮಿ

121. ಓಂ ವಾಸುದೇವಂ ತರ್ಪಯಾಮಿ

122. ಓಂ ಹಯಗ್ರೀವಾಂ ತರ್ಪಯಾಮಿ

123. ಓಂ ಗಾಯತ್ರೀಂ ತರ್ಪಯಾಮಿ

124. ಓಂ ಪೃಥಿವೀಂ ತರ್ಪಯಾಮಿ

125. ಓಂ ಶರೀರಂ ತರ್ಪಯಾಮಿ

126. ಓಂ ಹೃದಯಂ ತರ್ಪಯಾಮಿ

127. ಓಂ ಋಗ್ವೇದಂ ತರ್ಪಯಾಮಿ

128. ಓಂ ಯಜುರ್ವೇದಂ ತರ್ಪಯಾಮಿ

129. ಓಂ ಸಾಮವೇದಂ ತರ್ಪಯಾಮಿ

130. ಓಂ ಅಥರ್ವವೇದಂ ತರ್ಪಯಾಮಿ

131. ಓಂ ಇತಿಹಾಸಪುರಾಣಾನಿ ತರ್ಪಯಾಮಿ

132. ಓಂ ಶತಸಹಸ್ರಾಮಿತಾವತಾರಾನ್ ತರ್ಪಯಾಮಿ

ಇಲ್ಲಿಂದ ಮುಂದಿನ ತರ್ಪಣಗಳು ದೇವತೆಗಳ ನಾಮಗಳಲ್ಲಿ ಇವೆ. ಇವರಿಗೆ ಏಕಾದಶಿಯ ಉಪವಾಸದಂದು (ಕೃಷ್ಣಜಯಂತಿಯಂದೂ) ಮೂರು ಹೊತ್ತಿನ ಜಪದಲ್ಲಿ ತರ್ಪಣವಿಲ್ಲ. ಹಾಗೆಯೇ ದ್ವಾದಶಿಯ ಬೆಳಗಿನ ಸಂಧ್ಯಾವಂದನೆಯಲ್ಲಿಯೂ ಇವರಿಗೆಲ್ಲಾ ತರ್ಪಣವಿಲ್ಲ.

133. ಓಂ ಅಗ್ನಿಂ ತರ್ಪಯಾಮಿ

134. ಓಂ ವಾಯುಂ ತರ್ಪಯಾಮಿ

135. ಓಂ ರವಿಂ ತರ್ಪಯಾಮಿ

136. ಓಂ ವಿದ್ಯುತಂ ತರ್ಪಯಾಮಿ

137. ಓಂ ಯಮಂ ತರ್ಪಯಾಮಿ

138. ಓಂ ಜಲಪತಿಂ ತರ್ಪಯಾಮಿ

139. ಓಂ ಗುರುಂ ತರ್ಪಯಾಮಿ

140. ಓಂ ಪರ್ಜ್ಜನ್ಯಂ ತರ್ಪಯಾಮಿ

141.ಓಂ ಇಂದ್ರಂ ತರ್ಪಯಾಮಿ

142. ಓಂ ಗಂಧರ್ವಂ ತರ್ಪಯಾಮಿ

143. ಓಂ ಪೂಷಣಂ ತರ್ಪಯಾಮಿ

144.ಓಂ ಮಿತ್ರಂ ತರ್ಪಯಾಮಿ

145. ಓಂ ವರುಣಂ ತರ್ಪಯಾಮಿ

146. ಓಂ ತ್ವಷ್ಟಾರಂ ತರ್ಪಯಾಮಿ

147. ಓಂ ವಸೂನ್ ತರ್ಪಯಾಮಿ

148. ಓಂ ಮರುತಃ ತರ್ಪಯಾಮಿ

149. ಓಂ ಸೋಮಂ ತರ್ಪಯಾಮಿ

150. ಓಂ ಆಂಗೀರಸಂ ತರ್ಪಯಾಮಿ

151.ಓಂ ವಿಶ್ವಾನ್ ದೇವಾನ್ ತರ್ಪಯಾಮಿ

152. ಓಂ ಅಶ್ವಿನೌ ತರ್ಪಯಾಮಿ

153. ಓಂ ಪ್ರಜಾಪತಿಂ ತರ್ಪಯಾಮಿ

154. ಓಂ ಸರ್ವಾನ್ ದೇವಾನ್ ತರ್ಪಯಾಮಿ

155. ಓಂ ರುದ್ರಂ ತರ್ಪಯಾಮಿ

156. ಓಂ ಬ್ರಹ್ಮಾಣಂ ತರ್ಪಯಾಮಿ

157. ಓಂ ನಿರ್ಋತಿಂ ತರ್ಪಯಾಮಿ

158. ಓಂ ಕುಬೇರಂ ತರ್ಪಯಾಮಿ

159. ಓಂ ಕುಜಂ ತರ್ಪಯಾಮಿ

160. ಓಂ ಶುಕ್ರಂ ತರ್ಪಯಾಮಿ

161.ಓಂ ಶನಿಂ ತರ್ಪಯಾಮಿ

162. ಓಂ ರಾಹುಂ ತರ್ಪಯಾಮಿ

163. ಓಂ ಕೇತುಂ ತರ್ಪಯಾಮಿ



# ಜಪಸಮೀಕ್ಷಾ

**ಹರಿನಾಮ ಸ್ಮರಣೆಯೊಂದಿಗೆ ಬ್ರಾಹ್ಮ ಮುಹೂರ್ತದಲ್ಲಿ ಉತ್ಥಾನ**

**ಶುಚಿಯಾಗಿ ಹಲ್ಲುಜ್ಜಿ ಅರುಣೋದಯದಲ್ಲಿ ಶುದ್ಧ ಸ್ನಾನ**

**ಒಣಬಟ್ಟೆಗಳ ಧರಿಸಿ ಉಪವೇಶನ**

ಜಪಗೈಯುವ ಸ್ಥಳವನ್ನು ಪ್ರೋಕ್ಷಿಸಿ ಶುದ್ಧಗೊಳಿಸಬೇಕು. ನೆಲದಲ್ಲಿ ಬಟ್ಟೆ ಹಾಸಿ ಮೇಲೆ ಅಜಿನವನ್ನು ಬಿಡಿಸಿ ಮೇಲೆ ದರ್ಭೆ ಹಾಕಬೇಕು. ಮೂರು ದರ್ಭೆಯನ್ನಾದರೂ ಉತ್ತರಕ್ಕೆ ಕುಡಿ ಬರುವಂತೆ ಆಸನದಲ್ಲಿ ಹಾಕಿಕೊಳ್ಳಬೇಕು. ಸ್ವಸ್ತಿಕಾಸನ, ವೀರಾಸನ ಅಥವಾ ಪದ್ಮಾಸನದಲ್ಲಿ ಕೂರಬೇಕು

**ನಿರ್ಮಾಲ್ಯತೀರ್ಥದ ಪ್ರಾಶನ**

ಗೋಪಿಚಂದನದಿಂದ ದ್ವಾದಶ ಊರ್ಧ್ವ ಪುಂಡ್ರಧಾರಣ ಹಣೆಗೆ ನಡುಬೆರಳು ಉಳಿದೆಡೆಗೆ ತೋರು ಬೆರಳು ಪ್ರಶಸ್ತ.

**ಮುದ್ರಾಧಾರಣ**

ಚಕ್ರ ಶಂಖ ಗದಾ ಪದ್ಮ ಖಡ್ಗ ಚಾಪ ಮತ್ತು ನಾಮ ಮುದ್ರೆ

**ಆಚಮನ**

ಗೋಕರ್ಣ ಮುದ್ರೆಯಿಂದ ಅಂಗೈಯ ಬುಡದಿಂದ ಎರಡು ಬಾರಿ ಆಚಮನ – ಮೂರು ಬಾರಿ ನೀರನ್ನು ಸೇವಿಸಬೇಕು

ಬಾಯಿ ಕಣ್ಣು ಮೂಗು ಕಿವಿ ತೋಳು ಕಾಲು ಎದೆ ತಲೆಗಳ ಸ್ಪರ್ಶನ

**ಪವಿತ್ರ ಧಾರಣೆ**

ಚಿನ್ನದ ಅಥವಾ ದರ್ಭೆಯ ಪವಿತ್ರವನ್ನು ಉಂಗುರ ಬೆರಳಿಗೆ ಹಾಕಿಕೊಳ್ಳುವುದು ಎರಡೆಸಳು ದರ್ಭೆಯನ್ನಾಗಲೀ ತೋರುಬೆರಳು ಮತ್ತು ನಡುಬೆರಳ ನಡುವೆ ಹಿಡಿಯಬೇಕು. ದೇವರ ನಿರ್ಮಾಲ್ಯ ತುಳಸಿಯನ್ನು ಅದೇ ಸ್ಥಾನದಲ್ಲಿ ಹಿಡಿದಿರಬೇಕು

**ಮಾಲೆ ಧಾರಣೆ**

ಕೊರಳಿಗೆ ತುಳಸೀ ಕಾಷ್ಠದಿಂದ ಮಾಡಿದ ಮಾಲೆಯನ್ನು ಹಾಕಿಕೊಳ್ಳಬೇಕು. ಪದ್ಮಾಕ್ಷದ ಮಾಲೆಯೂ ಧಾರಣಯೋಗ್ಯ.



### ಪ್ರಾಣಾಯಾಮ

ಋಷಿ ಛಂದಸ್ಸು ದೇವತೆಗಳನ್ನು ಮಂತ್ರಾರಂಭದಲ್ಲಿ ನೆನೆಯಬೇಕು. ಪ್ರಣವ, ಏಳು ವ್ಯಾಹೃತಿ, ಗಾಯತ್ರಿ ಮತ್ತು ಶಿರೋಮಂತ್ರ ವ್ಯಾನ ಮುದ್ರೆಯಿಂದ ಮೂಗು ಮುಚ್ಚಿಕೊಳ್ಳುವುದು.

ಗೃಹಸ್ಥರು ಬಲಕೈಯ ಐದೂ ಬೆರಳಿನಿಂದ (ಸಮಾನಮುದ್ರೆಯಿಂದ) ಕುಂಭಕವನ್ನು ನಡೆಸುವುದು

### ಸಂಕಲ್ಪ

ಸಂವತ್ಸರ ಅಯನ ಋತು ಮಾಸ ಪಕ್ಷ ತಿಥಿ ವಾರ ನಕ್ಷತ್ರ ಯೋಗ ಕರಣಗಳೆಂಬ ಆ ದಿನದ ಹತ್ತು ಕಾಲದ ಅವಯವಗಳನ್ನು ಹೇಳಬೇಕು. ಜಪ ಮಾಡುವ ಜಾಗವನ್ನು ದ್ವೀಪ ವರ್ಷ ಖಂಡ ದೇಶ ಕ್ಷೇತ್ರಗಳಲ್ಲಿ ಗುರುತಿಸಬೇಕು. ಆಯಾ ಹೊತ್ತಿನ ಜಪದ ಆರಂಭವನ್ನು ಹೇಳಿಕೊಳ್ಳಬೇಕು. ಕೌಳಿಗೆಯಲ್ಲಿನ ನೀರನ್ನು ಉದ್ಧರಣೆಯಿಂದ ತೆಗೆದು ಬಲ ಅಂಗೈಯ ನಡುವೆ ಹಾಕಬೇಕು

### ಮಾರ್ಜನೆ

ಆಪ್ಯಸೂಕ್ತದ ಋಷಿ ಛಂದಸ್ಸು ದೇವತೆಗಳನ್ನು ಹೇಳಬೇಕು. ಒಂಭತ್ತು ಪಾದಮಂತ್ರಗಳಾಗಿ ವಿನಿಯೋಗ. ಎಡಕೈಯಲ್ಲಿ ನೀರು ತುಂಬಿದ ಉದ್ಧರಣೆಯನ್ನು ಹಿಡಿದುಕೊಂಡು ಬಲಕೈಯಿಂದ ನಿರ್ಮಾಲ್ಯ ತುಳಸಿಯನ್ನು ಹಿಡಿದುಕೊಂಡು ತನ್ನ ದೇಹಕ್ಕೆ ಪ್ರೋಕ್ಷಿಸಿಕೊಳ್ಳುವುದು. ಪಾದ ತಲೆ ಹೃದಯ, ಹೃದಯ ಪಾದ ತಲೆ, ತಲೆ ಹೃದಯ ಪಾದ – 9 ಸ್ಥಾನಗಳು

### ಮಂತ್ರಾಚಮನೆ

ಒಂದು ಉದ್ಧರಣೆ ನೀರನ್ನು ಬಲ ಅಂಗೈ ನಡುವೆ ಹಾಕಿಕೊಂಡು ಮಂತ್ರಾಂತ್ಯದಲ್ಲಿ ಅಂಗೈ ಬುಡದಿಂದ ಪ್ರಾಶನಗೈಯುವುದು. ಮೂರು ಹೊತ್ತಿನ ಜಪದಲ್ಲಿಯೂ ಮಂತ್ರಾಚಮನೆಯ ಮಂತ್ರ ಬೇರೆ ಬೇರೆ. ಮತ್ತೆ ಎರಡು ಬಾರಿ ಆಚಮನ ಮಾಡಬೇಕು

### ಅರ್ಘ್ಯಪ್ರದಾನ

ಪ್ರಣವ–ವ್ಯಾಹೃತಿ ಸಹಿತವಾದ ಗಾಯತ್ರೀ ಮಂತ್ರದ ಋಷಿ ಛಂದಸ್ಸು ದೇವತೆಗಳನ್ನು ನ್ಯಾಸ ಮಾಡಬೇಕು.



ಆಯಾ ಹೊತ್ತಿನ ಅರ್ಘ್ಯ ನೀಡುವೆನೆಂದು ಸಂಕಲ್ಪಗೈಯಬೇಕು.

ಬೆಳಿಗ್ಗೆ ಮತ್ತು ಮಧ್ಯಾಹ್ನ ಸಮಪಾದದಲ್ಲಿ ನಿಂತು ಎರಡೂ ಕೈಗಳನ್ನು ತಲೆಗಿಂತಲೂ ಮೇಲೆತ್ತಿ ಮೂರು ಬಾರಿ ಅರ್ಘ್ಯ ನೀಡಬೇಕು.

ಸಂಜೆ ಕುಳಿತು ಮೂರು ಬಾರಿ ಅರ್ಘ್ಯ ನೀಡಬೇಕು.

ಅಂಜಲಿಮುದ್ರೆಯಿಂದ ಅರ್ಘ್ಯ ನೀಡಬೇಕು. ಎಡಗೈಯ ಹೆಬ್ಬೆರಳು ಮತ್ತು ತೋರು ಬೆರಳಿನಿಂದ ಕೌಳಿಗೆಯನ್ನು ಹಿಡಿದು ಬೊಗಸೆ ತುಂಬ ನೀರನ್ನು ಹಾಕಿಕೊಂಡು ಮಂತ್ರ ಹೇಳಿ ಅರ್ಘ್ಯೆಯನ್ನು ಹರಿವಾಣಕ್ಕೆ ನೀಡುವುದು

**ಆತ್ಮ ಪ್ರದಕ್ಷಿಣೆ**

ಎದ್ದು ನಿಂತು ಬಲ ಅಂಗೈಯಲ್ಲಿ ನೀರನ್ನು ಹಾಕಿಕೊಂಡು ತನ್ನ ಸುತ್ತಲೂ ತಿರುಗಿ ನೀರಿನ ಪರಿಧಿಯನ್ನು ಗಾಯತ್ರೀ ಶಿರೋಮಂತ್ರದಿಂದ ನಡೆಸಿಕೊಳ್ಳಬೇಕು ಎರಡು ಬಾರಿ ಆಚಮನ ಮಾಡಬೇಕು

**ತರ್ಪಣ**

ಗಾಯತ್ರೀ ಮಂತ್ರಾಕ್ಷರ ರೂಪಗಳಿಗೆ ಇಪ್ಪತ್ತನಾಲ್ಕು ತರ್ಪಣಗಳನ್ನು ನೀಡಬೇಕು. ಒಂದೊಂದು ಬಾರಿಯೂ ಉದ್ಧರಣೆಯಿಂದ ನೀರನ್ನು ಬಲ ಅಂಗೈ ಮಧ್ಯಕ್ಕೆ ಹಾಕಿಕೊಂಡು ಅಂಗೈಯ ಬೆರಳ ತುದಿಯಿಂದ ಕೆಳಗೆ (ಹರಿವಾಣಕ್ಕೆ) ಬೀಳುವಂತೆ ತರ್ಪಣ ನೀಡುವುದು.

ಗಾಯತ್ರೀ ಮಂತ್ರದ ದಶಪದ ರೂಪಗಳಿಗೂ ಪ್ರಣವಪ್ರತಿಪಾದ್ಯ ಅಷ್ಟರೂಪಗಳಿಗೂ ವ್ಯಾಹೃತಿ ಚತೂರೂಪಗಳಿಗೂ ಐವತ್ತೊಂದು ಅಕ್ಷರ ರೂಪಗಳಿಗೂ ತರ್ಪಣ ನೀಡುವುದು ಹೆಚ್ಚು ಸೂಕ್ತ.

ಇಂದ್ರಾದಿಗಳಿಗೆ ನವಗ್ರಹರಿಗೆ ಅಗ್ನ್ಯಾದಿ ಮಂತ್ರಾಕ್ಷರಾಭಿಮಾನಿಗಳಿಗೆ ತರ್ಪಣ ನೀಡುವುದು ಹೆಚ್ಚು ಸಮಂಜಸ.

ದೇವರಿಗೆ ಹೊರತು ಇನ್ಯಾವ ದೇವತೆಗೂ ಏಕಾದಶಿಯಂದು ತರ್ಪಣವಿಲ್ಲ.

ಎರಡು ಬಾರಿ ಆಚಮನ ಮಾಡಬೇಕು

**ಆಸನ ಚಿಂತನೆ**

**ಅನಂತಾಸನಾಯ ನಮಃ ಪದ್ಮಾಸನಾಯ ನಮಃ ವಿಮಲಾಸನಾಯ ನಮಃ**



ಎನ್ನುತ್ತಾ ಆಸನವನ್ನು ಮುಟ್ಟಬೇಕು. ಮಂಡೂಕಾದಿ ಆರು ಆಸನಮಂತ್ರಗಳನ್ನು ಪಠಿಸಬೇಕು. ಆಸನದ ಒಂದೆಸಳು ದರ್ಭೆಯನ್ನು ಹೊರಗೆಸೆಯಬೇಕು– **ಪರಾವಸುನಿರಾಸ.**

ಒಂದೆಸಳು ದರ್ಭೆಯನ್ನು ಆಸನಕ್ಕೆ ಹಾಕಿಕೊಳ್ಳಬೇಕು– **ಅರ್ವಾವಸುಸಮಾಸ**

**ದೇವ ಪ್ರಾರ್ಥನೆ**

ಪ್ರಾರ್ಥನಾಮುದ್ರೆಯಿಂದ ವಿಘ್ನ ಪರಿಹಾರಕ ಸಿದ್ಧಿಪ್ರದ ಸರ್ವಜೀವ ನಿಯಾಮಕ ಭಗವಂತನನ್ನು ಮತ್ತವನ ಧರ್ಮವನ್ನು ನಮ್ಮಲ್ಲಿ ನಡೆಸಿ ನಮ್ಮನ್ನು ಸಾಧನೆಯತ್ತ ಹೊರಳಿಸಿರುವ ಗುರುಗಳನ್ನು ನಮಿಸಬೇಕು.

**ಭೂ ಪ್ರಾರ್ಥನೆ**

ನನ್ನನ್ನು ಪವಿತ್ರೀಕರಿಸು ಅನ್ನುವುದಾಗಿ ತಾನು ಕುಳಿತ ನೆಲ ಮುಟ್ಟಿ ಭೂದೇವಿಯಲ್ಲಿ ಕೈಮುಗಿದುಕೊಂಡು ಪ್ರಾರ್ಥಿಸಬೇಕು

**ಭೂತೋಚ್ಚಾಟನೆ**

ಜಪಾರಂಭದ ಮೊದಲು ನೆಲ ನಡು ಮೇಲೆ ಇರುವ ಎಲ್ಲ ದುಷ್ಟ ಶಕ್ತಿಗಳನ್ನು ಛೋಟಿಕಾ ಮುದ್ರೆಯಿಂದ ಓಡಿಸಬೇಕು

**ದಿಗ್ಬಂಧನ**

ವ್ಯಾಹೃತಿ ಮಂತ್ರಗಳನ್ನು ಪ್ರಣವದೊಡನೆ ಪಠಿಸಬೇಕು.

ಬಾಣಮುದ್ರೆಯಿಂದ ಹೊರಗಿನ ಶಕ್ತಿಗಳು ಆಕ್ರಮಿಸದಂತೆ ತನ್ನ ಸುತ್ತಲೂ ಬಂಧನ ಮಾಡಬೇಕು.

ಸುದರ್ಶನ ಮಂತ್ರದಿಂದ ಸುದರ್ಶನ ಮುದ್ರೆಯನ್ನು ಹತ್ತು ಕಡೆಯಲ್ಲಿ ತೋರಿಸಬೇಕು.

ಅಗ್ನಿಪ್ರಾಕಾರ ಮುದ್ರೆಯಿಂದ ತನ್ನ ಸುತ್ತಲೂ ರಕ್ಷಣೆ ಯನ್ನು ಮಾಡಿಕೊಳ್ಳಬೇಕು.

**ಗುರುವಂದನೆ**

ನಮಗೆ ಮಂತ್ರೋಪದೇಶಗೈದ ಎಲ್ಲ ಬಗೆಯ ಗುರುಗಳನ್ನು ನಮಿಸಬೇಕು. ಮಂತ್ರದೇವತೆಯನ್ನು ಕೊನೆಯಲ್ಲಿ ವಂದಿಸಬೇಕು.

## ಕರಶುದ್ಧಿ

ಬೀಜತ್ರಯಮಂತ್ರಗಳಿಂದ ಮೊಣಕೈಯವರೆಗೆ ಎರಡು ಕೈಗಳನ್ನು ಶುದ್ಧಿಗೊಳಿಸಬೇಕು.

## ಪಾಪಪುರುಷ ವಿಸರ್ಜನೆ

ಶೋಷಣ ದಾಹನ ಪ್ಲಾವನಗಳನ್ನು ನಡೆಸಬೇಕು. ನಾಭಿ ಹೃದಯ ಶಿರೋಮಂಡಲಗಳಲ್ಲಿ ಭಗವದ್ರೂಪಗಳನ್ನು ನೆನೆಯಬೇಕು.

## ಪುಣ್ಯಪುರುಷ ಚಿಂತನೆ

ಹೃದಯದಲ್ಲಿ ಪುಣ್ಯಪುರುಷನಾದ ಪ್ರಾಣನನ್ನು ನೆನಯಬೇಕು.

## ತತ್ವನ್ಯಾಸ

ಮೂವತ್ತಾರು ತತ್ವಗಳನ್ನು ತನ್ನ ದೇಹದಲ್ಲಿ ಅಭಿಮಾನಿದೇವತೆಗಳ ಚಿಂತನೆಯೊಡನೆ ನ್ಯಾಸಗೈಯಬೇಕು.

## ಮಾತೃಕಾನ್ಯಾಸ

ತನ್ನ ದೇಹದಲ್ಲಿ 51 ಕಡೆ 'ಅ' ದಿಂದ ಆರಂಭಿಸಿ 'ಕ್ಷ'ದವರೆಗಿನ ಅಕ್ಷರಗಳನ್ನು ಅಜಾದಿ ಭಗವದ್ರೂಪಗಳ ನಮನದೊಡನೆ ನ್ಯಾಸಗೈಯಬೇಕು.

## ಲೋಕನ್ಯಾಸ

ಪ್ರಣವದೊಡನೆ ಸಪ್ತವ್ಯಾಹೃತಿಗಳಿಂದ ತನ್ನ ದೇಹದಲ್ಲಿ ಪಾದದಿಂದ ಶಿರಸ್ಸಿನವರೆಗೆ ಸಪ್ತಾಂಗಗಳಲ್ಲಿ ನ್ಯಾಸ ಮಾಡಬೇಕು.

## ಗಾಯತ್ರೀ ಜಪ

ಗಾಯತ್ರೀ ಮಂತ್ರದಿಂದ ಪ್ರಾಣಾಯಾಮವನ್ನು ಮಾಡಬೇಕು. ಪ್ರಾಣಾಯಾಮದಲ್ಲಿ ಮಂತ್ರವನ್ನು ಮೂರು ಬಾರಿ ಹೇಳಬೇಕು. ಜಪದ ಮಂತ್ರಕ್ಕೆ ಸಂಬಂಧಿಸಿದ ಋಷಿಯನ್ನು ಮುಂದಲೆ ಮುಟ್ಟಿ ನೆನೆಯಬೇಕು. ಮಂತ್ರದ ಅಕ್ಷರ ಲೆಕ್ಕದಲ್ಲಿ ಬಂದಂತೆ ಛಂದಸ್ಸನ್ನು ಛಂದಸ್ಸಿನ ದೇವತೆಯನ್ನು ಬಾಯಿಮುಟ್ಟಿ ಸ್ಮರಿಸ ಬೇಕು. ಮಂತ್ರ ದೇವತೆಯನ್ನು ಎದೆಮುಟ್ಟಿ ನೆನೆದು ಅಭಿವಂದಿಸಬೇಕು.

ಮಂತ್ರದ ಘಟಕಗಳಿಂದ ಕರನ್ಯಾಸವನ್ನು ಮಾಡಬೇಕು. ಮಂತ್ರ ಘಟಕಗಳಿಂದ ಹೃದಯಾದಿ ಪಂಚಾಂಗನ್ಯಾಸವನ್ನು ಅಥವಾ ಷಡಂಗನ್ಯಾಸವನ್ನು ಮಾಡಬೇಕು.



ಹೃದಯಮುದ್ರೆ ಶಿರೋಮುದ್ರೆ ಶಿಖಾಮುದ್ರೆ ಕವಚಮುದ್ರೆ ನೇತ್ರ ಮುದ್ರೆ ಅಸ್ತ್ರಮುದ್ರೆಗಳನ್ನು ಬಳಸಬೇಕು. ಮಂತ್ರದ 24 ಅಕ್ಷರಗಳನ್ನು ದೇಹದ ಅವಯವಗಳಲ್ಲಿ ಅಕ್ಷರದೇವತಾಸ್ಮರಣೆಯೊಂದಿಗೆ ನ್ಯಾಸಗೈಯಬೇಕು.

24 ಮುದ್ರೆಗಳನ್ನು ತೋರಿಸಬೇಕು. ಗಾಯತ್ರೀಮಂತ್ರದ ಪದಕವಚವನ್ನು ಪಠಿಸಬೇಕು. ಗಾಯತ್ರೀಮಂತ್ರ ಪ್ರತಿಪಾದ್ಯನಾದ ಸವಿತೃಮಂಡಲ ಮಧ್ಯವರ್ತಿ ಯಾದ ಚಕ್ರಶಂಖಗದಾಪದ್ಮ ಧರಿಸಿದ ನಾರಾಯಣನನ್ನು ಧ್ಯಾನಿಸಬೇಕು. ಗಾಯತ್ರೀಜಪವನ್ನು ಮತ್ತೆ ತರ್ಪಣವನ್ನು ನೀಡುವೆನೆಂದು ಸಂಕಲ್ಪಪೂರ್ವಕ ನೀರು ಬಿಡಬೇಕು.

ಸೂರ್ಯನುದಯಿಸುವ ಮೊದಲೇ ಗಾಯತ್ರೀ ಮಂತ್ರ ಜಪ ವನ್ನು ಆರಂಭಿಸಬೇಕು. ಗಾಯತ್ರೀ ಮಂತ್ರ ಜಪವನ್ನು ನಿಂತು ಮಾಡಬೇಕು. ಸೂರ್ಯನುದಯಿಸಿದ ಬಳಿಕ ಗಾಯತ್ರೀ ಮಂತ್ರ ಜಪವನ್ನು ಕುಳಿತು ಮಾಡಬಹುದು. ಮಧ್ಯಾಹ್ನ ನಿಂತು ಮತ್ತು ಸಂಜೆ ಕುಳಿತು ಮಾಡಬೇಕು.

ಪ್ರತಿನಿತ್ಯ ಸಾವಿರ ಬಾರಿ ಜಪ ಉತ್ತಮ

ಅನಧ್ಯಯನ ದಿನಗಳಲ್ಲಿ ನೂರು ಬಾರಿ ಜಪ – ಮಧ್ಯಮ

ಆಶೌಚದಲ್ಲಿ ಹತ್ತು ಬಾರಿ ಜಪ (ಅಧಮ)

ಬೆಳಿಗ್ಗೆ – ನಾಭಿಸಮವಾಗಿ ಎರಡು ಕೈಗಳನ್ನು ಅಂಜಲಿಮುದ್ರೆಯಂತೆ ಹಿಡಿದುಕೊಂಡು ಅಂಗುಲಿ ಪರ್ವಗಳಲ್ಲಿಯೇ ಲೆಕ್ಕಮಾಡುತ್ತಾ ಗಾಯತ್ರೀ ಮಂತ್ರವನ್ನು ಜಪಿಸಬೇಕು.

ಮಧ್ಯಾಹ್ನ – ಎದೆಯ ಹತ್ತಿರ

ಸಂಜೆ – ಮುಖದೆದುರು

ಹತ್ತು ಜಪಕ್ಕೆ ಒಂದರಂತೆ ಮಂತ್ರದೇವತೆಯ ನಾಮದೊಂದಿಗೆ ತರ್ಪಣ ನೀಡಬೇಕು. ಉದ್ಧರಣೆಯಿಂದ ನೀರನ್ನು ಬಲ ಅಂಗೈ ನಡುವೆ ಹಾಕಬೇಕು. ಮುದ್ರೆಗಳನ್ನು ವಿನ್ಯಾಸಗೈಯಬೇಕು. ಮತ್ತೆ ಧ್ಯಾನ ಅಕ್ಷರನ್ಯಾಸ ಅಂಗನ್ಯಾಸ ಕರನ್ಯಾಸ ಋಷ್ಯಾದಿನ್ಯಾಸ ಪ್ರಾಣಾಯಾಮಗಳನ್ನೆಲ್ಲ ಮಾಡಬೇಕು.

ಗಾಯತ್ರೀ ಜಪದ ಕೃಷ್ಣಾರ್ಪಣ ಬಿಡಬೇಕು.

# ಅಷ್ಟಾಕ್ಷರ ಮಂತ್ರ ಪ್ರತಿಪಾದ್ಯ ರೂಪ



ಉದ್ಯದ್ಭಾಸ್ಕರಸಮಾಭಾಸಃ ಚಿದಾನಂದೈಕದೇಹವಾನ್
ಚಕ್ರಶಂಖಗದಾಪದ್ಮಧರೋ ಧ್ಯೇಯೋಽಹಮೀಶ್ವರಃ
ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿಗಣಮಧ್ಯಗಃ
ಬ್ರಹ್ಮವಾಯುಶಿವಾಹೀಶವಿಪೈಃ ಶಕ್ರಾದಿಕೈರಪಿ
ಸೇವ್ಯಮಾನೋಽಧಿಕಂ ಭಕ್ತ್ಯಾ ನಿತ್ಯನಿಃಶೇಷಶಕ್ತಿಮಾನ್
(ತಂತ್ರಸಾರಸಂಗ್ರಹ)




# ಸಂಧ್ಯಾಸಮೀಕ್ಷಾ ೨



ಡಾ. ಶತಾವಧಾನಿ ಉಡುಪಿ ರಾಮನಾಥ ಆಚಾರ್ಯ

# ಗಾಯತ್ರೀ ಮಂತ್ರ ಪ್ರತಿಪಾದ್ಯ ರೂಪ



ಧ್ಯೇಯಃ ಸದಾ ಸವಿತೃ–ಮಂಡಲ–ಮಧ್ಯವರ್ತೀ

ನಾರಾಯಣಃ ಸರಸಿಜಾಸನ–ಸನ್ನಿವಿಷ್ಟಃ

ಕೇಯೂರವಾನ್ ಮಕರ–ಕುಂಡಲವಾನ್ ಕಿರೀಟೀ

ಹಾರೀ ಹಿರಣ್ಮಯ–ವಪುಃ ಧೃತ–ಶಂಖ–ಚಕ್ರಃ

(ನೃಸಿಂಹಪುರಾಣ, ಗರುಡಪುರಾಣ, ಯಾಜ್ಞವಲ್ಕ್ಯಸಂಹಿತಾ, ಬ್ರಹ್ಮಾಂಡಪುರಾಣ, ಭವಿಷ್ಯಪುರಾಣ, ತ್ರ್ಯಚಾಕಲ್ಪ )

# ಸಂಧ್ಯಾಸಮೀಕ್ಷಾ ೨




7

ಸಂಪ್ರದಾನ

ಡಾ. ಶತಾವಧಾನಿ ಉಡುಪಿ ರಾಮನಾಥ ಆಚಾರ್ಯ

ಅಷ್ಟಕುಲನಾಗದೇಶಿಕಾರ್ಯ



# ಸಂಧ್ಯಾಸಮೀಕ್ಷಾ ೨


| | |
|---|---|
| ಸಂಪ್ರದಾನ | ಡಾ. ಶತಾವಧಾನಿ ಉಡುಪಿ ರಾಮನಾಥ ಆಚಾರ್ಯ<br>ಅಷ್ಟಕುಲನಾಗದೇಶಿಕಾರ್ಯ |
| ಹಕ್ಕು | ಸಂಗ್ರಾಹಕರದ್ದು |
| ಪುಟ | 600 (2 ಭಾಗ) |
| ವರ್ಷ | 2020 |
| ಮುದ್ರಣ ಮತ್ತು ವಿನ್ಯಾಸ | ಸುಗುಣ ಪ್ರಿಂಟರ್ಸ್<br>ಶ್ರೀಪುತ್ತಿಗೆ ಮಠ<br>ರಥಬೀದಿ, ಉಡುಪಿ – 576101<br>ದೂರವಾಣಿ 0820–2531300 |


| | |
|---|---|
| ಅವತಾರಸಮೀಕ್ಷಾ (ಸಂಸ್ಕೃತ) | ಪಕ್ಷಿಸಮೀಕ್ಷಾ |
| ತಂತ್ರಸಮೀಕ್ಷಾ (ಸಂಸ್ಕೃತ) | ಸುರಸಮೀಕ್ಷಾ |
| ನಾಗಸಮೀಕ್ಷಾ (ಸಂಸ್ಕೃತ) | ಸ್ಕಂದಸಮೀಕ್ಷಾ |
| ಕರ್ಮಸಮೀಕ್ಷಾ – 2 3 | ಚಿತ್ರಸಮೀಕ್ಷಾ |
| ಮೂರ್ತಿಸಮೀಕ್ಷಾ – 1 2 3 | ಶಾಂತಿಸಮೀಕ್ಷಾ |
| ಮುದ್ರಾಸಮೀಕ್ಷಾ – 3 | ಸೂತ್ರಸಮೀಕ್ಷಾ |
| ಶ್ರಾದ್ಧಸಮೀಕ್ಷಾ | ವೇದಸಮೀಕ್ಷಾ |



#  ನನ್ನ ಪ್ರತಿಜ್ಞೆ 

ವಿಶ್ವದಲ್ಲಿಯೇ ಅತಿ ಹೆಚ್ಚಿನ ದೈವಿಕ ಶಕ್ತಿ ಕೇಂದ್ರ ಭಾರತ ದೇಶ. ಉತ್ಖನನದಿಂದಲೂ ಅನೇಕ ಐತಿಹಾಸಿಕ ದಾಖಲೆಗಳನ್ನು ಬಹಿರಂಗಗೊಳಿಸಿದ ರಾಷ್ಟ್ರವಿದು. ಇದರ ಪ್ರಾಚೀನ ಭಾಷೆ ಸಂಸ್ಕೃತ ವಿಶ್ವದಲ್ಲೇ ಅತಿ ಹಳೆಯ ಭಾಷೆ ಎಂದು ದೃಢಪಟ್ಟಿದೆ. ಇಂದಿನವರೆಗೂ ಯಾವ ಕೃತಿಗೂ ಸರಿಸಾಟಿ ಇಲ್ಲದ ವೇದವ್ಯಾಸರ ಮೇರುಕೃತಿ **ಮಹಾಭಾರತ** ಸಂಸ್ಕೃತಭಾಷೆಯ ಶಾಸ್ತ್ರಕಾವ್ಯ ನಮ್ಮ ದೇಶದ ಕೊಡುಗೆ. ಇದರಲ್ಲಿ ತಿಳಿಸದ ಸಂಗತಿ ಮತ್ತೆಲ್ಲಿಯೂ ಇಲ್ಲವೆಂದೇ ಇದರ ಪ್ರಖ್ಯಾತಿ. ಮಹಾಭಾರತದ ಮಹಾನಾಯಕ ಶ್ರೀಕೃಷ್ಣ. 5100 ವರುಷದ ಹಿಂದೆಯೇ ಮನುಕುಲಕ್ಕೆ ಶಾಶ್ವತ ಮೌಲ್ಯಗಳ ಜೊತೆಗೆ ಜೀವನ ತತ್ವವನ್ನು ಉಪದೇಶಿಸಿದವನು. ಇದು **ಭಗವದ್ಗೀತೆ**ಯೆಂದೇ ಎಲ್ಲೆಡೆ ಪ್ರಸಿದ್ಧ. ಪ್ರಪಂಚದ ಸಾವಿರಾರು ಭಾಷೆಗಳಲ್ಲಿ ಗೀತೆ ಅನೂದಿತ. ಆಚಾರ್ಯಪುರುಷರೆಲ್ಲರೂ ಇಲ್ಲಿ ಮುಳುಗೆದ್ದವರೇ. ಮತ್ತೆ ಸಮಾಜಸುಧಾರಕರು ಅನೇಕರು ಬಾಪು, ನೆಹರು, ವಿನೋಬಾ, ಅನಿ, ಗೋಖಲೆ, ಬೋಸ್, ಠಾಗೋರ್, ಅರಬಿಂದೋ, ಓಶೋ, ಕಲಾಂ, ಹೆಸ್ಸೆ, ಹೇಮರ್, ಐನ್‌ಸ್ಟೀನ್, ಸರೋಜಿನಿ, ಪಟೇಲ್, ತಿಲಕ್, ಪ್ಲೇಟೋ, ರಮಣ, ದಯಾನಂದ ಮುಂತಾದವರೆಲ್ಲರೂ ಒಪ್ಪಿದ ಗೀತೆ ನಮ್ಮ ಕೃಷ್ಣನದ್ದು. ಕೃಷ್ಣ ತನ್ನ ತಾಯಿಗೆ ತೋರಿಸಿದ ಬಾಲಲೀಲೆಯನ್ನು ರಮಣಿ ರುಗ್ಮಿಣಿ ಮರೆಯಲ್ಲಿ ನೋಡಿ ಸಂತಸಪಟ್ಟಳು. ತನಗೊಂದು ಪೂಜೆಗೆ ಅಂತದ್ದೇ ಮೂರುತಿ ಇರಲೆಂದು ಕೃಷ್ಣನಲ್ಲಿ ಕೇಳಿ ಮಾಡಿಸಿಕೊಂಡಳು. ಕೃಷ್ಣನ ತೆರಳುವಿಕೆಯ ಕಾಲದಲ್ಲಿ ಸಮುದ್ರವು ದ್ವಾರಕೆಯನ್ನು ಆವರಿಸಿದಾಗ ಕೃಷ್ಣಪ್ರತಿಮೆಯು ಸಮುದ್ರಪಾಲಾಯಿತು. ಐತಿಹಾಸಿಕ ಸ್ಮರಣಿಕೆಯೆನಿಸಿದ ಆ ಪ್ರತಿಮೆಯನ್ನು ಸಮುದ್ರದಡಿಯಿಂದ 800 ವರ್ಷದ ಹಿಂದೆ ಮಧ್ವಾಚಾರ್ಯರು ತಂದು ಕಲಿಯುಗದ ಜನರ ಉದ್ಧಾರಕ್ಕಾಗಿ ಉಡುಪಿಯಲ್ಲಿ ಪ್ರತಿಷ್ಠೆಗೈದರು. ಇಂದಿಗೂ ಕೃಷ್ಣನ ವೈಭವದ ಪೂಜೆ ಉಡುಪಿಯಲ್ಲಿ ನಡೆಯುತ್ತಲೇ ಬಂದಿದೆ. **ಉಡುಪಿ ಶ್ರೀಕೃಷ್ಣ ನಮ್ಮೆಲ್ಲರ ಆರಾಧ್ಯ ದೇವರು. ಕೃಷ್ಣಪ್ರತಿಷ್ಠೆಗೈದ ಮಧ್ವಾಚಾರ್ಯರು ನಮ್ಮೆಲ್ಲರ ಮೂಲಗುರುಗಳು.** ಇದು ನನ್ನ ಪ್ರತಿಜ್ಞೆ. 



## ಸಂಧ್ಯಾಸಮೀಕ್ಷಾ ೧



## ಸಂಧ್ಯಾಸಮೀಕ್ಷಾ ೨

# ಜಪಸಮೀಕ್ಷಾ

## ಅಷ್ಟಾಕ್ಷರ ಜಪ

ಆರಂಭದಲ್ಲಿ ನಾರಾಯಣ ಮಂತ್ರದಿಂದ ಪ್ರಾಣಾಯಾಮವನ್ನು ಮಾಡಬೇಕು. ಪ್ರಾಣಾಯಾಮದಲ್ಲಿ ಮಂತ್ರವನ್ನು ಮೂರು ಯಾ ಒಂಭತ್ತು ಬಾರಿ ಹೇಳಬೇಕು.

ಜಪದ ಮಂತ್ರಕ್ಕೆ ಸಂಬಂಧಿಸಿದ ಋಷಿಯನ್ನು ಮುಂದಲೆ ಮುಟ್ಟಿ ನೆನೆಯಬೇಕು. ಮಂತ್ರದ ಅಕ್ಷರ ಲೆಕ್ಕದಲ್ಲಿ ಬಂದಂತೆ ಛಂದಸ್ಸನ್ನು ಛಂದಸ್ಸಿನ ದೇವತೆಯನ್ನು ಬಾಯಿ ಮುಟ್ಟಿ ಸ್ಮರಿಸಬೇಕು. ಮಂತ್ರ ದೇವತೆಯನ್ನು ಎದೆಮುಟ್ಟಿ ನೆನೆದು ಅಭಿವಂದಿಸಬೇಕು.

ಮಂತ್ರದ ಘಟಕಗಳಿಂದ ಕರನ್ಯಾಸವನ್ನು ಮಾಡಬೇಕು.

ಹೃದಯಾದಿ ಪಂಚಾಂಗನ್ಯಾಸವನ್ನು ಅಥವಾ ಷಡಂಗನ್ಯಾಸವನ್ನು ಮಾಡಬೇಕು. ಹೃದಯಮುದ್ರೆ ಶಿರೋಮುದ್ರೆ ಶಿಖಾಮುದ್ರೆ ಕವಚಮುದ್ರೆ ನೇತ್ರಮುದ್ರೆ, ಅಸ್ತ್ರಮುದ್ರೆಗಳನ್ನು ಬಳಸಬೇಕು.

ಮಂತ್ರದ 8 ಅಕ್ಷರಗಳನ್ನು ದೇಹದ ಅವಯವಗಳಲ್ಲಿ ಅಕ್ಷರದೇವತಾ ಸ್ಮರಣೆಯೊಂದಿಗೆ ನ್ಯಾಸಗೈಯಬೇಕು.

ನಾರಾಯಣಮಂತ್ರ ಪ್ರತಿಪಾದ್ಯನಾದ ಚಕ್ರಶಂಖಗದಾಪದ್ಮ ಧರಿಸಿದ ಲಕ್ಷ್ಮೀಧರಾಶ್ಲಿಷ್ಟ ನಾರಾಯಣನನ್ನು ಬಿಂಬನನ್ನಾಗಿ ಧ್ಯಾನಿಸಬೇಕು.

ಅಷ್ಟಾಕ್ಷರಜಪವನ್ನು ಮತ್ತೆ ತರ್ಪಣವನ್ನು ಮಾಡುವೆನೆಂದು ಸಂಕಲ್ಪ ಪೂರ್ವಕ ನೀರು ಬಿಡಬೇಕು.

ಅಷ್ಟಾಕ್ಷರ ಮಂತ್ರಜಪವನ್ನು ಮೂರು ಹೊತ್ತು ಕುಳಿತು ಮಾಡಬೇಕು.

ಗಾಯತ್ರೀ ಮಂತ್ರ ಜಪದ ಮೂರರಷ್ಟು ಅಷ್ಟಾಕ್ಷರ ಮಂತ್ರವನ್ನು ಜಪಿಸಬೇಕು.

ಅಷ್ಟಾಕ್ಷರ ಮಂತ್ರ ಜಪವನ್ನು ಅಕ್ಷಮಾಲೆಯಲ್ಲಿ ಜಪಿಸುವುದು ಉತ್ತಮ. ಮಂತ್ರ ಜಪಕ್ಕೆ ಇರುವ ಅಕ್ಷಮಾಲೆಯನ್ನು ಕೊರಳಲ್ಲಿ ಧರಿಸಬಾರದು.

ಹತ್ತು ಜಪಕ್ಕೆ ಒಂದರಂತೆ ಮಂತ್ರದೇವತೆಯ ನಾಮದೊಂದಿಗೆ ತರ್ಪಣ



ನೀಡಬೇಕು. ಉದ್ಧರಣೆಯಿಂದ ನೀರನ್ನು ಬಲ ಅಂಗೈ ನಡುವೆ ಹಾಕಬೇಕು.

ಮತ್ತೆ ಧ್ಯಾನ ಅಕ್ಷರನ್ಯಾಸ ಅಂಗನ್ಯಾಸ ಕರನ್ಯಾಸ ಋಷ್ಯಾದಿನ್ಯಾಸ ಪ್ರಾಣಾಯಾಮಗಳನ್ನೆಲ್ಲ ಮಾಡಬೇಕು.

ನಾರಾಯಣಾಷ್ಟಾಕ್ಷರ ಮಂತ್ರ ಜಪದ ಕೃಷ್ಣಾರ್ಪಣ ಬಿಡಬೇಕು.

**ಉಪಸ್ಥಾನ**

ಎದ್ದು ನಿಂತು ಅಷ್ಟದಿಕ್ಪಾಲಕರಿಗೆ ವಂದಿಸಬೇಕು.

ನಾಲ್ಕು ವ್ಯಾಹೃತಿ ಮಂತ್ರಗಳಿಂದ ನಿಂತಲ್ಲೇ ನಾಲ್ಕು ಪ್ರದಕ್ಷಿಣೆಯನ್ನು ಬರಬೇಕು.

**ಗೋತ್ರಾಭಿವಾದನ**

ಪೂರ್ವದಿಕ್ಕಿಗೆ ಮೋರೆ ಹಾಕಿ ನಿಂತು ಬಲಕೈಯಿಂದ ಬಲಕಿವಿಯನ್ನು ಮುಟ್ಟಿಕೊಂಡು ಎಡಕೈಯಿಂದ ಎಡಕಿವಿಯನ್ನು ಮುಟ್ಟಿಕೊಂಡು ತನ್ನ ಗೋತ್ರ ಪ್ರವರ ನಾಮಗಳನ್ನು ಹೇಳುತ್ತಾ ಬಗ್ಗಿ ಎಡಕೈಯನ್ನು ಬಲಬದಿಗೂ ಬಲಕೈಯನ್ನು ಎಡಬದಿಗೂ  ಹಿಡಿದು ನೆಲವನ್ನು ಮುಟ್ಟಿ ನಮಿಸಬೇಕು.

**ಕೃಷ್ಣಾರ್ಪಣ**

ತ್ರಿಕರಣಪೂರ್ವಕವಾಗಿ ಮಾಡಿದ್ದೆಲ್ಲವನ್ನು ಮಧ್ವಾಂತರ್ಗತ ಶ್ರೀಕೃಷ್ಣನಿಗೆ ಅರ್ಪಿಸಬೇಕು. ಕೆಳಮುಖವಾಗಿ ಹಿಡಿದಿರುವ ಅಂಗೈ ನಡುವೆ ಉದ್ಧರಣೆಯಿಂದ ನೀರನ್ನು ಹಾಕಬೇಕು.

**ನಾಮತ್ರಯ ಜಪ**

ಎಲ್ಲ ಬಗೆಯ ಲೋಪಗಳ ಪೂರಣೆಗಾಗಿ ಕರ್ಮಫಲವನ್ನು ಅನಂತವಾಗಿಸಲು ನಮ್ಮ ಅತ್ಯಂತಿಕ ಬಿಡುಗಡೆಗೆ ಪ್ರಾಯಶ್ಚಿತ್ತವಾಗಿ ಪ್ರಾರ್ಥನೆ ಯಾಗಿ ಪೂರ್ಣತೆಗಾಗಿ ನಾಮತ್ರಯವನ್ನು ಮೂರು ಬಾರಿ ಗಡಿಬಿಡಿಯಿಲ್ಲದೆ ಹೃದಯತುಂಬಿ ನುಡಿಯಬೇಕು

**ಅಚ್ಯುತಾಯ ನಮಃ**

**ಅನಂತಾಯ ನಮಃ**

**ಗೋವಿಂದಾಯ ನಮಃ**



# ದೇವಪ್ರಾರ್ಥನೆ

ಸ್ನಾನಕ್ಕೆ ಹೋಗಿದ್ದ ನದೀತಟಾಕಗಳ ಸನಿಹದಲ್ಲೇ ಪುಂಡ್ರಧಾರಣೆಯಿಂದ ಹಿಡಿದು ತರ್ಪಣದವರೆಗಿನ ಜಪಕ್ರಿಯೆ ನಡೆಸಿ ಆಚಮನ ಮಾಡಿ ಅಲ್ಲಿಂದ ದೇವಾಲಯದೊಳಗೋ, ಮನೆಯಲ್ಲೋ ಸಂಧ್ಯಾವಂದನೆಯ ಅಂಗವಾಗಿ ಉಳಿದ ಗಾಯತ್ರ್ಯಾದಿ ಮಂತ್ರಗಳ ಜಪವನ್ನು ನಡೆಸಲು ಸ್ಮೃತಿಕಾರರು ಅವಕಾಶ ನೀಡಿದ್ದಾರೆ. ಪೂರ್ಣಸಂಧ್ಯಾವಂದನೆಯನ್ನು ನದ್ಯಾದಿಗಳಲ್ಲೆ ನಡೆಸಬಹುದು. ಆದರೆ ಮಳೆಗಾಲ – ಚಳಿಗಾಲಗಳಲ್ಲಿ ವಾತಾವರಣದ ವೈಪರೀತ್ಯದಿಂದ ಜಪಕ್ಕೆ ತೊಂದರೆ ಆಗಬಹುದೆಂಬ ಹಿನ್ನೆಲೆಯಲ್ಲಿ ಪುಣ್ಯಸ್ನಾನಕ್ಕೆ ಬರುವ ಮಂದಿಯ ಗಲಾಟೆಯಿಂದ ದೂರಾಗಲು ಏಕಾಂತತೆಗಾಗಿ ಧರ್ಮಶಾಸ್ತ್ರದಲ್ಲಿ ತರ್ಪಣದ ಬಳಿಕ ಬೇರೆಡೆ ಜಪ ಮುಂದುವರಿಸಲು ಅನುಮತಿ ನೀಡಿದ್ದಾರೆ. ಸಂಧ್ಯಾವಂದನೆಯಲ್ಲಿ ಮುಖ್ಯವಾದ ಅರ್ಘ್ಯಪ್ರದಾನವನ್ನು ಜಲಾಶಯದಲ್ಲೆ ನಡೆಸಿ ಗಾಯತ್ರೀ– ಅಷ್ಟಾಕ್ಷರಮಂತ್ರಜಪಕ್ಕೆ ಜಲಾಶಯದಿಂದ ದೂರಕ್ಕೆ ಸಮತಟ್ಟಾದ ನೆಲವುಳ್ಳ ತಾಣಕ್ಕೆ ತೆರಳಬೇಕು. ಮತ್ತಲ್ಲಿ ಹರಿ–ಗುರು ಪ್ರಾರ್ಥನೆಯನ್ನು ನಡೆಸಬೇಕು.

ಸರ್ವಾಶ್ರಯನಾದ ಮಂಗಳರೂಪನಾದ ವರದನಾಯಕ ನಾರಾಯಣನನ್ನು ನೆನೆದು ಎಲ್ಲ ಕೆಲಸಗಳನ್ನು ಆರಂಭಿಸಬೇಕೆಂದು ವಿಧಿಸಿದೆ –

**ಸರ್ವಮಂಗಳಮಾಂಗಲ್ಯಂ ವರೇಣ್ಯಂ ವರದಾಯಕಮ್**

**ನಾರಾಯಣಂ ನಮಸ್ಕೃತ್ಯ ಸರ್ವಕರ್ಮಾಣಿ ಕಾರಯೇತ್**

ಕರ್ಮದ ನಡುವೆ ಬರುವ ಎಲ್ಲ ವಿಘ್ನಗಳ ನಿವೃತ್ತಿಗೆ ಸರ್ವಸಂಹಾರಕನಾದ ನಾರಾಯಣನನ್ನು ಚೆನ್ನಾಗಿ ಚಿಂತನೆಗೈಯಬೇಕೆಂದು ಚತುರ್ಮುಖನಿಗೆ ನಾರಾಯಣನು ತಿಳಿಸಿದ್ದಾನೆ –

**ಸಮ್ಯಗ್ಧ್ಯಾಯೇದ್ಧರಿಂ ಬ್ರಹ್ಮನ್ ಸರ್ವವಿಘ್ನೋಪಶಾಂತಯೇ**

(ನಾರಾಯಣಸಂಹಿತೆ)

ಸಕಲವಿಘ್ನಹರನಾದ ಹರಿಯನ್ನು ಮನಸ್ಸಿನ ಶೌಚಕ್ಕಾಗಿ, ಸತ್ತ್ವಗುಣಾವಿರ್ಭಾವಕ್ಕಾಗಿ ಶುಭ್ರವರ್ಣನನ್ನಾಗಿ ಧ್ಯಾನಿಸಬೇಕು –



**ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣ್ಣಂ ಚತುರ್ಭುಜಮ್**

**ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ**

ಈ ಶ್ಲೋಕ ಹರಿಯ ಧ್ಯಾನವನ್ನು ಹೇಳಿದೆ. ಸಾಮಾನ್ಯವಾಗಿ ಕೆಲವು ಸ್ಮೃತಿಗಳಲ್ಲಿ ಸಂಧ್ಯಾವಂದನೆಯನ್ನು ಹೇಳುವಲ್ಲಿ ನಡುವೆ ಧ್ಯಾನ ಪ್ರಕ್ರಿಯೆಯನ್ನು ತುಂಬಾ ವಿಸ್ತಾರವಾಗಿ ಹೇಳಲಾಗಿದೆ. ಸಂಧ್ಯಾಭಾಷ್ಯಗಳಲ್ಲೂ ಇದನ್ನು ನಡುವೆ ಸೇರಿಸಲಾಗಿದೆ. ಇದರಿಂದ ಈ ಶ್ಲೋಕ ಪಠನದ ಪ್ರಾಮಾಣ್ಯವು ಸಿದ್ಧಿಸುವುದು.

ಕೇವಲ ಶ್ಲೋಕಪಠನ ಮಾತ್ರ ಇಲ್ಲಿ ತಿಳಿಸಿದ್ದಲ್ಲ – ಮೋಕ್ಷಪ್ರದನಾದ ವಾಸುದೇವನ ಧ್ಯಾನವನ್ನಿಲ್ಲಿ ಹೇಳಲಾಗಿದೆ. ಅದಕ್ಕಾಗಿಯೆ ಮನೋದೋಷವನ್ನೂ ಬಾಹ್ಯದೋಷದ ಜತೆ ನಿವಾರಿಸಿ ಜಪಸಿದ್ಧಿಯನ್ನು ನೀಡುವ ಸಕಲ ಜೀವರ ನಿಯಾಮಕನಾದ ಬದುಕಿನಲ್ಲಿ ಗೆಲುವನ್ನು ಕರುಣಿಸುವ ಅಂತರ್ಯಾಮಿಯನ್ನೆ ನೆನೆಯಲು ತಿಳಿಸಿದ್ದಾರೆ–

**ಸರ್ವವಿಘ್ನಪ್ರಶಮನಂ ಸರ್ವಸಿದ್ಧಿಕರಂ ಪರಮ್**

**ಸರ್ವಜೀವಪ್ರಣೇತಾರಂ ವಂದೇ ವಿಜಯದಂ ಹರಿಮ್**

ಭಗವಂತನ ಮೇಲೆ ಹೇಗೆ ಭಕ್ತಿ ಜಾಗೃತಿಗೊಳ್ಳಲಿದೆ ಎನ್ನುವುದರ ಬಗ್ಗೆ ದೇವತೆಗಳು ಚತುರ್ಮುಖನಲ್ಲಿ ಕೇಳಿಕೊಂಡರು–

**ಬ್ರಹ್ಮನ್ ಕೇನ ಪ್ರಕಾರೇಣ ವಿಷ್ಣುಭಕ್ತಿಪರೋ ಭವೇತ್**

ಉತ್ತರವಾಗಿ ಚತುರ್ಮುಖನು **ಶುಕ್ಲಾಂಬರಧರಂ** ಮತ್ತು **ಸರ್ವವಿಘ್ನಪ್ರಶಮನಂ** ಮಾತುಗಳನ್ನು ಹೇಳಿದನು. ಶುಕ್ಲಾಂಬರಧರಂ **ಪದ್ಮಪುರಾಣ**ದಲ್ಲಿಯೂ ಬಂದಿದೆ. ಚತುರ್ಮುಖನ ಉತ್ತರದಲ್ಲಿ ಮತ್ತೂ ಒಂದು ಮಾತು ಹೊರಟದ್ದು **ಸ್ಕಾಂದ**ದಲ್ಲಿದೆ –

**ಅಭೀಪ್ಸಿತಾರ್ಥಸಿದ್ಧ್ಯರ್ಥಂ ಪೂಜ್ಯತೇ ಯಃ ಸುರೈರಪಿ**

**ಸರ್ವವಿಘ್ನಹರಸ್ತಸ್ಮೈ ಗಣಾಧಿಪತಯೇ ನಮಃ**

ಎಲ್ಲಾ ಗಣಗಳ ಸರ್ವಾಧಿಪತಿಯೆನಿಸಿದ ನಾರಾಯಣನಿಗೆ ಇಲ್ಲಿ ನಮನ ಸಂದಿದೆ. ಜೀವಗಣಗಳು, ದ್ರವ್ಯಗಣಗಳು, ಕರ್ಮಗಣಗಳು, ಕಾಲಗಣಗಳು



ಇವೆಲ್ಲವೂ ಭಗವದಧೀನಗಳು. ಮುಕ್ತಗಡಣಗಳಿಗೂ ಭಗವಂತ ಒಡೆಯನು. ಅಭೀಷ್ಟವಾದ ಪರಮಪುರುಷಾರ್ಥ ಮೋಕ್ಷ ಕೊಡಲು ಸಮರ್ಥನು ಆತ ಮಾತ್ರನೇ. ಸುರರೆಲ್ಲರಿಂದ ಪೂಜ್ಯನು ಆತನೊಬ್ಬನೇ. ಭೂತಗಣಗಳಿಗೆ ಮಾತ್ರ ಒಡೆಯ ಶಿವ. ಯಕ್ಷಗಣಗಳ ದೊರೆ ಕುಬೇರ. ಹೀಗೆ ನೀರಿನ ದುಡ್ಡಿನ ರಾಶಿಗಳಿಗೆಲ್ಲಾ ಒಬ್ಬೊಬ್ಬ ದೇವತೆಗಳು ಅಧಿಪರಿದ್ದಾರೆ. ಅದರಂತೆ ವಿಘ್ನಗಣಗಳ ಅಡ್ಡಿ ಆತಂಕಗಳ ಸ್ವಾಮಿ ಗಣಪತಿ. ಆದರೆ ಎಲ್ಲ ಗಣಗಳ ಸರ್ವಾಧಿಪತಿ **ಗಣಾನಾಂ ತ್ವಾ ಗಣಪತಿಂ ಹವಾಮಹೇ** ಎನ್ನುವಂತೆ ಭಗವಂತನೇ ಆಗಿದ್ದಾನೆ. ಅವನೇ ಬ್ರಹ್ಮಣಸ್ಪತಿ. ಮುಕ್ತಗಣಗಳಿಗೂ ಒಡೆಯ. **ಉತಾಮೃತತ್ವಸ್ಯೇಶಾನಃ**

ಹರಿನಮನದ ಜತೆ ಗುರುನಮನವನ್ನು ಮುಂದಿನ ಶ್ಲೋಕ ತಿಳಿಸಿದೆ –

**ಲಕ್ಷ್ಮೀನಾರಾಯಣಂ ವಂದೇ ತದ್ಭಕ್ತಪ್ರವರೋ ಹಿ ಯಃ**

**ಶ್ರೀಮದಾನಂದತೀರ್ಥಾಖ್ಯೋ ಗುರುಸ್ತಂ ಚ ನಮಾಮ್ಯಹಮ್**

ಭಗವಂತ ಜೀವರನ್ನು ಮುಖ್ಯಪ್ರಾಣನ ಮೂಲಕ ನಿಯಮಿಸುತ್ತಾನೆ. ಅಂತಹ ವಾಯುತತ್ವ ಜಪಯಜ್ಞದಲ್ಲಿ ನಮ್ಮೆಲ್ಲರ ಗುರುವಾಗಿ ಆನಂದತೀರ್ಥರಾಗಿ ಅವತರಿಸಬೇಕು. ನಮ್ಮ ಒಂದೊಂದು ಉಸಿರೂ ಜಪಕಾಲದಲ್ಲಿ ಮಂತ್ರ ಚಿಂತನೆಗೆ ಅನುವಾಗುವಂತೆ ಗುರುಕಾರುಣ್ಯ ದೊರೆಯಲೆಂದು ಇಲ್ಲಿ ನೆನೆಯಲಾಗಿದೆ. ಯಾವುದೇ ಮಂತ್ರವನ್ನು ಪಠಿಸಲಿ ಅಲ್ಲಿ ಹರಿಯೆ ವಂದ್ಯನಾಗಿ ವಾಚ್ಯನಾಗಿ ಇರುವನೆಂದು ಮತ್ತೆ ಮತ್ತೆ ಮರೆಯದಿರಲೆಂದು ಕಡೆಗೆ ಸರ್ವಶಬ್ದವಾಚ್ಯನ ವೈಭವವನ್ನು ಸಾರಲಾಗಿದೆ–

**ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ**

**ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ**

ಮಂತ್ರರಾಶಿಯನ್ನಿತ್ತ ವ್ಯಾಸರೂಪಿಯಾದ ನಾರಾಯಣನನ್ನು, ವ್ಯಾಸರ ಹೃದಯವನ್ನು ಬಿಚ್ಚಿಟ್ಟ ಪೂರ್ಣಪ್ರಜ್ಞರನ್ನು ಅವರಿಬ್ಬರ ಅಭಿಪ್ರಾಯವನ್ನು ಸಾರಿ ಸಾರಿ ಹೇಳಿದ ಎಲ್ಲ ಗುರುಗಳನ್ನು ವಂದಿಸಬೇಕು–

**ರಮಾಪತಿಂ ಪೂರ್ಣ್ಣಗುಣಂ ಮುಕುಂದಂ**

**ವ್ಯಾಸಂ ಚ ವಿಜ್ಞಾನಸಹಸ್ರಭಾನುಮ್**

**ಪೂರ್ಣ್ಣಪ್ರಭೋಧಂ ಚ ಸುತತ್ವದೀಪಂ**

**ಕ್ರಮಾದ್ಗುರೂಂಶ್ಚ ಪ್ರಣಮಾಮಿ ಮೂರ್ಧ್ನಾ**

ಈ ಐದು ಶ್ಲೋಕಗಳನ್ನು ಒಂದೇ ಕಡೆ ನಾವಿಂದು ಎಲ್ಲಿಯೂ ಕಾಣಲಾರೆವು. ಇದು ಬೇರೆ ಬೇರೆ ಗ್ರಂಥಗಳಲ್ಲಿ ಬಂದ ಮಾತುಗಳು. ಇವು ಜಪಾರಂಭದಲ್ಲಿನ ಕಾರಿಕೆಗಳು. ಇಲ್ಲಿ ಹೇಳಿದಂತೆ ಮುಂದೆ ಜೀವನಿಯಾಮಕನ ಜಪ ಮತ್ತು ಲಕ್ಷ್ಮೀನಾರಾಯಣರ ಚಿಂತನೆಯನ್ನು ಗುರುನಮನದ ಮೂಲಕ ನಡೆಸಲಾಗುವುದು.

ಅಪ್ಪಯ್ಯದೀಕ್ಷಿತರು ತಮ್ಮ ವರದರಾಜಸ್ತವದಲ್ಲಿ ವಿಷ್ಣುವನ್ನು ಬಿಳಿ ಬಣ್ಣದವನೆಂದು ಬಣ್ಣಿಸಿದ್ದಾರೆ. ಅವರು ಅದಕ್ಕೆ ಕೊಟ್ಟ ಪ್ರಮಾಣವಾಕ್ಯವೆ **ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ** ಎಂದು. ಈ ಶ್ಲೋಕ ಶಿವರಾಘವಸಂವಾದ ದಲ್ಲಿದೆ ಎಂದವರು ಬರೆದಿರುತ್ತಾರೆ.

ವಾಮನಪುರಾಣದಲ್ಲಿ ಬಿಳಿವರ್ಣದ ವಿಷ್ಣುವಿನ ಚಿಂತನೆಯಿದೆ. ಹರಿ ವಂಶದಲ್ಲಿಯೂ ಬಂದಿದೆ. ಕೂರ್ಮಪುರಾಣದಲ್ಲಿ ಶ್ವೇತದ್ವೀಪದಲ್ಲಿಯ ಭಗವಂತನನ್ನು ಶ್ವೇತವರ್ಣದವನೆಂದು ತಿಳಿಸಲಾಗಿದೆ. ಇದರಿಂದ ಈ ಶ್ಲೋಕ ಪರಮದೇವನನ್ನು ಹೇಳದೆ ಬೇರೆ ದೇವತೆಯನ್ನು ಹೇಳಿದೆ ಎನ್ನುವವರು ಅಜ್ಞಾನಿಗಳೆಂದೆ ಹೇಳಾಬೇಕಾಗುವುದು. ಶ್ರೀ ವಾದಿರಾಜತೀರ್ಥರು ತತ್ವಸಾರದಲ್ಲಿ ಈ ಶ್ಲೋಕದ ಅನುವಾದವನ್ನೆ ಮಂಗಳಾಚರಣೆಯನ್ನಾಗಿಸಿದ್ದಾರೆ.

**ವೇದಾಕ್ಷರಾಣಿ ಯಾವಂತಿ ಪಠಿತಾನಿ ದ್ವಿಜಾತಿಭಿಃ**

**ತಾವಂತಿ ಹರಿನಾಮಾನಿ ಪಠಿತಾನಿ ನ ಸಂಶಯಃ**

**ಪದ್ಮಪುರಾಣವು** ವೇದದಲ್ಲಿನ ಎಲ್ಲ ಅಕ್ಷರಗಳಿಗೂ ನಾರಾಯಣನೇ ವಸ್ತುವಾಗಿ ಹೇಳಿದೆ. ಇದರಿಂದ ವೈದಿಕ ಅನುಷ್ಠಾನವೆನಿಸಿದ ಸಂಧ್ಯಾವಂದನೆ ಪೂರ್ತಿ ನಾರಾಯಣನ ಉಪಾಸನೆ.

**ನ ಚಾನ್ಯನ್ನಾಮ ವಿಬ್ರೂಯಾತ್ ಪರಂ ನಾರಾಯಣಾದೃತೇ**

# ಆಸನ

ನಾರಾಯಣಸಂಹಿತೆಯು ಜಪಮಾಡಲು ಯೋಗ್ಯವಾದ ಆಸನ-ದಿಕ್ಕು-ದೇಶಗಳನ್ನು ತಿಳಿಸುತ್ತಾ ಪವಿತ್ರಧಾರಣೆಯನ್ನು, ಪುಂಡ್ರಧಾರಣೆಯನ್ನು, ಗುರುನಮನವನ್ನು ಜಪದ ಮೊದಲು ನಡೆಸಿರಬೇಕೆಂದು ಹೇಳಿದೆ –

**ಕುಶೇಷು ಕೃಷ್ಣತ್ವಚಿ ವಾ ಬೃಂಸ್ಯಾಮೇಕಾಂತಭೂಮಿಷು**
**ಪ್ರಾಗಾದಿದಿಙ್ಮುಖೋ ಭೂತ್ವಾ ನತು ಯಾಮ್ಯಮುಖಃ ಕ್ವಚಿತ್**
**ಉಪವಿಷ್ಟೋ ಜಪೇನ್ಮಂತ್ರಂ ಸಪವಿತ್ರಕರಃ ಶುಚಿಃ**
**ಧೃತೋರ್ಧ್ವಪುಂಡ್ರರಚನೋ ನಾನ್ಯಾಂ ವಾಚಮುದೀರಯನ್**
**ಗುರುಂ ಪ್ರಣಮ್ಯ ಪ್ರಥಮಂ ತತಃ ಕುರ್ಯಾಜ್ಜಪಂ ಬುಧಃ**
**ದೇವತಾಯತನೇ ನದ್ಯಾಂ ಶೈಲೇ ಸಾಗರರೋಧಸಿ**
**ವನೇ ವಾ ತೀರ್ಥದೇಶೇ ವಾ ನ್ಯಗ್ರೋಧಾಶ್ವತ್ಥಸನ್ನಿಧೌ**
**ಅನ್ಯತ್ರ ವಾ ಶುಚೌ ದೇಶೇ ಕುಟೀಂ ಕೃತ್ವಾ ಜಪೇನ್ಮನುಮ್**

ಭಗವದ್ಗೀತೆಯಲ್ಲಿ ಕೃಷ್ಣ ಹೇಳಿದಂತೆ ಸಾಧನೆಗೆ ಯೋಗ್ಯವಾಗಿ ಸಾಧಕ ಬಟ್ಟೆ-ಕೃಷ್ಣಾಜಿನ-ದರ್ಭೆ ಇವುಗಳನ್ನು ಒಂದರ ಮೇಲೊಂದರಂತೆ ಇಟ್ಟು ಅದರ ಮೇಲೆ ಕುಳಿತು ಜಪವನ್ನು ನಡೆಸಬೇಕು. ತುಂಬಾ ಬಟ್ಟೆಯನ್ನು ಉಪಯೋಗಿಸದೆ, ಬಹಳ ದಪ್ಪವಾಗಿಯೂ ಬಟ್ಟೆಯನ್ನು ಹಾಸದೆ, ಅದರಂತೆ ದರ್ಭೆಗಳನ್ನು ಬಹಳ ರಾಶಿಹಾಕದೆ ಸಮತಟ್ಟಾಗಿಸಿ ಆಸನವನ್ನು ರಚಿಸಬೇಕು –

**ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ**
**ನಾತ್ಯುಚ್ಛ್ರಿತಂ ನಾತಿನೀಚಂ ಚೇಲಾಜಿನಕುಶೋತ್ತರಮ್** (ಭಗವದ್ಗೀತೆ)

ಬಟ್ಟೆ ನೆಲದ ಸಂಪರ್ಕವನ್ನು ಕಡಿಯುತ್ತದೆ. ಅಜಿನ ಋತುಮಾನಕ್ಕನುಗುಣವಾಗಿ ಬಿಸಿ ಯಾ ತಂಪನ್ನು ನೀಡುತ್ತದೆ. ದರ್ಭೆ ಮುಖ್ಯವಾದ ಆಸನವಸ್ತು ಎನಿಸಿದೆ. ಯಜ್ಞ ದರ್ಭೆ ಇಲ್ಲದೆ ನಡೆಯದು. ಜಪಯಜ್ಞವೂ ದರ್ಭೆಯನ್ನವಲಂಬಿಸಿದೆ. ಯಜ್ಞದಲ್ಲಿನ ಮಾತಿನಂತೆ ದರ್ಭೆಗಳಲ್ಲಿ ಕುಳಿತು ದರ್ಭೆಗಳನ್ನು ಹಿಡಿದು ಎನ್ನುವುದು ಜಪಯಜ್ಞಕ್ಕೂ ಹೇಳಿದ್ದೇ –



**ದರ್ಭೇಷ್ವಾಸೀನಃ ದರ್ಭಾನ್ ಧಾರಯಮಾಣಃ**

**ಮಹಾಭಾರತವು** ಜಪ ವಿಷಯದಲ್ಲಿ ಹೇಳಿದ ಮಾತಿದು ಅತಿ ಮಹತ್ವದ್ದೆನಿಸಿದೆ–

**ಕುಶೋಚ್ಚಯನಿಷಣ್ಣಸ್ಸನ್ ಕುಶಹಸ್ತಃ ಕುಶೈಃ ಶಿಖೀ**

**ಕುಶೈಃ ಪರಿವೃತಸ್ತಸ್ಮಿನ್ ಮಧ್ಯೇ ಛನ್ನಃ ಕುಶೈಸ್ತಥಾ**

ದರ್ಭೆಯಲ್ಲಿ ಎಲ್ಲ ದೇವತೆಗಳ ಸನ್ನಿಧಾನವೂ ಇದೆ. ಮುಖ್ಯವಾಗಿ ಬ್ರಹ್ಮವಿಷ್ಣುರುದ್ರರ ವಿಶೇಷ ಸನ್ನಿಧಾನದಿಂದ ಮನಸ್ಸಿನಲ್ಲಿ ಚಿಂತನೆ ದೃಢವಾಗಿ ಭಗವದ್ಧ್ಯಾನಕ್ಕೆ, ಭಗವದ್ದರ್ಶನಕ್ಕೆ ದರ್ಭೆ ಅಂತರಂಗದ ಸಾಧನೆಗೆ ಬಹು ಉಪಯುಕ್ತವಾಗಿದೆ –

**ಕುಶಮೂಲೇ ಸ್ಥಿತೋ ಬ್ರಹ್ಮಾ ಕುಶಮಧ್ಯೇ ತು ಕೇಶವಃ**

**ಕುಶಾಗ್ರೇ ಶಂಕರಂ ವಿದ್ಯಾತ್ ಸರ್ವೇ ದೇವಾಃ ಸಮಂತತಃ**

ವರಾಹರೂಪದ ಭಗವಂತನಿಂದ ಯಜ್ಞದ್ರವ್ಯಗಳ ಜೊತೆಗೆ ದರ್ಭೆಗಳೂ ಹುಟ್ಟಿದ್ದರಿಂದ ವಿಶೇಷವಾಗಿ ಭಗವದಾರಾಧನೆಯಲ್ಲಿ ದರ್ಭೆ ಹೆಚ್ಚು ಮಹತ್ವವನ್ನು ಪಡೆದಿದೆ ಎಂದು **ಮತ್ಸ್ಯಪುರಾಣದಿಂದ** ತಿಳಿಯಬಹುದು–

**ವಿಷ್ಣೋರ್ದೇಹಸಮುದ್ಭೂತಾಃ ಕುಶಾಃ ಕೃಷ್ಣತಿಲಾಸ್ತಥಾ**

ದರ್ಭೆಯನ್ನು ಪೂರ್ವಕ್ಕೆ ತುದಿ ಬರುವಂತೆ ಹಾಸಬೇಕೆಂದು **ಕೂರ್ಮಪುರಾಣದಲ್ಲಿ** ಹೇಳಲಾಗಿದೆ–

**ಪ್ರಾಕ್ಕೂಲೇಷು ತತಃ ಸ್ಥಿತ್ವಾ ದರ್ಭೇಷು ಸುಸಮಾಹಿತಃ**

**ಪ್ರಾಣಾಯಾಮತ್ರಯಂ ಕೃತ್ವಾ ಧ್ಯಾಯೇತ್ಸಂಧ್ಯಾಮಿತಿ ಶ್ರುತಿಃ**

ದರ್ಭೆಯನ್ನು ಕೊಯ್ದು ತರುವಾಗಲೂ ಪೂರ್ವ ಯಾ ಉತ್ತರ ಅಥವಾ ಈಶಾನ್ಯ ದಿಕ್ಕಿಗೆ ಮುಖ ಮಾಡಿರಬೇಕು. ಚತುರ್ಮುಖನ ಸೃಷ್ಟಿಯ ಸಂದರ್ಭದಲ್ಲೆ ಹುಟ್ಟಿಬಂದ ದರ್ಭೆಯೇ ಪಾಪವನ್ನು ಪರಿಹರಿಸು, ಮಂಗಳವನ್ನುಂಟುಮಾಡೆಂದು ಪ್ರಾರ್ಥಿಸಿ ದರ್ಭೆಯನ್ನು ತುಂಡುಮಾಡಬೇಕು. ಚತುರ್ಮುಖನ ಮೂಗಿನಿಂದ ಹುಟ್ಟಿರುವ ಚಿಂತನೆಯು ಬೋಧಾಯನರ ಪಾಠದಲ್ಲಿರುವಂತೆ ಇದೆ. ವರಾಹರೂಪದಿಂದ ಭಗವಂತನು ಚತುರ್ಮುಖನ



ಮೂಗಿನ ಹೊರಳೆಯಿಂದಲೇ ಅವತರಿಸಿರುವನು. ಆ ವರಾಹನ ಮೈಯಿಂದ ದರ್ಭೆಗಳು ಹುಟ್ಟಿರುವುವು. ಹೀಗೆ ಪರಂಪರೆಯಿಂದ **ವಿರಿಂಚನಾಸಿಕೋತ್ಪನ್ನ** ದರ್ಭೆ ಎನಿಸಿದೆ. ಶ್ರಾವಣಮಾಸದಲ್ಲಿ ಅಮಾದಂದು ಕೊಯ್ದ ದರ್ಭೆ ವರ್ಷಪೂರ್ತಿ ಅಶುದ್ಧಿಯಾಗದು. ದಕ್ಷಿಣಕ್ಕೆ ಮೋರೆ ಹಾಕಿ ಕೊಯ್ದರೆ ಅದು ಪಿತೃಕರ್ಮಗಳಿಗೆ ಮಾತ್ರ ವಿನಿಯೋಗಕ್ಕೆ ಎಂದು **ಹಾರೀತರ** ಮಾತು.

**ದರ್ಶೇ ಶ್ರಾವಣಮಾಸಸ್ಯ ಸಮಂತ್ರೋತ್ಪಾಟಿತಾಃ ಕುಶಾಃ**
**ಅಯಾತಯಾಮಾಸ್ತೇ ದರ್ಭಾಃ ನಿಯೋಜ್ಯಾಃ ಸ್ಯುಃ ಪುನಃಪುನಃ**
**ದೇವಾರ್ಥಾನ್ ಪ್ರಾಙ್ಮುಖೋ ದರ್ಭಾನ್ ಪಿತ್ರರ್ಥಾನ್ ದಕ್ಷಿಣಾಮುಖಃ**
**ಛಿತ್ವೋಪವೀತೀ ಪ್ರಾಚೀನಾವೀತೀ ತಾನ್ನಿಕ್ಷಿಪೇತ್ ಪೃಥಕ್**

ಭಾನುವಾರದಂದು ಕೊಯ್ದರೆ ಒಂದು ವಾರಕ್ಕೆ ಮಾತ್ರ ಉಪಯೋಗಕ್ಕೆ ಬರುವುದು. ಸಂಗ್ರಹಿಸಿದ ದರ್ಭೆ ಮತ್ತೆ ಕೆಲಸಕ್ಕೆ ಬರುವುದಿಲ್ಲ. ಮತ್ತೊಮ್ಮೆ ಕೊಯ್ಯಬೇಕು. ಅಮಾದಂದು ಕೊಯ್ದರೆ ಆ ತಿಂಗಳು ಉಪಯೋಗಿಸಬಹುದು. ಪುಷ್ಯಮಾಸದಲ್ಲಿ ಕೊಯ್ದಿಟ್ಟರೆ ಆರು ತಿಂಗಳವರೆಗೆ ಉಪಯೋಗಿಸಬಹುದು. ಮಾಘಮಾಸದ ಅಮಾವಾಸ್ಯೆಯಲ್ಲಿ ಕೊಯ್ದದ್ದು 360 ದಿನಕ್ಕೆ ಬರಲಿದೆ. ಶ್ರಾವಣದ ಅಮಾವಾಸ್ಯೆಯಂದು ಕೊಯ್ದ ದರ್ಭೆ ಅತ್ಯಂತ ಪ್ರಶಸ್ತವಾದದ್ದು. ಬೆಳಿಗ್ಗೆ ಕೊಯ್ಯಬೇಕು. ಹಿಂದೆ ಹೇಳಿದ ರೀತಿಯಲ್ಲಿ ಹೊಸ ದರ್ಭೆ ಸಿಗದೇ ಇದ್ದಲ್ಲಿ ಕಾಲ ಕಳೆದುಹೋದ ಹಳೆಯ ದರ್ಭೆಯನ್ನು ಉಪಯೋಗಿಸಲು ಅಡ್ಡಿಯಿಲ್ಲ ಎಂದು **ಬೋಧಾಯನರ** ಪ್ರಯೋಗಚಿಂತನ –

**ಭಾನುವಾರೇ ತು ಗೃಹ್ಣೀಯಾತ್ ಸಪ್ತಾಹಂ ಸಂಪ್ರಯೋಜಯೇತ್**
**ದರ್ಶೇದರ್ಶೇ ತು ಗೃಹ್ಣೀಯಾತ್ ತತ್ತನ್ಮಾಸಂ ಪ್ರಯೋಜಯೇತ್**
**ಸಹಸ್ಯೇ ಚೇತ್ತು ಷಾಣ್ಮಾಸಂ ತಪೋಮಾಸೇ ತು ವತ್ಸರಮ್**
**ನಭಸ್ಯಬ್ಧಂ ತಥಾ ದರ್ಶೇ ಪೂರ್ವಾಹ್ಣೇ ಸಂಭರೇದ್ಬುಧಃ**
**ಕಾಲಾತೀತಕುಶಾದ್ಯಾಸ್ತು ಯೋಜನೀಯಾಸ್ತ್ವಸಂಭವೇ**
**ದರ್ಭಾದಿ ಸಂಭವೇದ್ಯತ್ರ ತತ್ರ ಗತ್ವಾ ಜಪೇನ್ನರಃ**



**ವಿರಿಂಚನಾಸಿಕೋತ್ಪನ್ನ ಪರಮೇಷ್ಠೀಪರಿಗ್ರಹ**

**ನುದ ಪಾಪಾನಿ ಸರ್ವಾಣಿ ದರ್ಭ ಸ್ವಸ್ತಿಕರೋ ಭವ**

ದರ್ಭೆಯ ನಾಲ್ಕು ಬಗೆಯನ್ನು ಪರಿಚಯಿಸುತ್ತಾ ಶಾಸ್ತ್ರವು ಧರ್ಮಾನುಷ್ಠಾನದಲ್ಲಿ ಸಪ್ತಪತ್ರಜಾತಿಗೆ ಹೆಚ್ಚು ಮಹತ್ವವನ್ನು ಕೊಟ್ಟಿದೆ (ಇದು ಕರಾವಳಿಯಲ್ಲಿ ವಿರಳವಾಗಿದೆ) –

**ಸಪ್ತಪರ್ಣಾಃ ಶುಭಾ ದರ್ಭಾಃ ತೀರಕ್ಷೇತ್ರಸಮುದ್ಭವಾಃ**

**ತೇ ಪ್ರಶಸ್ತಾ ನಿಯೋಕ್ತವ್ಯಾ ದೈವೇ ಪಿತ್ರ್ಯೇ ಚ ಕರ್ಮ್ಮಣಿ**

**ಜಾತಿಮಾತ್ರೋ ಭವೇದ್ದರ್ಭಃ ಸಾಗ್ರಮೂಲಃ ಕುಶಃ ಸ್ಮೃತಃ**

**ಸಪ್ತಪತ್ರಸ್ತು ಕುತಪಃ ಭಿನ್ನಾಗ್ರಸ್ತೃಣಮುಚ್ಯತೇ**

**ಅಚ್ಛಿನ್ನಾಗ್ರಾ ಅಶುಷ್ಕಾ ಯೇ ಹ್ರಸ್ವಾಶ್ಚೈವ ಪ್ರಮಾಣತಃ**

**ಕುತಪಾ ಇತಿ ವಿಜ್ಞೇಯಾಃ ತೈಸ್ತು ಶ್ರಾದ್ಧಂ ಸಮಾಚರೇತ್**

ತನ್ನ ಜಪತಪಾನುಷ್ಠಾನಗಳಿಗೆ ತಾನೇ ಹೂ, ತುಳಸಿ, ನೀರು, ದರ್ಭೆಗಳನ್ನು ಸಂಗ್ರಹಿಸಿ ತರಬೇಕು ಹೊರತು ಇತರರಿಂದ ತರಿಸುವುದಲ್ಲ. ಇದರಿಂದ ಸಾಧನೆಯ ಫಲ ಮತ್ತೊಬ್ಬನಿಗೆ ಹೋಗಲಿದೆ. ಅಷ್ಟೆ ಅಲ್ಲದೆ ತಂದವನ ಮನೋಭಾವ ತಿಳಿಯದ ಕಾರಣ ಅಲ್ಲಿನ ದೋಷಗಳು ತಂದ ದರ್ಭೆ, ತುಳಸಿ, ನೀರು ಮುಂತಾದ ಪದಾರ್ಥಗಳಲ್ಲಿ ಸೇರಲಾಗಿ ಅನುಷ್ಠಾನಗಳಲ್ಲಿ ದೋಷ ಕಂಡುಬರಲು ಸಾಧಕನಿಗೆ ತೊಂದರೆಯೆ ಸಿಗಲಿದೆ. ಹೀಗೆಯೆ ಅಂಗಡಿ ಮುಂತಾದ ಕಡೆಯಿಂದಲೂ ದುಡ್ಡು ಕೊಟ್ಟು ಸಾಧನಾದ್ರವ್ಯಗಳನ್ನು ಸಂಗ್ರಹಿಸುವುದೂ ತಪ್ಪು ಎಂದು **ಸಂನ್ಯಾಸರತ್ನಮಾಲಾ** ಹೇಳಿದೆ–

**ಸಮಿತ್ಪುಷ್ಪಕುಶಾದೀನಿ ಬ್ರಾಹ್ಮಣಃ ಸ್ವಯಮಾಹರೇತ್**

**ಶೂದ್ರಾನೀತೈಃ ಕ್ರಯಕ್ರೀತೈಃ ಕರ್ಮ್ಮ ಕುರ್ವನ್ ಪತತ್ಯಧಃ**

ತಾನೇ ತನ್ನ ಸಾಧನೆಗಾಗಿ ದ್ರವ್ಯಗಳನ್ನು ತರುವಾಗ ಮನಸ್ಸು ಶುಚಿಯಾಗಿದ್ದು ಮಂತ್ರೋಚ್ಚಾರಣೆಯಲ್ಲಿ ಮಾತು ತೊಡಗಿದ್ದು ದೇಹ ಸಾಧನಾಂಗ ಕ್ರಿಯೆಯಲ್ಲಿರಲಾಗಿ ತ್ರಿಕರಣಪೂರ್ವಕವಾದ ಸಂಬಂಧ ಜಪಾದಿ ಸಾಧನೆಗೆ



ಸಿಗುವುದು. ಇದನ್ನು **ಮಾಧವೀಯದಲ್ಲಿ** ಸ್ಪಷ್ಟಪಡಿಸಲಾಗಿದೆ–

**ಶುಚೌ ದೇಶೇ ಶುಚಿರ್ಭೂತ್ವಾ ಸ್ಥಿತ್ವಾ ಪೂರ್ವೋತ್ತರಾಮುಖಃ**

**ಓಂಕಾರೇಣೈವ ಮಂತ್ರೇಣ ಕುಶಾಃ ಸ್ಪೃಶ್ಯಾ ದ್ವಿಜೋತ್ತಮೈಃ**

ಇತರರು ತಂದ ದರ್ಭೆಯಲ್ಲಿ ದೇಶ–ಕಾಲ–ಮಂತ್ರಗಳ ಬಗ್ಗೆ ಸಂಶಯವಿರಲಾಗಿ ಶಿಷ್ಯ–ಪುತ್ರ–ಆಪ್ತರು ತಂದಲ್ಲಿ ಸ್ವಂತ ಸಾಧನೆಯಲ್ಲಿ ಅದನ್ನು ಉಪಯೋಗಿಸಬಹುದೆಂದು ಶಾಸ್ತ್ರಕಾರರು ರಿಯಾಯಿತಿಯನ್ನು ಹೇಳಿದ್ದಾರೆ.

ಗೀತೆಯಲ್ಲಿಯ ಕೃಷ್ಣನ **ಚೇಲಾಜಿನಕುಶೋತ್ತರ** ಎಂಬ ಆಸನದ ಮಾತಿಗೆ ಟೀಕಾಟಿಪ್ಪಣಿಗಳ ವ್ಯಾಖ್ಯಾನ ಪರಂಪರೆಯಲ್ಲಿ ಎರಡು ರೀತಿಯ ಅರ್ಥವೂ ಕಂಡಿದೆ. 1) ನೆಲಕ್ಕೆ ತಾಗಿ ಬಟ್ಟೆ ಮೇಲೆ ಅಜಿನ ಕಡೆಗೆ ಸಾಧಕನ ಮೈಗೆ ತಾಗುವಂತೆ ಕುಶ. 2) ನೆಲದಲ್ಲಿ ಹಾಸಿದ ಕುಶದ ಮೇಲೆ ಅಜಿನ, ಮೇಲೆ ಜಾಪಕನ ಮೈಗೆ ತಾಗುವಂತೆ ಬಟ್ಟೆ, ಇವೆರಡರಲ್ಲಿ ಮೊದಲ ಕ್ರಮವೆ ಸರಿಯಾದ್ದು. ದರ್ಭೆ ಪರಂಪರೆಯಾಗಿ ಆಸನವಾಗಬಾರದು. ಪ್ರಧಾನ ಆಸನವಾಗಿರಬೇಕು ಎನ್ನುವಲ್ಲಿ ಹಲವಾರು ಪ್ರಮಾಣಗಳು ಇವೆ. ದರ್ಭೆಯೊಂದೇ ಆಸನವಾಗಬಹುದು. ಬಟ್ಟೆಯೊಂದೇ ಆಸನವಾಗಲಾರದು. ಮುಖ್ಯವಾಗಿ ಜಪಕ್ಕೆ ಚೇಲಾಜಿನಕುಶೋತ್ತರ–

**ಆಸನಂ ತು ಜಪೇ ಧ್ಯಾನೇ ಚೈಲಾಜಿನಕುಶೋತ್ತರಮ್.**

**ಕುಶೋಪರಿ ನಿವಿಷ್ಟೇನ ತಥಾ ಯಜ್ಞೋಪವೀತಿನಾ**

**ಸರ್ವಂ ಕರ್ಮ್ಮ ಪ್ರಕರ್ತ್ತವ್ಯಂ ಅನ್ಯಥಾ ವಿಫಲಂ ಭವೇತ್**

ವೇದವ್ಯಾಸರು ಶಾತಾತಪನ ಆಶ್ರಮದಲ್ಲಿ ಅಲ್ಲಿನವರು ನೀಡಿದ ಆಸನದಲ್ಲಿ ಕುಳಿತ ಬಗೆಯನ್ನು **ಮಹಾಭಾರತ** ಬಣ್ಣಿಸಿದೆ –

**ವರಂ ತು ವಿಷ್ಟರಂ ಕೌಶಂ ಕೃಷ್ಣಾಜಿನಕುಶೋತ್ತರಮ್**

**ಪ್ರತಿಪೇದೇ ತದಾ ವ್ಯಾಸಃ ತದರ್ಥಮುಪಕಲ್ಪಿತಮ್**

ಗೋಮಯದಿಂದ ನೆಲವನ್ನು ಶುದ್ಧಿಗೊಳಿಸಿ ಆಸನವನ್ನು ಹರಡಬೇಕೆಂದು **ಶೇಷಸಂಹಿತೆ** –

**ಶುಚೌ ದೇಶೇ ಸಮಂ ಕೃತ್ವಾ ಗೋಮಯೇನಾನುಲಿಪ್ಯ ಚ**



**ನಾತ್ಯುಚ್ಛ್ರಿತೇ ನಾತಿನೀಚೇ ಚೇಲಾಜಿನಕುಶೋತ್ತರೇ**

ಆಸನದ ಉದ್ದಗಲ ಎತ್ತರಗಳನ್ನು **ಆಚಾರಪ್ರಕಾಶ** ಪ್ರಕಾಶಪಡಿಸಿದೆ –

**ಕುಶಾಜಿನಾಂಬರೈರ್ಯುಕ್ತೈಃ ಚತುರಂಗುಲಮೂರ್ಧ್ವತಃ**

**ಚತುರ್ಹಸ್ತಂ ದ್ವಿಹಸ್ತಂ ಚ ಸುದೃಢಂ ಮೃದು ನಿರ್ಮಲಮ್**

**ಯಥೋಕ್ತಾಸನಮಾರೂಢೋ ಜಪಮಂತ್ರಾನ್ ಸಮಾಚರೇತ್**

ಎತ್ತರ ನಾಲ್ಕಂಗುಲ, ಉದ್ದಗಲ ನಾಲ್ಕು ಮೊಳ (96")–ಎರಡು ಮೊಳ (48").
ಮರದ ಆಸನಕ್ಕೂ ಅವಕಾಶವನ್ನು ಕೆಲವೆಡೆ ಕಲ್ಪಿಸಲಾಗಿದೆ –

**ಕೌಶೇಯಂ ಕಂಬಲಂ ಚೈವ ಅಜಿನಂ ಪಟ್ಟಮೇವ ಚ**

**ದಾರುಜಂ ತಾಲಪತ್ರಂ ವಾ ಆಸನಂ ಪರಿಕಲ್ಪಯೇತ್**

ಮರದ ಆಸನವಾದರೆ ಎರಡು ಅಡಿಯಷ್ಟು ಉದ್ದ, ಅಗಲ 16 ಇಂಚು. ಎತ್ತರ 6 ಯಾ 4 ಅಂಗುಲ ಎಂದು **ಕಾಲಿಕಾಪುರಾಣ**ದ ಮಾತು –

**ಚತುರ್ವಿಂಶತ್ಯಂಗುಲೇನ ದೀರ್ಘಂ ಕಾಷ್ಠಾಸನಂ ಮತಮ್**

**ಷೋಡಶಾಂಗುಲವಿಸ್ತೀರ್ಣ್ಣಂ ಉಚ್ಛ್ರಾಯೇ ಚತುರಂಗುಲಮ್**

**ಷಡಂಗುಲಂ ವಾ ಕುರ್ಯಾತ್ತು ನೋಚ್ಛ್ರಿತಂ ಚಾತ ಆಚರೇತ್**

ಆಸನದ ಬಟ್ಟೆಯ ಉದ್ದಳತೆಯನ್ನು ಪುರಾಣ ಹೇಳಿದೆ –

**ವಾಸ್ತ್ರಂ ತ್ರಿಹಸ್ತಾನ್ನೋ ದೀರ್ಘಂ ಸಾರ್ಧಹಸ್ತಾನ್ನ ವಿಸ್ತೃತಮ್**

**ನ ತ್ರ್ಯಂಗುಲಾತ್ತಥೋಚ್ಛ್ರಾಯಂ ಪೂಜಾಕರ್ಮ್ಮಣಿ ಸಂಶ್ರಯೇತ್**

ಆರು ಅಡಿ ಉದ್ದ, ಮೂರಡಿ ಅಗಲ, ಮೂರಂಗುಲ ಎತ್ತರ ಬಟ್ಟೆಯ ಆಸನ. ಚರ್ಮದ ಆಸನಕ್ಕೆ ಉದ್ದಳತೆಯ ಅವಶ್ಯಕತೆಯಿರದು. ಪ್ರಾಣಿ ಚರ್ಮ ಸಿಕ್ಕಿದ ಹಾಗೆ ಇಡಿಯಾಗಿಯೆ ಹಾಸಿಕೊಳ್ಳುವುದು ಎನ್ನುವುದರ ಬಗ್ಗೆಯೂ ಪುರಾಣ ತಿಳಿಸಿದೆ –

**ಯಥೇಷ್ಟಂ ಚಾರ್ಮ್ಮಣಂ ಕುರ್ಯಾತ್ ಪೂರ್ವೋಕ್ತಂ ಸಿದ್ಧಿದಾಯಕಮ್**

**ಮನುಸ್ಮೃತಿ**ಯಲ್ಲಿ ಭಿನ್ನಾಸನವನ್ನು ಪರಿತ್ಯಜಿಸಲು ಹೇಳಲಾಗಿದೆ –

**ಬಾಲಾತಪಃ ಪ್ರೇತಧೂಮೋ ವರ್ಜ್ಯಂ ಭಿನ್ನಂ ತಥಾಽಽಸನಮ್**



ಗೃಹ್ಯಪರಿಶಿಷ್ಟದಲ್ಲಿ ಜಪತಪಾನುಷ್ಠಾನಗಳಲ್ಲಿ ಬಳಸಿದ ದರ್ಭೆ ನಿರ್ಮಾಲ್ಯ ವಾಗದೆಂದು ತಿಳಿಸಲಾಗಿದೆ. ಶ್ರಾದ್ಧಕ್ಕೆ ಬಳಸಿದ ದರ್ಭೆ ಮಾತ್ರ ಪುನಃ ಬಳಸಲು ಯೋಗ್ಯವೆನಿಸದು –

**ದರ್ಭಾಃ ಕೃಷ್ಣಾಜಿನಂ ಮಂತ್ರಾಃ ಬ್ರಾಹ್ಮಣಾ ಹವಿರಗ್ನಯಃ**
**ಅಯಾತಯಾಮಾನ್ಯೇತಾನಿ ನಿಯೋಜ್ಞಾನಿ ಪುನಃಪುನಃ**

ಆಸನಗಳ ಭೇದದಿಂದ ಫಲಭೇದವನ್ನು ತಿಳಿಸುವ ಬಹಳ ಮಾತುಗಳು ಅಲ್ಲಲ್ಲಿ ಧರ್ಮಶಾಸ್ತ್ರಗಳಲ್ಲಿ ಕಂಡುಬರುತ್ತವೆ. ಅದರಲ್ಲಿ ಯಾವುದೇ ಆಸನ ಇಲ್ಲದೆ ಜಪಿಸುವುದನ್ನು ನಿಷೇಧಿಸಲಾಗಿದೆ. ಮರದ ಮಣೆಯನ್ನೂ ಎಲೆಯನ್ನೂ ಕಲ್ಲಿನ ಹಾಸನ್ನೂ ಹೆಚ್ಚಾಗಿ ನಿರಾಕರಿಸಿದ್ದಾರೆ–

**ಧರಣ್ಯಾಂ ದುಃಖಸಂಭೂತಿಃ ದೌರ್ಭಾಗ್ಯಂ ದಾರುಕಾಸನೇ**
**ಕೇಶಾಸನೇ ತು ದಾರಿದ್ರ್ಯಂ ಪಲ್ಲವೇ ಚಿತ್ತವಿಭ್ರಮಃ**
**ತೃಣಾಸನೇ ಯಶೋಹಾನಿಃ ಪತ್ರಾಸನಮಶೋಭನಮ್**
**ಭಸ್ಮಾಸನೇ ವ್ಯಾಧಿನಾಶಃ ಪಾಷಾಣೇ ವ್ಯಾಧಿಸಂಭವಃ**
**ಪುಷ್ಪಾಸನೇ ದುಃಖನಾಶಃ ಕಂಬಲೇ ದುಃಖಮೋಚನಮ್**
**ಕೃಷ್ಣಾಜಿನೇ ಬ್ರಹ್ಮವೃದ್ಧಿಃ ಆಯುಃ ಪ್ರಜ್ಞಾ ಯಶೋ ಬಲಮ್**

ಈ ಮಾತಿನಲ್ಲಿ ಶುಭ ಆಸನವಾಗಿ ಭಸ್ಮಾಸನವನ್ನು ಹಾಗೂ ಪುಷ್ಪಾಸನವನ್ನು ಹೆಚ್ಚಿಗೆ ಪರಿಚಯಿಸಲಾಗಿದೆ.

**ಕೃಷ್ಣಾಜಿನೇ ಜ್ಞಾನಸಿದ್ಧಿಃ ಮೋಕ್ಷಶ್ರೀರ್ವ್ಯಾಘ್ರಚರ್ಮಣಿ**
**ಕುಶಾಸನೇ ವ್ಯಾಧಿನಾಶಃ ಸರ್ವೇಷ್ಟಂ ಚಿತ್ರಕಂಬಲೇ**

ವ್ಯಾಸರ ಈ ಮಾತಿನಲ್ಲಿ ಅಜಿನದಲ್ಲಿಯೂ ಕೃಷ್ಣಾಜಿನ ಜ್ಞಾನಪ್ರದ ಹಾಗೂ ಹುಲಿಯ ಚರ್ಮ ಮೋಕ್ಷಕ್ಕೆ ವೈರಾಗ್ಯಕ್ಕೆ ಉಪಕಾರಕ ಎನ್ನುವುದನ್ನು ತಿಳಿಸಲಾಗಿದೆ. ಸಮಯಾಚಾರತಂತ್ರದಲ್ಲಿ ವಶ್ಯಾದಿಗಳಿಗೆ ಮೇಷಾದಿಗಳ ಅಜಿನವನ್ನು ಹೇಳಿ ಶಾಂತಿಕರ್ಮದಲ್ಲಿ ಮೃಗಾಜಿನವನ್ನೇ ತಿಳಸಿದ್ದಾರೆ –

**ಶಾಂತೌ ಮೃಗಾಜಿನಂ ಪ್ರೋಕ್ತಂ ಮೋಕ್ಷಾರ್ಥಂ ವ್ಯಾಘ್ರಚರ್ಮ ಚ**



**ಉದ್ದೀಶತಂತ್ರ**ದಲ್ಲಿಯೂ ಕೃಷ್ಣಾಜಿನಕ್ಕೆ ಪಾರಮ್ಯವನ್ನು ನೀಡಲಾಗಿದೆ –

**ವ್ಯಾಘ್ರಾಜಿನೇ ಸರ್ವಸಿದ್ಧಿಃ ಜ್ಞಾನಸಿದ್ಧಿಃ ಮೃಗಾಜಿನೇ**

**ವಸ್ತ್ರಾಸನಂ ರೋಗಹರಂ ವೇತ್ರಜಂ ಪ್ರೀತಿವರ್ಧನಮ್**

**ಕೌಶೇಯಂ ಪುಷ್ಟಿದಂ ಪ್ರೋಕ್ತಂ ಕಂಬಲಂ ಸರ್ವಸಿದ್ಧಯೇ**

**ಬ್ರಹ್ಮಣೋ ವಾ ಏತದ್ರೂಪಂ ಯತ್ ಕೃಷ್ಣಾಜಿನಂ** ಎನ್ನುವುದಾಗಿ ಕೃಷ್ಣಾಜಿನವು ಭಗವಂತನ ಪ್ರತೀಕವಾಗಿ ಹಾಗೆಯೇ ಬ್ರಹ್ಮಾಂಡದರಸನ ಚತುರ್ಮುಖನ ಮಣೆಯಾಗಿದೆ ಎಂದು **ತೈತ್ತಿರೀಯಸಂಹಿತೆ** ಪರಿಚಯಿಸಿದೆ.

ತುಂಬು ದರ್ಭೆಯ ಆಸನವನ್ನು **ತೈತ್ತಿರೀಯಾರಣ್ಯಕ** ವಿಧಿಸಿದೆ –

**ದರ್ಭಾಣಾಂ ಮಹದುಪಸ್ತೀರ್ಯೋಪಸ್ಥಾನಂ ಕೃತ್ವಾ ಪ್ರಾಙಾಸೀನಃ**

ನೆಲ, ಮರ, ಹುಲ್ಲು ಮುಂತಾದ ಹೇಳದ ಆಸನಗಳನ್ನು ಬಳಸುವಂತಿಲ್ಲ –

**ಕುಶಾಸನೇ ದುಃಖನಾಶಂ ಕಂಬಲೇ ದುಃಖಮೋಚನಮ್**

**ವ್ಯಾಘ್ರಕೃಷ್ಣಾಜಿನೇ ಜ್ಞಾನಸಿದ್ಧಿರಾಯುಃ ಪ್ರಜಾಯತೇ**

**ಭೂಮಿಕಾಷ್ಠತೃಣಾದೀನಾಂ ಆಸನಂ ಪರಿವರ್ಜ್ಜಯೇತ್**

ನೆಲ, ಮರ, ಹುಲ್ಲು ಇವುಗಳನ್ನೆಲ್ಲಾ ಆಸನವಾಗಿ ಬಳಸಿದರೇನು ನಷ್ಟ ಎನ್ನುವುದನ್ನು ಮುಂದಿನ ಪ್ರಮಾಣ ಬಿತ್ತರಿಸಿದೆ–

**ವಂಶಾಸನೇ ತು ದಾರಿದ್ರ್ಯಂ ಪಾಷಾಣೇ ವ್ಯಾಧಿರೇವ ಚ**

**ಧರಣ್ಯಾಂ ತು ಭವೇದ್ದುಃಖಂ ದೌರ್ಭಾಗ್ಯಂ ಛಿದ್ರದಾರುಜೇ**

**ತೃಣೇ ಧನಯಶೋಹಾನಿಃ ಪಲ್ಲವೇ ಚಿತ್ತವಿಭ್ರಮಃ**

ಈ ಪ್ರಮಾಣದಲ್ಲಿ ಬಿದಿರಿನ ಜಾತಿಯ ಬೀಳುಗಳಲ್ಲಿ ರಚಿಸಲಾಗುವ ಚಾಪೆ ಮುಂತಾದ ಆಸನಗಳನ್ನೂ ನಿಷೇಧಿಸಿದ್ದಾರೆ. **ಪ್ರಚೇತಸರು** ಬೆರಣಿ ಮುಂತಾದ ಆಸನಗಳ ಬಗ್ಗೆಯೂ ತಿಳಿಸಿ ನಿಷೇಧ ವಿಧಿಸಿದ್ದಾರೆ–

**ಗೋಶಕೃನ್ಮೃಣ್ಮಯಂ ಭಿನ್ನಂ ತಥಾ ಪಾಲಾಶಪಿಪ್ಪಲಮ್**

**ಲೋಹಬದ್ಧಂ ಸದೈವಾಽಽರ್ಕ್ಕಂ ವರ್ಜ್ಜಯೇದಾಸನಂ ಬುಧಃ**

ಯಜ್ಞಕ್ಕೆ ಉಪಯೋಗವಾಗುವ ಮರಗಳ ಆಸನವಷ್ಟೆ ನಿಷಿದ್ಧ. ಉಳಿದ



ಸಾಮಾನ್ಯ ಮರದ ಮಣೆ ಆದೀತೆಂಬ ಸುಳಿವು ಈ ಮಾತಿನಲ್ಲಿ ಕಾಣುವಂತಿದೆ. ಜೊತೆಗೆ ಲೋಹವನ್ನು ಮರದ ಮಣೆಗೆ ಹಾಸುವ ಕ್ರಮವನ್ನೂ ನಿಷೇಧಿಸಲಾಗಿದೆ.

**ಕುಶಾಸನೇ ಮಂತ್ರಸಿದ್ಧಿಃ ಪ್ರಜಾವೃದ್ಧಿಶ್ಚ ರತ್ನಕೇ**

**ವಸ್ತ್ರಾಸನೇ ದರಿದ್ರಃ ಸ್ಯಾತ್ ಪಾಷಾಣೇ ವ್ಯಾಧಿಪೀಡನಮ್**

ಈ ಶ್ಲೋಕದಲ್ಲಿ ರತ್ನಾಸನವನ್ನು ವಿಶೇಷವಾಗಿ ತಿಳಿಸಲಾಗಿದೆ. ಕೇವಲ ಬಟ್ಟೆಯ ಆಸನವನ್ನೂ ನಿಷೇಧಿಸಲಾಗಿದೆ. ಬಟ್ಟೆಯಲ್ಲಿಯ ಬಣ್ಣದಲ್ಲಿಯೂ ವ್ಯತ್ಯಾಸವನ್ನು ಗುರುತಿಸಿ ಷಟ್ಕರ್ಮಗಳಲ್ಲಿ ಅದರ ಬಳಕೆಯನ್ನು ತಂತ್ರಗ್ರಂಥಗಳು ತಿಳಿಸಿವೆ-

**ಆಭಿಚಾರಾದಿಕೇ ನೀಲಂ ರಕ್ತಂ ವಶ್ಯಾದಿಕೇ ಭವೇತ್**

ಸಂಧ್ಯಾದಿಗಳಲ್ಲಿ ಬಿಳಿ ಬಟ್ಟೆಯನ್ನೆ ಉಪಯೋಗಿಸಬೇಕು. ಬಟ್ಟೆಯ ಮೇಲೆ ಅಜಿನದ ಮೇಲೆ ಕಡೆಯ ಪಕ್ಷ ಮೂರು ಎಸಳು ದರ್ಭೆಯನ್ನಾದರೂ ಹಾಕಿಕೊಳ್ಳಬೇಕು. ಮೂರು ಮಂತ್ರಗಳನ್ನು ಪಠಿಸಬೇಕೆಂದು **ಮಹೋದಧಿಯಲ್ಲಿ** ಹೇಳಲಾಗಿದೆ -

**ಅನಂತಂ ವಿಮಲಂ ಪದ್ಮಂ ಜೇಂತಾಸನಸಮನ್ವಿತಮ್**

**ಜಪನ್ನಿದಧ್ಯಾದ್ದರ್ಭಾಂಸ್ತ್ರೀನ್ ಕುಶಚರ್ಮಾಂಬರಾಸನೇ**

**ಓಂ ಅನಂತಾಸನಾಯ ನಮಃ ಓಂ ಓಂ ವಿಮಲಾಸನಾಯ ನಮಃ ಓಂ ಓಂ ಪದ್ಮಾಸನಾಯ ನಮಃ** ಓಂ ಎಂದು ಮಂತ್ರಗಳು. ಇವು **ಗಾಯತ್ರೀಕಲ್ಪದಲ್ಲಿಯೂ** ಉಕ್ತವಾಗಿವೆ. ಜ್ಞಾನ ಭಕ್ತಿ ಮತ್ತು ವೈರಾಗ್ಯಗಳ ಸಿದ್ಧಿಗೆ ಈ ತಂತ್ರಾಂಶಗಳು ಮತ್ತು ಮಂತ್ರಗಳು. ಅಮೃತನ, ಅಮೃತಪ್ರದನ ದರ್ಶನಕ್ಕೆ ದರ್ಭೆಯ ಆಸನ ಹಾಸಿರಿ, ಸನ್ನದ್ಧರಾಗಿರಿ ಎನ್ನುವುದಾಗಿ ಋಗ್ವೇದವು ತಾತ್ವಿಕರನ್ನು ಕರೆದು ಕರೆ ನೀಡಿದೆ -

**ಸ್ತೃಣೀತ ಬರ್ಹಿರಾನುಷಕ್ ಘೃತಪೃಷ್ಠಂ ಮನೀಷಿಣಃ**

**ಯತ್ರಾಮೃತಸ್ಯ ಚಕ್ಷಣಮ್**

ಆಸನದಲ್ಲಿ ಕುಳಿತುಕೊಂಡೆ ಜಪಿಸುವುದು ಮುಖ್ಯ (ಗಾಯತ್ರೀಮಂತ್ರ ಜಪವನ್ನು ಬಿಟ್ಟು). ಎಲ್ಲಿ ವಿಶೇಷ ನಿಯಮ ಹೇಳಲಿಲ್ಲವೊ ಅಲ್ಲೆಲ್ಲಾ ಕುಳಿತು



ಎಂದೇ ಅರ್ಘ್ಯಸಬೇಕೆಂದು ಸ್ಮೃತಿಕಾರರು ಸಾಮಾನ್ಯ ನಿಯಮ ಹೇಳಿದ್ದಾರೆ –

**ಆಸೀನ ಊರ್ಧ್ವಃ ಪ್ರಹ್ವೋ ವಾ ನಿಯಮೋ ಯತ್ರ ನೇದೃಶಃ**

**ತದಾಸೀನೇನ ಕರ್ತವ್ಯಂ ನ ಪ್ರಹ್ವೇಣ ನ ತಿಷ್ಠತಾ**

ಪುರಾಣದ ಮಾತೂ ಇದನ್ನು ಪುಷ್ಟಿಗೊಳಿಸಿದೆ–

**ನ ಪತ್ರಮಾಸನಂ ಕುರ್ಯಾತ್ ಕದಾಚಿದಪಿ ಪೂಜನೇ**

**ಸಲಿಲೇ ಯದಿ ಕುರ್ವೀತ ದೇವತಾನಾಂ ಪ್ರಪೂಜನಮ್**

**ತತ್ರಾಪ್ಯಾಸನ ಆಸೀನೋ ನೋತ್ಥಿತಸ್ತು ಸಮಾಚರೇತ್**

**ಪರಮಪುರುಷಸಂಹಿತೆ** ಹೇಳಿದಂತೆ ಬಾಹ್ಯವಾದ ಕುಶಾದಿ ಆಸನಗಳಂತೆ ದೇಹದಲ್ಲಿಯೂ ಆಸನದ ರಚನೆ ಜಪಸಿದ್ಧಿಗೆ ಕಾರಣವಾಗಿದೆ. ಜಪಕ್ಕೆ ಮುಖ್ಯವಾದ ದೈಹಿಕ ಆಸನ ಸ್ವಸ್ತಿಕಾಸನ –

**ಪ್ಲಕ್ಷಕಾಚರ್ಮಚೇಲಾದಿಷ್ವಾಸನೈಃ ಸ್ವಸ್ತಿಕಾದಿಭಿಃ**

ಆಚಾರ್ಯಮಧ್ವರು **ತಂತ್ರಸಾರಸಂಗ್ರಹದಲ್ಲಿ** ಪದ್ಮಾಸನ ಮತ್ತು ವೀರಾಸನವನ್ನು ಸಾಧನೆಯಲ್ಲಿ ತಿಳಿಸಿರುತ್ತಾರೆ–

**... ವೀರಪದ್ಮೇ ಚ ಸ್ವಸ್ತಿಕಾದ್ಯಾನಿ ಚಾಽಸನಮ್**

**ಊರ್ಧ್ವೋರಧಃ ಪದೋರೂರ್ಧ್ವಂ ವಿಭಾಗೇನೇತಿ ಚ ತ್ರಿಧಾ**

ಎರಡೂ ಕಾಲುಗಳನ್ನು ತೊಡೆಯ ಕೆಳಗಿಟ್ಟರೆ ಸ್ವಸ್ತಿಕಾಸನ, ಮೇಲಿಟ್ಟರೆ ಪದ್ಮಾಸನ. ಒಂದು ಮೇಲೆ ಒಂದು ಕೆಳಗಾದರೆ ವೀರಾಸನ. ಹೆಚ್ಚು ಪ್ರಚಲಿತವಾದದ್ದು ಸ್ವಸ್ತಿಕಾಸನ. **ಆಸನೇನ ರುಜೋ ಹಂತಿ** ಎಂಬ **ವಸಿಷ್ಠಸಂಹಿತೆಯ** ಮಾತಿನಂತೆ ಕ್ರಮಬದ್ಧವಾಗಿ ಆಸನವನ್ನು ಹಾಕಿ ಜಪಾದಿಗಳನ್ನು ನಡೆಸಿದಾಗ ದೈಹಿಕ ರೋಗಗಳೆಲ್ಲ ಕಳೆಯುವುದು. **ಸೌರಪುರಾಣ** 27 ಆಸನಗಳನ್ನು ಮುಖ್ಯವಾಗಿ ಹೆಸರಿಸಿದೆ–

**ಪದ್ಮಕಂ ಸ್ವಸ್ತಿಕಂ ಪೀಠಂ ಸೈಂಹಂ ಕೌಕ್ಕುಟಕೌಂಜರಮ್**

**ಕೌರ್ಮ್ಯಂ ವಜ್ರಾಸನಂ ಚೈವಂ ವೈಯಾಘ್ರಂ ಚಾರ್ಧಚಂದ್ರಕಮ್**

**ದಂಡಂ ತಾರ್ಕ್ಷ್ಯಾಸನಂ ಶೂಲಂ ಖಡ್ಗಂ ಮುದ್ಗರಮೇವ ಚ**



**ಮಕರಂ ತ್ರಿಪಥಂ ಕಾಷ್ಠಂ ಸ್ಥಾಣುಂ ವಾ ಹಸ್ತಿಕರ್ಣ್ಣಿಕಮ್**

**ಭೀಮಂ ವೀರಾಸನಂ ಚಾಪಿ ವಾರಾಹಂ ಮೃಗವೈಣಿಕಮ್**

**ಕ್ರೌಂಚಂ ಚಾನಾಲಿಕಂ ಚಾಪಿ ಸರ್ವತೋಭದ್ರಮೇವ ಚ**

**ಇತ್ಯೇತಾನ್ಯಾಸನಾನ್ಯತ್ರ ಸಪ್ತವಿಂಶತಿ ಸಂಖ್ಯಯಾ**

**ಆಸೀನಃ ಸಂಭವಾತ್** ಎಂದು ಬ್ರಹ್ಮಸೂತ್ರ ಹೇಳಿದಂತೆ ವಿಧಿವತ್ತಾದ ಆಸನದ ಬಗ್ಗೆ ಗಮನವನ್ನು ಜಪಾದಿಗಳಲ್ಲಿ ನೀಡಲೇಬೇಕು. ಜೊತೆಗೆ **ಸ್ಥಿರಸುಖಮಾಸನಮ್** ಎಂದು ಯೋಗಸೂತ್ರ ತಿಳಿಸಿದಂತೆ ಮನಸ್ಸಿಗೆ ಕಿರಿಕಿರಿ ಆಗುವಂತೆ ದೇಹ ಬಳಲುವಂತೆ ಕ್ಲಿಷ್ಟ ಆಸನಗಳನ್ನು ಹಾಕದೆ ಅನುಷ್ಠಾನರತನಾಗಬೇಕು.

ಆಸನದಿಂದ ಸುಖವನ್ನು, ಬಹುಕಾಲದ ಸ್ಥಿತಿಯನ್ನು **ಮಂಡಲ ಬ್ರಾಹ್ಮಣೋಪನಿಷತ್** ತಿಳಿಸಿದೆ –

**ಸುಖಾಸನವೃತ್ತಿಃ ಚಿರವಾಸಶ್ಚೈವಂ ಆಸನನಿಯಮೋ ಭವತಿ**

ಅಶಕ್ತನಾದವನು ಮಾತ್ರವೇ ಹೇಗೆ ಬೇಕಾದರೂ ಕುಳಿತು ಸಂಧ್ಯಾದಿಗಳನ್ನು ನಡೆಸಬಹುದು.

**ಯೇನಕೇನ ಪ್ರಕಾರೇಣ ಸುಖಂ ಧಾರ್ಯಂ ಚ ಯದ್ಭವೇತ್**

**ಸುಖಾಸನಂ ತದೇವ ಸ್ಯಾತ್ ಅಶಕ್ತಸ್ತತ್ಸಮಾಚರೇತ್**

ಜಪಾದಿಗಳಿಗೆ ಪೂರ್ವೋತ್ತರ ದಿಕ್ಕುಗಳೆ ಹೆಚ್ಚು ಪ್ರಶಸ್ತ. ಅಭಿಚಾರಾದಿಗಳಲ್ಲಿ ದಕ್ಷಿಣವನ್ನು ಬಳಸುವರು ಎಂದು **ಶಿವತತ್ವರತ್ನಾಕರ** ಹೇಳಿದೆ –

**ತತ್ಪೂರ್ವಾಭಿಮುಖಂ ವಶ್ಯಂ ದಕ್ಷಿಣಂ ಚಾಭಿಚಾರಿಕಮ್**

**ಪಶ್ಚಿಮಂ ಧನದಂ ವಿದ್ಯಾತ್ ಉತ್ತರಂ ಶಾಂತಿಕೃದ್ಭವೇತ್**

ಸಂಧ್ಯಾವಂದನೆ ವಿಷ್ಣುಸನ್ನಿಧಿಯಲ್ಲಿ ನಡೆದಾಗ ಅನಂತಫಲದಾಯಕವಾಗಿದೆ –

**ಗೃಹೇ ತ್ವೇಕಗುಣಾ ಸಂಧ್ಯಾ ಗೋಷ್ಠ್ಯಾಂ ದಶಗುಣಾ ಸ್ಮೃತಾ**

**ಶತಸಾಹಸ್ರಿಕಾ ನದ್ಯಾಂ ಅನಂತಾ ವಿಷ್ಣುಸನ್ನಿಧೌ**

ದರ್ಭೆ ಹಾಸಿ ಕುಳಿತ ಕೂಡಲೆ ವಾಯುಮಂಡಲದಲ್ಲಿ ಕೂರ್ಮದ



ಹೆಗಲಲ್ಲಿ ಕುಳಿತಿರುವೆನೆಂದು ಭಾವಿಸಿಕೊಂಡು ಮೂರು ವ್ಯಾಹೃತಿಯನ್ನು ಪ್ರಣವಸಂಪುಟವಾಗಿ ಹೇಳಬೇಕು. ಈ ಚಿಂತನೆಯ ಹಿನ್ನಲೆಯಲ್ಲಿಯೆ ಕೆಲವೆಡೆ ಕೂರ್ಮ(ಆಮೆ)ದ ಆಕಾರದ ಪೀಠವನ್ನು (ಮಣೆ) ಮಾಡಿಕೊಂಡು ಅದರಲ್ಲಿ ಕುಳಿತುಕೊಳ್ಳುವುದು. ಆದರೆ ವಾಯುಮಂಡಲದ ಅಥವಾ ಚಂದ್ರಮಂಡಲದ ಕಲ್ಪನೆಗೆ ಏನೂ ಗಮಕವಿದ್ದಂತಿಲ್ಲ. ಈ ವಿಷಯವನ್ನು ಪದ್ಯಮಾಲಾ ಹೇಳಿದೆ. ಇಲ್ಲಿ ವಾಯುವನ್ನು ಇಂದು ಶಬ್ದದಿಂದ ಹೇಳಿರುವುದು ಗಮನಾರ್ಹ–

**ಆಸನೇ ಮಂಡಲೇ ಚೇಂದೋಃ ಕೂರ್ಮಸ್ಕಂಧೇಽಹಮಾಸ್ಥಿತಃ**

**ಕಲ್ಪಯಿತ್ವೇತ್ಥಮಾಸಿನೋ ವ್ಯಾಹರೇತ್ ಭೂರ್ಭುವಃಸ್ವರೋಮ್**

ವಾಯುಮಂಡಲ ಅಂತರಿಕ್ಷಸ್ಥಾನ. ಭೂಮಿಯ ಸ್ಪರ್ಶವನ್ನು ಆಸನದಿಂದ ಕಡಿದು ಮೇಲ್ಗತಿಯ ಸಾಧನೆಗೆ ಅಂತರಿಕ್ಷಮಂಡಲವನ್ನು ಇಲ್ಲಿ ತಿಳಿಸಲಾಗಿದೆ. ಆದಿತ್ಯಮಂಡಲಮಧ್ಯವರ್ತಿಯನ್ನು ಧ್ಯಾನಿಸಲು ಗಾಯತ್ರೀಜಪಕ್ಕೆ ಇದು ಮೊದಲ ತಯಾರಿ. ಮುಂದೆ ಆಸನದೇವತೆಗಳನ್ನು ನೆನೆದು ಭೂಪ್ರಾರ್ಥನೆ ಮಾಡಬೇಕು. ಜಪದ ಆರಂಭದಲ್ಲಿ ಆಸನವನ್ನು ಮುಟ್ಟಿಕೊಂಡು ಹೇಳಬೇಕಾದ ಆರು ಮಂತ್ರಗಳನ್ನು ಪದ್ಯಮಾಲಾದಲ್ಲಿ ಸಂಗ್ರಹಿಸಲಾಗಿದೆ –

**ಅಥಾಸನಮುಪಸ್ಪೃಶ್ಯ ಮಂಡೂಕಾಯ ನಮಸ್ತತಃ**

**ಕೂರ್ಮಾಯಾಥ ವರಾಹಾಯ ಶೇಷಾಯಾಥ ನಮಸ್ತತಃ**

**ನಮಃ ಕಾಲಾಗ್ನಿರುದ್ರಾಯ ವಜ್ರಾಯ ಚ ನಮೋನಮಃ**

ನೆಲದಡಿಯಲ್ಲಿನ ಭಗವಂತನ ರೂಪವಿಶೇಷಗಳನ್ನು ಮುಖ್ಯವಾಗಿ ಈ ಆರು ನಾಮಮಂತ್ರಗಳು ಸ್ಮರಿಸಿವೆ. ಜತೆಗೆ ಬ್ರಹ್ಮಾಂಡದ ಒಡೆಯರಾದ ವಾಯುರುದ್ರೇಂದ್ರರನ್ನೂ ತಿಳಿಸಿವೆ. ಈ ಮಂತ್ರಗಳನ್ನು ಆದಿಯಲ್ಲಿ ಆಯಾ ಅಕ್ಷರಗಳ ಬೀಜಮಂತ್ರದೊಡನೆ ಪ್ರಯೋಗಿಸಬೇಕೆಂಬ ತಂತ್ರಗಾರಿಕೆಯನ್ನೂ ಶ್ರೀಜಯತೀರ್ಥರು ಹೇಳಿದ್ದಾರೆ–

**ಸಾನುಸ್ವಾರಂ ಚಾದಿವರ್ಣ್ಣಂ ಪ್ರಣವಾದಿಮುದೀರ್ಯ ಚ**

**ನಮೋಽಂತಮಿತಿ ಚೈತೇಷು ಷಟ್ಸು ಚೈವ ಜಪೇದ್ಬುಧಃ**



# ಭೂಪ್ರಾರ್ಥನೆ

**ಶಕ್ತ್ಯಾಧಾರಮಕೂಪಾರಂ ತದಾಧಾರಂ ಫಣೀಶ್ವರಮ್**

**ತನ್ಮೂರ್ಧ್ನಿ ಸಂಸ್ಥಿತಾಂ ಗಾಂ ಚ ಸ್ಮೃತ್ವಾ ತಾಂ ಪ್ರಾರ್ಥಯೇನ್ಮುನಿಃ**

ಕೂರ್ಮನ ಮೇಲಿರುವ ಶೇಷನ ತಲೆಯಲ್ಲಿರುವ ಭೂಮಿಯನ್ನು ಪ್ರಾರ್ಥಿಸಲು ಸ್ಮೃತಿರತ್ನವು ಹೇಳಿದೆ.

**ಪೃಥ್ವಿ ತ್ವಯಾ ಧೃತಾ ಲೋಕಾ ದೇವಿ ತ್ವಂ ವಿಷ್ಣುನಾ ಧೃತಾ**

**ತ್ವಂ ಚ ಧಾರಯ ಮಾಂ ದೇವಿ ಪವಿತ್ರಂ ಕುರು ಚಾಸನಮ್**

ಭೂದೇವಿಯೆ ನೀನು ಲೋಕಗಳನ್ನೆಲ್ಲ ಹೊತ್ತವಳು. ನಿನ್ನನ್ನು ಭಗವಂತ ಹೊತ್ತಿರುವನು. ನೀನು ನನ್ನನ್ನು ಹೊತ್ತುಕೊ. ನನ್ನ ಸಾಧನೆಯ ನೆಲವನ್ನು ಆಸನವನ್ನು ಶುಚಿಗೊಳಿಸು – ಈ ಪ್ರಾರ್ಥನೆಯ ಮೂಲಕ ಆಸನದ ಪಾವಿತ್ರ್ಯವನ್ನು ವೃದ್ಧಿಸಲಾಗಿದೆ. ಪಂಚಭೂತಗಳಲ್ಲಿ ಮಣ್ಣು ಅತ್ಯಂತ ಕಡೆಯ ವಸ್ತು. ಸಹಜ ಮಲಿನ ಜಡ ಪದಾರ್ಥ. ಆದರೂ ಅದರ ಮುಖ್ಯ ಅಭಿಮಾನಿನಿಯಾದ ಭೂರೂಪದ ಲಕ್ಷ್ಮಿ ಅಪ್ರಾಕೃತಳಾಗಿ ಅತಿಶುದ್ಧಳೆನಿಸಿದವಳು. ನಿತ್ಯಮಂಗಳನ ವಿಷ್ಣುವಿನ ಮಡದಿಯೆನಿಸಿದವಳು. ನನ್ನ ಜಡವಾದ ಆಸನವನ್ನೂ ತನ್ನ ವಿಶೇಷ ಸನ್ನಿಧಾನದಿಂದ ಶುಚಿಗೊಳಿಸಲೆಂದು ಇಲ್ಲಿ ಪ್ರಾರ್ಥನೆ. ಭಾವನೆಯಂತೆ ಸಾಧನೆ ಇರುವುದರಿಂದ ಲಕ್ಷ್ಮಿಯ ಇರವನ್ನು ಇಲ್ಲಿ ಮತ್ತೆ ಅರಿವಿಗೆ ತಂದುಕೊಳ್ಳಲಾಗಿದೆ.

ಕುಸಿದ ನೆಲವನ್ನು ಎತ್ತಿಹಿಡಿದ ವರಾಹದೇವರ ನೆನಪನ್ನೂ ಈ ಮಾತು ಹೊತ್ತು ತಂದಿದೆ. ಅದಕೆಂದೇ ಆಸನದ ಆರುಮಂತ್ರಗಳಲ್ಲಿ ವರಾಹನೂ ಸೇರಿ ಕೊಂಡದ್ದು. ವರಾಹನಿಂದ ಲಕ್ಷ್ಮಿಯು ಎಂದೂ ಅರಕ್ಷಿತಳಾಗಿಲ್ಲ. ಭೂಮನೆನಿಸುವ ದೇವನ ರಾಣಿಯಾಗಿ ಲಕ್ಷ್ಮಿ ಭೂಮಿ ಎನಿಸಿದ್ದಾಳೆ. ಭಗವಂತನ ಆವೇಶದಿಂದ ಭೂಮಿ ಎನಿಸಿದವಳು ನೆಲದ ಒಡತಿ ಎಂದು **ಮಹಾವಿಷ್ಣುಪುರಾಣ – ಯದಾ ವೇಶಾದಿಯಂ ಪೃಥ್ವೀ ಭೂಮಿರಿತ್ಯೇವ ಕಥ್ಯತೇ.** ದುಷ್ಟರ ಹಾವಳಿಗೆ ಸಿಲುಕಿ ಭಾರದಿಂದ ರಕ್ಷಣೆಗಾಗಿ ಸ್ತುತಿಸುವ ಭೂಮಿ, ಪೃಥು– ರಾಜನಲ್ಲಿ ಪ್ರಾರ್ಥಿಸಿಕೊಂಡವಳು ಅವಾಂತರದೇವತೆಯಾದ ಭೂದೇವಿಯು.



**ಈಕೆ** ಭೂರೂಪದ ಲಕ್ಷ್ಮಿಯಿಂದ ಆವಿಷ್ಟಳಷ್ಟೆ ಹೊರತು ಅಪ್ರಾಕೃತಳು ಅಲ್ಲ. **ಈ** ಅವಾಂತರ ಭೂದೇವಿಯ ಪ್ರಾರ್ಥನೆಯೂ ಇಲ್ಲಿನ ಅರ್ಥವೇ ಆಗಿರುವುದು. ಬ್ರಹ್ಮವೈವರ್ತ್ತದಲ್ಲಿ ಪ್ರಕೃತಿಖಂಡದಲ್ಲಿ ಭೂಮಿಯ ಮಹಿಮೆಯಿದೆ. ವರಾಹನ ಚಿಂತನೆಯೂ ಇದೆ.

**ಪೃಥ್ವಿ ತ್ವಯಾ** ಶ್ಲೋಕದ ಕಡೆಯಲ್ಲಿ ಇನ್ನೂ ಒಂದು ಸಾಲು ಸೇರಿದ್ದು ಹೆಚ್ಚು ಕಡೆ ಬಳಕೆಯಲ್ಲಿಲ್ಲ – **ಮಾಂ ಚ ಪೂತಂ ಕುರು ಧರೇ ನತೋಽಸ್ಮಿ ತ್ವಾಂ ಸುರೇಶ್ವರಿ. ಪೂಜಾಕಲ್ಪಲತೆ**ಯಲ್ಲಿ ಬಂದಿರುವ ಈ ಮಾತಿನಲ್ಲಿ ಸಾಧಕನ ಪಾವಿತ್ರ್ಯವನ್ನು ದೇವತೆಯಲ್ಲಿ ಪ್ರಾರ್ಥಿಸಲಾಗಿದೆ. ಹಿಂದಿನ ಮಾತಿನಲ್ಲಿ ಆಸನದ ಪಾವಿತ್ರ್ಯವಷ್ಟೆ ಪ್ರಾರ್ಥಿತವಾದದ್ದು. ಇದೂ ಯೋಗ್ಯವೇ ಆಗಿದೆ. ಈ ಮಾತು **ಶ್ರೀವೈಷ್ಣವಸದಾಚಾರನಿರ್ಣಯ**ದಲ್ಲಿಯೂ ಇದೆ. ಟಿಪ್ಪಣಿಕಾರರು ಇದರ ಮೂಲ ಎಲ್ಲಿದೆ ಎಂದು ಹುಡುಕಲಿದೆಯೆಂದೇ ತಿಳಿಸಿರುವರು.

ಈ ಶ್ಲೋಕಗಳ ಪಠನದ ಮೊದಲು ಋಷ್ಯಾದಿಗಳನ್ನು ಹೇಳುವುದಿದೆ. ಮೇರುಪೃಷ್ಠ ಋಷಿಯನ್ನೂ ಕೂರ್ಮದೇವತೆಯನ್ನೂ ಹೇಳಲಾಗಿದೆ. ಪೃಥ್ವೀ ದೇವತೆಯೊಳಗಿನ ಪೃಥ್ವಿಯನ್ನು ಹೊತ್ತ ವಾಯುಕೂರ್ಮನೇ ದೇವತೆ. ಅವನನ್ನೂ ಹೊತ್ತ ವಿಷ್ಣುಕೂರ್ಮನೇ ದೇವತೆ. ಇಡಿಯ ನೆಲದ ಗೂಟದಂತಿರುವ ಮೇರು, ಮೇರುವಿನಂತಿರುವ ವಾಯು ಅಥವಾ ಮೇರುವನ್ನೆ ಮನೆಯಾಗಿಸಿಕೊಂಡ ಚತುರ್ಮುಖ ಇದರ ಋಷಿ. **ಸುತಲಂ ಛಂದಃ** ಎಂದು ಇಲ್ಲಿ ಹೇಳುತ್ತ ಬಂದಿರುವ ಛಂದಸ್ಸು ಮಾತ್ರ ಯಾರಿಗೂ ಇಂದಿಗೂ ಅರ್ಥವಾಗದ್ದೇ ಆಗಿದೆ. ಛಂದಶ್ಶಾಸ್ತ್ರದಲ್ಲೇ ಇಲ್ಲದ ಇದು ಎಲ್ಲಿಂದ ಹೇಗೆ ಪರಂಪರೆಯಲ್ಲಿ ನುಸುಳಿತೆಂದು ತಿಳಿಯರು. ಈ ಶ್ಲೋಕದ ನಡೆ ಅನುಷ್ಟುಪ್ ಛಂದಸ್ಸಿನಲ್ಲಿದೆ. ಹಾಗಾಗಿ ಅನುಷ್ಟುಪ್ ಛಂದಸ್ ಎಂದು ಹೇಳುವುದೇ ಸೂಕ್ತ. **ನಿತ್ಯಾರ್ಚಾಪ್ರಕಾಶ**ದಲ್ಲಿ ಈ ಶ್ಲೋಕದ ಛಂದಸ್ಸಿನ ಬಗ್ಗೆ ಚಿಂತನೆ ನಡೆಸಿದ್ದಾರೆ.

ಸಂಧ್ಯಾವಂದನೆಯಲ್ಲಿ ಅಲ್ಲಲ್ಲಿ ಬರುವ ಶ್ರುತಿಯಲ್ಲಿರದ ಮಂತ್ರಗಳಿಗೆ ಋಷ್ಯಾದಿಗಳನ್ನು ಹೇಳುವುದೂ ಬೇಕಾಗಿರದು. ಎಲ್ಲಿ ಯಾರು ಹೇಳಿದ್ದೆಂದು



ತಿಳಿದಿದ್ದರೆ ಸಾಕು. ಹೇಗೆ ಕೃಷ್ಣಾರ್ಪಣದಲ್ಲಿ ಬರುವ **ಕಾಯೇನ ವಾಚಾ** ಪದ್ಯಕ್ಕೆ, ದಿಗುಪಸ್ಥಾನದ **ಆಕಾಶಾತ್ ಪತಿತಂ** ಶ್ಲೋಕಕ್ಕೆ ಋಷ್ಯಾದಿಗಳನ್ನು ಹೇಳುವುದಿಲ್ಲವೊ ಹಾಗೆ.

**ಪೃಥ್ವಿ ತ್ವಯಾ** ಶ್ಲೋಕ **ಭವಿಷ್ಯಪುರಾಣ**ದ ಮಧ್ಯಮಪರ್ವದಲ್ಲಿ ಬಂದಿದೆ. ಅಲ್ಲೇನೂ ಮೇರುಪೃಷ್ಠನ ಸುತಲದ ಸಂಗತಿ ಇರದು. **ಶೇಷಸಂಹಿತೆ**ಯಲ್ಲಿ ಪೃಥ್ವಿ ತ್ವಯಾ ಇವೆ. ಆಸನಗಳ ಮಂತ್ರದೊಡನೆ ಪೃಥಿವೀಚಿಂತನೆಯಲ್ಲಿ **ಸುತಲಂ ಛಂದಃ** ಬಂದಿದೆ – **ಅಸ್ಯ ಶ್ರ್ಯಾಸನಮಂತ್ರಸ್ಯ ಪೃಥಿವ್ಯಾಃ ಪದಮುಚ್ಚರೇತ್**

**ಮೇರುಪೃಷ್ಠ ಋಷೀತ್ಯುಕ್ತ್ವಾ ಶ್ರೀಕೂರ್ಮೋ ದೇವತಾ ವದೇತ್**
**ಸುತಲಂ ಛಂದ ಇತ್ಯುಕ್ತ್ವಾ ಓಂ ಬೀಜಂ ಶಕ್ತಿ ಹ್ರೀಂ ವದೇತ್**
**ಕ್ಲೀಂ ಕೀಲಕಂ ಶ್ರೀಂ ಕವಚಂ ಐಂ ಅಸ್ತ್ರಂ ರಕ್ತವರ್ಣ್ಣಕಮ್**
**ಅಖಿಲಜಗದಾಧಾರಾಯ ಉಚ್ಚರೇತ್ ಕೂರ್ಮ್ಮರೂಪಿಣೇ**
**ಅನಂತಪದ್ಮನಾಭಾಯ ಹುಂ ಫಟ್ ಸ್ವಾಹಾ ತತಃ ಪರಮ್**
**ವಿಂ ವಿಮಲಾಸನಾಯೇತಿ ಅಂ ಅನಂತಾಸನಾಯ ಚ**
**ಪಂ ಪದ್ಮಾಸನಾಯಪದಂ ಕೂಂ ಕೂರ್ಮ್ಮಾದಿ ತತಃ ಪರಮ್**

ಭೂಪ್ರಾರ್ಥನೆಯಲ್ಲಿ ಪೃಥ್ವೀಮುದ್ರೆಯನ್ನು ತೋರಿಸಬೇಕು.

ಅರ್ಘ್ಯಾನಂತರ ಜಪದ ಮೊದಲು ನಡೆಸುವ ಎಲ್ಲಾ ವಿಧಿಗಳನ್ನು **ವಿಶ್ವಾಮಿತ್ರಸ್ಮೃತಿ**ಯಲ್ಲಿ ಸಂಗ್ರಹಿಸಿ ಹೇಳಲಾಗಿದೆ. ಇಲ್ಲಿ ಆಸನಕ್ಕೂ ಯಂತ್ರವನ್ನು ತಿಳಿಸಿದ್ದಾರೆ – **ಶುದ್ಧಭೂಮೌ ಜಲಂ ಪ್ರೋಕ್ಷ್ಯ ವಿಲಿಖೇದ್ಯಂತ್ರಮುತ್ತಮಮ್**

**ತ್ರಿಕೋಣಾಗ್ರೇ ವಹ್ನಿಬೀಜಂ ಮಧ್ಯೇ ಮಾಯಾಂ ಸಬಿಂದುಕಮ್**
**ತಸ್ಯೋಪರಿ ಸಮಾಸೀನೋ ಗಾಯತ್ರೀಜಪಮಾಚರೇತ್**
**ಕೃತ್ವಾ ಮೂಲೇನ ಭೂಶುದ್ಧಿಂ ಭೂತಶುದ್ಧಿಂ ಸಮಾಚರೇತ್**
**ಶೋಷದಾಹಪ್ಲವಂ ಕುರ್ಯಾತ್ ಪ್ರಣವಾದಿಷಡಕ್ಷರೈಃ**
**ಅಸ್ತ್ರಮಂತ್ರೇಣ ಕುರ್ವೀತ ದಿಶಾಮ್ ರಕ್ಷಾದಿಬಂಧನಮ್**
**ಕಾಮಕ್ರೋಧಾದಿಷಡ್ವರ್ಗಂ ಪಾಪಂ ಕುಕ್ಷೌ ವಿಚಿಂತಯೇತ್**



# ಭೂತೋಚ್ಚಾಟನೆ

**ಉಪವಿಶ್ಯಾಸನೇ ರಮ್ಯೇ ಚೇಲಾಜಿನಕುಶೋತ್ತರೇ**

**ಸಮ್ಯಕ್ ಪದ್ಮಾಸನಾಸೀನಃ ಭೂತಶುದ್ಧಿಂ ಸಮಾಚರೇತ್**

**ಸ್ಕಂದಪುರಾಣವು** ಆಸನದಲ್ಲಿ ನೆಲೆನಿಂತು, ಕಾಲುಗಳನ್ನು ಪದ್ಮಾಸನದಲ್ಲಿ ಸ್ಥಿರಗೊಳಿಸಿ ಭೂತಶುದ್ಧಿಯನ್ನು ನಡೆಸಲು ಕೃಷ್ಣ ತಿಳಿಸಿದಂತೆ ಆದೇಶಿಸಿದೆ –

**ಭೂತಶುದ್ಧಿಂ ವಿನಾ ಯೇನ ಕ್ರಿಯತೇ ಯಜ್ಞಪಾದಿಕಮ್**

**ತತ್ ಸರ್ವಂ ನಿಷ್ಫಲಂ ಪ್ರೋಕ್ತಂ ತಸ್ಮಾತ್ತಾಂ ಪೂರ್ವಮಾಚರೇತ್**

ಸಾಧಕ ತನ್ನಲ್ಲಿ ಧ್ಯಾನದಿಂದ ಭಗವಂತನನ್ನು ಕಾಣುವಂತಾಗಬೇಕು. ಜಪದಲ್ಲಿ ಮಂತ್ರಚಿಂತನೆಯಿಂದ ನಡುಗುಡಿಯಲ್ಲಿ ದೇವನನ್ನು ಕಾಣಬೇಕು. ಇದಕ್ಕಾಗಿ ದೇಹವನ್ನೆ ಪೀಠ ಮಾಡಬೇಕು. ಈ ಪೀಠಪೂಜೆಯಲ್ಲಿ **ಪ್ರೀಂ ಪೃಥಿವ್ಯೈ ನಮಃ** ಎಂದು ಭೂಪ್ರಾರ್ಥನೆ ಮೊದಲು ನಡೆಸಲಾಗಿದೆ. ಇದರ ಜತೆ ಆಹ್ನಿಕತರಂಗ ಮುಂತಾದ ಅನುಷ್ಠಾನಸಂಗ್ರಹ ಹೊತ್ತಗೆಗಳು ತಿಳಿಸುವಂತೆ **ಆಧಾರಶಕ್ತ್ಯೈ ನಮಃ** ಎನ್ನುವುದೂ ಸೇರಿದೆ. ಭಗವಂತನ ದರ್ಶನಕ್ಕೆ ಸಾಧಕನ ದೇಹ ಅಪವಿತ್ರ ಆಗದಂತೆ ದುಷ್ಟಶಕ್ತಿಯ ಆಕ್ರಮಣ ಆಗದಂತೆ ಭೂತೋಚ್ಚಾಟನೆಯನ್ನು ಆಸನಶುದ್ಧಿಯ ಬಳಿಕ ನಡೆಸಬೇಕು. ಇದು ದೇಹಶುದ್ಧಿಯ ಬಾಹ್ಯಪ್ರಕ್ರಿಯೆ. ಮಾಂತ್ರಿಕವಾಗಿ ಶ್ಲೋಕಪಠನದ ಜೊತೆ ತಾಂತ್ರಿಕವಾದ ದಿಗ್ಬಂಧವೂ ಇಲ್ಲಿ ಬಂದಿದೆ. ದುಷ್ಟಶಕ್ತಿಗಳು ರುದ್ರಗಡಣಗಳ ಗಣಗಳಂತೆ ಪರಿವಾರಗಳಂತಿವೆ. ಹಾಗಾಗಿ ರುದ್ರನಾಜ್ಞೆಯಿಂದ ಅವುಗಳ ನಿವೃತ್ತಿಯನ್ನು ಪ್ರಾರ್ಥಿಸಲಾಗಿದೆ –

**ಅಪಸರ್ಪಂತು ಯೇ ಭೂತಾ ಯೇ ಭೂತಾ ಭುವಿ ಸಂಸ್ಥಿತಾಃ**

**ಯೇ ಭೂತಾ ಅಂತರಿಕ್ಷಸ್ಥಾ ಯೇ ಭೂತಾ ದಿವಿ ಸಂಸ್ಥಿತಾಃ**

**ಯೇ ಭೂತಾ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ**

**ಭೂತಪ್ರೇತಪಿಶಾಚಾ ಯೇ ಯೇ ಚಾನ್ಯೇ ಭುವಿ ಭಾರಕಾಃ**

**ತೇಷಾಮಪ್ಯವಿರೋಧೇನ ಜಪಕರ್ಮ ಸಮಾರಭೇ**

ಅಪಸರ್ಪಂತು ಎಂಬಲ್ಲಿ ಅಪಕ್ರಾಮಂತು ಎಂಬ ಶ್ಲೋಕವನ್ನು ಕೆಲವೆಡೆ



ಸೇರಿಸಲಾಗಿದೆ. ಈ ಸಂದರ್ಭದಲ್ಲಿಯೇ ಎರಡನ್ನೂ ಹೇಳುವುದು ಯೋಗ್ಯವೇ.

**ಅಪಕ್ರಾಮಂತು ಯೇ ಭೂತಾಃ ಕ್ರೂರಾಶ್ಚೈವ ತು ರಾಕ್ಷಸಾಃ**

**ಯೇ ಚಾತ್ರ ನಿವಸಂತ್ಯೇವ ದೇವತಾ ಭುವಿ ಸಂತತಮ್**

ಶಿವನ ಆಜ್ಞೆಯಿಂದ ಭೂತಾದಿಗಳ ಓಡಿಸುವಿಕೆಯನ್ನು ಇಲ್ಲಿ ಕೇಳಿಕೊಳ್ಳಲಾಗಿದೆ. ವಾಸ್ತವಿಕವಾಗಿ ಭೂತಾದಿಗಳೆಲ್ಲಾ ಶಿವನ ಗಣಗಳೇ ಆಗಿರುವುವು. ಇದರಿಂದ ಅಸಮಾಧಾನಗೊಂಡ ಮಂದಿ ಹರಿಯ ಆಜ್ಞೆಯಿಂದ ಭೂತೋಚ್ಚಾಟನೆಯನ್ನು ಕೇಳಿಕೊಳ್ಳುವರು. ಆ ಬಗೆಯ ಪ್ರಮಾಣಗಳನ್ನೂ ಕಲೆಹಾಕುವರು. ಆದರೆ ಪ್ರಸ್ತುತ ಜಪದಲ್ಲಿ ಶಿವಾಜ್ಞೆಯಿಂದಲೇ ಕೆಟ್ಟಶಕ್ತಿಗಳ ದೂರಗೊಳಿಸುವಿಕೆಯನ್ನು ಪ್ರಾರ್ಥಿಸಲಾಗಿದೆ. ಏಕೆಂದರೆ ಹರನಿಗೇನೇ ನಾಶಗೊಳಿಸುವ ಅಧಿಕಾರವನ್ನು ನಾರಾಯಣ ನೀಡಿದ್ದಾನೆ. ಅದಕ್ಕಾಗಿಯೇ ಶಿವನಿಗೆ ರೌದ್ರರೂಪ. ಇದನ್ನು ಆತನೇ ಹೇಳಿಕೊಂಡಿದ್ದಾನೆ. ಆ ಮಾತು **ಮಹಾಭಾರತದಲ್ಲಿದೆ** –

**ದ್ವಿವಿಧೋ ಲೌಕಿಕೋ ಭಾವಃ ಶೀತಮುಷ್ಣಮಿತಿ ಪ್ರಿಯೇ**

**ತಯೋರ್ಹಿ ಗ್ರಸಿತಂ ಸರ್ವಂ ಸೌಮ್ಯಾಗ್ನೇಯಮಿದಂ ಜಗತ್**

**ಸೌಮ್ಯತ್ವಂ ಸತತಂ ವಿಷ್ಣೌ ಮಯ್ಯಾಗ್ನೇಯಂ ಪ್ರತಿಷ್ಠಿತಮ್**

**ಅನೇನ ವಪುಷಾ ನಿತ್ಯಂ ಸರ್ವಲೋಕಾನ್ ಬಿಭರ್ಮ್ಯಹಮ್**

**ರೌದ್ರಾಕೃತಿಂ ವಿರೂಪಾಕ್ಷಂ ಶೂಲಪಟ್ಟಸಸಂಯುತಮ್**

**ಆಗ್ನೇಯಮಿತಿ ಮೇ ರೂಪಂ ದೇವಿ ಲೋಕಹಿತೇ ರತಮ್**

**ಯದ್ಯಹಂ ವಿಪರೀತಃ ಸ್ಯಾಂ ಏತತ್ ತ್ಯಕ್ತ್ವಾ ಶುಭಾನನೇ**

**ತದೈವ ಸರ್ವಲೋಕಾನಾಂ ವಿಪರೀತಂ ಪ್ರವರ್ತ್ತತೇ**

ಈ ಭೂತೋಚ್ಚಾಟನೆಯನ್ನು ಚಿಟಿಕೆ ಹಾಕುವ ಮೂಲಕ ತಾಂತ್ರಿಕವಾಗಿ ನಡೆಸಲು **ಪದ್ಯಮಾಲಾ** ಹೇಳಿದೆ.

**ಅಧ್ಯಾಸಿತಾಸನೇ ಸ್ವಸ್ಥೋಽಪಕ್ರಾಮಂತ್ವಿತಿ ಪೂರ್ವಕಾನ್**

**ಮಂತ್ರಾನುದೀರ್ಯ ಭೂತಾನಿ ಮುದ್ರಯಾ ಛೋಟಿಕಾಖ್ಯಯಾ ಉತ್ಸಾದ್ಯ...**



ಯೋಗದೀಪಿಕಾದಲ್ಲಿ ಮೂರು ಬಾರಿ ಚಪ್ಪಾಳೆ ತಟ್ಟುವ ಮೂಲಕ ಅಂಗೈಯಲ್ಲಿ ಏಳುವ ಅಗ್ನಿಕಿರಣಗಳ ಬಗ್ಗೆ ತಂತ್ರಪ್ರಕ್ರಿಯೆಗಳಿವೆ.

ನೃಸಿಂಹಾಗ್ನಿರ್ಜ್ವಲತ್ಪಾಣಿಃ ತೇನ ತಾಲತ್ರಯಂ ಕ್ರಿಯಾತ್
ತನ್ನಿರ್ಗ್ಗತ್ಯೈರ್ವಿಸ್ಫುಲಿಂಗಪ್ರಕರೈರ್ವಿಘ್ನತೋ ದಹೇತ್
ಸ್ಫುಟಾಸ್ತ್ರಮುದ್ರಯಾ ವಾಯುಪ್ರೇರಿತಜ್ವಲದರ್ಚ್ಚಿಷಾ
ದ್ರಾವಯೇದ್ದಹ್ಯಮಾನಾಂಸ್ತಾನ್ ಕ್ರಮಾದ್ಬಧ್ನನ್ ದಿಶೋ ದಶ

ಚಿಟಿಕೆ ಜತೆಯಲ್ಲಿ ಅಗ್ನಿಪ್ರಾಕಾರಮುದ್ರೆಯನ್ನೂ ಬಾಣಮುದ್ರೆಯನ್ನೂ ದಿಗ್ಬಂಧದಲ್ಲಿ ಹೇಳಲಾಗಿದೆ. ಭೂತೋಚ್ಚಾಟನೆಯ ಸಂದರ್ಭದಲ್ಲೆ ದಿಗ್ಬಂಧ ಹೆಚ್ಚು ಸೂಕ್ತವೆನಿಸುವುದು. ಪದ್ಯಮಾಲಾದಲ್ಲಿ ಇದರ ಮಂತ್ರ ಹಾಗೂ ತಂತ್ರ ಹೇಳಲಾಗಿದೆ –

ತತೋಽಸ್ತ್ರಾಯ ಫಡಿತ್ಯುಕ್ತ್ವಾ ದಿಶೋ ಬದ್ಧ್ವೇಷುಮುದ್ರಯಾ
ಪ್ರಾಕಾರಾವಸ್ಥಿತಂ ವಹ್ನಿಂ ಧ್ಯಾತ್ವಾ ಮುದ್ರಾಂ ಸುದರ್ಶನೀಮ್
ದರ್ಶಯೇದಥ ಚೇಂದ್ರಾದಿದಿಕ್ಷು ಬಧ್ನಾಮಿ ಚಾಷ್ಟಸು
ನಮಶ್ಚಕ್ರಾಯ ಸ್ವಾಹೇತಿ ಮಂತ್ರಮೇನಮುದೀರಯೇತ್

ಪ್ರತಿಯೊಂದು ದಿಕ್ಕಿನಲ್ಲಿಯೂ ತಲೆಯಿಂದ ಸ್ವಲ್ಪ ಮೇಲೆ ಕೈ ಮಾಡಿಕೊಂಡು ಬಾಣಮುದ್ರೆಯನ್ನು ತೋರಿಸುತ್ತ ಆಯಾ ದಿಕ್ಕಿನ ರಕ್ಷಾಮಂತ್ರವನ್ನು ಹೇಳಬೇಕು.

ಐಂದ್ರೀಂ ದಿಶಂ ಬಧ್ನಾಮಿ ನಮಶ್ಚಕ್ರಾಯ ಸ್ವಾಹಾ
ಆಗ್ನೇಯಾಂ ದಿಶಂ ಬಧ್ನಾಮಿ ನಮಶ್ಚಕ್ರಾಯ ಸ್ವಾಹಾ
ಯಾಮ್ಯಾಂ ದಿಶಂ ಬಧ್ನಾಮಿ ನಮಶ್ಚಕ್ರಾಯ ಸ್ವಾಹಾ
ನೈಋತೀಂ ದಿಶಂ ಬಧ್ನಾಮಿ ನಮಶ್ಚಕ್ರಾಯ ಸ್ವಾಹಾ
ವಾರುಣೀಂ ದಿಶಂ ಬಧ್ನಾಮಿ ನಮಶ್ಚಕ್ರಾಯ ಸ್ವಾಹಾ
ವಾಯವೀಂ ದಿಶಂ ಬಧ್ನಾಮಿ ನಮಶ್ಚಕ್ರಾಯ ಸ್ವಾಹಾ
ಸೌಮ್ಯಾಂ ದಿಶಂ ಬಧ್ನಾಮಿ ನಮಶ್ಚಕ್ರಾಯ ಸ್ವಾಹಾ



**ಐಶಾನೀಂ ದಿಶಂ ಬಧ್ನಾಮಿ ನಮಶ್ಚಕ್ರಾಯ ಸ್ವಾಹಾ**

ಅಸ್ತ್ರಾಯ ಫಟ್ ಎನ್ನುತ್ತ ಎಂಟು ಕಡೆಗೂ ಚಿಟಿಕೆಯನ್ನು ಹಾಕಿ ಎಂಟು ಕಡೆಗೂ ಬಾಣಮುದ್ರೆಯ ಜತೆ ರಕ್ಷಾಮಂತ್ರವನ್ನು ಹೇಳಿ ಸುದರ್ಶನಮುದ್ರೆಯನ್ನು ತೋರಿಸಬೇಕು. ಕಡೆಗೆ ಸುತ್ತಲೂ ಅಗ್ನಿಪ್ರಾಕಾರಮುದ್ರೆಯನ್ನು ತನ್ನ ತಲೆಯ ಮೇಲುಗಡೆ ಮೂರು ಪ್ರದಕ್ಷಿಣೆ ತಂದು ರಚಿಸಬೇಕು, ಯೋಗದೀಪಿಕೆಯಲ್ಲಿ ದಿಕ್ಕುಗಳ ಬಂಧನದಲ್ಲಿ ವಜ್ರಾದಿಮುದ್ರೆಗಳನ್ನು ಬಳಸಲು ತಿಳಿಸಿದ್ದಾರೆ. ಎಲ್ಲ ಶಸ್ತ್ರಗಳ ರಾಜನೆನಿಸಿದ, ಎಲ್ಲ ಶಸ್ತ್ರಗಳಿಗೆ ಕಾರಣವಾದ ಚಕ್ರವನ್ನೇ ಎಲ್ಲೆಡೆ ಪ್ರಯೋಗಿಸುವಂತೆ **ಶೇಷಸಂಹಿತೆ** ತಿಳಿಸಿದೆ.

**ಸ್ವದೇಹೇ ಭ್ರಾಮಯನ್ ತ್ರಿಸ್ತ್ರಿಃ ಭ್ರಾಮಯೇಚ್ಚಕ್ರಮುದ್ರಯಾ**
**ಅಗ್ನಿಪ್ರಾಕಾರಮುದ್ರೇತಿ ತಾಭಿರಾತ್ಮಾಭಿರಕ್ಷಣಮ್**
**ಸರ್ವೇಷಾಮೇವ ಶಸ್ತ್ರಾಣಾಂ ಕಾರಣಂ ಚಕ್ರಮುಚ್ಯತೇ**
**ತಸ್ಮಾತ್ಸರ್ವಪ್ರಯತ್ನೇನ ಚಕ್ರಮುದ್ರಾಂ ಪ್ರದರ್ಶಯೇತ್**

ಸುದರ್ಶನದ ಚಿಂತನೆಯಲ್ಲಿಯೇ ಹರಡಿ ನಿಂತ **ಅಹಿರ್ಬುಧ್ನ್ಯಸಂಹಿತೆಯು** ಅಗ್ನಿಪ್ರಾಕಾರದ ಕಲ್ಪನೆಯನ್ನು ಅಗ್ನಿ ಶಬ್ದದ ವಿಶೇಷತೆಯನ್ನು ಹೇಳಿದೆ. ಬೆಂಕಿ ಕೋಟೆಯ ನಡುವೆ ಇರುವಂತೆ ಸಾಧಕನ ಕಲ್ಪನೆಯಲ್ಲಿ ಸುತ್ತಮುತ್ತಲಿನವರಿಂದ ಆತನ ರಕ್ಷೆಯು ಇಲ್ಲಿ ಸಿಗಲಿದೆ. ಆತ ಉಳಿದವರ ಕೆಟ್ಟದೃಷ್ಟಿಗೆ ಪಾತ್ರನಾಗನು–

**ಅಶೇಷದುರಿತಪ್ಲೋಷಾತ್ ಸೋಽಗ್ನಿರಿತ್ಯುಚ್ಯತೇ ಬುಧೈಃ**
**ಅಗ್ನಿನಾ ಛೇದಿತೋ ಮಂತ್ರಃ ತ್ವಗ್ನ್ಯಾತ್ಮಾ ವ್ಯವತಿಷ್ಠತೇ**
**ಪ್ರಾಕಾರಂ ಕಲ್ಪಯೇತ್ತೇನ ಪರಿತಃ ಪಾವಕಾಕೃತಿಮ್**
**ಅಗ್ನಿಪ್ರಾಕಾರಮಧ್ಯಸ್ಥೋ ದುರ್ನಿರೀಕ್ಷ್ಯೋಽಭಿಜಾಯತೇ**
**ಸಂಸ್ಮರಂಶ್ಚಕ್ರಗಾಯತ್ರೀಂ ಪರಿತಶ್ಚಕ್ರಮುದ್ರಯಾ**
**ಊರ್ಧ್ವಾಧಸ್ತಿರ್ಯಗಾಕಾರಂ ಮುದ್ರಯೇದಾತ್ಮನೋ ಬಹಿಃ**
**ಅಗ್ನಿಪ್ರಾಕಾರತಃ ಪೂರ್ವಂ ಚಕ್ರಮುದ್ರಾಥವಾ ಭವೇತ್**

ಅಗ್ನಿಪ್ರಾಕಾರದ ಮೊದಲೇ ಚಕ್ರಮುದ್ರೆಯ ಪ್ರದರ್ಶನಕ್ಕೆ ಇಲ್ಲಿ ಮಾತು ಬಂದಿದೆ.



ಮುಂದೆ ಸಂಹಿತೆಯು 27 ಅಕ್ಷರದ ಚಕ್ರಮಂತ್ರವನ್ನು ಹೇಳಿದೆ. **ಲಕ್ಷಣಸಂಹಿತಾ** ಹತ್ತು ದಿಕ್ಕುಗಳನ್ನು ಉಲ್ಲೇಖಿಸುತ್ತ ಅಗ್ನಿಪ್ರಾಕಾರ ಮಂತ್ರವನ್ನು ತಿಳಿಸಿದೆ–

**ಐಂದ್ರೀಂ ದಿಶಂ ಸಮಾರಭ್ಯ ಧರಾಂತಂ ಚ ದಿಶಃ ಪೃಥಕ್**
**ಚಕ್ರೇಣ ಬಧ್ನಾಮೀತ್ಯುಕ್ತ್ವಾ ನಮಶ್ಚಕ್ರಾಯ ತದ್ವಯಮ್**
**ವದೇದ್ದಿಗ್ಬಂಧನಾಸ್ತ್ರಾಖ್ಯಮಂತ್ರೋಽಯಂ ಸಮುದಾಹೃತಃ**
**ಅಗ್ನಿಃ ಪ್ರಾಕಾರರೂಪೇಣ ತಿಷ್ಠತಿಷ್ಠೇತ್ಯತಃ ಪರಮ್**
**ತ್ರೈಲೋಕ್ಯಂ ರಕ್ಷರಕ್ಷೇತಿ ಹುಂಫಟ್ ಸ್ವಾಹಾಂತಮೀರಿತಃ**
**ತಾರಾದಿಕೋಽಯಂ ಮಂತ್ರಃ ಸ್ಯಾತ್ ಅಗ್ನಿಪ್ರಾಕಾರಸಂಜ್ಞಕಃ**

ಅಗ್ನಿಪ್ರಾಕಾರಮುದ್ರೆಯಲ್ಲೂ ಬಾಣಮುದ್ರೆಯೇ ಇರುವುದು. ಇದನ್ನು **ಪಾದ್ಮಸಂಹಿತಾವು** ವಿವರಿಸಿದೆ.

**ಅಸ್ತ್ರಮಂತ್ರೇಣ ಕಕುಭೋ ಬಧ್ನನ್ ಭೂಮ್ಯೂರ್ಧ್ವಜಂ ಹವಿಃ**
**ಪ್ರಾಕಾರಾವಸ್ಥಿತಂ ಧ್ಯಾಯನ್ ತೇಜೋಮಂತ್ರೇಣ ಮಂತ್ರವಿತ್**
**ಚಕ್ರಮುದ್ರಾಂ ಚ ಖೇ ನ್ಯಸ್ಯ ಚಕ್ರಮಂತ್ರೇಣ ಸಾಧಕಃ**
**ಗೋಪಯೇನ್ನಿತ್ಯಮಾತ್ಮಾನಂ ಪ್ರಾಣಾಯಾಮೈಸ್ತ್ರಿಭಿಃ ಕ್ರಮಾತ್**

ಕೆಟ್ಟದ್ದನ್ನು ಅಳಿಸುವ ಹದಿನಾರು ಅಕ್ಷರದ ಬೇರೊಂದು ಮಂತ್ರವನ್ನು **ಈಶ್ವರಸಂಹಿತೆಯಲ್ಲಿ** ಹೇಳಿದ್ದಾರೆ –

**ದಶದಿಗ್ಬಂಧಮಂತ್ರಾಣಾಂ ವಕ್ಷ್ಯತೇ ಲಕ್ಷಣಂ ಪುರಾ**
**ಓಂಪೂರ್ವಂ ಪುರುಷಾಯೇತಿ ಸ್ವಾಹಾಂತಂ ತದನಂತರಮ್**
**ಅಸ್ತ್ರೇಣ ಬಂಧಯಾಮೀತಿ ಸ್ವಾಹಾಂತಂ ಚ ಷಡಕ್ಷರಮ್**
**ಇತಿ ದಿಗ್ಬಂಧಮಂತ್ರೋಽಯಂ ಈರಿತೋ ದುಷ್ಟದೋಷಹೃತ್**

**ಪದ್ಯಮಾಲಾ**ದಲ್ಲಿ ವಿಘ್ನನಾಶನದ ಸಂದರ್ಭದಲ್ಲಿ ಈ ತಂತ್ರವನ್ನು ತಿಳಿಸಲಾಗಿದೆ. ಆಚೀಚೆ ಹೇಳಲ್ಪಟ್ಟ ಈ ಮಾತುಗಳನ್ನೆಲ್ಲ ನಾವು ಸಂಧ್ಯಾವಂದನೆಯಲ್ಲಿ ಆಸನಶುದ್ಧಿಯ ಬಳಿಕ ಬಾಹ್ಯಶುದ್ಧಿಯ ನೆಲೆಯಲ್ಲಿ ನಡೆಸಬೇಕಾಗಿದೆ –

**ದಿವ್ಯಂತರಿಕ್ಷಭೂಮಿಷ್ಠಾನ್ ವಿಘ್ನಾನುಚ್ಚಾಟಯೇತ್ ಸುಧೀಃ**



**ಅಪಸರ್ಪಂತು ಯೇ ಭೂತಾ ಇತಿ ಮಂತ್ರಂ ಪಠನ್ನಪಿ**

**ಭೂತಾನುಚ್ಚಾಟ್ಯ ನಾರಾಚಮುದ್ರಯಾ ಬಂಧಯೇದ್ದಿಶಃ**

ದಿವಿ ಅಂತರಿಕ್ಷ ಭೂಮಿ ಎಂಬ ಸ್ಥಾನತ್ರಯದ ಭೂತಗಳ ನಾಶಕ್ಕೆ ಮಂತ್ರದಲ್ಲಿ **ಭುವಿ ಸಂಸ್ಥಿತಾಃ, ಅಂತರಿಕ್ಷಸ್ಥಾಃ, ದಿವಿ ಸಂಸ್ಥಿತಾಃ** ಎಂದು ಚಿಂತನೆ ಮಾಡಲಾಗಿದೆ. (ಆದರೆ ಈಗ ಕೆಲವು ಜಪಪುಸ್ತಕಗಳಲ್ಲಿ ಒಂದು ಗೆರೆ ಮಾಯ ವಾಗಿದೆ, ಗಮನಿಸಿ.) ಇದು **ನಾರದಪುರಾಣದ** ಆದೇಶಕ್ಕೂ ಸಮವಿದೆ –

**ದಿವ್ಯಂತರಿಕ್ಷಭೌಮಾಂಶ್ಚ ವಿಘ್ನಾನುತ್ಸಾರ್ಯ ಯತ್ನತಃ**

**ಅಸ್ತ್ರಾಯ ಫಟ್** ಎನ್ನುವಲ್ಲಿ ಮೂರು ಚಪ್ಪಾಳೆ ತಟ್ಟಬೇಕು. ಇದನ್ನು ಕೆಳಗೆ ನಡುವೆ ಮೇಲೆ ನಡೆಸಬೇಕು. ಅದರಲ್ಲೂ ಕೈಗಳ ನಿಯಮವಿದೆ. ತಾಲತ್ರಯಕ್ಕೆ ಫಲವಿದೆ. ಜಪಿಸುವವನಿಗೆ ನೆಲದಲ್ಲಿನ, ನಡುವೆ ಇರುವ, ಮೇಲೆ ಇದ್ದ ದುಷ್ಟಶಕ್ತಿಗಳ ಹಾವಳಿ ಬರಬಾರದೆಂದು ಈ ರಕ್ಷಣಾ ತಂತ್ರವನ್ನು **ಜಯಸಂಹಿತಾದಲ್ಲಿ** ಹೇಳಲಾಗಿದೆ.

**ಯೇ ಭೂತಾ ವಿಘ್ನಕರ್ತಾರಃ ತೇ ನಶ್ಯಂತ್ವಾಜ್ಞಯಾ ಹರೇಃ**

**ಇತ್ಯುಚ್ಚಾರ್ಯ ತು ಮಂತ್ರೇಣ ತಾಲತ್ರಯಕರೋ ದ್ವಿಜಃ**

**ನಾರಾಚಮುದ್ರಯಾ ಕುರ್ಯಾತ್ ದಿಗ್ಬಂಧಂ ಮಂತ್ರಮುತ್ತಮಮ್**

**ತರ್ಜನೀಂ ಸ್ಫೋಟಯೇದ್ದಿಕ್ಷು ದಶಸ್ವಂಗುಲಿಕೇನ ತು**

**ಅಸ್ತ್ರಮುದ್ರೇತಿ ವಿಖ್ಯಾತಾ ತ್ರಾಸಿನೀ ತ್ರಿಪದೇಷ್ವಪಿ**

ಎರಡೂ ಅಂಗೈಗಳನ್ನು ಪರಸ್ಪರ ಸಮ್ಮುಖವಾಗಿ ಆಗಲಿಸಿ ಹಿಡಿದು ಚಕ್ರದ ಅರಗಳಂತೆ ಬೆರಳುಗಳನ್ನು ಬರುವಂತೆ ಮಾಡಿದರೆ ಇದು ಚಕ್ರಮುದ್ರೆಯಾಗುವುದು. ಅಂಗೈಗಳನ್ನು ತಿರುಗಿಸಿದರೆ ಚಕ್ರಮುದ್ರೆಯ ಪ್ರದರ್ಶನ ಪೂರ್ಣವಾದಂತೆ.

**ಹಸ್ತೌ ತು ಸಮ್ಮುಖೌ ಕೃತ್ವಾ ಸಂಲಗ್ನೌ ಸುಪ್ರಸಾರಿತೌ**

**ಕನಿಷ್ಠಾಂಗುಷ್ಠಕೌ ಲಗ್ನೌ ಮುದ್ರಾ ಚಕ್ರಸ್ಯ ಸಿದ್ಧಿದಾ**

ಬಲಕೈಯ ಎಲ್ಲ ಬೆರಳುಗಳನ್ನು ಮಡಚಿ ತೋರುಬೆರಳುಗಳನ್ನು ಮಾತ್ರ



ತೋರಿಸಿ ನೇರ ಹಿಡಿದರೆ ಇದು ಬಾಣಮುದ್ರೆ, ಗದರಿಸುವಂತೆ ಎಂಟು ದಿಕ್ಕುಗಳಲ್ಲಿ ಇದನ್ನು ತೋರಿಸಬೇಕು.

**ತರ್ಜನ್ಯೇಕಾಕಿನೀ ತೂರ್ಧ್ವಾ ಮುದ್ರಾ ನಾರಾಚಸಂಜ್ಞಿಕಾ**

ಭಗವಂತನ ಆದೇಶದಂತೆ ಸಾಧಕನ ಪರೀಕ್ಷೆ ಅನ್ನುವಂತೆ ವಿಘ್ನ ನೀಡಲು ದೇವದೂತರ ಭೂತಗಳ ಸಂಚಾರವನ್ನು ಶ್ರುತಿಯೇ ಸಾರಿದೆ –

**ಯೇ ಭೂತಾಃ ಪ್ರಚರಂತಿ ದಿವಾನಕ್ತಂ ಬಲಿಮಿಚ್ಛಂತೋ ವಿತುದಸ್ಯ ಪ್ರೇಷ್ಯಾಃ**

ಸುರರು ವಿಘ್ನ ನೀಡುವ ಪರಿಯನ್ನು ಬ್ರಹ್ಮಾಂಡಪುರಾಣದ ಮಾತಿನಲ್ಲಿ ಮಧ್ವಾಚಾರ್ಯರು ಗೊತ್ತುಮಾಡಿದ್ದಾರೆ –

**ಯತ್ರ ದೇವೈಃ ಕೃತೇ ವಿಘ್ನೇ ಖಂಡಿತೋ ನ ಪುಮಾನ್ ಭವೇತ್**

**ತತ್ರ ತದ್ಯಶಸೇ ವಿಘ್ನಂ ಕುರ್ಯುರ್ನ್ನ ತು ವಿಘಾತನೇ**

**ಯತ್ರ ಖಂಡಿತತಾ ತತ್ರ ಖಂಡನಾಯೈವ ಕೇವಲಮ್**

**ಸತ್ಯಕಾಮಾ ಯತೋ ದೇವಾಃ ತೇ ಚಿತ್ತಾದ್ಯಭಿಮಾನಿನಃ**

ಒಳಗಿನ ಹೊರಗಿನ ವಿಘ್ನಕಾರಕರ ನಿವೃತ್ತಿಯನ್ನು ಷಡ್ವಿಂಶಬ್ರಾಹ್ಮಣದಲ್ಲಿ ಹೇಳಲಾಗಿದೆ. ಆ ವಿಘ್ನಕಾರಕರು ನಮ್ಮದೇ ಪಾಪಗಳು –

**ವಿಶ್ವಂ ಸಮತ್ರಿಣಂ ದಹ ವಿಶ್ವಂ ಸಮತ್ರಿಣಂ ದಹೇತಿ**

**ಅತ್ರಿಣೋ ವೈ ರಕ್ಷಾಂಸಿ ಪಾಪ್ಮಾನೋಽತ್ರಿಣಃ**

*ಜಪಾರಂಭದಲ್ಲಿ ಆಸನವನ್ನು ಮುಟ್ಟಿಕೊಂಡು ಹೇಳಬೇಕಾದ ಮಂತ್ರಗಳಿವು*

*ಓಂ ಮಂ ಮಂಡೂಕಾಯಃ ನಮಃ ಓಂ*

*ಓಂ ಕೂಂ ಕೂರ್ಮ್ಮಾಯ ನಮಃ ಓಂ*

*ಓಂ ವಂ ವರಾಹಾಯ ನಮಃ ಓಂ*

*ಓಂ ಶೇಂ ಶೇಷಾಯ ನಮಃ ಓಂ*

*ಓಂ ಕಾಂ ಕಾಲಾಗ್ನಿರುದ್ರಾಯ ನಮಃ ಓಂ*

*ಓಂ ವಂ ವಜ್ರಾಯ ನಮಃ ಓಂ*



# ಪರಾವಸು–ಅರ್ವಾವಸು

ಎಲ್ಲ ಯಜ್ಞಗಳನ್ನು ಸಾಂಗವಾಗಿ ನಡೆಸಲು ಅರ್ವಾವಸುವಿಗೆ ದೇವತೆಗಳು ಅನುಗ್ರಹ ನೀಡಿದ್ದಾರೆ. ನಮ್ಮ ಜಪಯಜ್ಞವು ಅರ್ವಾವಸುವಿನ ಹಾರೈಕೆಯಲ್ಲಿ ನಡೆಯುವಂತಾಗಲೆಂದು ಅವನ ನೆನಪನ್ನೂ ಆಸನದಲ್ಲಿ ನಾವು ಚಿಂತನೆ ಮಾಡಬೇಕಿದೆ. ಈ ಅರ್ವಾವಸುವಿನ ಕಥೆ ಸ್ಕಾಂದಪುರಾಣದಲ್ಲಿಯೂ ಇದೆ. ಮಹಾಭಾರತದಲ್ಲಿ ಹೀಗಿದೆ –

**ತೇನ ರೈಭಸ್ಯ ವೈ ಪುತ್ರೌ ಅರ್ವಾವಸುಪರಾವಸೂ**

**ವೃತೌ ಸಹಾಯೌ ಸತ್ರಾರ್ಥಂ ಬೃಹದ್ದ್ಯುಮ್ನೇನ ಧೀಮತಾ**

ಬೃಹದ್ದ್ಯುಮ್ನರಾಜ ತನ್ನ ಯಜ್ಞಕ್ಕಾಗಿ ರೈಭ್ಯಋಷಿಯ ಪುತ್ರರನ್ನು ಅರ್ವಾವಸು–ಪರಾವಸು ಋಷಿಗಳನ್ನು ಪುರೋಹಿತರನ್ನಾಗಿ ಕರೆದೊಯ್ದನು. ಆಶ್ರಮದಲ್ಲಿ ರೈಭ್ಯ ಮತ್ತು ಪರಾವಸುವಿನ ಮಡದಿ ಇದ್ದರು. ಪರಾವಸು ಒಬ್ಬನೆ ಮನೆಗೆ ಹಿಂತಿರುಗಿ ಬಂದ –

**ಕೃಷ್ಣಾಜಿನೇನ ಸಂವೀತಂ ದದರ್ಶ ಪಿತರಂ ವನೇ**

**ಮೃಗಂ ತು ಮನ್ಯಮಾನೇನ ಪಿತಾ ವೈ ತೇನ ಹಿಂಸಿತಃ**

ಕೃಷ್ಣಾಜಿನವನ್ನು ತೊಟ್ಟು ತಂದೆ ಅರಣ್ಯದಲ್ಲಿದ್ದರು. ಇದು ಮೃಗವೆ ಇರಬೇಕೆಂದು ತಿಳಿದು ಮಗ ಪರಾವಸು ರಾತ್ರಿ ತಿಳಿಯದೆ ತಂದೆಯನ್ನು ಕೊಂದ. ಸಂಸ್ಕಾರ ಮುಗಿಸಿ ಯಜ್ಞಶಾಲೆಗೆ ಬಂದು ತಮ್ಮನಲ್ಲಿ ಹೇಳಿದ–

**ಇದಂ ಕರ್ಮ್ಮ ನ ಶಕ್ತಸ್ತ್ವಂ ವೋಢುಮೇಕಃ ಕಥಂಚನ**

**ಸೋಽಸ್ಮದರ್ಥೇ ವ್ರತಂ ತಾತ ಚರ ತ್ವಂ ಬ್ರಹ್ಮಘಾತಿನಾಮ್**

ನಾನು ಗೊತ್ತಿಲ್ಲದೆ. ತಂದೆಯನ್ನು ಕೊಂದೆ. ಅದರ ಪ್ರಾಯಶ್ಚಿತ್ತವನ್ನು ನೀನು ನಡೆಸು, ನಿನಗೊಬ್ಬನಿಗೆ ಈ ಯಜ್ಞವನ್ನು ನಡೆಸಲಾಗದು. ನಾನೇ ರಾಜನ ಯಜ್ಞ ಮಾಡುವೆ. ಆಯಿತೆಂದು ಅರ್ವಾವಸು ಹೇಳಿ ಹೊರಟ. ಹನ್ನೆರಡು ವರ್ಷ ವ್ರತ ಮಾಡಿ ಬ್ರಹ್ಮಹತ್ಯೆಯನ್ನು ತೀರಿಸಿಕೊಂಡು ಮತ್ತೆ ಯಜ್ಞಕ್ಕೆ ಬಂದ. ಅಣ್ಣ ತಮ್ಮನನ್ನು ನೋಡಿ ರಾಜನಲ್ಲಿ ಹೇಳಿದ–



**ಏಷ ತೇ ಬ್ರಹ್ಮಹಾ ಯಜ್ಞಂ ಮಾ ದ್ರಷ್ಟುಂ ಪ್ರವಿಶೇದಿತಿ**

ಈತ ಬ್ರಹ್ಮಹತ್ಯೆ ಮಾಡಿದವ. ಯಜ್ಞ ನೋಡಿದರೆ ಅಮಂಗಳ. ಒಳಗೆ ಬಿಡಬೇಡ ಎಂದು. ರಾಜ ಸೇವಕರಿಂದ ಅರ್ವಾವಸುವನ್ನು ಹೊರಗೆ ದೂಡಿಸಿದ. ಅರ್ವಾವಸು ನನ್ನಿಂದ ಹತ್ಯೆ ನಡೆದದ್ದಲ್ಲ, ಅಣ್ಣ ಮಾಡಿದ ಪಾಪ ನಾನು ಪರಿಮಾರ್ಜನೆ ಮಾಡಿದ್ದೆಂದು ಹೇಳಿದ. ಆದರೂ ಭೃತ್ಯರಿಂದ ಹೊರಗೆ ಹಾಕಲ್ಪಟ್ಟ, ಅರ್ವಾವಸು ಕಾಡಿಗೆ ಹೋಗಿ ತಪಗೈದ –

**ಉಗ್ರಂ ತಪಃ ಸಮಾಸ್ಥಾಯ ದಿವಾಕರಮಥಾಶ್ರಿತಃ**

**ತಂ ತೇ ಪ್ರವರಯಾಮಾಸುಃ ನಿರಾಸುಶ್ಚ ಪರಾವಸುಮ್**

ದೇವತೆಗಳು ಸಂತುಷ್ಟರಾಗಿ ಅರ್ವಾವಸುವನ್ನು ಸ್ವೀಕರಿಸಿದರು; ಪರಾವಸುವನ್ನು ತಿರಸ್ಕರಿಸಿದರು. ಅರ್ವಾವಸು ದೇವತೆಗಳಿಂದ ತಂದೆ ಬದುಕಲೆಂದು ವರಪಡೆದ. ಅಣ್ಣ ಪಾಪಮುಕ್ತನಾಗಲೆಂದೂ ಕೇಳಿಕೊಂಡ. ಹೀಗೆ ಅರ್ವಾವಸುವಿನ ನೆನಪನ್ನು ಆಸನದ ಸಂದರ್ಭದಲ್ಲಿ ನಡೆಸಲಾಗಿದೆ.

**ನಿರಸ್ತಃ ಪರಾವಸುಃ** ಎಂದು ಹೇಳುವಾಗ ಆಸನದಿಂದ ಒಂದು ದರ್ಭೆಯನ್ನು ಹೊರಗೆ ಎಸೆಯಬೇಕು. **ಅರ್ವಾವಸೋಃ ಸದನೇ** ಸೀದಾಮಿ ಎಂದಾಗ ಒಂದು ಎಸಳು ದರ್ಭೆಯನ್ನು ಆಸನಕ್ಕೆ ಹಾಕಿಕೊಳ್ಳಬೇಕು ಎಂದು ಬ್ರಾಹ್ಮಣಗಳಲ್ಲಿ ಹೇಳಲಾಗಿದೆ – **ಅಥ ಹೋತೃಷದನಮುಪಾವರ್ತ್ತತೇ**

**ಸ ಹೋತೃಷದನಾದೇಕಂ ತೃಣಂ ನಿರಸ್ಯತಿ**

**ನಿರಸ್ತಃ ಪರಾವಸುರಿತಿ**

**ಪರಾವಸುರ್ಹ ವೈ ನಾಮಾಸುರಾಣಾಂ ಹೋತಾ**

**ಸ ತಮೇವೈತತ್ ಹೋತೃಷದನಾನ್ನಿರಸ್ಯತಿ**

**ಅಥ ಹೋತೃಷದನ ಉಪವಿಶತಿ**

**ಇದಮಹಮರ್ವಾವಸೋಃ** ಸದನೇ ಸೀದಾಮಿ ಇತಿ

**ಅರ್ವಾವಸುರ್ನ್ನಾಮ ದೇವಾನಾಂ ಹೋತಾ**

**ತಸ್ಯೈವೈತತ್** ಸದನೇ ಸೀದತಿ (ಮಾಧ್ಯಂದಿನ ಶತಪಥ ಬ್ರಾಹ್ಮಣ)



**ಅಥ ಯದ್ಬ್ರಹ್ಮಸದನಾತ್ ತೃಣಂ ನಿರಸ್ಯತಿ ಶೋಧಯತ್ಯೇವೈನಂ ತತ್**

**ಅಥೋಪವಿಶತಿ-ಇದಮಹಮರ್ವಾಗ್ವಸೋಃ ಸದನೇ ಸೀದಾಮೀತಿ**

**ಅರ್ವಾಗ್ವಸುರ್ಹವೈ ದೇವಾನಾಂ ಬ್ರಹ್ಮಾ**

**ಪರಾಗ್ವಸುರಸುರಾಣಾಮ್**

**ತಮೇವೈತತ್ ಪೂರ್ವಂ ಸಾದಯತಿ ಅರಿಷ್ಟಂ ಯಜ್ಞಂ ತನುತಾದಿತಿ**

**ಅಥೋಪವಿಷ್ಯ ಜಪತಿ ಬೃಹಸ್ಪತಿರ್ಬ್ರಹ್ಮ ಇತಿ**

**ಬೃಹಸ್ಪತಿರ್ವಾ ದೇವಾನಾಂ ಆಂಗೀರಸೋ ಬ್ರಹ್ಮಾ**

**ತಸ್ಮಿನ್ನೇವೈತತ್ ಅನುಜ್ಞಾಮಿಚ್ಛತಿ (ಗೋಪಥ, ಕೌಷೀತಕೀ ಬ್ರಾಹ್ಮಣಗಳು)**

**ಕಾಣ್ವೀಯ ಶತಪಥ ಬ್ರಾಹ್ಮಣದಲ್ಲಿ ಪಾಠಾಂತರಗಳಿವೆ –**

**ಅಥ ಹೋತೃಷದನಾತ್ತೃಣಂ ನಿರಸ್ಯತಿ**

**ನಿರಸ್ತಃ ಪರಾವಸುರಿತಿ**

**ಪರಾವಸುರ್ಹ ವೈ ನಾಮಾಸುರಾಣಾಂ ಹೋತಾ**

**ತಮೇವೈತತ್ ಹೋತೃಷದನಾನ್ನಿರಸ್ಯತಿ**

**ಇದಮಹಮರ್ವಾವಸೋಃ ಸದನೇ ಸೀದಾಮಿ ಇತಿ**

**ಅಥ ಹೋತೃಷದನ ಉಪವಿಶತಿ**

**ಅರ್ವಾವಸುರ್ಹ ವೈ ದೇವಾನಾಂ ಹೋತಾ**

**ತಸ್ಯೈವೈತತ್ ಸದನೇ ಸೀದತಿ**

ರೈಭ್ಯ ಮತ್ತು ಭರದ್ವಾಜರು ಗೆಳೆಯರು. ಭರದ್ವಾಜನ ಮಗ ಯವಕ್ರೀತ ಸೊಕ್ಕಿನಿಂದ ಪರಾವಸುವಿನ ಮಡದಿಯನ್ನು ಸೆಳೆಯುವನು. ಆಗ ರೈಭ್ಯನು ಭೂತವನ್ನು ಸೃಷ್ಟಿಸಿದನು. ಭೂತವು ಯವಕ್ರೀತನನ್ನು ಶೂಲದಿಂದ ಸಾಯಿಸಿತು. ಮಗ ಸತ್ತ ನೋವಿನಿಂದ ಭರದ್ವಾಜನೂ ಸಾಯುವನು. ಮುಂದೆ **ಅರ್ವಾವಸು** ಸುರರ ಅನುಗ್ರಹದಿಂದ ಅವರೀರ್ವರನ್ನು ಬದುಕಿಸುವನು. ಇದರಿಂದಲೂ ಅರ್ವಾವಸು ದೇವತೆಗಳಿಗೆ ಪ್ರಿಯನು. ಅರ್ವಾವಸು ವಿಶ್ವಾಮಿತ್ರನ ಮೊಮ್ಮಗನಾದ್ದರಿಂದ ವಿಶ್ವಾಮಿತ್ರ ನೀಡಿದ ಗಾಯತ್ರೀ ಜಪದ ಸಂದರ್ಭದಲ್ಲಿ ಇವನಿರಲಿ.



# ಗುರುನಮನ

ಶುದ್ಧಾಸನದಲ್ಲಿ ಕುಳಿತುಕೊಂಡು ಗುರುಗಳನ್ನೆಲ್ಲಾ ಮಣಿದು ಗಾಯತ್ರೀ ಅಷ್ಟಾಕ್ಷರಮಂತ್ರಗಳ ಜಪವನ್ನು ಮಾಡಬೇಕು ಎಂದು ವ್ಯಾಸಸ್ಮೃತಿ –

**ಕೃಷ್ಣಾಜಿನೇ ಕುಶೇ ವಾಽಪಿ ಕಂಬಲೇ ವಾಽಥ ಪೀಠಕೇ**

**ಉಪವಿಶ್ಯ ಗುರೂನ್ನತ್ವಾ ಜಪೇತಾಥ ಸಮಾಹಿತಃ**

ಮನುಷ್ಯ ತನ್ನ ಹುಟ್ಟಿನಿಂದ ಸಾಯುವ ತನಕ ಹಲವಾರು ಬಗೆಯಿಂದ ಋಣಿಯಾಗಿ ಬಿಡುವನು. ಆ ಋಣದ ಪರಿಹಾರದಲ್ಲಿ ಶಾಸ್ತ್ರಕಾರರು ಪಂಚ ಯಜ್ಞವನ್ನು ನಿರೂಪಿಸಿರುವರು. ಆ ಪಂಚಯಜ್ಞಗಳಲ್ಲಿ ಮುಖ್ಯವಾದದ್ದು ಬ್ರಹ್ಮಯಜ್ಞ, ಇದು ಋಷಿಋಣಪರಿಹಾರಕ್ಕೆ ಇರುವುದು. ಮನುಷ್ಯ ಒಂದಲ್ಲ ಒಂದು ವಿಧದಲ್ಲಿ ಯಾರಲ್ಲಾದರೂ ಏನನ್ನಾದರೂ ತಿಳಿವು ಪಡೆಯುವ ಮೂಲಕ ಶಿಷ್ಯ ಎಂದು ಕರೆಯಿಸಿಕೊಳ್ಳುವನು. ಈ ಕಲಿಕೆಯಿಂದಾದ ಋಣವನ್ನು ಜ್ಞಾನದಾನದ ಮೂಲಕ ತೀರಿಸಬಹುದು. ಜತೆಗೆ ನಿತ್ಯ ಅದರ ಅಭ್ಯಾಸವನ್ನು ನಡೆಸುವ ಮೂಲಕ ಜ್ಞಾನವನ್ನು ಜೀವಂತವಾಗಿಡಬಹುದು. ಹಾಗೆಯೇ ಆ ಜ್ಞಾನರಾಶಿಯ ಪೂರ್ಣಫಲವನ್ನು ಪಡೆಯಬಹುದು. ಈ ನೆಲೆಯಲ್ಲಿ ಸಂಸ್ಕಾರ ಪಡೆದ ಎಲ್ಲ ರಿಗೂ ಸಕಲಶಾಸ್ತ್ರಸಾರ ಗಾಯತ್ರೀಮಂತ್ರದ ಉಪದೇಶವಾಗಿದ್ದು ಅದರ ನಿರಂತರ ಚಿಂತನೆ ಬ್ರಹ್ಮಯಜ್ಞವಾಗಿ ಪರಿಣಮಿಸುವುದು. ಈ ಉಪದೇಶಪರಂಪರೆಯನ್ನು ನೆನೆಯುವುದೆ ಗುರುನಮನ ಎನಿಸಿದೆ. ಗುರುಗಳನ್ನು ನಮಿಸಿ ಅವರ ಅನುಗ್ರಹವನ್ನು ಪಡೆದು, ಅಭ್ಯಾಸ ಮಾಡಿದ ಮಂತ್ರವಿದ್ಯೆ ಪೂರ್ಣ ಸಿದ್ಧಿಯನ್ನೀಯುವುದೆಂದು ಆಚಾರ್ಯಮಧ್ವರು ತಿಳಿಸಿದ ತಂತ್ರ –

**ಸ್ಮೃತ್ವಾಂ ಗುರುಂ ಪೂರ್ವಗುರುಂ ಆದಿಮೂಲಗುರೂ ತಥಾ**

**ದೇವತಾಂ ವಾಸುದೇವಂ ಚ ವಿದ್ಯಾಭ್ಯಾಸೀ ತು ಸಿದ್ಧಿಭಾಕ್**

ಎಲ್ಲ ಮಂತ್ರಗಳೂ ಮುಖ್ಯವಾಗಿ ಸಂಸಾರದ ನಿವೃತ್ತಿಗೆ ಕಾರಣಗಳಾದವುಗಳು. ಹಾಗಾಗಿ ಬಿಡುಗಡೆಯನೀವ ವಾಸುದೇವನನ್ನು ಎಲ್ಲಾ ಮಂತ್ರಚಿಂತನೆಯ ಮೊದಲು ನಮಿಸಬೇಕು. ವೇದವಿಭಾಗ ಮಾಡಿ ವೈದಿಕ



ಸಾಧನೆಗೆ ಅವಕಾಶ ಕಲ್ಪಿಸಿದ ಪುರಾಣೇತಿಹಾಸ–ಸ್ಮೃತಿ–ಸೂತ್ರ–ಬ್ರಹ್ಮತರ್ಕಗಳಲ್ಲಿ ಸಾಧನೆಗಳ ತಾಂತ್ರಿಕ ಮುಖಗಳನ್ನು ತಿಳಿಸಿಕೊಟ್ಟ ವೇದವ್ಯಾಸರನ್ನು ವಂದಿಸಬೇಕು. ಇವರು ಮಾತಿನ ಪ್ರಪಂಚಕ್ಕೆ ಮೂಲಗುರುಗಳು. ಅಕ್ಷರಸಂಪತ್ತಿನ ಒಡತಿ ಲಕ್ಷ್ಮೀ ಮುಖ್ಯ ದೇವತೆ, ಅವಾಂತರ ದೇವತೆಗಳು ಮಾತಿನರಗಿಣಿ ಸರಸ್ವತೀ ಮತ್ತು ಬುದ್ಧಿಬೋಧಕಳು ಭಾರತೀ. ವೇದಸಂಪತ್ತಿನ ಮೂಲಕ ಜಗತ್ತಿಗೆ ಜ್ಞಾನದಾನಮಾಡಿ ಜೀವೋತ್ತಮರಾದ ಬ್ರಹ್ಮವಾಯುಗಳು ಆದಿಗುರುಗಳು. ನಮಗೆ ಮಂತ್ರ ಉಪದೇಶ ನೀಡಿದವರು ಗುರುಗಳು, ಅವರ ಗುರುಗಳು ಪರಮಗುರುಗಳು.

ಮಂತ್ರಚಿಂತನೆಗೆ ಉಪದೇಶಕ್ಕೆ ನಿತ್ಯ ಗುರುಬಲ ಬೇಕೇ ಬೇಕು. ಗ್ರಹರಲ್ಲೆ ಉತ್ತಮನಾದ ಗುರು ಶುಭವನ್ನು ಹಾರೈಸಿದರೆ ಸಣ್ಣಪುಟ್ಟ ಲಕ್ಷಗಟ್ಟಲೆ ದೋಷಗಳು ನಿವೃತ್ತಿಯಾಗಿ ಸಾಧಕನಿಗೆ ಮಂತ್ರಸಿದ್ಧಿಯಾಗಲಿದೆ. ಇದರಿಂದ ದೇವತೆಗಳ ಗುರುವಾದ ಬೃಹಸ್ಪತಿಯನ್ನು ಅವನಿಗೂ ಪೂರ್ವಾಚಾರ್ಯರಾದ ವೇದಾಭಿಮಾನಿಗಳಾದ ಗರುಡಶೇಷರುದ್ರರನ್ನು, ಅವರಿಗೂ ಆದಿಯಲ್ಲಿ ಗುರುಗಳಾದ ಬ್ರಹ್ಮವಾಯುಗಳನ್ನು, ಇವರಿಗೂ ಗುರುವಾದ ನಾರಾಯಣನ ಅನೇಕ ರೂಪಗಳನ್ನು ಇವರೆಲ್ಲರ ಮಡದಿಯರನ್ನು ನೆನೆದು ಮಂತ್ರ ಜಪಿಸಿದವ ಸಿದ್ಧಿಯನ್ನು ಪಡೆಯುವನು.

ಋಷಿಛಂದೋದೇವತಾವಿಚಾರದಲ್ಲಿ ಋಷಿಯು ಮಂತ್ರದ ಗುರುವೆನಿಸಿ ತಲೆಯಿಂದ ನಮ್ಯ ಎಂದು ತಲೆ ಮುಟ್ಟಲು ಹೇಳಿದ ತಂತ್ರ ಋಷಿಯನ್ನು ಗುರುವಾಗಿ ತಿಳಿಸಿಕೊಟ್ಟಿದೆ. ಈ ದೃಷ್ಟಿಯಿಂದ ಈ ಗುರುನಮನಗಳಿಗೆ ಹೊಸ ರೀತಿಯ ಅರ್ಥ ಕಾಣುವುದು. ಸಂಧ್ಯಾವಂದನೆಯಲ್ಲಿ ಬರುವ ಎಲ್ಲ ವೇದ ಮಂತ್ರಗಳ ಋಷಿಗಳೆಲ್ಲರೂ ಗುರುಶಬ್ದದಿಂದ ಸಂಗೃಹೀತರಾಗುವರು. ಅವರಿ ಗಿಂತ ಉತ್ತಮರಾದ ದೇವತೆಗಳು ಪೂರ್ವಗುರುಗಳು. ವಾಯು ದೇವದೇವನು ಆದಿಗುರು. ಭಗವಂತ ವಿಷ್ಣು ಮೂಲಗುರು. ಈ ಅರ್ಥದಲ್ಲಿ **ಆಚಾರ್ಯಸಂಹಿತಾ** ವಚನವೊಂದನ್ನು ಆಚಾರ್ಯಮಧ್ವರು ನೀಡಿದ್ದಾರೆ–

**ಋಷಿಭ್ಯಸ್ತೂತ್ತಮಾ ದೇವಾ ದೇವೇಭ್ಯೋ ವಾಯುರುತ್ತಮಃ**



**ವಾಯೋಶ್ಚ ಭಗವಾನ್ ವಿಷ್ಣುः ನ ತಸ್ಮಾದುತ್ತಮೋ ಗುರುಃ**

**ಗುರುವಃ ಪೂಜನೀಯಾಶ್ಚ ಮನೋವಾಕ್ಕಾಯಕರ್ಮಭಿಃ**

**ವಿಷ್ಣುಸಂಹಿತೆ**ಯಲ್ಲಿ ತ್ರಿಕರಣಪೂರ್ವಕವಾಗಿ ಗುರುಗಳನ್ನು ಪೂಜಿಸಲು ಹೇಳಲಾಗಿದೆ. ಅದರಂತೆ ಕೈಮುಗಿದು ಮನದಲ್ಲಿ ಗುರುಗಳನ್ನು ನೆನೆದು ಮಾತಿನಿಂದ ನಮನಮಂತ್ರವನ್ನು ಹೇಳಬೇಕು –

**ಓಂ ಶ್ರೀಗುರುಭ್ಯೋ ನಮಃ ಓಂ**

**ಓಂ ಪೂರ್ವಗುರುಭ್ಯೋ ನಮಃ ಓಂ**

**ಓಂ ಆದಿಗುರುಭ್ಯೋ ನಮಃ ಓಂ**

**ಓಂ ಮೂಲಗುರುಭ್ಯೋ ನಮಃ ಓಂ**

**ಓಂ ದೇವತಾಭ್ಯೋ ನಮಃ ಓಂ**

**ಓಂ ವಾಸುದೇವಾಯ ನಮಃ ಓಂ**

ನಮ್ಮ ನಮ್ಮ ಗುರುಗಳನ್ನು ಹೆಸರತ್ತಿ ಉಲ್ಲೇಖಮಾಡುವ ಕ್ರಮವಿಲ್ಲ; ಇದ್ದರೂ ಯಾರೂ ಸಂಧ್ಯಾವಂದನೆಯಲ್ಲಿ ಹೆಸರು ಹೇಳಿ ನಮಿಸುವುದಿಲ್ಲ; ನೆನೆಯುವರು. ಹಾಗಾಗಿ ಮೊದಲೆರಡು ನಮನಮಂತ್ರಗಳು ಸಾಮಾನ್ಯಗಳಾಗಿಯೇ ಹೇಳಬೇಕು. ಈ ಮಾತಿನಲ್ಲಿ ಗುರುಹಿರಿಯರೆಲ್ಲರು ಸಂಗೃಹೀತರಾಗುವರು. ಜಪಾದಿಗಳಿಗೆ ಸಾಧನದೇಹವನ್ನು ನೀಡಿದ ಪೋಷಿಸಿದ ಅನ್ನ ವಸನ ಕೊಟ್ಟ ತಾಯಿ ತಂದೆ ಬಂಧುಗಳೆಲ್ಲರೂ ಗುರುನಮನದ ಆದಿಯಲ್ಲಿ ನೆನಪಿಗೆ ಬರುವಂತೆ ಈ ಗುರುಶಬ್ದ ಬರಲಿದೆ. ಮನು ಇದನ್ನು ಸ್ಪಷ್ಟಪಡಿಸಿರುವನೆಂದು **ಮಹಾಭಾರತ**–

**ನಿಷೇಕಾದೀನಿ ಕರ್ಮಾಣಿ ಯಃ ಕರೋತಿ ಯಥಾವಿಧಿ**

**ಸಂಭಾವಯತಿ ಚಾನ್ನೇನ ಸ ವಿಪ್ರೋ ಗುರುರುಚ್ಯತೇ**

ಆಧ್ಯಾತ್ಮದಲ್ಲಿ ಅನ್ನ ಎಂದರೆ ವಿದ್ಯೆಯೇ ಆಗಿದೆ–

**ಗುರೋರ್ವಿದ್ಯಾಹೃತಿರ್ಯಾ ತು ಸ ಆಹಾರ ಇತಿ ಸ್ಮೃತಃ**

ಹೆಣ್ಣೂ ಸಂಧ್ಯಾದಿಗಳಲ್ಲಿ ಯೋಗ್ಯಳಾದ್ದರಿಂದ ಅವಳು ಮಾಡುವ ಗುರು ನಮನದಲ್ಲಿ ಸಾಧನೆಗೆ ಅವಕಾಶ ಕಲ್ಪಿಸಿದ ಗಂಡನೂ ಇಲ್ಲಿ ಸೇರಲಿರುವನು–



**ಯೋ ಭಾವಯತಿ ಯಾ ಸೂತೇ ಯೇನ ವಿದ್ಯೋಪದಿಶ್ಯತೇ**

**ಜ್ಯೇಷ್ಠಭ್ರಾತಾ ಚ ಭರ್ತಾ ಚ ಪಂಚೈತೇ ಗುರವಃ ಸ್ಮೃತಾಃ** (ಮತ್ಸ್ಯಪುರಾಣ)

ಹೀಗೆ ಗುರು ಹಾಗೂ ಪೂರ್ವಗುರು ಶಬ್ದಗಳು ಅಯಾ ವ್ಯಕ್ತಿಯ ಹಿರಿಯರನೇಕರನ್ನು ಹೇಳುವ ಮೂಲಕ ಇಂಥವರು – ಅಂಥವರು ಎಂದು ಹೆಸರಿನಿಂದ ತಿಳಿಸಲಾಗದು. ಅವರವರು ಅವರವರ ಹಿರಿಯರನ್ನು ಆ ಎರಡು ಮಂತ್ರಗಳಿಂದ ಸ್ಮರಿಸಬೇಕು. ಸಂಸ್ಕೃತದಲ್ಲಿ ಗುರು ಶಬ್ದ ಹಿರಿಯ ಎನ್ನುವ ಅರ್ಥ ದಲ್ಲೇ ಹೆಚ್ಚು ಬಳಕೆಯಲ್ಲಿದೆ. ಆ ಹಿರಿತನದಲ್ಲಿ ಉಪದೇಶಕತ್ವ ಬಹುದೊಡ್ಡ ಹಿರಿಮೆಯಾಗಿದೆ. ಜ್ಞಾನೋಪದೇಶದಲ್ಲಿ ಅಜ್ಞಾನ ನಿವೃತ್ತಿಯೂ ಸೇರಿದೆ. ಇದ ರಿಂದ ಉಪಕೃತನಾದ ಶಿಷ್ಯ ನಿತ್ಯಸ್ತುತಿ ಮಾಡುವ ಮೂಲಕ ಗುರುಶಬ್ದ ಸ್ತುತ್ಯ ಎಂಬ ವ್ಯಾಪಕವಾದ ಅರ್ಥವನ್ನು ತಳೆಯಿತು.

ಹಿರಿಯರಲ್ಲಿ ಪುರುಷ ಬಂಧುಗಳಂತೆ ಸ್ತ್ರೀ ಬಂಧುಗಳನ್ನೂ ಗುರುಗಳಾಗಿ **ಕೂರ್ಮಪುರಾಣ**ದಲ್ಲಿ ಪಟ್ಟಿಮಾಡಲಾಗಿದೆ –

**ಉಪಾಧ್ಯಾಯಃ ಪಿತಾ ಜ್ಯೇಷ್ಠೋ ಭ್ರಾತಾ ಚೈವ ಮಹೀಪತಿಃ**
**ಮಾತುಲಃ ಶ್ವಶುರಸ್ತ್ರಾತಾ ಮಾತಾಮಹಪಿತಾಮಹೌ**
**ವರ್ಣಜ್ಯೇಷ್ಠಃ ಪಿತೃವ್ಯಶ್ಚ ಪುಂಸೋಽತ್ರ ಗುರವಃ ಸ್ಮೃತಾಃ**
**ಮಾತಾ ಮಾತಾಮಹೀ ಗುರ್ವೀ ಪಿತುರ್ಮಾತುಶ್ಚ ಸೋದರಾಃ**
**ಶ್ವಶ್ರೂಃ ಪಿತಾಮಹೀ ಜ್ಯೇಷ್ಠಾ ಧಾತ್ರೀ ಚ ಗುರವಃ ಸ್ತ್ರಿಯಃ**

ಹಿರಿಯರನ್ನೆಲ್ಲಾ ಅನೇಕ ದೇವತೆಗಳ ಪ್ರತೀಕರನ್ನಾಗಿ ಗುರುತಿಸಿ ಗುರುನಮನಕ್ಕೆ ಭಾರವನ್ನು **ಭಾಗವತ**ವು ಕೊಟ್ಟಿದೆ –

**ಆಚಾರ್ಯೋ ಬ್ರಹ್ಮಣೋ ಮೂರ್ತಿಃ ಪಿತಾ ಮೂರ್ತಿಃ ಪ್ರಜಾಪತೇಃ**
**ಭ್ರಾತಾ ಮರುತ್ಪತೇರ್ಮೂರ್ತಿಃ ಮಾತಾ ಮೂರ್ತಿಃ ಕ್ಷಿತೇಸ್ತನುಃ**
**ದಯಾಯಾ ಭಗಿನೀ ಮೂರ್ತಿಃ ಧರ್ಮಸ್ಯಾತ್ಮಾಽತಿಥಿಃ ಸ್ವಯಮ್**
**ಅಗ್ನೇರಭ್ಯಾಗತೋ ಮೂರ್ತಿಃ ಸರ್ವಭೂತಾನಿ ಚಾತ್ಮನಃ**

**ಶ್ರೀವೈಷ್ಣವಸದಾಚಾರನಿರ್ಣಯ**ದಲ್ಲಿ ಲಕ್ಷ್ಮೀನಾರಾಯಣರನ್ನೆ ಗುರು–

ಪೂರ್ವಗುರುಗಳಾಗಿ ಚಿಂತಿಸಲಾಗಿದೆ –

**ಗುರುಭ್ಯಸ್ತದ್ಗುರುಭ್ಯಶ್ಚ ನಮೋವಾಕಮಧೀಮಹೇ**

**ವೃಣೀಮಹೇ ಚ ತತ್ರಾದ್ಯೌ ದಂಪತೀ ಜಗತಾಂ ಪತೀ**

ಮುಂದಿನ ಗುರುಮಂತ್ರಗಳನ್ನು ಆಯಾ ದೇವತೆಗಳ ಹೆಸರಿನಲ್ಲೆ ಹೇಳಬಹುದು. ಆದಿಗುರುಗಳಾಗಿ ಬ್ರಹ್ಮಸಮಾನರಾದ ವಾಯುದೇವರು ಆಚಾರ್ಯ ಮಧ್ವರಾಗಿ ಇಲ್ಲಿ ಈ ನೆಲದಲ್ಲಿ ಈ ಕಾಲಕ್ಕೆ ಹತ್ತಿರವಾಗಿ ಅವತರಿಸಿದ ಕಾರಣ **ಶ್ರೀಮದಾನಂದತೀರ್ಥಗುರುಭ್ಯೋ ನಮಃ** ಎಂದು ಸೇರಿಸಬೇಕು. ಹಾಗೆಯೆ ಅವರ ಮೂಲಗುರುಗಳಾದ ವೇದವ್ಯಾಸರನ್ನು **ವೇದವ್ಯಾಸಾಯ ನಮಃ** ಎಂದೇ ನಮಿಸಿದರಾಯಿತು. ಜತೆಗೆ ವಿದ್ಯಾದೇವತೆಗಳಾದ ಬ್ರಹ್ಮಾಣೀಭಾರತಿಯರನ್ನೂ ಲಕ್ಷ್ಮೀಯನ್ನೂ ಆಯಾ ನಾಮಮಂತ್ರದಿಂದ ನಮಿಸಬೇಕು.

ಹೀಗೆ ಹತ್ತು ಮಂದಿಗೆ ನಮಿಸಿದ ಮೇಲೆ ಹನ್ನೊಂದನೆಯ ನಮನವನ್ನು ಜಪಿಸುವ ಮಂತ್ರದೇವತೆಗೆ ಅರ್ಪಿಸಬೇಕೆನ್ನುವುದು ತಂತ್ರದ ಮಾತು. ನಾವು ಸಂಧ್ಯಾವಂದನೆಯಲ್ಲಿ ಗಾಯತ್ರೀ ಮಂತ್ರವನ್ನು ಹಾಗೂ ಅಷ್ಟಾಕ್ಷರಮಂತ್ರವನ್ನು ಮುಖ್ಯವಾಗಿ ಜಪಿಸುವುದರಿಂದ ಗುರುನಮಸ್ಕಾರದಲ್ಲಿ ಕಡೆಗೆ **ಸವಿತೃನಾಮಕನಾರಾಯಣಾಯ ನಮಃ** ಎನ್ನುವುದು ಸರಿಯಾಗಿದೆ. ನಿಜವಾಗಿ ಆಯಾ ಮಂತ್ರ ಜಪದ ಮೊದಲು ಪ್ರಪ್ರತ್ಯೇಕವಾಗಿ ಗುರುನಮಸ್ಕಾರವನ್ನು ನಡೆಸಬೇಕೆಂದು ಹೇಳಿದ್ದರೂ, ನಾವಿಂದು ಪ್ರಪ್ರತ್ಯೇಕವಾಗಿ ಬೇರೆ ಬೇರೆ ಮಂತ್ರಜಪದ ಮೊದಲು ಗುರುನಮಸ್ಕಾರವನ್ನು ಮಾಡುವುದಿಲ್ಲ. ಮೊದಲೊಮ್ಮೆ ಮಾಡುವ ಮೂಲಕ ಸಮಗ್ರ ಸಂಧ್ಯಾವಂದನೆಗೆ ಆಯ್ತೆಂದು ತಿಳಿಯುತ್ತೇವೆ. ಈ ಉದ್ದೇಶಕ್ಕಾಗಿಯೇ ಗುರುನಮಸ್ಕಾರವನ್ನು ಮಂತ್ರ ಜಪದ ಮೊದಲು ಹೇಳದೆ, ಆಸನಶುದ್ಧಿ – ಭೂತಶುದ್ಧಿಯ ಬಳಿಕ ಹೇಳಲಾಗಿದೆ. ಹೇಗೆ ಪ್ರತಿ ಮಂತ್ರಜಪದಲ್ಲಿಯೂ ತತ್ವನ್ಯಾಸ–ಮಾತೃಕಾನ್ಯಾಸಗಳನ್ನು ನಡೆಸಬೇಕೆಂದಿದ್ದರೂ ಮೊದಲೆ ಒಂದು ಬಾರಿ ನ್ಯಾಸಮಾಡುವ ಮೂಲಕ ಎಲ್ಲ ಮಂತ್ರಗಳಿಗೂ ಅನ್ವಯಿಸಿಕೊಳ್ಳುತ್ತೇವೆಯೊ ಹಾಗೆ.



ಗುರುಗಳ ವಿಷಯದಲ್ಲಿ ಆಚಾರ್ಯಮಧ್ವರು ಬಹಳ ಚಿಂತನೆಯನ್ನು ನೀಡಿದ್ದಾರೆ. ತಂತ್ರಸಾರಸಂಗ್ರಹದಲ್ಲಿ ಗುರುಭಕ್ತಿಯಿರದಿದ್ದರೆ ಮಂತ್ರ ಫಲಿಸದೆಂದು, ಗುರು ಅನುಗ್ರಹವೆ ಒಳಿತಿಗೆ ಕಾರಣವೆಂದು ತಿಳಿಸಿದ್ದಾರೆ–

**ಸರ್ವಕ್ರಿಯಾ ಹರೌ ಭಕ್ತೇ ಹರಿಭಕ್ತೈಃ ಸ್ವನುಷ್ಠಿತಾಃ**

**ಗುರುಭಕ್ತೈಃ ಸದಾಚಾರ್ಯೈಃ ಫಲಂತ್ಯದ್ಧಾ ನ ಚಾನ್ಯಥಾ**

**ಬ್ರಹ್ಮಾಂತಾಃ ಗುರವಶ್ಚೈವ ಸಂಪ್ರದಾಯಪ್ರವರ್ತ್ತಕಾಃ**

**ಶುಭಾನ್ ಧ್ಯಾಯಂತಿ ಯೇ ಕಾಮಾನ್ ಗುರುದೇವಪ್ರಸಾದಜಾನ್**

**ಇತರಾನಾತ್ಮಪಾಪೋತ್ಥಾನ್ ತೇಷಾಂ ವಿದ್ಯಾ ಫಲಿಷ್ಯತಿ**

**ಅವಜ್ಞಾತಾ ಗುರೂಣಾಂ ಚ ದೇವತಾನಾಂ ನ ಸಿಧ್ಯತಿ**

**ಭಕ್ತಿಮಾನ್ ಗುರುದೇವೇಷು ತದ್ಭಕ್ತೇಷು ಚ ಸಿಧ್ಯತಿ**

**ಯಾವದ್ಭಕ್ತೋ ಯಥಾಲಬ್ಧೈಃ ಗುಣೈರ್ಯುಕ್ತೋ ಹಿ ವೈಷ್ಣವಃ**

**ಗುರುಃ ಸತ್ಸಂಪ್ರದಾಯಜ್ಞಃ ತಾರತಮ್ಯೇನ ಸಿದ್ಧಿದಃ**

ಶಿಷ್ಯಪ್ರಯತ್ನದ ಜತೆ ಗುರುಪ್ರಸಾದ ಮುಖ್ಯ ಎಂದು ಬ್ರಹ್ಮಸೂತ್ರಭಾಷ್ಯದಲ್ಲಿ ಶ್ರುತಿಸ್ಮೃತಿಯ ಮೂಲಕ ಸ್ಪಷ್ಟಪಡಿಸಿರುತ್ತಾರೆ –

**ಆಚಾರ್ಯಾಚ್ಚೈವ ವಿದ್ಯಾ ವಿದಿತಾ ಸಾಧಿಷ್ಠಂ ಪ್ರಾಪತಿ**

**ಗುರುಪ್ರಸಾದೋ ಬಲವಾನ್ ನ ತಸ್ಮಾದ್ಬಲವತ್ತರಮ್**

**ಸಮ್ಯಗ್ಗುರುಪ್ರಸಾದಶ್ಚ ಮುಖ್ಯತೋ ದೃಷ್ಟಿಕಾರಣಮ್**

ಗುರುಸೇವೆಯೇ ಭಗವದ್ದರ್ಶನಕ್ಕೆ ಕಾರಣವೆಂಬುದನ್ನೂ ಬೃಹಸ್ಸಂಹಿತಾ ಮಾತಿನಿಂದ ಶ್ರೀಮಧ್ವರು ತೋರಿಸಿರುತ್ತಾರೆ –

**ಪರೇ ಗುರೌ ಚ ಯಾ ಭಕ್ತಿಃ ಪರಿಚರ್ಯಾದಿಕಂ ಹರೇಃ**

**ಏಷಾ ಸೇವೇತಿ ಸಂಪ್ರೋಕ್ತಾ ಯಯಾ ತದ್ದರ್ಶನಂ ಭವೇತ್**

ಮಹಾಭಾರತದ ಯುದ್ಧದ ನಡುನಡುವೆ ಅರ್ಜುನ ತತ್ತರಿಸುತ್ತಿದ್ದ. ಸಾರಥಿಯಾದ ಕೃಷ್ಣ ಪರಮಾತ್ಮನೆ ಎದುರು ಕೂತಿದ್ದ. ಆದರೂ ಕೃಷ್ಣ ಅನುಗ್ರಹ ಮಾಡದೆ ಶಿವನ ಬಳಿ ಕರೆದೊಯ್ದ. ಇದಕ್ಕೆ ಕಾರಣವೇನೆಂದು ಆಚಾರ್ಯಮಧ್ವರು



ನಿರ್ಣಯ ನೀಡುತ್ತಾರೆ – ತಾನು ಗುರುಮುಖದಿಂದಲೆ ಪ್ರಸಾದಕನೆಂದು ತಿಳಿಸಲು ಕೃಷ್ಣ ಹಾಗೆ ವರ್ತಿಸಿದ ಎಂದು.

**ಪಶ್ಯಮಾನೋಽಪಿ ತು ಹರಿಂ ನ ತು ವೇತ್ತಿ ಕಥಂಚನ**

**ವೇತ್ತಿ ಕಿಂಚಿತ್ಪ್ರಸಾದೇನ ಹರೇರಥ ಗುರೋಸ್ತಥಾ**

ಆಚಾರ್ಯರು ಬ್ರಹ್ಮತರ್ಕದ ಈ ಮಾತಿನಿಂದ ಗುರ್ವನುಗ್ರಹವಿಲ್ಲದಲ್ಲಿ ಭಗವಂತನನ್ನು ಸಾಧಕ ಕಂಡರೂ ಕಾಣಲಾರ ಎಂದಿರುವರು. ಸಾಧಕನಿಗೆ ಫಲ ಸಿಗಲು ಗುರುಪ್ರಸಾದ, ಗುರುಸೇವೆ, ಯೋಗ್ಯ ಸಂಬಂಧಗಳನ್ನು ಕಾರಣಗಳನ್ನಾಗಿ ತಂತ್ರಶಾಸ್ತ್ರದ ಮಾತುಗಳಿಂದ ತಿಳಿಸಿದ್ದಾರೆ –

**ಗುರುಶಿಷ್ಯಯೋರಯೋಗ್ಯತ್ವಾತ್ ಗುರುವೃತ್ತೇರಪೂರ್ತಿತಃ**

**ಅಪ್ರಸಾದಾದ್ಗುರೋರ್ವಿದ್ಯಾ ನ ಯಥೋಕ್ತಫಲಪ್ರದಾ**

**ವಿದ್ಯಾಃ ಕರ್ಮಾಣಿ ಚ ಸದಾ ಗುರೋಃ ಪ್ರಾಪ್ತಾಃ ಫಲಪ್ರದಾಃ**

**ಅನ್ಯಥಾ ನೈವ ಫಲದಾಃ ಪ್ರಸನ್ನೋಕ್ತಾಃ ಫಲಪ್ರದಾಃ**

**ಗುರೋರನುಗ್ರಹಮೃತೇ ಸಾಧನಂ ನ ಹರೇಃ ಪ್ರಿಯಮ್**

**ಗುರೂಪದೇಶಾತ್ತು ಹರಿಂ ಪ್ರಾಪ್ನೋತ್ಯೇವ ನ ಸಂಶಯಃ**

**ಶುಶ್ರೂಷೇತ್ಸಹಿತಸ್ತಾವತ್ ಯಾವಜ್ಞಾನೋದಯೋ ಭವೇತ್**

**ತತಃಪರಂ ಚ ಶುಶ್ರೂಷೇತ್ ಯಥಾ ತಸ್ಯ ಪ್ರಿಯಂ ಭವೇತ್**

ಗುರುಸೇವೆಯನ್ನು ಗುರುಪ್ರಸಾದಕ್ಕೆ ಪ್ರಮುಖ ಕಾರಣವನ್ನಾಗಿ ಕೃಷ್ಣ ಗೀತೆಯಲ್ಲಿ ಸಂದೇಶ ನೀಡಿದ್ದಾನೆ –

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ**

**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ವದರ್ಶಿನಃ**

ತತ್ವದರ್ಶಿಗಳನ್ನು ಆಶ್ರಯಿಸಲು ಒತ್ತಿ ಹೇಳಿದ್ದನ್ನು ಉದ್ಧವಗೀತೆಯಲ್ಲಿ ಸ್ಪಷ್ಟ ಕಾಣಬಹುದು–

**ಮದಭಿಜ್ಞಂ ಗುರುಂ ಶಾಂತಂ ಉಪಾಸೀತ ಮದಾತ್ಮಕಮ್**

ಭಗವದ್ಭಕ್ತಿವರ್ಧನೆಗೆ ಗುರುಸೇವೆಯೆ ಕಾರಣವೆಂದು ಸಾತ್ವತತಂತ್ರ ಹೇಳಿದೆ –



**ಸರ್ವಸಾಧನಮುಖ್ಯಾ ಹಿ ಗುರುಸೇವಾ ಸದಾದೃತಾ**

**ಯಯಾ ಭಕ್ತಿರ್ಭಗವತಿ ಹ್ಯಂಜಸಾ ಸ್ಯಾತ್ಸುಖಾವಹಾ**

ಶಿಷ್ಯನ ಬ್ರಹ್ಮಚಾರಿಯ ಕರ್ತವ್ಯವನ್ನು ಹೇಳಹೊರಟ **ಭಾಗವತ** ಎರಡು ಬಾರಿ ಭಗವಂತನ ವಿಶೇಷ ಸನ್ನಿಧಾನ ಪಾತ್ರನು ಗುರು ಎಂದು ತಿಳಿಸಿದೆ–

**ಅಗ್ನೌ ಗುರಾವಾತ್ಮನಿ ಚ ಸರ್ವಭೂತೇಷ್ವಧೋಕ್ಷಜಮ್**

**ಭೂತೈಃ ಸ್ವಧಾಮಭಿಃ ಪಶ್ಯೇತ್ ಅಪ್ರವಿಷ್ಟಂ ಪ್ರವಿಷ್ಟವತ್**

ಗುರುವಿನಲ್ಲಿ ಸರ್ವ ದೇವತೆಗಳ ಸನ್ನಿಧಾನವೂ ಇದೆ. ವಿಶೇಷವಾಗಿ ತಾನೇ ಗುರುವಿನಲ್ಲಿರುವವನೆಂದು ಕೃಷ್ಣ ಉದ್ಧವನಿಗೆ ತಿಳಿಸಿದ್ದಾನೆ –

**ಆಚಾರ್ಯಂ ಮಾಂ ವಿಜಾನೀಯಾತ್**

**ಸರ್ವದೇವಮಯೋ ಗುರುಃ**

ಆಚಾರ್ಯಮಧ್ವರು **ಬೃಹದಾರಣ್ಯಕಭಾಷ್ಯ**ದಲ್ಲಿ ಗುರುಲಕ್ಷಣವನ್ನು ಹೇಳುತ್ತ ಪ್ರತಿಯೊಂದು ತಂತ್ರಗ್ರಂಥಗಳೂ ಗುರುವಿನ ಬಗ್ಗೆ ಹೇಳಿವೆ ಎಂಬುದನ್ನು ತಿಳಿಸಿರುತ್ತಾರೆ.

**ಯಸ್ಯ ದೇವೇ ಪರಾ ಭಕ್ತಿಃ ಯಥಾ ದೇವೇ ತಥಾ ಗುರೌ** ಎನ್ನುವುದಾಗಿ **ಶ್ವೇತಾಶ್ವತರ** ಉಪನಿಷತ್ತು ಗುರುಗಳಲ್ಲಿ ದೊಡ್ಡ ಮಟ್ಟದ ಭಕ್ತಿಯನ್ನು ಮಾಡಲು ತಿಳಿಸಿ ದೇವರ ಪೂರ್ಣ ಅನುಗ್ರಹಕ್ಕೆ ಪಾತ್ರರಾಗುವ ಬಗೆಯನ್ನು ಹೇಳಿಕೊಟ್ಟಿದೆ. ಬದುಕಿನಲ್ಲಿ ಉತ್ತಮ ಗುರಿಯನ್ನು ಗುರುತಿಸುವಂತೆ ಮಾಡಿದ ಗುರುಗಳನ್ನು ಮರೆಯದೆ, ಮೊದಲು ಮತ್ತು ಕೊನೆಗೆ ನಮಿಸಿ.

> *__ಕರಶುದ್ಧಿಯ__ ಪ್ರಕ್ರಿಯೆಯಲ್ಲಿ ವಾಯವಾಯಾಹಿ, ಅಗ್ನಿಮೀಳೇ, ತತ್ತ್ವಾಯಾಮಿ ಮಂತ್ರಗಳನ್ನು ಕೆಲವರು ಹೇಳುವರು. ಈ ವೇದಮಂತ್ರಗಳು ಕ್ರಮವಾಗಿ ವಾಯು, ಅಗ್ನಿ, ವರುಣ ದೇವತೆಗಳಿಗೆ ಸಂಬಂಧಿಸಿದವುಗಳು. ಇವರ ಬೀಜಮಂತ್ರಗಳೇ __ಯರವ__ಗಳು. ಇವುಗಳಿಗೆ ಆಚೀಚೆ ಪ್ರಣವ ಹಾಕಿ ಪ್ರಪ್ರತ್ಯೇಕ ಅನುಸ್ವಾರ ಸೇರಿಸಿ ಬಳಸಬೇಕು.*

# ಕರಶುದ್ಧಿ

**ಅಂಗುಷ್ಠೋಽಗ್ನಿರ್ಮಹಾಬಾಹೋ ಪ್ರೋಕ್ತೋ ವಾಯುಃ ಪ್ರದೇಶಿನೀ**

**ಅನಾಮಿಕಾ ತಥಾ ಸೂರ್ಯಃ ಕನಿಷ್ಠಾ ಮಘವಾ ವಿಭೋ**

**ಪ್ರಜಾಪತಿರ್ಮಧ್ಯಮಾ ಸ್ಯಾತ್ ತಸ್ಮಾದ್ಭಾರತಸತ್ತಮ**

**ಸರ್ವದೇವಮಯೋ ರಾಜನ್ ಕರೋ ವಿಪ್ರಸ್ಯ ದಕ್ಷಿಣಃ**

**ಭವಿಷ್ಯಪುರಾಣದ** ಈ ಮಾತು ಸಂಧ್ಯಾವಂದನೆಯಲ್ಲಿ ಬಲಕೈಯ ಸ್ಥಾನವನ್ನು ತಿಳಿಸಿದೆ. ಹೆಬ್ಬೆರಳು ಅಗ್ನಿ, ತೋರುಬೆರಳು ವಾಯು, ನಡುಬೆರಳು ಚತುರ್ಮುಖ, ಉಂಗುರಬೆರಳು ಸೂರ್ಯ, ಕಿರುಬೆರಳು ಇಂದ್ರ. ಈ ಹಿನ್ನಲೆಯಲ್ಲಿ ಆಚಮನದ ಅಂಗಸ್ಪರ್ಶವೂ ಹೆಚ್ಚು ಅರ್ಥಪೂರ್ಣವಾಗುವುದು. ಬಲಕೈಯಿಂದ ನೀಡುವ ತರ್ಪಣವೂ ತೀರಾ ಸಂಗತವೆನಿಸುವುದು. ಮಂತ್ರನ್ಯಾಸವೂ ಈ ಉದ್ದೇಶದಿಂದಲೆ ಸಫಲವೆನಿಸುವುದು. **ಖಾದಿರಗೃಹ್ಯಸೂತ್ರ** ಈ ನೆಲೆಯಲ್ಲಿ ಬಲಗೈಯನ್ನು ಬಳಸಿ ಎಂದು ಸಾರಿದೆ – **ದಕ್ಷಿಣೇನ ಪಾಣಿನಾ ಕೃತ್ಯಮನಾದೇಶೇ**

ಮುಂದೆ ಮಾಡಲಿರುವ ತತ್ತ್ವನ್ಯಾಸ – ಮಾತೃಕಾನ್ಯಾಸ – ಮಂತ್ರ ನ್ಯಾಸಾದಿಗಳಿಗೆ ಹಾಗೂ ಜಪಕ್ಕೆ ಯೋಗ್ಯವಾಗುವಂತೆ ಎರಡೂ ಕೈಗಳನ್ನು ಶುದ್ಧಿಗೊಳಿಸಬೇಕು. ಭೌತಿಕವಾಗಿ ಕೈಗಳನ್ನು ಭೂತದ್ರವ್ಯಗಳಿಂದಲೆ ಶುಚಿಗೊಳಿಸಬೇಕು ಹೊರತು ಇನ್ನ್ಯಾವುದೇ ಅಭೌತಿಕದ್ರವ್ಯಗಳು ಪ್ರಪಂಚದಲ್ಲಿ ನಮಗೆ ಎಟುಕಲಾರವು. ಮಣ್ಣಿನ ಮೈಯನ್ನು ಮಣ್ಣಿನಿಂದ ತೊಳೆದರೆ ಮತ್ತೆ ಮಣ್ಣೆ ಮೆತ್ತಿಕೊಳ್ಳಲಿದೆ. ನೀರಿನಿಂದ ತೊಳೆಯಬಹುದು. ಹಾಗೆಯೇ ಬೆಂಕಿಯಿಂದ ಕಶ್ಮಲಗಳನ್ನು ಸುಟ್ಟು ಹೊಳಪು ಕೊಡಬಹುದು. ಹಾಗೆಯೆ ಗಾಳಿ ಹಾಕಿ ಮೇಲೆ ಅಂಟಿದ ಕೊಳೆಯನ್ನು ಹಾರಿಸಬಹುದು. ಇದಕೆಂದೆ ವಾಯ್ವಗ್ನಿಜಲ ಬೀಜಮಂತ್ರಗಳಿಂದ ಕರಶುದ್ಧಿಯನ್ನು ಹೇಳಲಾಗಿದೆ. ವಾಯುಬೀಜ **ಯಂ,** ಅಗ್ನಿಬೀಜ **ರಂ,** ವಾರಿಬೀಜ **ವಂ.**

ಜಪ ಹೋಮಾದಿಗಳಲ್ಲಿ ಕೈತೊಳೆಯುವುದೆಂದರೆ ಮುಟ್ಟಿದ, ಅಂಟಿದ ಭಾಗವನ್ನಷ್ಟೆ ಅಲ್ಲದೆ ಪೂರ್ತಿಯಾಗಿ ಕೈಗಳನ್ನು ತೊಳೆಯಬೇಕು. ಹೇಗೆ ಅಡುಗೆಯಲ್ಲಿ



ಸೌಟು ತೊಳೆಯುವುದರಿಂದ ಕಲಡಿಸಲು ಯೋಗ್ಯವಾದ ಭಾಗವಷ್ಟೆ ಅಲ್ಲದೆ ಅದರ ಹಿಡಿಯೂ (ದಂಡ) ಹೇಗೆ ಅಶುಚಿಯೆನಿಸಿ ಶೌಚಾರ್ಹವೆನಿಸುವುದೋ, ಹಾಗೆ ಕೈಗಂಟಿನಿಂದ ಆರಂಭಿಸಿ ಕೈಯನ್ನು ಶುಚಿಗೊಳಿಸಬೇಕು. ಸಂಧ್ಯಾಭಾಷ್ಯದಲ್ಲಿ ಕರಶುದ್ಧಿಯ ಸಂದರ್ಭದಲ್ಲಿ **ಶ್ರೀಕೃಷ್ಣಪಂಡಿತ** ಪ್ರಮಾಣವನ್ನು ಹೇಳಿದ್ದಾನೆ–

**ಪ್ರಕೋಷ್ಠೇ ಮಣಿಬಂಧೇ ಚ ಪಾರ್ಶ್ವಯೋಸ್ತಲಯೋಸ್ತಥಾ**
**ತತ್ಪೃಷ್ಠೇ ಚ ತದಗ್ರೇ ಚ ಕರಶುದ್ಧಿರುದಾಹೃತಾ**

**ಶ್ರೀ ಜಯತೀರ್ಥರು** ಪದ್ಯಮಾಲಾದಲ್ಲಿ ಆರು ಅಂಗಗಳ ಕರಶುದ್ಧಿಯನ್ನು ತಿಳಿಸಿರುತ್ತಾರೆ–

**ವಾಯ್ವಗ್ನಿವರುಣಾನಾಂ ಚ ಬೀಜಾನಿ ಯರವಾಃ ಕ್ರಮಾತ್**
**ಪ್ರತ್ಯೇಕಂ ಸಂಪುಟೀಕೃತ್ಯ ಪ್ರಣವೇನ ಚ ಬಿಂದುನಾ**
**ಏಭಿಃ ಕಾರ್ಯಂ ಕ್ರಮಾತ್ ಷೋಢಾ ಕರಸಂಧಿಷು ಶೋಧನಮ್**

**ಸ್ಮೃತಿಮುಕ್ತಾವಳಿಯಲ್ಲಿ** ಆರು ಅಂಗಗಳನ್ನು ಕ್ರಮವಾಗಿ ಹೇಳಲಾಗಿದೆ–

**ಮಣಿಬಂಧೇ ಪ್ರಕೋಷ್ಠೇ ಚ ಕೂರ್ಪರೇ ಹಸ್ತಸಂಧಿಷು**
**ಪಾರ್ಶ್ವಯೋಃ ಪೃಷ್ಠಯೋಃ ಷಟ್ಚ ಕರಶುದ್ಧಿರುದಾಹೃತಾ**

ಪೂಜಾಕಲ್ಪಲತೆಯಲ್ಲಿ ಇದರ ವಿವರಣೆ ಸ್ವಲ್ಪ ವ್ಯತ್ಯಾಸವಾಗಿ ಬಂದಿದೆ.

ಪಂಚಸಂಸ್ಕಾರಸಂಗ್ರಹದಲ್ಲಿ ಪೂಜಾಪ್ರಕರಣದಲ್ಲಿ ಕರಶುದ್ಧಿಯನ್ನು ಹೇಳುತ್ತ **ಪರಮಪುರುಷಸಂಹಿತಾ**ವಚನವನ್ನು ಪ್ರಮಾಣವಾಗಿ ನೀಡಲಾಗಿದೆ–

**ಆಕೂರ್ಪರಾತ್ಪರಾಮೃಶ್ಯ ಸಪವಿತ್ರಕರಾವುಭೌ**
**ಅಸ್ತ್ರಮಂತ್ರೇಣ ಕರಯೋಃ ತಲಪೃಷ್ಠಾಂಗುಲೀಷು ಚ**
**ಶುದ್ಧಿಂ ವಿಧಾಯ ವಾಮಾಂತಃ ಕುರ್ವೀತ ಕರಶೋಧನಮ್**

ಮೊದಲು ಬಲಕೈಯ ಶುದ್ಧಿಯನ್ನು ಮಾಡಿ ಮತ್ತೆ ಎಡಕೈ ಶುದ್ಧಿಯನ್ನು ನಡೆಸಬೇಕು. **ರಂ ಸಹಸ್ರಾರ ಹುಂ ಫಟ್** ಎನ್ನುವ ಸುದರ್ಶನ ಅಸ್ತ್ರಮಂತ್ರದಿಂದ ಎಡಕೈಯಿಂದ ಬಲಕೈಯನ್ನು ಮೊಣಗಂಟಿನಿಂದ ಬೆರಳ ತುದಿವರೆಗೆ ಹಿಂದೆ ಮತ್ತೆ ಮುಂದೆ ಸವರಬೇಕು. ಹೀಗೆಯೇ ಮತ್ತೆ ಬಲಕೈಯಿಂದ ಎಡಕೈಯನ್ನೂ



ಅಡಿಯಲ್ಲಿ ಮತ್ತು ಮೇಲ್ಗಡೆ ಸವರುತ್ತ ವೈಷ್ಣವಾಗ್ನಿಯಿಂದ ಕೈಗಳನ್ನು ಶುದ್ಧವಾದಂತೆ ಭಾವಿಸಬೇಕು. ಇದು ತಾಂತ್ರಿಕವಿಧಿಯಾಗಿ ಸಂಧ್ಯಾವಂದನೆಯಲ್ಲಿ ಹೆಚ್ಚು ಬಳಕೆಯಲ್ಲಿಲ್ಲ. ವಾಯ್ವಗ್ನಿವರುಣಬೀಜಮಂತ್ರಗಳಿಂದಲೆ ಸಂಹಿತಾವಚನದಂತೆ ತಲ-ಪೃಷ್ಠ-ಅಂಗುಲಿಗಳಲ್ಲಿ ಶುದ್ಧಿಯನ್ನು ನಡೆಸಬೇಕು. ಮುಂದೆ ನಡೆಯುವ ಶೋಷಣಾದಿಗಳಲ್ಲೂ ಈ ಮಂತ್ರಗಳು ಬಳಕೆಯಾಗಲಿವೆ. ದೇಹದ ನಾಡೀಚಕ್ರಗಳ ಶುದ್ಧಿಯಲ್ಲಿ ಯರವಗಳಿಗೆ ಹೆಚ್ಚು ಪ್ರಾಧಾನ್ಯವಿದೆ.

ಇದರ ಒಂದು ಸುಂದರವಾದ ವಿವರಣೆ ಹೀಗಿದೆ –

ಹಸ್ತಸಂಧಿಗಳಾದ ಮಣಿಗಂಟು, ಅದರ ಕೆಳಗಿನ ಭಾಗ ಕೈ, ಮೊಣಗಂಟುಗಳಲ್ಲಿ ಯರವ ಬೀಜಮಂತ್ರಗಳಿಂದ ಕೈಬೆರಳ ತುದಿಗಳಿಂದ ಮುಟ್ಟುವ ಮೂಲಕ ಶುದ್ಧಿಗೊಳಿಸಬೇಕು. ಒಟ್ಟು ಕೈಯ ಎರಡು ಬದಿಗಳಲ್ಲಿ ಎರಡು ಬಾರಿ ಹೇಳುವ ಮೂಲಕ ಆರು ಮಂತ್ರಗಳಿಂದ ಶುದ್ಧಿ ಹಾಗೂ ಕೈ ಎದುರು ಮತ್ತೆ ಹಿಂಬದಿಗಳಲ್ಲೂ ಎರಡು ಬಾರಿ ಯರವಗಳಿಂದ ಶುದ್ಧಿ ನಡೆಸಬೇಕೆಂದು ಇದರ ಅರ್ಥವಾಗಲಿದೆ. ಪೃಷ್ಠಶಬ್ದ ದ್ವಿವಚನದಿಂದ ಅಂಗೈ ಮತ್ತು ಮುಂಗೈಯನ್ನು ಹೇಳಿದೆ. ಹೀಗೆಯೇ ಎಡಕೈಯ ಶುದ್ಧಿಯನ್ನೂ ನಾಲ್ಕು ಬಾರಿ ಯರವಗಳನ್ನು ಹೇಳಿ ನಡೆಸಬೇಕು. ಇದನ್ನು ಶ್ಲೋಕದ 'ಚ'ಕಾರ ಹೇಳಿದೆ.

ಹಸ್ತಸಂಧಿಷು ಎನ್ನುವುದನ್ನು ಪ್ರತ್ಯೇಕವಾಗಿ ಅನ್ವಯಿಸಿ ಹಸ್ತಶಬ್ದಕ್ಕೆ ಅಂಗೈ ಎಂದು ಅರ್ಥಮಾಡಿಕೊಂಡರೆ, ಒಂದೊಂದು ಬೀಜಾಕ್ಷರದಿಂದ ಒಂದೊಂದು ಸ್ಥಾನದಲ್ಲಿ ಶುದ್ಧಿ ನಡೆಸಬೇಕು. ಮಣಿಗಂಟಿನಲ್ಲಿ **ಯಂ** ಪ್ರಕೋಷ್ಠದಲ್ಲಿ **ರಂ** ಕೂರ್ಪರದಲ್ಲಿ **ವಂ**, ಅಂಗೈಯ ಸಂಧಿ-ಹೆಬ್ಬೆರಳ ಬುಡದಲ್ಲಿ **ಯಂ**, ಅಂಗೈ ನಡುವೆ-ಬೆರಳ ಸಂಧಿಯಲ್ಲಿ **ರಂ**, ಬೆರಳ ತುದಿಯಲ್ಲಿ **ವಂ**, ಅಂಗೈಯ ಕಿರುಬೆರಳ ಬದಿಯಲ್ಲಿ **ಯಂ**, ಅಂಗೈಯ ಹೆಬ್ಬೆರಳ ಬದಿಯಲ್ಲಿ **ರಂ**, ಅಂಗೈ ಹಿಂದೆ **ವಂ**. ಹೀಗೆಯೇ ಎಡಕೈಯಲ್ಲಿಯೂ ಮೂರು ಬಾರಿ ಮೂರು ಬೀಜಮಂತ್ರಗಳ ಪ್ರಯೋಗವು. ಆದರೆ ಇಲ್ಲಿ ಹಸ್ತಸಂಧಿಷು ಎಂಬ ಮಾತಿನಲ್ಲಿ ಬೆರಳ ತುದಿ ಸಂಧಿಯೆನಿಸದು ಎನ್ನುವುದು ಅಸ್ವರಸವಾಗಿದೆ.



# ಪಾಪಪುರುಷನಿರಸನ

**ವಾಯ್ವಗ್ನ್ಯಮೃತಬೀಜೈಶ್ಚ ಶೋಷಣಾದಿಕಮಾಚರೇತ್** (ಶೇಷಸಂಹಿತೆ)

ಕರಶುದ್ಧಿಯ ಮಂತ್ರಗಳಿಂದಲೆ ಶೋಷಣ, ದಹನ, ಪ್ಲಾವನವನ್ನು ನಡೆಸಬೇಕು. ದೇಹದಲ್ಲಿರುವ ಪಾಪಶಕ್ತಿಗಳನ್ನು ವಾಯುಬೀಜದಿಂದ ಒಣಗಿಸ ಬೇಕು; ಅಗ್ನಿಬೀಜದಿಂದ ಸುಡಬೇಕು; ವರುಣಬೀಜದಿಂದ ಮತ್ತೆ ದೇಹವನ್ನು ಒದ್ದೆ ಮಾಡಬೇಕು. ಇದನ್ನು ಪ್ರಾಣಾಯಾಮದ ಕ್ರಮದಲ್ಲಿ ನಡೆಸುವಂತೆ ಪ್ರಾಚೀನರ ತಂತ್ರಚಿಂತನೆ ಬಂದಿದೆ. **ಓಂ ಯಂ ಓಂ** ಎಂದು ಆರು ಬಾರಿ ಹೇಳುತ್ತ ಪೂರಕವನ್ನು ಮಾಡುವ ಮೂಲಕ ಶೋಷಣ, **ಓಂ ರಂ ಓಂ** ಎನ್ನುವ (12 ಬಾರಿ) ಮಂತ್ರದೊಡನೆ ದಹನ ಹಾಗೂ **ಓಂ ವಂ ಓಂ** ಎನ್ನುವ (24 ಬಾರಿ) ಮಂತ್ರದೊಡನೆ ಕುಂಭಕದಲ್ಲಿ ಪ್ಲಾವನದ ಅನುಸಂಧಾನ ನಡೆಯಬೇಕು. ಇದು **ಶ್ರೀವೈಷ್ಣವಾಹ್ನಿಕ**ದಲ್ಲಿಯೂ ಪ್ರಸ್ತುತವಾಗಿದೆ. ಇನ್ನೊಂದು ಕ್ರಮದಂತೆ ಪೂರಕದಿಂದ ಶೋಷಣ, ಕುಂಭಕದಿಂದ ದಹನ, ರೇಚಕದಿಂದ ಭಸ್ಮರೇಚನ ಮತ್ತೆ ಪ್ಲಾವನ. ಶೋಷಣಕ್ಕೂ ರೇಚನಕ್ಕೂ ವಾಯುಬೀಜವೇ. ಆಚಾರ್ಯಮಧ್ವರು **ತಂತ್ರಸಾರಸಂಗ್ರಹ**ದಲ್ಲಿ ಸಂಗ್ರಹಿಸಿದ ತಂತ್ರಸಾರದ ಮಾತನ್ನು ಶ್ರೀವೈಷ್ಣವಾಹ್ನಿಕದಲ್ಲಿ ತಂತ್ರಸಾರದ ವಚನವೆಂದೇ ನೀಡಲಾಗಿದೆ.

**ಆದಾವೇವ ಜಪೇ ಕುರ್ಯಾತ್ ಶೋಷಣಂ ದಹನಂ ಪ್ಲುತಿಮ್**
**ವಾಯ್ವಗ್ನಿವಾರುಣೈರ್ಬೀಜೈಃ ಧ್ಯಾತ್ವಾ ತನ್ಮಂಡಲೇ ಹರಿಮ್**

**ಪದ್ಯಮಾಲಾ**ದಲ್ಲಿ ಪಾಪಪುರುಷನ ಶೋಷಣಾದಿಗಳ ಸ್ಥಾನವನ್ನು ಉಲ್ಲೇಖಿಸಲಾಗಿದೆ –

**ತತಶ್ಚ ಬ್ರಹ್ಮಹತ್ಯೇತಿ ಧ್ಯಾಯೇತ್ಸ್ವಂ ಪಾಪಪೂರುಷಮ್**
**ಆನೀಯ ನಾಭಿದೇಶೇ ತಂ ವಾಯುಬೀಜೇನ ಶೋಷಯೇತ್**
**ಹೃದ್ಯಗ್ನಿಬೀಜತೋ ದಗ್ಧ್ವಾ ಭಸ್ಮ ವಾಮನಸಾ ತ್ಯಜೇತ್**
**ವಾರುಣೇನಾಥ ಬೀಜೇನ ಶಿರಃಸ್ಥಾಮೃತಧಾರಯಾ**



**ಪ್ಲಾವಯೇತ್ ಸರ್ವಗಾತ್ರಾಣಿ ಕೃತ್ವಾಽಽತ್ಮಾನಂ ತತೋ ಹೃದಿ**

ವಾಯುಮಂಡಲದಲ್ಲಿ ಪ್ರದ್ಯುಮ್ನನನ್ನು, ಅಗ್ನಿಮಂಡಲದಲ್ಲಿ ಸಂಕರ್ಷಣನನ್ನು ಹಾಗೂ ವರುಣಮಂಡಲದಲ್ಲಿ ವಾಸುದೇವನನ್ನು ನೆನೆಯಬೇಕು. ಇವರು ಕೇಶವಾದಿ ಇಪ್ಪತ್ತನಾಲ್ಕರಲ್ಲಿ ಬರುವವರಲ್ಲ. ಹಾಗಾಗಿ ಚಿಂತನೆಯಲ್ಲಿ ಹಳದಿ, ಕೆಂಪು, ಬಿಳಿ ಬಣ್ಣದವರಿವರು. ಪ್ರದ್ಯುಮ್ನನು ಕೈಗಳಲ್ಲಿ ಶಂಖಚಕ್ರದ ಜೊತೆಗೆ ಬಿಲ್ಲುಬಾಣಗಳನ್ನು ಹಿಡಿದಿರುವನು. ಸಂಕರ್ಷಣನು ಒನಕೆ ನೇಗಿಲುಗಳನ್ನು ಶಂಖಚಕ್ರದ ಜೊತೆಗೆ ಧರಿಸಿರುವನು. ವಾಸುದೇವನು ಶಂಖಚಕ್ರಗದಾಪದ್ಮಗಳನ್ನು ಧರಿಸಿರುವನು –

**ವಾಸುದೇವಾದಿಕಾಃ ಶುಕ್ಲರಕ್ತಪೀತಾಸಿತೋಜ್ಜ್ವಲಾಃ**
**ಚಕ್ರಶಂಖಗದಾಬ್ಜೇತಃ ಪ್ರಥಮಃ ಮುಸಲೀ ಹಲೀ**
**ಸಚಕ್ರಶಂಖಸ್ತ್ವಪರಃ ತೃತೀಯಃ ಶಾರ್ಙ್ಗಬಾಣವಾನ್**

ದ್ರುಪದಾಮಂತ್ರ ಅಥವಾ ಅಘಮರ್ಷಣಸೂಕ್ತವನ್ನು ಹೇಳುತ್ತಾ ಕೈಯಲ್ಲಿ ಹಿಡಿದುಕೊಂಡ ನೀರಿನ ಮೇಲೆ ಉಸಿರನ್ನು ಜೋರಾಗಿ ಬಿಟ್ಟು, ಆ ನೀರನ್ನು ಎಡಬದಿಗೆ ಎಸೆದು ಚೆಲ್ಲುವ ಮೂಲಕ ಪಾಪಪುರುಷ ನಿಹತನಾದಂತೆ **ಗೃಹ್ಯಪರಿಶಿಷ್ಟದಲ್ಲಿ** ಪ್ರಯೋಗವನ್ನು ತಿಳಿಸಿದ್ದಾರೆ. **ನಾರದೀಯಪುರಾಣದಲ್ಲಿ** ಪಂಚಭೂತಬೀಜಮಂತ್ರದೊಡನೆ ಈ ಪ್ರಕ್ರಿಯೆಯನ್ನು ನಡೆಸುವಂತೆ ಹೇಳಿದ್ದಾರೆ. **ಭಾರದ್ವಾಜಸ್ಮೃತಿಯಲ್ಲಿ** ದೈಹಿಕಪಾಪನಿವೃತ್ತಿಗೆ ಈ ಪ್ರಯೋಗದ ಪದ್ಧತಿಯೊಂದಿಗೆ ಫಲವನ್ನು ತಿಳಿಸಿದ್ದಾರೆ –

**ಉದ್ಧೃತ್ಯ ದಕ್ಷಿಣೇ ಹಸ್ತೇ ಜಲಂ ಗೋಕರ್ಣವದ್ಧೃತೇ**
**ನಿಃಶ್ವಾಸಾನ್ನಾಸಿಕಾಗ್ರೇ ತು ಪಾಪ್ಮಾನಂ ಪುರುಷಂ ಸ್ಮರೇತ್**
**ಋತಂ ಚೇತಿ ತ್ರ್ಯಚಂ ವಾಪಿ ದ್ರುಪದಾಂ ವಾ ಜಪೇದೃಚಮ್**
**ದಕ್ಷನಾಸಾಪುಟೇನೈವ ಪಾಪಾತ್ಮಾನಂ ವ್ಯಪೋಹಯೇತ್**
**ಋತಂ ಚೇತಿ ಪಠಿತ್ವಾಥ ತಜ್ಜಲಂ ತು ಕ್ಷಿತೌ ಕ್ಷಿಪೇತ್**
**ಯ ಏವಂ ದ್ರುಪದಾಂ ನಿತ್ಯಂ ತ್ರಿರಹಃ ಪ್ರಯತೋ ಜಪೇತ್**



**ನ ಪರ್ಯುಷಂತಿ ಪಾಪಾನಿ ತಸ್ಯ ದೇಹೇ ದ್ವಿಜನ್ಮನಃ**

ವಾಜಸನೇಯಸಂಹಿತೆಯಲ್ಲಿ ಮಂತ್ರ –

**ದ್ರುಪದಾದಿವೇನ್ಮುಮುಚಾನಃ ಸ್ವಿನ್ನಃ ಸ್ನಾತ್ವೀ ಮಲಾದಿವ**

**ಪೂತಂ ಪವಿತ್ರೇಣೇವಾಜ್ಯಂ ಆಪಃ ಶುಂಧಂತು ಮೈನಸಃ**

**ಮಹಾನಿರ್ವಾಣತಂತ್ರ** ವಿಘ್ನ ಕೊಡುವ ಕಾಮಕ್ರೋಧಗಳನ್ನು ಕೊಂದು ಜಪ ನಡೆಸಬೇಕೆಂದು ಸಾಂಕೇತಿಕವಾಗಿ ತಿಳಿಸಿದ್ದು ಈ ಪಾಪಪುರುಷನನ್ನೆ. ಪ್ರದ್ಯುಮ್ನನಿಂದ ಕಾಮನನ್ನು ಓಡಿಸುವುದು ಹಾಗೂ ಸಂಕರ್ಷಣನಿಂದ ಕೋಪವನ್ನು ಸುಡುವುದು ಇಲ್ಲಿನ ತಂತ್ರಗಾರಿಕೆ –

**ಕಾಮಕ್ರೋಧೌ ವಿಘ್ನಕೃತೌ ಬಲಿಂ ದತ್ತ್ವಾ ಜಪಂ ಚರೇತ್**

ಪಾಪಪುರುಷ ಚಿಂತನೆಯ ಹಿನ್ನೆಲೆಯಲ್ಲಿ ಜೀವನನ್ನು ಬ್ರಹ್ಮನಾಡಿಯ ಮೂಲಕ ತಲೆಯಲ್ಲಿ ಸೇರುವಂತೆ ಅನುಸಂಧಾನ ನಡೆಸಿ ಶೋಷಣಾದಿಗಳನ್ನು ಮಾಡಬೇಕು. ಇದನ್ನು ಹಾರೀತರು ವಸಿಷ್ಠರು ಸ್ಮೃತಿಗಳಲ್ಲಿ ತಿಳಿಸಿರುತ್ತಾರೆ–

**ಸುಖಪದ್ಮಾಸನೇ ಭೂತ್ವಾ ಭೂತಶುದ್ಧಿಂ ಸಮಾಚರೇತ್**
**ಆತ್ಮಾನಂ ಶಿರಸಿ ಸ್ಥಾಪ್ಯ ಪಶ್ಚಾತ್ಸಂಚಿಂತಯೇದಘಮ್**
**ಆತ್ಮಾನಂ ಶಿರಸಿ ಸ್ಥಾಪ್ಯ ಸುಷುಮ್ನಾನಾಡಿಮಾರ್ಗ್ಗತಃ**
**ಸ್ವದೇಹಸ್ಥಮಘಂ ಕೃತ್ಸ್ನಂ ಚಿಂತಯೇದ್ಧೃದಿ ವೈಷ್ಣವಃ**
**ಅಥ ಷಟ್ಕೋಣಮಧ್ಯಸ್ಥಂ ಷಡ್ಭಿರ್ಬಿಂದುಭಿರುಜ್ವ್ರಿತಮ್**
**ವಾಯುಬೀಜಂ ಸ್ಮರೇತ್ತತ್ರ ನಾಭಿದೇಶೇ ಸಮಾಹಿತಃ**
**ತತ್ರೋತ್ಥಿತೇನ ಸಂಶೋಷ್ಯ ವಾಯುನಾ ಪಾಪವಿಗ್ರಹಮ್**
**ಪ್ರಾಣಾಯಾಮವಿಧಾನೇನ ಶೋಷಯಿತ್ವಾ ಸಮುತ್ಸೃಜೇತ್**
**ತತಸ್ತ್ರಿಕೋಣಮಧ್ಯಸ್ಥಂ ದ್ವಿಷಡ್ಬಿಂದುಭಿರುಜ್ವ್ರಿತಮ್**
**ಅಗ್ನಿಬೀಜಂ ಹೃದಿ ಸ್ಥಾಪ್ಯ ತೇನ ದಗ್ಧ್ವಾಘವಿಗ್ರಹಮ್**
**ಪೂರಯೇದ್ವಾಯುರೋಧೇನ ದಗ್ಧ್ವಾ ಚೈವ ಸಮುತ್ಸೃಜೇತ್**
**ಅಥಾಂಬುದೈವತಂ ಬೀಜಂ ಚಂದ್ರಮಂಡಲಸಂಸ್ಥಿತಮ್**



ಧ್ಯಾತ್ವಾ ಸ್ವಶಿರಸಿ ಪ್ರಾಜ್ಞಃ ತಸ್ಮಿನ್ನುತ್ಥಿತವಾರಿಣಾ

ಕ್ಷಾಳಯಿತ್ವಾ ಸ್ವಕಂ ದೇಹಂ ಶೋಧಯಿತ್ವಾ ಸಮುತ್ಸೃಜೇತ್

ಅಥಾತ್ಮಾನಂ ಹೃತ್ಕಮಲೇ ವಿನ್ಯಸೇದ್ವಿಮಲೇ ಶುಭೇ

ನಾಭಿಸ್ಥಾನೇ ಸ್ಥಿತಂ ನೀಲಂ ಚಕ್ರಂ ಷಟ್ಕೋಣಸಂಯುತಮ್

ಚಿಂತಯಿತ್ವಾಽತ ಉತ್ಪನ್ನವಾಯುನಾ ಶೋಷಯೇದಘಮ್

ಪ್ರಾಣಾಯಾಮವಿಧಾನೇನ ವಾಯುಬೀಜಂ ಜಪೇದ್ಬುಧಃ

ತ್ರಿಕೋಣಮಗ್ನಿಚಕ್ರಂ ತು ತದ್ಬೀಜಸಹಿತಂ ಹೃದಿ

ಚಿಂತಯಿತ್ವಾ ದಕ್ಷಿಣೇನ ಪೂರಯೇದನಲಂ ಪುನಃ

ತದುತ್ಪನ್ನಾಗ್ನಿನಾ ದಗ್ಧ್ವಾ ವಹ್ನಿಬೀಜಂ ಜಪೇತ್ತದಾ

ಪ್ರಾಣಾಯಾಮವಿಧಾನೇನ ವಾಮತೋ ರೇಚಯೇದ್ಬುಧಃ

ವರುಣಂ ಬೀಜಸಂಯುಕ್ತಂ ಚಂದ್ರಬಿಂಬಮಧೋಮುಖಮ್

ಧ್ಯಾತ್ವಾ ತತ್ಕ್ಷಾಳಯೇದ್ದೇಹಂ ತದುತ್ಪನ್ನೇನ ವಾರಿಣಾ

ಪ್ರಕ್ಷಾಳ್ಯ ಸಕಲಂ ದೇಹಂ ದಕ್ಷಿಣೇನೈವ ರೇಚಯೇತ್

ಸ್ವಾತ್ಮಾನಂ ಹೃದಿ ವಿನ್ಯಸ್ಯ ಯೋಗಧ್ಯಾನಂ ಸಮಾಚರೇತ್

ಶೇಷಸಂಹಿತೆಯಲ್ಲಿ ನಾಡಿಚಕ್ರದಲ್ಲಿ ಶುದ್ಧಿಕರ್ಮ –

ನಾಭಿಚಕ್ರಸ್ಯ ಮಧ್ಯಸ್ಥವಾಯುನಾ ಚಂಡವಾಯುನಾ

ವಾಯುಬೀಜೇನ ಮೂಲೇನ ಶೋಷಯೇನ್ಮಂತ್ರವಿತ್ತಮಃ

ತದ್ದಹೇದಗ್ನಿಮೂಲೇನ ಹೃಚ್ಚಕ್ರಸ್ಥಿತವಹ್ನಿನಾ

ಕ್ಷೀರಾಬ್ಧಿಮಧ್ಯಸಂಭೂತಾಮೃತೇನ ಚ ಸಮಂತ್ರಕಮ್

ಕುರ್ಯಾತ್ತತ್ಪಾವನಂ ಸಮ್ಯಕ್ ಅಮೃತೇನೈವ ಸಾಧಕಃ

ಸೃಷ್ಟ್ಯಂತೇ ಕ್ಷಾಳನಂ ಕುರ್ಯಾತ್ ವಾರುಣೇನ ಸಮಂತ್ರಕಮ್

ಪಾದ್ಮಸಂಹಿತೆಯಲ್ಲಿ ಬಣ್ಣದ ಚಿಂತನೆಯ ಜತೆಗೆ ಎಲ್ಲ ದೇಹದ ಪ್ಲಾವನವನ್ನು ಸ್ಪಷ್ಟ ತಿಳಿಸಲಾಗಿದೆ–

ಯುಕ್ತಃ ಕೃತ್ವಾ ಯೋಗಮುದ್ರಾಂ ನಾಭಿದೇಶಸ್ಥಿತಂ ತಥಾ



ವೇದ್ಯಾಕಾರಂ ವಾಯುಬೀಜಂ ಧ್ಯಾತ್ವಾ ತಜ್ಜನ್ಯವಾಯುನಾ

ಧೂಮ್ರೇಣ ದೇಹಮಾತ್ಮಾನಂ ಶೋಷಯಿತ್ವಾ ನಿರಂಜನಮ್

ತ್ರಿಕೋಣಮಗ್ನಿಬೀಜಂ ತು ರಕ್ತವರ್ಣ್ಣಂ ಹೃದಂಬುಜೇ

ಧ್ಯಾತ್ವಾ ತದುತ್ಥಸಪ್ತಾರ್ಚ್ಚಿಶಿಖಾಭಿಃ ಕಲ್ಮಷಂ ದಹೇತ್

ಮಾಹೇಂದ್ರಬೀಜಂ ವಿನ್ಯಸ್ಯ ಪೀತಾಭಂ ಚತುರಸ್ರಕಮ್

ಕಂಠೇ ಸಹಾಸ್ಪರ್ಶನಂ ಚ ಸ್ತಂಭಯೇದಗ್ನಿಮುತ್ಥಿತಮ್

ವಾಯುನಾ ಕುಂಭಕೇನೈವ ವೃತ್ತಂ ಸ್ಫಟಿಕಸನ್ನಿಭಮ್

ವಿನ್ಯಸ್ಯ ವಾರುಣಂ ಬೀಜಂ ಮೂರ್ಧ್ನಿ ತಜ್ಜಾಮೃತಾಂಭಸಾ

ಕ್ಷಾಳಯೇತ್ಸರ್ವತೋ ದೇಹಂ ಆಪಾದತಳಮಸ್ತಕಮ್

ಅಗ್ನಿಪುರಾಣದಲ್ಲಿ ಆತ್ಮಶುದ್ಧಿಯ ಸಂಗ್ರಹ –

ಮೂಲೇನಾಬ್ಜಾಸನಂ ಕುರ್ಯಾತ್ ತೇನ ಪೂರಕಕುಂಭಕಾನ್

ಆತ್ಮಾನಂ ಯೋಜಯಿತ್ವೋರ್ಧ್ವಂ ಶಿಖಾಂತೇ ದ್ವಾದಶಾಂಗುಲೇ

ಸಂಶೋಧ್ಯ ದಗ್ಧ್ವಾ ಸ್ವತನುಂ ಪ್ಲಾವಯೇದಮೃತೇನ ಚ

ಧ್ಯಾತ್ವಾ ದಿವ್ಯಂ ವಪುಸ್ತಸ್ಮಿನ್ ಆತ್ಮಾನಂ ಚ ಪುನರ್ನ್ನಯೇತ್

ಕೃತ್ವೈವಂ ಚಾತ್ಮಶುದ್ಧಿಃ ಸ್ಯಾತ್ ವಿನ್ಯಸ್ಯಾರ್ಚ್ಚನಮಾರಭೇತ್

ಯಾಗಮಂದಿರಕ್ಕೆ ಹೊರಟಾಗ ಅಲ್ಲಿ ಮಾಡಬೇಕಾದ ದೇಹಶುದ್ಧಿಯನ್ನು ತಿಳಿಸುವಲ್ಲಿ ಅಗ್ನಿಪುರಾಣವು ಕೆಲವೊಂದು ವಿಶೇಷ ಪ್ರಯೋಗವನ್ನು ಹೇಳಿದೆ. ಮಂತ್ರಾಕ್ಷರನ್ಯಾಸವೂ ಇಲ್ಲಿದೆ –

ಸ್ನಾತ್ವಾ ಯಥಾವದಾಚಮ್ಯ ವಾಗ್ಯತೋ ಯಾಗಮಂದಿರಮ್

ಗತ್ವಾ ಪದ್ಮಾಸನಂ ಬದ್ಧ್ವಾ ಶೋಷಯೇದ್ವಿಧಿನಾ ವಪುಃ

ರಕ್ಷೋಘ್ನವಿಘ್ನಕೃದ್ದಿಕ್ಷು ನ್ಯಸೇದಾದೌ ಸುದರ್ಶನಮ್

ಯಂಬೀಜಂ ನಾಭಿಮಧ್ಯಸ್ಥಂ ಧೂಮ್ರಂ ಚಂಡಾನಿಲಾತ್ಮಕಮ್

ಅಶೇಷಂ ಕಲ್ಮಷಂ ದೇಹಾತ್ ವಿಶ್ಲೇಷಯದನುಸ್ಮರೇತ್

ರಂಬೀಜಂ ಹೃದಯಾಬ್ಜಸ್ಥಂ ಸ್ಮೃತ್ವಾ ಜ್ವಾಲಾಭಿರಾದಹೇತ್



ಊರ್ಧ್ವಾಧಸ್ತಿರ್ಯಗಾಭಿಸ್ತು ಮೂರ್ಧ್ನಿ ಸಂಪ್ಲಾವಯೇದ್ವಪುಃ

ಧ್ಯಾತ್ವಾಮೃತೈಃ ಬಹಿಶ್ಚಾಂತಃ ಸುಷುಮ್ನಾಮಾರ್ಗ್ಗಗಾಮಿಭಿಃ

ಏವಂ ಶುದ್ಧವಪುಃ ಪ್ರಾಣಾನ್ ಆಯಮ್ಯ ಮನುನಾ ತ್ರಿಧಾ

ವಿನ್ಯಸೇನ್ನ್ಯಸ್ತಹಸ್ತಾಂತಃ ಶಕ್ತಿಂ ಮಸ್ತಕವಕ್ತ್ರಯೋಃ

ಗುಹ್ಯೇ ಗಳೇ ದಿಕ್ಷು ಹೃದಿ ಕುಕ್ಷೌ ದೇಹೇ ಚ ಸರ್ವತಃ

ಆವಾಹ್ಯ ಬ್ರಹ್ಮರಂಧ್ರೇಣ ಹೃತ್ಪದ್ಮೇ ಸೂರ್ಯಮಂಡಲಾತ್

ತಾರೇಣ ಸಂಪರಾತ್ಮಾನಂ ಸ್ಮರೇತ್ತಂ ಸರ್ವಲಕ್ಷಣಮ್

ಯೋಗದೀಪಿಕೆಯಲ್ಲಿ ರೇಚನದ ಸಂಗತಿ ಬಂದಿದೆ –

ಹೃದಬ್ಜಸ್ಥನೃಸಿಂಹಾಗ್ನಿಜ್ವಾಲೈಃ ಪಾಪ್ಮಾ ಸ ದಹ್ಯತೇ

ವಾಯುನಾ ಸಾನುಬಂಧೇऽಸ್ಮಿನ್ ಭಸ್ಮರೂಪೇಣ ರೇಚಿತೇ

ಪಾಪಪುರುಷನನ್ನು ಎಡಹೊಟ್ಟೆಯಲ್ಲಿ ಚಿಂತನೆ ನಡೆಸುವಂತೆ ವಾಸಿಷ್ಠಸಂಹಿತೆ ಹೇಳಿದೆ–

ಸ್ಮೃತ್ವಾ ಪಾತಕಪಂಚಾಂಗಂ ಪಾತಕೋಪಾಂಗಸಂಜ್ಞಕಮ್

ಉಪಪಾತಕಸರ್ವಾಂಗಂ ಕೃಷ್ಣಂ ಕುಕ್ಷೌ ವಿಚಿಂತಯೇತ್

ಕಪ್ಪು ಬಣ್ಣ, ಪಂಚಪಾಪಗಳೇ ಆತನ ಪ್ರಧಾನ ಅಂಗಗಳು. ಉಪಪಾತಕಗಳು ಇತರ ಅವಯವಗಳು. ಇದನ್ನು ಸಂಗ್ರಹದಲ್ಲಿ ಸಂಗ್ರಹಿಸಿದ್ದಾರೆ.

ಬ್ರಹ್ಮಹತ್ಯಾಶಿರಸ್ಕಂ ಚ ಸ್ವರ್ಣಸ್ತೇಯಭುಜದ್ವಯಮ್

ಸುರಾಪಾನಹೃದಾ ಯುಕ್ತಂ ಗುರುತಲ್ಪಕಟಿದ್ವಯಮ್

ತತ್ಸಂಸರ್ಗ್ಗಪದದ್ವಂದ್ವಂ ಅಂಗಪ್ರತ್ಯಂಗಪಾತಕಮ್

ಉಪಪಾತಕರೋಮಾಣಂ ರಕ್ತಶ್ಮಶ್ರುವಿಲೋಚನಮ್

ಖಡ್ಗಚರ್ಮ್ಮಧರಂ ಕೃಷ್ಣಂ ವಾಮಕುಕ್ಷೌ ವಿಚಿಂತಯೇತ್

ಪಾಪಪುರುಷನ ತಲೆ ಬ್ರಹ್ಮಹತ್ಯೆ (ಕೊಲೆ) ಕೈಗಳೆರಡು ಸ್ವರ್ಣಸ್ತೇಯ (ಸುಲಿಗೆ), ಎದೆ ಸುರಾಪಾನ (ಕುಡಿತ), ಸೊಂಟ ಉತ್ತಮರ ಸ್ತ್ರೀಧರ್ಷಣ (ಕಾಮುಕತೆ), ಕಾಲು ಪಾಪಿಗಳ ಸಂಗ, ರೋಮಗಳು ಸಣ್ಣ ಪಾಪಗಳು. ಕೆಂಪು



ಮೀಸೆಯ, ಕೆಂಪು ಕಣ್ಣಿನ ಪಾಪಪುರುಷ ಖಡ್ಗ ಚರ್ಮಗಳನ್ನು ಹಿಡಿದಿರುವನು.

**ಪಿಂಗೋರ್ಧ್ವಕೇಶದುರ್ಗ್ಗಂಧಂ ಸ್ಮೃತ್ವಾ ಪ್ರಾದೇಶಮಾತ್ರಕಮ್** ಎಂದು ಸೇರಿಸಬೇಕೆಂದು ಕೆಲವೆಡೆ. ಪ್ರಮಾಣ ಗೊತ್ತಿಲ್ಲ.

ಯೋಗಮುದ್ರೆಯಿಂದ ಎಡ ಹೊಟ್ಟೆಯ ಭಾಗದಲ್ಲಿ ಸ್ಪರ್ಶಿಸುತ್ತ ಪಾಪವನ್ನು ನೆನೆಯಬೇಕು. ಆರು ಬಾರಿ ವಾಯು ಬೀಜ ಜಪಿಸಿ ಒಣಗಿಸಬೇಕು. ಹಾಗೆಯೆ ಯೋಗಮುದ್ರೆಯಿಂದ ಎದೆಯನ್ನು ಮುಟ್ಟಿ ಪಾಪವನ್ನು ನೆನೆದು ಹನ್ನೆರಡು ಬಾರಿ ಅಗ್ನಿಬೀಜ ಜಪಿಸಿ ಸುಡಬೇಕು. ಮತ್ತೆ ವರುಣಬೀಜವನ್ನು ಇಪ್ಪತ್ತನಾಲ್ಕು ಬಾರಿ ಜಪಿಸಿ ದೇಹವನ್ನು ಒದ್ದೆಯಾದಂತೆ ಅನುಸಂಧಾನ ನಡೆಸಬೇಕು.

ಯಂ ಎಂದರೆ ವಾಯು. **ಯಾತಿ ಸರ್ವತ್ರ ಗಚ್ಛತಿ** – ಎಲ್ಲೆಡೆ ಸಂಚರಿಸುವುದು. ರಂ ಎಂದರೆ ಅಗ್ನಿ. **ರಾತಿ ಊರ್ಧ್ವಂ ಗಚ್ಛತಿ** – ಮೇಲ್ಗಡೆ ಹೋಗುವುದು. ವಂ ಎಂದರೆ ನೀರು. **ವಾತಿ ಅಧೋ ಗಚ್ಛತಿ** – ಕೆಳಕ್ಕೆ ಹರಿಯು ವುದು. ಮೂರು ಭೂತ ವಸ್ತುಗಳು ಮೂರು ಬಗೆಯ ಗತಿಯನ್ನು ಪಡೆದಿವೆ.

**ಮಾಧವಸ್ತವರಾಜವು** ಹತ್ತಾರು ಶ್ಲೋಕದಲ್ಲಿ ಪಾಪಪುರುಷನಿರಸನವನ್ನು ಹೇಳಿದೆ –

**ನಾಭಿಂ ಸ್ಪೃಷ್ಟ್ವಾ ತತಃ ಪಶ್ಚಾತ್ ವಾಯುಬೀಜಮನುಸ್ಮರನ್**
**ಷಟ್ಕೋಣಚಕ್ರಗಂ ನೀಲಂ ಭಗವಂತಮನುಸ್ಮರನ್**
**ದೇಹಸ್ಥಂ ಪಾಪಪುರುಷಂ ವಾಯುನಾ ಶೋಷಯೇತ್ಪುರಾ**
**ತತೋ ಹೃದಿ ಕರಂ ನ್ಯಸ್ಯ ವಹ್ನಿಮಂಡಲಗಂ ಹರಿಮ್**
**ತ್ರಿಕೋಣಚಕ್ರಗಂ ರಕ್ತಂ ಭಗವಂತಮನುಸ್ಮರನ್**
**ದೇಹಸ್ಥಂ ಪಾಪಪುರುಷಂ ನಿರ್ದ್ದಹೇದಗ್ನಿನಾ ತತಃ**
**ಪಶ್ಚಾನ್ಮೂರ್ಧ್ನಿ ಕರಂ ನ್ಯಸ್ಯ ಸ್ಥಿತಂ ವರುಣಮಂಡಲೇ**
**ಚತುರ್ದ್ದಳೇ ಸ್ಫಟೀಕಾಭಂ ಸ್ಮೃತ್ವಾ ಚಾಮೃತವೃಷ್ಟಿಭಿಃ**
**ಆಪ್ಲಾವ್ಯ ಸಕಲಂ ದೇಹಂ ಪ್ರಾಣಾಯಾಮಂ ತತಶ್ಚರೇತ್**



**ತತಃ ಪಶ್ಚಾತ್** ಎಂಬ ಮಾತಿನಿಂದ ಭಸ್ಮರೇಚನವು ಸೂಚಿತವಾಗಿದೆ.

**ಛಂದೋಗವು** ಹೇಳಿದ ಪಂಚಮಹಾಪಾತಕಗಳು –

**ಸ್ತೇನೋ ಹಿರಣ್ಯಸ್ಯ ಸುರಾಂ ಪಿಬಂಶ್ಚ ಗುರೋಸ್ತಲ್ಪಮಾವಸನ್ ಬ್ರಹ್ಮಹಾ ಚ**

**ಏತೇ ಪತಂತಿ ಚತ್ವಾರಃ ಪಂಚಮಶ್ಚಾಚರಂಸ್ತು ತೈಃ**

**ಮಹಾಭಾರತ** ಪಂಚಮಹಾಪಾಪಗಳನ್ನು ಪಟ್ಟಿಮಾಡಿದೆ–

**ಬ್ರಹ್ಮಹತ್ಯಾಂ ಸುರಾಪಾನಂ ಸ್ತೇಯಂ ಗುರ್ವಂಗನಾಗಮಮ್**

**ಮಹಾಂತಿ ಪಾತಕಾನ್ಯಾಹುಃ ಸಂಯೋಗಂ ಚೈವ ತೈಸ್ಸಹ**

ಮಹಾಭಾರತವು ಸುರಾಪಾನ ವಿಷಯದಲ್ಲಿ ಅದರ ಉಗಮವನ್ನು ತಿಳಿಸುತ್ತಾ ಅದೊಂದರ ಸಹವಾಸದಿಂದಲೇ ಎಲ್ಲ ಪಾಪಗಳ ಮುತ್ತಿಗೆಯನ್ನು ಹೇಳಿದೆ. ನ **ಸುರಾಂ ಪಿಬೇತ್** ಎಂಬ ಶ್ರುತಿವಾಕ್ಯವೂ ಉಳಿದ ದೋಷಗಳ ನಿಷೇಧಕ್ಕಿಂತ ಸುರಾಪಾನದ ನಿಷೇಧಕ್ಕೇನೆ ಹೆಚ್ಚು ಒತ್ತುಕೊಟ್ಟಿದೆ.

**ತಮಸಃ ಸಾರಮುದ್ಧೃತ್ಯ ಪಾನಂ ಬುದ್ಧಿಪ್ರಣಾಶನಮ್**

**ನ್ಯಪಾತಯನ್ಮನುಷ್ಯೇಷು ಪಾಪದೋಷಾವಹಂ ಪ್ರಿಯೇ**

ಚತುರ್ಮುಖ ಹೇಳಿ ದೇವತೆಗಳು ಮನುಷ್ಯರಿಗಾಗಿ ಪಾನದ ಸೃಷ್ಟಿಯನ್ನು ಮಾಡಿದ್ದಾರೆ. ಕುಡಿದ ಅಮಲಿನಲ್ಲಿ ಏನನ್ನೂ ಮನುಷ್ಯರು ಮಾಡುತ್ತಾರೆ. ಮತ್ತೆ ಕುಡಿಯಲಿಕ್ಕಾಗಿ ಹೇಳಿದ್ದೆಲ್ಲಾ ನಡೆಸುವರು. ಇದರಿಂದ ಎಲ್ಲ ಪಾಪಗಳು ಮೆತ್ತಿಕೊಳ್ಳಲಿವೆ.

**ಮೋಕ್ಷಧರ್ಮಪರ್ವದಲ್ಲಿ** ಸುರಾಮಾಂಸಾದಿ ಭಕ್ಷಣಗಳು ಅವೈದಿಕ, ಕೆಟ್ಟವರ ಪಾಡೆಂದು ಹೇಳಲಾಗಿದೆ –

**ಸುರಾಂ ಮತ್ಸ್ಯಾನ್ಮಧು ಮಾಂಸಂ ಆಸವಂ ಕೃಸರೌದನಮ್**

**ಧೂರ್ತೈಃ ಪ್ರವರ್ತಿತಂ ಹ್ಯೇತತ್ ನೈತದ್ವೇದೇಷು ಕಲ್ಪಿತಮ್**

**ಯಾಜ್ಞವಲ್ಕ್ಯಸ್ಮೃತಿಯೂ** ಪಂಚಪಾಪಗಳನ್ನು ಸಂಗ್ರಹಿಸಿದೆ –

**ಬ್ರಹ್ಮಹಾ ಮದ್ಯಪಃ ಸ್ತೇನಃ ತಥೈವ ಗುರುತಲ್ಪಗಃ**

**ಏತೇ ಮಹಾಪಾತಕಿನೋ ಯಶ್ಚ ತೈಸ್ಸಹ ಸಂವಸೇತ್**



ಹೊಡೆಯ ಬಂದ ಗುಂಪಿನಲ್ಲಿ ಒಬ್ಬ ಹೊಡೆದರೂ ಆ ಗುಂಪು ಹೊಡೆಯಿತು ಎಂದಂತೆ, ಬ್ರಹ್ಮಹತ್ಯೆ ಸುರಾಪಾನ ಸ್ವರ್ಣಸ್ತೇಯ ಗುರುಭಾರ್ಯಾಗಮನ ಮಾಡಿದವರ ಸಹವಾಸ ಮಾಡಿದರೂ ಮಹಾಪಾಪಿ ಯೆಂದೇ ಗುರುತಿಸಲ್ಪಡುವರು. ದೇವಲಸ್ಮೃತಿ ಒಂಭತ್ತು ರೀತಿಯಿಂದ ಪಾಪಸಂಕ್ರಾಂತಿಯನ್ನು ಹೇಳುತ್ತದೆ –

**ಸಂಲಾಪಸ್ಪರ್ಶನಿಃಶ್ವಾಸಸಹಯಾನಾಸನಾಶನಾತ್ ।**

**ಯಾಜನಾಧ್ಯಾಪನಾದ್ಯೌನಾತ್ ಪಾಪಂ ಸಂಕ್ರಮತೇ ನೃಣಾಮ್**

ವಸಿಷ್ಠಧರ್ಮಸೂತ್ರದಲ್ಲಿ ಸಹವಾಸದೋಷ ಬರಲು ಒಂದು ವರುಷವನ್ನು ಹೇಳಿದ್ದಾರೆ–

**ಸಂವತ್ಸರೇಣ ಪತತಿ ಪತಿತೇನ ಸಹಾಚರನ್**

ನಮ್ಮನ್ನು ಆ ಕರ್ಮದಿಂದ ಮತ್ತೆ ಮತ್ತೆ ಬೀಳಿಸುವುದರಿಂದ ಅಧೋಗತಿಯನ್ನು ಪಡೆಯುವಂತೆ ಮಾಡುವುದರಿಂದ ಆ ಕುಕೃತ್ಯಗಳನ್ನು ಪಾತಕ ಎಂದು ಕರೆದಿರುವರೆಂದು ಮಿತಾಕ್ಷರಾದಲ್ಲಿ ಹೇಳಲಾಗಿದೆ–

**ಪಾತಯಂತೀತಿ ಪಾತಕಾನಿ**

ಮಹಾಪಾಪಗಳ ವ್ಯಾಪ್ತಿಯನ್ನು ಸ್ಮೃತಿಗಳಲ್ಲಿ ಸ್ಪಷ್ಟ ಹೇಳಲಾಗಿದೆ–

**ಆಕೃಷ್ಟಸ್ತಾಡಿತೋ ವಾಽಪಿ ಧನೈರ್ವಾ ವಿಪ್ರಯೋಜಿತಃ**

**ಯಮುದ್ದಿಷ್ಯ ತ್ಯಜೇತ್ ಪ್ರಾಣಾನ್ ತಮಾಹುರ್ಬ್ರಹ್ಮಘಾತಕಮ್**

**ಗುರೂಣಾಮಪ್ಯಧಿಕ್ಷೇಪೋ ವೇದನಿಂದಾ ಸುಹೃದ್ವಧಃ**

**ಬ್ರಹ್ಮಹತ್ಯಾಸಮಂ ಜ್ಞೇಯಂ ಅಧೀತಸ್ಯ ಚ ನಾಶನಮ್**

**ಬ್ರಹ್ಮೋಜ್ಝಿತಾ ವೇದನಿಂದಾ ಕೌಟಸಾಕ್ಷ್ಯಂ ಸುಹೃದ್ವಧಃ**

**ಗರ್ಹಿತಾನ್ನಾಜ್ಯಯೋರ್ಜಗ್ಧಿಃ ಸುರಾಪಾನಸಮಾನಿ ಷಟ್**

**ನಿಷಿದ್ಧಭಕ್ಷಣಂ ಜೈಹ್ಮ್ಯಂ ಉತ್ಕರ್ಷೇ ಚ ವಚೋಽನೃತಮ್**

**ರಜಸ್ವಲಾಮುಖಾಸ್ವಾದಃ ಸುರಾಪಾನಸಮಾನಿ ತು**

**ಅಶ್ವರತ್ನಮನುಷ್ಯಸ್ತ್ರೀಭೂಧೇನುಹರಣಂ ತಥಾ**



ನಿಕ್ಷೇಪಸ್ಯ ಚ ಸರ್ವಂ ಹಿ ಸುವರ್ಣಸ್ತೇಯಸಮ್ಮಿತಮ್

ಸಖಿಭಾರ್ಯಾಕುಮಾರೀಷು ಸ್ವಯೋನಿಷ್ವಂತ್ಯಜಾದಿಷು

ಸಗೋತ್ರಾಸು ಸುತಸ್ತ್ರೀಷು ಗುರುತಲ್ಪಸಮಂ ಸ್ಮೃತಮ್

ಪಿತುಃ ಸ್ವಸಾರಂ ಮಾತುಶ್ಚ ಮಾತುಲಾನೀಂ ಸ್ನುಷಾಮಪಿ

ಮಾತುಃ ಸಪತ್ನೀಂ ಭಗಿನೀಂ ಆಚಾರ್ಯತನಯಾಂ ತಥಾ

ಆಚಾರ್ಯಪತ್ನೀಂ ಸ್ವಸುತಾಂ ಗಚ್ಛಂಸ್ತು ಗುರುತಲ್ಪಗಃ

ಮಾಧೂಕಮೈಕ್ಷವಂ ಸ್ಯೆರಂ ತಾಲಂ ಕಾರ್ಜೂರಪಾನಸಮ್

ಮಧೂತ್ಥಂ ಚೈವ ಮದ್ವೀಕಂ ಮೈರೇಯಂ ನಾಳಿಕೇರಜಮ್

ಅಮೇಧ್ಯಾನಿ ದಶೈತಾನಿ ಮದ್ಯಾನಿ ಬ್ರಾಹ್ಮಣಸ್ಯ ತು

ನಾರೀಪುರಷಹಂತಾ ಚ ಕನ್ಯಾದೂಷೀ ಗವಾಂ ಚ ಹಾ

ಚತ್ವಾರಃ ಪತಿತಾಃ ಪ್ರೋಕ್ತಾಃ ಯಥಾ ವೈ ಬ್ರಹ್ಮಹಾದಯಃ

ಉಪಪಾತಕಾಸ್ತ್ವಸಂಖ್ಯಾತಾಃ ತೇ ಚ ಗೋಘ್ನಾದಯಸ್ತಥಾ

ಮಹಾಭಾರತದಲ್ಲಿ ಬ್ರಹ್ಮಹತ್ಯೆಗೆ ಸಮನಾದ ಪಾಪಗಳ ಪಟ್ಟಿ ಇದೆ –

ಬ್ರಾಹ್ಮಣಂ ಸ್ವಯಮಾಹೂಯ ಭಿಕ್ಷಾರ್ಥಂ ವೃತ್ತಿಕರ್ಷಿತಮ್

ಬ್ರೂಯಾನ್ನಾಸ್ತೀತಿ ಯಃ ಪಶ್ಚಾತ್ ತಮಾಹುರ್ಬ್ರಹ್ಮಘಾತಕಮ್

ಗುರುಂ ತ್ವಂಕೃತ್ಯ ಹುಂಕೃತ್ಯ ಅತಿಕ್ರಮ್ಯ ಚ ಶಾಸನಮ್

ವರ್ತ್ತತೇ ಯಸ್ತು ಮೂಢಾತ್ಮಾ ತಮಾಹುರ್ಬ್ರಹ್ಮಘಾತಕಮ್

ಅಧಿಕಾರೇ ಯದನೃತಂ ಯಚ್ಚ ರಾಜಸು ಪೈಶುನಮ್

ಗುರೋಶ್ಚಾಲೀಕನಿರ್ಬಂಧಃ ಸಮಾನಿ ಬ್ರಹ್ಮಹತ್ಯಯಾ

ನಾಗ್ನಿಂ ಪರಿತ್ಯಜೇಜ್ಜಾತು ನ ಚ ವೇದಾನ್ ಪರಿತ್ಯಜೇತ್

ನ ಚ ಬ್ರಾಹ್ಮಣಮಾಕ್ರೋಶೇತ್ ಸಮಂ ತತ್ ಬ್ರಹ್ಮಹತ್ಯಯಾ

ಬ್ರಹ್ಮವೈವರ್ತವು ಜ್ಞಾನಿಗಳ ಮತ್ತು ವೈಷ್ಣವರ ಪಾರಮ್ಯವನ್ನು ತಿರಸ್ಕರಿಸುವುದೂ ಬ್ರಹ್ಮಹತ್ಯೆಯೆಂದೇ ಗುರುತಿಸಿದೆ.

ವೈಷ್ಣವೇಷ್ವನ್ಯಭಕ್ತೇಷು ಬ್ರಾಹ್ಮಣೇಷ್ವಿತರೇಷು ಚ



**ಕರೋತಿ ಸಮತಾಂ ಯೋ ಹಿ ಬ್ರಹ್ಮಹತ್ಯಾಂ ಲಭೇತ್ತು ಸಃ**

ಅನ್ನದಾನದ ವೈಷಮ್ಯಕ್ಕೂ ಬ್ರಹ್ಮಹತ್ಯೆಯ ತಾಣವನ್ನು **ಲಘುವ್ಯಾಸಸ್ಮೃತಿ** ನೀಡಿದೆ.

**ಯದ್ಯೇಕಪಂಕ್ತ್ಯಾಂ ವಿಷಮಂ ದದಾತಿ**

**ಸ್ನೇಹಾದ್ಭಯಾದ್ವಾ ಯದಿ ವಾಽರ್ಥತೋಽಪಿ**

**ದೇವೈಶ್ಚ ದೃಷ್ಟಂ ಋಷಿಭಿಶ್ಚ ಗೀತಂ**

**ತದ್ಬ್ರಹ್ಮಹತ್ಯಾಂ ಮುನಯೋ ವದಂತಿ**

**ವಿಷ್ಣುಧರ್ಮೋತ್ತರವು** ಕಳ್ಳತನಕ್ಕೆ ಮತ್ತು ಗುರುದಾರಗಮನಕ್ಕೆ ಸರಿಯಾದ ಕೆಲವು ತಪ್ಪುಗಳನ್ನು ಸೇರಿಸಿದೆ –

**ನಿಕ್ಷೇಪಸ್ಯಾಪಹರಣಂ ನರಾಶ್ವರಜತಸ್ಯ ಚ**

**ಭೂಮಿವಜ್ರಮಣೀನಾಂ ಚ ರುಕ್ಮಸ್ತೇಯಸಮಂ ಸ್ಮೃತಮ್**

**ರೇತಃಸೇಕಃ ಸಯೋನೀಷು ಕುಮಾರೀಷ್ವಂತ್ಯಜಾಸು ಚ**

**ಸಖ್ಯುಃ ಪುತ್ರಸ್ಯ ಚ ಸ್ತ್ರೀಷು ಗುರುತಲ್ಪಸಮಂ ವಿದುಃ**

ಪಂಚಪಾತಕಗಳಿಗೆ ಸಮನಾದ ಪಾಪಗಳನ್ನಿಲ್ಲಿ ಧರ್ಮಶಾಸ್ತ್ರಜ್ಞರು ಸ್ವಲ್ಪ ಕಡಿಮೆ ಪಾಪಪ್ರದಗಳೆಂದು ಗುರುತಿಸಿದ್ದಾರೆ; ರಾಜ ಸಮನಾದವನು ಮಂತ್ರಿ ಎನ್ನುವಂತೆ. ಮಹಾಪಾತಕಗಳಿಗೆ ಸಮನಾದವುಗಳು ಪಾತಕಗಳು. ಉಳಿದವು ಉಪಪಾತಕಗಳು. ಇವು ಪಾಪಪುರುಷನ ರೋಮಾದಿಗಳು –

**ಮಹಾಪಾತಕತುಲ್ಯಾನಿ ಪಾಪಾನ್ಯುಕ್ತಾನಿ ಯಾನಿ ತು**

**ತಾನಿ ಪಾತಕಸಂಜ್ಞಾನಿ ತನ್ನ್ಯೂನಮುಪಪಾತಕಮ್**

ನೂರು ಅಧ್ಯಾಯದ **ವಿಷ್ಣುಧರ್ಮಸೂತ್ರ** ಪಂಚಮಹಾಪಾಪಗಳ ಬಗ್ಗೆ ತಿಳಿಸುತ್ತಾ ಪ್ರಾಯಶ್ಚಿತ್ತವಾಗಿ ಜಪತಪಾದಿಗಳನ್ನು ಹೇಳಿದೆ. ಆಚಾರ್ಯಮಧ್ವರು ಮಹಾಪಾಪಗಳಿಗೆ ಸಾಧನೆಯಲ್ಲಿ ಅಪೂರ್ವವಾದ ಅರ್ಥಗಳನ್ನು ಪ್ರಮಾಣ ಪುರಸ್ಸರವಾಗಿ ನೀಡಿದ್ದಾರೆ –

**ಸುರಾ ಹರೇರ್ಗ್ಗುಣಾಃ ಪ್ರೋಕ್ತಾಃ ತೇ ಮೇ ಸ್ಯುರಿತಿ ಚಿಂತನಮ್**

**ಸುರಾಪಾನಮಿತಿ ಪ್ರೋಕ್ತಂ ತನ್ನ ಕುರ್ಯಾತ್ಕಥಂಚನ**



**ಬ್ರಾಹ್ಮಣೋ ವಿಷ್ಣುರುದ್ದಿಷ್ಟಃ ಸ ನಾಸ್ತೀತ್ಯಭಿಚಿಂತನಮ್**

**ಬ್ರಹ್ಮಹತ್ಯಾ ಸಮುದ್ದಿಷ್ಟಾ ತಾಂ ನ ಕುರ್ಯಾತ್ಕಥಂಚನ**

**ಮಹತಾಂ ವನಿತಾಕಾಮಃ ಪತತ್ಯಂಧೇ ತಮಸ್ಯಲಮ್**

**ಅನ್ಯತ್ರ ನಿರಯಂ ಯಾತಿ ದುಃಖವಾನ್ ಸ್ಯಾದ್ವಿಪರ್ಯಯೇ**

**ಕೇಶವೇ ತ್ವನ್ಯಥಾಬುದ್ಧಿಃ ಸೈವ ಸ್ತ್ರೀ ಸಂಪ್ರಕೀರ್ತಿತಾ**

**ತ್ಯಜೇತ್ತತ್ಸಂಗಿನಾಂ ಸಂಗಂ ಬುಭೂಷುಃ ಪುರುಷಃ ಸದಾ**

**ಅಸಜ್ಜನೈಸ್ತು ಸಂವಾಸೋ ನ ಕರ್ತ್ತವ್ಯಃ ಕದಾಚನ**

**ಯಾವದ್ಯಾವಚ್ಚ ಬಹುಭಿಃ ಸಜ್ಜನೈಃ ಸಹ ಮುಕ್ತಿದಃ**

ಆಚಾರ್ಯಮಧ್ವರು ಇದಕ್ಕೂ ಮಿಗಿಲಾದ ಅತಿ-ಸು-ಮಹಾಪಾತಕಗಳನ್ನೆಲ್ಲ ಉಲ್ಲೇಖಿಸಿದ್ದಾರೆ. ಆದರೆ ಆ ಪಾಪಕೃತ್ಯಗಳಿಗೆ ಸಂಧ್ಯಾದಿಗಳಿಂದ ಪ್ರಾಯಶ್ಚಿತ್ತವಿರದೆಂಬ ಅಭಿಪ್ರಾಯದಲ್ಲಿಯೇ ಪಾಪಪುರುಷನ ಚಿಂತನೆಯಲ್ಲಿ ಮಹಾಪಾತಕಗಳಿಗಷ್ಟೇ ರೂಪಕತೆಯನ್ನು ಹೇಳಲಾಗಿದೆ.

ಮುಂದೆ ಮಾಡುವ ಗಾಯತ್ರೀ ಜಪದಿಂದ ಪಂಚಮಹಾಪಾತಕಗಳ ನಾಶವನ್ನು ಸ್ಮೃತಿಕಾರರು ಪಟ್ಟಿಮಾಡಿದ್ದಾರೆ. ಇದರಿಂದಲೇ ಸಾವಿರಾರು ಸಂಖ್ಯೆಯಲ್ಲಿ ಗಾಯತ್ರೀಜಪವನ್ನು ಧರ್ಮಜ್ಞರು ವಿಧಿಸಿದ್ದೆಂದು ತಿಳಿದುಬರುವುದು. **ಷಟ್ತ್ರಿಂಶನ್ಮತದಲ್ಲಿ** ಹೇಳಿದಂತೆ ಅತ್ಯಲ್ಪ ಚಿನ್ನ ಕದ್ದರೂ ಸಾವಿರಾರು ಬಾರಿ ಗಾಯತ್ರಿಯನ್ನು ಜಪಿಸಬೇಕಾಗುವುದು -

**ವಾಲಾಗ್ರಮಾತ್ರೇಽಪಹೃತೇ ಪ್ರಾಣಾಯಾಮಂ ಸಮಾಚರೇತ್**

**ಗಾಯತ್ರ್ಯಷ್ಟಸಹಸ್ರಂ ಚ ಜಪೇತ್ ಪಾಪವಿಶುದ್ಧಯೇ**

**ಗೌರಸರ್ಷಪಮಾತ್ರೇ ಚ ಸಾವಿತ್ರೀಂ ವೈ ದಿನಂ ಜಪೇತ್**

ಮರಗಿಡಬಳ್ಳಿಗಳನ್ನೆಲ್ಲ ಕಡಿದರೆ ನೂರುಬಾರಿ ಗಾಯತ್ರಿಯನ್ನು ಜಪಿಸಲು **ಯಾಜ್ಞವಲ್ಕ್ಯರು** ಹೇಳಿದ್ದಾರೆ -

**ವೃಕ್ಷಗುಲ್ಮಲತಾವೀರುಚ್ಛೇದನೇ ಜಪ್ಯಮೃಕ್ಶತಮ್**

ಏನೇನೋ ವಸ್ತುಗಳನ್ನು ಯಾರ್ಯಾರಿಂದಲೋ ಹೇಗೇಗೋ ಪಡೆದರೆ



ಒಂದು ತಿಂಗಳ ಕಾಲ ಹಾಲಿನಲ್ಲಿ ಮಾತ್ರ ಉಣ್ಣುತ್ತ ಬ್ರಹ್ಮಚಾರಿಯಾಗಿದ್ದುಕೊಂಡು ದನದ ಕೊಟ್ಟಿಗೆಯಲ್ಲಿ ಗಾಯತ್ರೀಮಂತ್ರವನ್ನು ಜಪಿಸಬೇಕು –

**ಗೋಷ್ಠೇ ವಸನ್ ಬ್ರಹ್ಮಚಾರೀ ಮಾಸಮೇಕಂ ಪಯೋವ್ರತಃ**
**ಗಾಯತ್ರೀಜಾಪ್ಯನಿರತಃ ಶುದ್ಧ್ಯತೇಽಸತ್ಪ್ರತಿಗ್ರಹಾತ್**

ಅನೇಕ ತಪ್ಪುಗಳ ಪಾಪಗಳ ಪರಿಹಾರಕ್ಕೆ ಹತ್ತುಸಾವಿರ ಜಪಿಸಬೇಕೆಂದು **ಅತ್ರಿಸ್ಮೃತಿ**ಯಲ್ಲಿ ಹೇಳಿದೆ –

**ಸರ್ವೇಷಾಮೇವ ಪಾಪಾನಾಂ ಸಂಕರೇ ಸಮುಪಸ್ಥಿತೇ**
**ದಶಸಾಹಸ್ರಮಭ್ಯಸ್ತಾ ಗಾಯತ್ರೀ ಶೋಭನಂ ಪರಮ್**

ಲಕ್ಷಸಂಖ್ಯೆಯಲ್ಲಿ ಗಾಯತ್ರಿಯನ್ನು ಜಪಿಸಿದರೆ ಮಹಾಪಾತಕಗಳು ನಾಶವಾಗುತ್ತವೆ ಎಂದು **ಶಂಖಸ್ಮೃತಿ** ತಿಳಿಸಿ ಇತರ ಪಾಪಗಳ ಪ್ರಾಯಶ್ಚಿತ್ತವನ್ನು ತಾರತಮ್ಯದಲ್ಲಿ ತಿಳಿಸಿದೆ –

**ಸುವರ್ಣಸ್ತೇಯಕೃದ್ವಿಪ್ರೋ ಬ್ರಹ್ಮಹಾ ಗುರುತಲ್ಪಗಃ**
**ಸುರಾಪಶ್ಚ ವಿಶುದ್ಧ್ಯಂತಿ ಲಕ್ಷಂ ಜಪ್ತ್ವಾ ನ ಸಂಶಯಃ**
**ಶತಂ ಜಪ್ತಾ ತು ಸಾವಿತ್ರೀ ಉಪಪಾತಕನಾಶಿನೀ**
**ಸಹಸ್ರಜಪ್ತಾ ತು ತಥಾ ಪಾತಕೇಭ್ಯಃ ಪ್ರಮೋಚಿನೀ**
**ದಶಸಾಹಸ್ರಜಾಪ್ಯೇನ ಸರ್ವಕಿಲ್ಬಿಷನಾಶಿನೀ**
**ಲಕ್ಷಂ ಜಪ್ತಾ ತು ಸಾ ದೇವೀ ಮಹಾಪಾತಕನಾಶಿನೀ**

**ಚತುರ್ವಿಂಶತಿಮತ**ದಲ್ಲಿ ಲಕ್ಷಗಟ್ಟಲೆ ಜಪವನ್ನು ಹೇಳುತ್ತ ಮಹಾಪಾತಕಗಳಲ್ಲಿ ತಾರತಮ್ಯವನ್ನು ಸೂಚಿಸಲಾಗಿದೆ –

**ಗಾಯತ್ರ್ಯಾಸ್ತು ಜಪೇತ್ಕೋಟಿಂ ಬ್ರಹ್ಮಹತ್ಯಾಂ ವ್ಯಪೋಹತಿ**
**ಲಕ್ಷಾಶೀತಿಂ ಜಪೇದ್ಯಸ್ತು ಸುರಾಪಾನಾದ್ವಿಮುಚ್ಯತೇ**
**ಪುನಾತಿ ಹೇಮಹರ್ತಾರಂ ಗಾಯತ್ರ್ಯಾ ಲಕ್ಷಸಪ್ತತಿಃ**
**ಗಾಯತ್ರ್ಯಾ ಲಕ್ಷಷಷ್ಟ್ಯಾ ತು ಮುಚ್ಯತೇ ಗುರುತಲ್ಪಗಃ**

ಮೂರು ಹೊತ್ತು ಚೆನ್ನಾಗಿ ಸಂಧ್ಯಾವಂದನೆ ಮಾಡಿದಲ್ಲಿ ತಿಳಿಯದೆ



ಮಾಡಿದ ಎಲ್ಲ ಪಾಪಗಳೂ ನಾಶವಾಗುತ್ತವೆ ಎಂದು **ಯಾಜ್ಞವಲ್ಕ್ಯಸ್ಮೃತಿ** ಹೇಳಿದೆ–

**ನಿಶಾಯಾಂ ವಾ ದಿವಾ ವಾಽಪಿ ಯದಜ್ಞಾನಕೃತಂ ಭವೇತ್**

**ತ್ರೈಕಾಲ್ಯಸಂಧ್ಯಾಕರಣಾತ್ ತತ್ಸರ್ವಂ ವಿಪ್ರಣಶ್ಯತಿ**

ಎಂದೆಂದೂ ಮಿಂದು ಸಂಧ್ಯಾವಂದನೆ ನಡೆಸುವವಗೆ ಎಂದೂ ಕುಂದು ಬರದೆಂದು **ಕಾತ್ಯಾಯನನು** ಹೇಳಿರುವನು–

**ಸಂಧ್ಯಾಲೋಪಸ್ಯ ಚಾಕರ್ತ್ತಾ ಸ್ನಾನಶೀಲಶ್ಚ ಯಃ ಸದಾ**

**ತಂ ದೋಷಾ ನೋಪಸರ್ಪ್ಪಂತಿ ಗರುತ್ಮಂತಮಿವೋರಗಾಃ**

**ಶಿವತತ್ತ್ವರತ್ನಾಕರದಲ್ಲಿ** ಮಹಾಪಾಪಗಳ ಬಗ್ಗೆ ತಿಳಿಸುತ್ತ ಪ್ರಾಯಶ್ಚಿತ್ತವಾಗಿ ಹರಿಸ್ಮರಣೆಯನ್ನು ಬಹಳವಾಗಿ ಹೇಳಲಾಗಿದೆ. ಮತ್ತು ಗಾಯತ್ರೀಜಪವನ್ನು ವಿಧಿಸಲಾಗಿದೆ.

ವಿಷ್ಣುಸ್ಮೃತಿ ಸಕಲ ವಿಧದ ಪಾಪಗಳಿಗೂ ತಾರಕ. ಹಾಗಾಗಿ ತಿಳಿದೋ ತಿಳಿಯದೆಯೋ ಮಾಡಿದ ಎಲ್ಲ ಪಾಪಗಳಿಂದಲೂ ಬಿಡುಗಡೆಯನ್ನು ವಿಷ್ಣುಚಿಂತನೆ ನೀಡಲಿದೆ. ಆತ ಮೋಕ್ಷಪ್ರದನಿದ್ದಾನೆ. ಆತನ ಸಮಗ್ರ ಮಹಿಮೆಯನ್ನು ಹೇಳುವ ಅಸ್ಯವಾಮೀಯಸೂಕ್ತವನ್ನು ನಿತ್ಯ ಜಪಿಸಿದರೆ ಪಾಪನಿವೃತ್ತಿಪೂರ್ವಕ ಮೋಕ್ಷ ಖಂಡಿತವೆಂದು **ಋಗ್ವಿಧಾನ** ಸಾರಿದೆ –

**ಅಸ್ಯ ವಾಮಸ್ಯ ಸೂಕ್ತಂ ತು ಜಪೇಚ್ಚಾನ್ಯತ್ರ ವಾ ಜಲೇ**

**ಬ್ರಹ್ಮಹತ್ಯಾದಿಕಂ ದಗ್ಧ್ವಾ ವಿಷ್ಣುಲೋಕಂ ಸ ಗಚ್ಛತಿ**

ಚತುರ್ಮುಖ ಕಂಡ ಈ ಸೂಕ್ತದ ಮಂತ್ರಗಳು **ಅಥರ್ವವೇದದಲ್ಲಿ** –

**ಸಪ್ತ ಯುಂಜಂತಿ ರಥಮೇಕಚಕ್ರಂ ಏಕೋ ಅಶ್ವೋ ವಹತಿ ಸಪ್ತನಾಮಾ**

**ತ್ರಿನಾಭಿ ಚಕ್ರಮಜರಮನರ್ವಂ ಯತ್ರೇಮಾ ವಿಶ್ವಾ ಭುವನಾಧಿ ತಸ್ಥುಃ** (2)

**ಪಂಚಪಾದಂ ಪಿತರಂ ದ್ವಾದಶಾಕೃತಿಂ ದಿವ ಆಹುಃ ಪರೇ ಅರ್ಧೇ ಪುರೀಷಿಣಮ್**

**ಅಥೇಮೇ ಅನ್ಯ ಉಪರೇ ವಿಚಕ್ಷಣೇ ಸಪ್ತಚಕ್ರೇ ಷಡರ ಆಹುರರ್ಪ್ಪಿತಮ್** (12)

**ದ್ವಾ ಸುಪರ್ಣ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿ ಷಸ್ವಜಾತೇ**

**ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ನನ್ಯೋ ಅಭಿ ಚಾಕಶೀತಿ** (20)

# ಪುಣ್ಯಪುರುಷ

ಪಾಪಪುರುಷನ ಪಾಪದೇಹದ ಚಿಂತನೆಯಂತೆ ಪುಣ್ಯಪುರುಷನ ಧ್ಯಾನವನ್ನೂ ಸಾಧಕರು ನಡೆಸುವಂತೆ ಶಾಸ್ತ್ರಕಾರರು ಗುರುತಿಸಿದ್ದಾರೆ. ಆದರೆ ಇಂದು ಸಾಮಾನ್ಯನಾದವ ಇದನ್ನು ತಿಳಿದಿಲ್ಲ. ಜಪಪುಸ್ತಕಗಳಲ್ಲಿ ಬರೆದಿಲ್ಲ. ಹೃದಯದಲ್ಲಿ ನೆಲೆಗೊಂಡಂತೆ ಪುಣ್ಯಪುರುಷನನ್ನು ಹೃದಯ ಮುಟ್ಟಿ ಅನುಸಂಧಾನ ನಡೆಸಬೇಕು.

**ಸಿಂಹಾಸನೇ ಸಮಾಸೀನಂ ಸ್ವರ್ಣ್ಣವರ್ಣ್ಣಂ ಕಿರೀಟಿನಮ್**

**ಗೀರ್ವಾಣನುತಪಾದಾಬ್ಜಂ ಪುಣ್ಯಂ ಹೃದಿ ವಿಭಾವಯೇತ್**

ಪುಣ್ಯಪುರುಷವಿಗ್ರಹಚಿಂತನೆಯನ್ನು ಕೆಲವು ಹಳೆಯ ಸಂಧ್ಯಾವಂದನೆಯ ಪುಸ್ತಕಗಳಲ್ಲಿ ಹೀಗೆ ಕಾಣಬಹುದು –

**ಅಶ್ವಮೇಧಶಿರಸ್ಕಂ ಚ ಮಹಾದಾನಭುಜದ್ವಯಮ್**

**ಸೋಮಪಾನಹೃದಾ ಯುಕ್ತಂ ಬ್ರಹ್ಮಚರ್ಯಕಟಿದ್ವಯಮ್**

**ತತ್ಸಂಯೋಗಪದದ್ವಂದ್ವಂ ಸಾಂಗೋಪಾಂಗಶುಭಕ್ರಿಯಮ್**

**ಸರ್ವಸುವ್ರತರೋಮಾಣಂ ಗುರುಸೇವಾದಿಲೋಚನಮ್**

**ಸಾರ್ಧತ್ರಿಕೋಟಿತೀರ್ಥಾಂಗಂ ಸರ್ವದೇವಮಯಂ ಶುಭಮ್**

**ಸಿಂಹಾಸನೇ ಸಮಾಸೀನಂ ಜಯಶಬ್ದಸಮನ್ವಿತಮ್**

ಪಾಪ ಪುರುಷನ ತಲೆ ಬ್ರಹ್ಮಹತ್ಯೆ; ಜ್ಞಾನದ ನಾಶ

ಪಾಪ ಪುರುಷನ ತಲೆ ಅಶ್ವಮೇಧ; ಕಾಮದ ತ್ಯಾಗ.

ಪಾಪಪುರುಷನ ತೋಳು ಕಳ್ಳತನ. ಪುಣ್ಯಪುರುಷನ ತೋಳು ಮಹಾದಾನ.

ಪಾಪಪುರುಷನೊಳಗಿದೆ ಕಳ್ಳು–ಸುರೆ. ಪುಣ್ಯಪುರುಷನೊಳಗಿದೆ ಸೋಮರಸ.

ಉತ್ತಮರ ಸ್ತ್ರೀಯರ ಲಾಲಸೆಯೇ ಪಾಪಪುರುಷನ ಸೊಂಟ. ಬ್ರಹ್ಮಚರ್ಯ– ಕಾಮನಿಗ್ರಹವೇ ಪುಣ್ಯಪುರುಷನ ಸೊಂಟ.

ಉಪಪಾತಕಗಳೇ ಪಾಪಪುರುಷನ ರೋಮರಾಶಿಗಳಾದರೆ ಪುಣ್ಯಪುರುಷನ ರೋಮಗಳು ಬಗೆಬಗೆಯ ವ್ರತನಿಯಮಗಳು.



ಪಂಚಭೇದಸ್ವರೂಪದ ಪುಣ್ಯಪುರುಷನನ್ನೂ ನಾವು ವೇದಾಂತ ಚಿಂತಕರಲ್ಲಿ ಕಾಣಬಹುದು – **ಬ್ರಹ್ಮಭೇದಶಿರಸ್ಕಂ ಚ ಜೀವಭೇದಭುಜದ್ವಯಮ್**

**ಜಡೇಶಭೇದಹೃದಯಂ ಜಡಜೀವಭಿದಾಕಟಿಮ್**

**ಜಡಭೇದಪದದ್ವಂದ್ವಂ ಜಗತ್ಸತ್ಯತ್ವಸತ್ತ್ವಚಮ್**

**ಸ್ವರೂಪಭೇದರೋಮಾಣಂ ದಿವ್ಯಶ್ಮಶ್ರುವಿಭೂಷಣಮ್**

**ಸದಾಗಮಮಹಾವ್ಯಾಖ್ಯಾನಂದಸಂದೋಹಸಂಪದಮ್**

**ಭಾರತೀರಮಣಂ ಧ್ಯಾಯೇತ್ ಏವಂ ಸತ್ಪುಣ್ಯವಿಗ್ರಹಮ್**

ಪಾಪಪುರುಷ ಕಲಿ, ಪುಣ್ಯಪುರುಷ ವಾಯು. ಪಾಪಪುರುಷ ಕಲಿಯಂತೆ ಆದರೆ ಪುಣ್ಯಪುರುಷ ವಾಯುವಿನ ವಿಶೇಷ ಆವೇಶಕ್ಕೆ ಪಾತ್ರನು. ಇದರಿಂದ ಈತನ ನೆನಪಿನಿಂದ ಸಾಧನೆಯಲ್ಲಿ ಹೆಚ್ಚು ಉತ್ಸಾಹ ಹಾಗೂ ತೊಂದರೆಯಿಲ್ಲದ ಶಾಂತ ಪರಿಸ್ಥಿತಿ ಒದಗುವುದು. ಪುರುಷತತ್ವದ ಅಭಿಮಾನಿಯಾದ ಚತುರ್ಮುಖನೇ ಇಲ್ಲಿ ಸ್ತುತನಾಗಿದ್ದಾನೆ. ಪುಣ್ಯದೇವತೆಯೊಳಗೆ ಆತನಿದ್ದು ಪುಣ್ಯಕಾರ್ಯದಲ್ಲಿ ಸಾಧಕನನ್ನು ತೊಡಗಿಸಿ ಪುಣ್ಯ ಕರ್ಮದ ಪೂರ್ಣಫಲ ಸಾಧಕನಿಗೆ ದೊರಕುವಂತೆ ಮಾಡುವನು. **ಮಹಾಭಾರತ**ದಲ್ಲಿ ವ್ಯಾಸರು ಮನುಷ್ಯಸ್ವಭಾವನ್ನು ಹೇಳಿರುವರು. ಬಹಳ ಮಂದಿ ಒಳ್ಳೆಯ ಫಲವನ್ನು ನಿರೀಕ್ಷಿಸುವರಾದರೂ ಒಳ್ಳೆಯ ಕೆಲಸವನ್ನು ಮಾಡಲಾರರು, ಹಾಗೆಯೆ ಕೆಟ್ಟ ಫಲವನ್ನು ಪಡೆಯಲು ಬಯಸದಿದ್ದರು ಕೆಟ್ಟದ್ದನ್ನು ಬಿಡಲಾರರು – **ಪುಣ್ಯಸ್ಯ ಫಲಮಿಚ್ಛಂತಿ ಪುಣ್ಯಂ ನೇಚ್ಛಂತಿ ಮಾನವಾಃ**

**ನ ಪಾಪಫಲಮಿಚ್ಛಂತಿ ಪಾಪಂ ಕುರ್ವಂತಿ ನಿತ್ಯದಾ**

ಆತ್ಮ ಒಳಗಿನ ಪಾಪಿಗಳಿಂದ ಆವಿಷ್ಟನಾಗಿ ಪ್ರಭಾವಿತನಾಗಿ ಪಾಪಕರ್ಮ ನಡೆಸುವ ಪಾಪಪುರುಷನೆನಿಸುವನು. ಆ ಪಾಪಾವೇಶಗಳನ್ನು ದೂರೀಕರಿಸಲು ಪಾಪಪುರುಷನಿರಸನ ಸಾರ್ಥಕವಾಗುವುದು. ಪುಣ್ಯಾತ್ಮರ ಪ್ರಭಾವಕ್ಕೆ ಒಳಗಾಗಲು ಪುಣ್ಯದೇವತೆಯ ಆವೇಶಕ್ಕೆ ಪಾತ್ರನಾಗಲು ಆತ್ಮನು ಪುಣ್ಯಪುರುಷಧ್ಯಾನವನ್ನು ನಡೆಸಬೇಕು. ತಾನು ಪುಣ್ಯರ ನಿಯಮನದಲ್ಲಿ ಸಿಗುವಂತೆ ಪುಣ್ಯಕರ್ಮಗಳಲ್ಲಿ ಆಸಕ್ತನಾಗುವಂತೆ ಪ್ರಾರ್ಥಿಸಬೇಕು.

# ತತ್ವನ್ಯಾಸ

**ನ್ಯಾಸಮೂಲಮಿದಂ ಸರ್ವಂ ನ್ಯಾಸಪೂರ್ವಂ ತು ಕಾರಯೇತ್**

**ನ್ಯಾಸೇನ ರಹಿತಂ ಕರ್ಮ್ಮ ಅರ್ಧಂ ಗೃಹ್ಣಂತಿ ರಾಕ್ಷಸಾಃ**

ಯಾವುದೇ ಮಂತ್ರಜಪದ ಮೊದಲಿಗೆ ಬಗೆಬಗೆಯ ನ್ಯಾಸಗಳನ್ನು ನಡೆಸಲಿದೆ. ಈ ನ್ಯಾಸಗಳು ಇಲ್ಲದೆ ಹೋದಲ್ಲಿ ಸಾಧಕನ ಪುಣ್ಯಕ್ಕೆ ಚ್ಯುತಿಯನ್ನು ತಂತ್ರಗಳು ಸಾರಿವೆ. ಇದರಲ್ಲಿ ಮಂತ್ರದ ಅಕ್ಷರನ್ಯಾಸ, ಪದನ್ಯಾಸದ ಜೊತೆಗೆ ಅಂಗನ್ಯಾಸ, ಅಂಗುಲಿನ್ಯಾಸಗಳೂ ಸೇರುವವು. ಇದೆಲ್ಲಕ್ಕಿಂತ ಮುಖ್ಯವಾಗಿ ಎಲ್ಲ ಮಂತ್ರಗಳೂ 51 ಅಕ್ಷರಗಳಿಂದಲೆ ಉತ್ಪನ್ನಗಳಾದ್ದರಿಂದ ಮಾತೃಕಾನ್ಯಾಸವನ್ನು ಮಂತ್ರಜಪದ ಆರಂಭದಲ್ಲಿಯೇ ಮಾಡಲಿದೆ. ಇದಕ್ಕೂ ಮೊದಲಿಗೆ ಮಂತ್ರ ಜಪಿಸುವವನು ದೇಹಶುದ್ಧಿಯ ಬಳಿಕ ಆ ದೇಹದಲ್ಲಿ ತತ್ವಗಳನ್ನು ಅಭಿಮಾನಿದೇವತೆಗಳೊಂದಿಗೆ ಪ್ರಾಣರೂಪಗಳನ್ನು ಲಕ್ಷ್ಮೀನಾರಾಯಣರ ರೂಪಗಳೊಂದಿಗೆ ಚಿಂತನೆ ಮಾಡಬೇಕು. ಇದುವೇ ತತ್ವನ್ಯಾಸ. ಅವರೆಲ್ಲರೂ ನೆಲೆನಿಂತು ಜಪವನ್ನು ನಡೆಸುವರು.

**ಏವಂ ಮಾತೃಕತತ್ವಾನಾಂ ನ್ಯಾಸಂ ಕೃತ್ವಾ ವಿಧಾನತಃ**

**ಆಯಾತ್ವಿತ್ಯನುವಾಕೇನ ಹೃದಯೇ ವಾರ್ಕ್ಕಮಂಡಲೇ**

**ದೇವೀಮಾವಾಹ್ಯ ಗಾಯತ್ರೀಂ ತತೋ ಧ್ಯಾಯೇದ್ದ್ವಿಜೋತ್ತಮಃ**

**ಭಾಗವತಪುರಾಣ** ಕೊನೆಯಲ್ಲಿ ತತ್ವಚಿಂತನೆ ಮಾಡಿದಂತೆ ಲೋಕದಲ್ಲಿ ನೂರಾರು ತತ್ವಗಳನ್ನು ಶಾಸ್ತ್ರಕಾರರು ಬೇರೆ ಬೇರೆ ದೃಷ್ಟಿಕೋನದಿಂದ ಗುರುತಿಸಿದ್ದರೂ, ಆಚಾರ್ಯಮಧ್ವರು **ತಂತ್ರಸಾರಸಂಗ್ರಹ**ದಲ್ಲಿ ಪ್ರಧಾನವಾಗಿ 25 ತತ್ವಗಳೆಂದು ತಿಳಿಸಿದ್ದಾರೆ –

**ಪುರುಷೋಽವ್ಯಕ್ತಂ ಚ ಮಹಾನ್ ಅಹಂಕಾರೋ ಮನಸ್ತಥಾ**

**ದಶೇಂದ್ರಿಯಾಣಿ ಶಬ್ದಾದ್ಯಾ ಭೂತೇತಾಃ ಪಂಚವಿಂಶತಿಃ**

ಪುರುಷತತ್ವ, ಅವ್ಯಕ್ತತತ್ವ, ಮಹತ್ತತ್ವ, ಅಹಂಕಾರತತ್ವ, ಮನಸ್ತತ್ವ;



ಹತ್ತು ಇಂದ್ರಿಯಗಳು; ಐದು ವಿಷಯಗಳು; ಐದು ಭೂತಗಳು. ಇವು ಇಪ್ಪತ್ತೈದು ತತ್ವಗಳು. ಪುರುಷನನ್ನು ಬಿಟ್ಟು 24ರ ಬಗ್ಗೆ **ಮಹಾಭಾರತದಲ್ಲೇ** ವೇದಮೂಲವೆಂದು ಹೇಳಲಾಗಿದೆ –

**ಮಹಾನಾತ್ಮಾ ತಥಾವ್ಯಕ್ತಂ ಅಹಂಕಾರಸ್ತಥೈವ ಚ**
**ಇಂದ್ರಿಯಾಣಿ ದಶೈಕಂ ಚ ಮಹಾಭೂತಾನಿ ಪಂಚ ಚ**
**ವಿಶೇಷಾಃ ಪಂಚಭೂತಾನಾಂ ಇತ್ಯೇಷಾ ವೈದಿಕೀ ಶ್ರುತಿಃ**
**ಚತುರ್ವಿಂಶತಿರೇಷಾ ವಃ ತತ್ವಾನಾಂ ಪರಿಕೀರ್ತಿತಾ**

ಒಂದೊಂದು ತತ್ವಗಳಿಗೂ ಹಲವಾರು ದೇವತೆಗಳನ್ನು ಶಾಸ್ತ್ರಗಳು ಅಲ್ಲಲ್ಲಿ ತಿಳಿಸಿವೆ. ತತ್ವಾಭಿಮಾನಿಗಳು ನಮ್ಮ ದೇಹದಲ್ಲಿರುವವರು ಒಂಬತ್ತು ಕೋಟಿಗಳೆಂದು ಒಂದೆಡೆ ಹೇಳಲಾಗಿದೆ.

**ತತ್ವಾಭಿಮಾನಿನೋ ದೇವಾಃ ದೇಹೇಽಸ್ಮಿನ್ನವಕೋಟಯಃ**

ಭಗವಂತನ ಹಾಗೂ ರಮೆಯ ನಾಡಿಗತ ರೂಪವಿಶೇಷಗಳನ್ನೆಲ್ಲಾ ಸೇರಿಸಿಕೊಂಡರೆ ಈ ಸಂಖ್ಯೆ ಇನ್ನೂ ಹೆಚ್ಚು ಬೆಳೆಯಲಿದೆ. ಇದರಲ್ಲಿ ವಾಯುದೇವರೂಪಗಳನ್ನೂ ಪರಿಗಣಿಸಲಾಗಿದೆ. ಇಪ್ಪತ್ತೈದು ತತ್ವಗಳಿಗೆ ಇಪ್ಪತ್ತೈದು ವಾಯುರೂಪಗಳನ್ನಾದರೂ ನಾವು ಗ್ರಂಥಗಳಲ್ಲಿ ಹೇಳಿದ್ದನ್ನು ಚಿಂತನೆ ನಡೆಸಬೇಕಾಗಿದೆ. ಇಪ್ಪತ್ತೈದು ತತ್ವಗಳಿಗೆ ನಾರಾಯಣರೂಪ ಸೇರಿ ಕೇಶವಾದಿ ಇಪ್ಪತ್ನಾಲ್ಕು ರೂಪಗಳು ಅಧಿದೇವತೆಗಳು. ಕೇಶವಾದಿ ಭಾರ್ಯೆಯರು ಇಪ್ಪತ್ನಾಲ್ಕು ಲಕ್ಷ್ಮೀರೂಪಗಳಿಲ್ಲಿ ಈ ಇಪ್ಪತ್ನಾಲ್ಕು ತತ್ವಗಳಿಗೆ ಒಡೆಯರು. ಅನಂತರದಲ್ಲಿ ಈ ಇಪ್ಪತ್ನಾಲ್ಕು ತತ್ವಗಳಿಗೆ ಇಪ್ಪತ್ನಾಲ್ಕು ಪ್ರಾಣ ರೂಪಗಳೇ ಮುಖ್ಯಾಭಿಮಾನಿದೇವತೆಗಳು. ಪುರುಷತತ್ವಕ್ಕೆ ಮಾತ್ರ ಆಚಾರ್ಯ ಮಧ್ವರು ಬ್ರಹ್ಮವಾಯುಗಳನ್ನು ಅಭಿಮಾನಿಗಳಾಗಿ ಹೇಳಿ ಉಳಿದವುಗಳಿಗೆ ಅವಾಂತರ ಅಭಿಮಾನಿಗಳನ್ನು ಹೇಳಿದ್ದಾರೆ. **ಸರ್ವಾಣ್ಯೇತಾನಿ ತತ್ವಾನಿ ಬ್ರಹ್ಮಾ ತು ಪುರುಷಃ ಸ್ಮೃತಃ** ಎಂಬಲ್ಲಿ ಸೂಕ್ಷ್ಮವಾಗಿ ಎಲ್ಲ ತತ್ವಕ್ಕೂ ಪುರುಷನಾಮದ ಬ್ರಹ್ಮನೇ ಅಭಿಮಾನಿ ಎಂದು ತಿಳಿಸಿದಂತೆಯೂ ಕಾಣುತ್ತದೆ. ನಾವು ಉಳಿದ ತತ್ವಗಳಿಗೂ



ಮುಖ್ಯಾಭಿಮಾನಿಗಳಾದ ವಾಯುರೂಪಗಳನ್ನು ತಿಳಿಯಬೇಕು. ಅದನ್ನಿಲ್ಲಿ ಕ್ರಮವಾಗಿ ಹೇಳಲಾಗಿದೆ –

**ಮಾತರಿಶ್ವಾ, ಜೀವೇಶ, ಗರಳಭುಕ್, ವಿಶ್ವಚೇತನಾಸ್ಥಿತ**

**ದಶಪ್ರಮತಿ, ವಿಭೀಷಣ, ವೀತಭಯ, ಆನಿದಾ, ಮರುತ್**

**ವಿಖ್ಯಾತ, ಬಲ, ಭಾರಭೃತ್, ಅನಿಲ, ಶುಚಿ**

**ಅನಿಮಿಷೇಶ, ಭಾರತೀಶ, ಋಜುಪುಂಗವ, ವಾತಜ, ಪವನ**

**ಪ್ರಖ್ಯಾತ, ವೈರಾಗ್ಯನಿಧಿ, ಧೃತಿ, ರೋಚನ, ಭೀಮ.**

ಆಚಾರ್ಯರು ಇತರ ತತ್ವಾಭಿಮಾನಿಗಳನ್ನು ಬೇರೆ ಬೇರೆ ಕಡೆ ಬೇರೆ ಬೇರೆ ರೀತಿಯಲ್ಲಿ ನೀಡಿದ್ದಾರೆ. ತಂತ್ರಸಾರಸಂಗ್ರಹದಲ್ಲೊಂದು ಕ್ರಮದಲ್ಲಿ ಸಂಗ್ರಹಿಸಿದ್ದಾರೆ (ಪಂಚಭೂತಗಳ ಅಭಿಮಾನಿಗಳನ್ನು ಇಲ್ಲಿ ಸ್ಪಷ್ಟ ಹೇಳಲಾಗಿಲ್ಲ)–

**ಬೃಹ್ಮಾ ತು ಪುರುಷಃ ಸ್ಮೃತಃ**

**ಮಹಾಂಶ್ಚಾವ್ಯಕ್ತನಾಮ್ನೀ ತು ಬ್ರಹ್ಮಾಣೀ ಸಂಪ್ರಕೀರ್ತ್ತಿತಾ**

**ಏವಂ ವಾಯುರಪಿ ಜ್ಞೇಯೋ ಭಾರತೀ ಚಾಪಿ ತತ್ತ್ರಯಮ್**

**ರುದ್ರೋऽಹಂಕಾರ ಉದ್ದಿಷ್ಟಃ ಸ್ಕಂದೇಂದ್ರೌ ಮನ ಉಚ್ಯತೇ**

**ಅಹಂಕಾರಃ ಶೇಷವೀಂದ್ರೌ ಅಪಿ ವಿದ್ವದ್ಭಿರೀರಿತೌ**

**ದಿಗ್ವಾಯುಸೂನುಸೂರ್ಯಾಶ್ಚ ವರುಣಶ್ಚಾಶ್ವಿನಾವಪಿ**

**ವಹ್ನಿದಕ್ಷಾವಿಂದ್ರಸೂನುಃ ಮಿತ್ರಶ್ಚೈವ ಮನುಸ್ತಥಾ**

**ಇಂದ್ರಿಯಾಖ್ಯಾಃ ಶಬ್ದನಾಮಾ ಬೃಹಸ್ಪತಿರುದಾಹೃತಃ**

**ಅನ್ಯೇ ತು ಸೂನವೋ ವಾಯೋ ರುದ್ರಸ್ಯಾಪಿ ಪ್ರಕೀರ್ತ್ತಿತಾಃ**

ಇಲ್ಲಿ ಹೇಳಿದಂತೆ 25 ತತ್ವಗಳ ಅಭಿಮಾನಿದೇವತೆಗಳ ವಿವರ ಕ್ರಮವಾಗಿ ಹೀಗಿದೆ. ಆವರಣದಲ್ಲಿ ಅವರ ಯೋಗ್ಯತೆಯ ಸ್ಥಾನವನ್ನು ನೀಡಲಾಗಿದೆ – ಬ್ರಹ್ಮವಾಯುಗಳು (3), ವಾಣಿಭಾರತೀಯರು (4), ಗರುಡಶೇಷರುದ್ರರು (5), ಇಂದ್ರಕಾಮರು (8), ದಿಗ್ದೇವತೆಗಳು, ವಾಯುಪುತ್ರ ಅಹಂಪ್ರಾಣ (9), ಸೂರ್ಯ (12), ವರುಣ(13), ನಾಸತ್ಯದಸ್ರರು (18), ಅಗ್ನಿ (15), ದಕ್ಷ (10),



ಇಂದ್ರಸುತ ಜಯಂತ (19), ಮಿತ್ರ (17), ಸ್ವಾಯಂಭುವಮನು (10).
ಗುರು (10) ಮತ್ತು ಅಪಾನ (18), ವ್ಯಾನ (18), ಉದಾನ (18), ಸಮಾನ (18) ಮತ್ತು ರುದ್ರಪುತ್ರರಾದ ಶಬ್ದಸ್ಪರ್ಶರೂಪಸಗಂಧರೈವರು.

ರುದ್ರಪುತ್ರರ ವಿಷಯಾಭಿಮಾನಿಗಳ ಬಗ್ಗೆ ನಾಮಗಳನ್ನು **ಗೀತಾತಾತ್ಪರ್ಯ**ದಲ್ಲಿ ಆಚಾರ್ಯರೇ ನೀಡಿದ್ದಾರೆ –

**ಶಬ್ದಾದ್ಯಾಃ ಪಂಚ ಶಿವಜಾಃ ಶಬ್ದನಾತ್ ಸ್ಪರ್ಶನಾದಪಿ**
**ರೂಪಣಾದ್ರಸನಾಚ್ಚೈವ ಗಂಧನಾಚ್ಚ ತಥಾಭಿಧಾಃ**

ದಿಗ್‌ದೇವತೆಗಳ ಬಗ್ಗೆ ಸ್ಪಷ್ಟ ವಿವರವನ್ನು ಆಚಾರ್ಯರು **ಐತರೇಯಭಾಷ್ಯ**ದಲ್ಲಿ ನೀಡಿರುತ್ತಾರೆ –

**ಮಿತ್ರೋ ಯಮಶ್ಚ ವರುಣಃ ಕುಬೇರಶ್ಚ ದಿಗೀಶ್ವರಾಃ**
**ಶ್ರೋತ್ರಾಭಿಮಾನಿನಃ ಸರ್ವೇ ವೈದಿಕಶ್ರವಣೋಚಿತಮ್**
**ಶ್ರೋತ್ರಂ ಚಂದ್ರಸ್ತಥಾ ಸ್ಮಾರ್ತತಾಂತ್ರಿಕಶ್ರವಣೋಚಿತಮ್**
**ಯಮ ಏವ ಷಡಂಗಾನಾಂ ವಿಷಯಶ್ರವಣೋಚಿತಮ್**
**ಶ್ರೋತ್ರಂ ತು ವರುಣಃ ಕಾಮ್ಯಶಾಸ್ತ್ರಾರ್ಥಂ ಮಿತ್ರ ಏವ ಚ**
**ಶ್ರೋತ್ರಂ ಯನ್ನೀತಿಶಾಸ್ತ್ರಾರ್ಥಂ ಕುಬೇರಸ್ತತ್ ಪ್ರಕೀರ್ತಿತಃ**

ನಾಲ್ಕು ದಿಕ್ಕಿನ ಒಡೆಯರೆ ಇಲ್ಲಿ ಶ್ರೋತ್ರಕ್ಕೆ ಅಭಿಮಾನಿಗಳು. ಪೂರ್ವದ ಮಿತ್ರ ಬದುಕಿನ ಆಸೆ ಆಕಾಂಕ್ಷೆಗಳನ್ನು ಕೇಳಿಸುತ್ತಾನೆ. ದಕ್ಷಿಣದ ಯಮ (12) ಧರ್ಮಶಾಸ್ತ್ರ ತಂತ್ರಶಾಸ್ತ್ರ ಕೇಳಿಸ್ತಾನೆ. ಪಶ್ಚಿಮದ ವರುಣ ವೇದಾಂಗಗಳನ್ನು ಕೇಳಿಸುತ್ತಾನೆ. ಉತ್ತರದ ಕುಬೇರ (18) ರಾಜಕೀಯಶಾಸ್ತ್ರ ಕೇಳಿಸುತ್ತಾನೆ. ಇದಕ್ಕೂ ಮುಖ್ಯವಾಗಿ ಉತ್ತರದಿಕ್ಕಿನ ಮುಖ್ಯ ಒಡೆಯ ಚಂದ್ರ (12) ವೇದಚಿಂತನೆ ಕೇಳಿಸುತ್ತಾನೆ.

**ಕಾಠಕಭಾಷ್ಯ**ದಲ್ಲಿ ಆಚಾರ್ಯರು ಚಂದ್ರನನ್ನು ಶ್ರೋತ್ರದೇವತೆಯನ್ನಾಗಿ ತಿಳಿಸಿ ಕೆಲವು ತತ್ವಗಳಿಗೆ ಬೇರೆ ಉತ್ತಮ ಅಭಿಮಾನಿಗಳೂ ಇರುವರೆಂದು ಸೂಚಿಸಿದ್ದಾರೆ –



**ಸೋಮವಿತ್ತಪಸೂರ್ಯಾಪ್ಪಾ ಅಶ್ವ್ಯಗ್ನೀಂದ್ರೇಂದ್ರಸೂನವಃ**

**ಯಮೋ ದಕ್ಷಶ್ಚೇಂದ್ರಿಯೇಶಾಃ...**

**ಗೀತಾತಾತ್ಪರ್ಯದಲ್ಲಿ** ಉತ್ತಮರೆಲ್ಲರೂ ಕೆಳಗಿನ ತತ್ವಗಳಿಗೆ ಅಭಿಮಾನಿಗಳೆಂದು ಸ್ಪಷ್ಟ ತಿಳಿಸಿದ್ದಾರೆ –

**ಸರ್ವಾಭಿಮಾನಿನೋ ದೇವಾಃ ಸರ್ವೇಽಪಿ ಹ್ಯುತ್ತರೋತ್ತರಮ್**

**ಆಧಿಕ್ಯಂ ವಕ್ತುಮೇವೈಷಾಂ ಪೃಥಕ್ ಸ್ಥಾನಮುದೀರ್ಯತೇ**

ವಾಣೀ – ಭಾರತಿಯರಂತೆ ಇತರ ದೇವತಾಸ್ತ್ರೀಯರೂ ತತ್ವಾಭಿಮಾನಿಗಳಾಗಿದ್ದಾರೆಂದು ಆಚಾರ್ಯರು **ಭಾಗವತತಾತ್ಪರ್ಯದಲ್ಲಿ ಐತರೇಯಭಾಷ್ಯದಲ್ಲಿ** ತಿಳಿಸಿದ್ದಾರೆ –

**ಮಹತೋ ಬ್ರಹ್ಮವಾಯೂ ಚ ತದ್ಭಾರ್ಯೇ ಚಾಭಿಮಾನಿನಃ**

**ಅಹಮಃ ಶೇಷವೀಂದ್ರೌ ಚ ರುದ್ರೇಂದ್ರೌ ಕಾಮತತ್ಸ್ತ್ರಿಯಃ**

**ಮನಸಸ್ತ್ವನಿರುದ್ಧಶ್ಚ ಚಂದ್ರಶ್ಯಾನ್ಯೇ ಯಥೋದಿತಮ್**

**ವಾಗ್ದೇವತೇ ತತೋ ವಹ್ನಿಃ ಉಮಾ ಚಾಪಿ ಪ್ರಕೀರ್ತಿತೇ**

**ಸ್ವಾಹಾಯಾ ಅಪಿ ವಾಕ್ತ್ವಂ ಚ ...**

ಮಾತಿನ ಒಡತಿಯರು ಪಾರ್ವತಿ(7) ಮತ್ತು ಸ್ವಾಹಾ(22). **ಬೃಹದಾರಣ್ಯಕಭಾಷ್ಯದಲ್ಲಿ** ಗರುಡಶೇಷರುದ್ರರ ಅಧಿಕಾರ ವ್ಯಾಪ್ತಿಯನ್ನು ತಿಳಿಸಿದ್ದಾರೆ –

**ಮನಃಸೂಕ್ಷ್ಮಂ ಜ್ಞಾನಯೋಗ್ಯಂ ಶೇಷೋ ವ್ಯಾಖ್ಯಾನಗೋಚರಮ್**

**ರುದ್ರಸ್ತು ಮನನಾಖ್ಯಂ ಚ ಗರುಡೋ ಧ್ಯಾನಗೋಚರಮ್**

ಪಂಚಭೂತಗಳ ಅಭಿಮಾನಿಗಳನ್ನು **ತತ್ವಕಣಿಕಾ** ಸಂಗ್ರಹಿಸಿದೆ –

**ವಿನಾಯಕಸ್ತಥಾಽಽಕಾಶೋ ನಿರಾವೃತ್ತ್ಯಾ ಪ್ರಕಾಶನಾತ್**

**ಪ್ರಧಾನವಾಯುಜೋ ಭೂತವಾಯುನಾಮಾ ಮರೀಚಿಕಃ**

**ಅಗ್ನಿಶ್ಚ ಪೃಥಿವೀ ಚೈವ ಪ್ರಸಿದ್ಧೌ ವರುಣೋ ಜಲಮ್**

ವಿನಾಯಕ (18), ಮರೀಚಿ (18/19) ಮತ್ತು ಪೃಥಿವೀ (25)

ಇದಕ್ಕೆಲ್ಲ ಮೂಲ **ಮಹಾಭಾರತ** –



ಅಧ್ಯಾತ್ಮಮಧಿಭೂತಂ ಚ ಅಧಿದೈವಂ ಚ ಶ್ರೂಯತಾಮ್

ಆಕಾಶಂ ಪ್ರಥಮಂ ಭೂತಂ ಶ್ರೋತ್ರಮಧ್ಯಾತ್ಮಂ

ಶಬ್ದೋಽಧಿಭೂತಂ ದಿಶೋಽಧಿದೈವತಂ ಸ್ಯಾತ್

ವಾಯುಃ ದ್ವಿತೀಯಂ ಭೂತಂ ತ್ವಗಧ್ಯಾತ್ಮಂ

ಸ್ಪರ್ಶೋಽಧಿಭೂತಂ ವಿದ್ಯುದಧಿದೈವತಂ ಸ್ಯಾತ್

ಜ್ಯೋತಿಃ ತೃತೀಯಂ ಭೂತಂ ಚಕ್ಷುರಧ್ಯಾತ್ಮಂ

ರೂಪಮಧಿಭೂತಂ ಸೂರ್ಯೋಽಧಿದೈವತಂ ಸ್ಯಾತ್

ಆಪಶ್ಚತುರ್ಥಂ ಭೂತಂ ಜಿಹ್ವಾಧ್ಯಾತ್ಮಂ

ರಸೋಽಧಿಭೂತಂ ವರುಣೋಽಧಿದೈವತಂ ಸ್ಯಾತ್

ಪೃಥಿವೀ ಪಂಚಮಂ ಭೂತಂ ಘ್ರಾಣಮಧ್ಯಾತ್ಮಂ

ಗಂಧೋಽಧಿಭೂತಂ ವಾಯುರಧಿದೈವತಂ ಸ್ಯಾತ್

ಪಾಂಚಭೌತಿಕಮೇತಚ್ಚತುಷ್ಟಯಂ ವರ್ಣ್ಣಿತಮ್

ಅತ ಊರ್ಧ್ವಮಿಂದ್ರಿಯಮನುವರ್ಣ್ಣಯಿಷ್ಯಾಮಃ

ಪಾದೌ ಅಧ್ಯಾತ್ಮಂ ಗಂತವ್ಯಮಧಿಭೂತಂ ವಿಷ್ಣುರಧಿದೈವತಂ ಸ್ಯಾತ್

ಹಸ್ತೌ ಅಧ್ಯಾತ್ಮಂ ಕರ್ತ್ತವ್ಯಮಧಿಭೂತಂ ಇಂದ್ರೋಽಧಿದೈವತಂ ಸ್ಯಾತ್

ಪಾಯುರಧ್ಯಾತ್ಮಂ ವಿಸರ್ಗೋಽಧಿಭೂತಂ ಮಿತ್ರೋಽಧಿದೈವತಂ ಸ್ಯಾತ್

ಉಪಸ್ಥೋಽಧ್ಯಾತ್ಮಂ ಆನಂದೋಽಧಿಭೂತಂ ಪ್ರಜಾಪತಿರಧಿದೈವತಂ ಸ್ಯಾತ್

ವಾಗಧ್ಯಾತ್ಮಂ ವಕ್ತವ್ಯಮಧಿಭೂತಂ ಅಗ್ನಿರಧಿದೈವತಂ ಸ್ಯಾತ್

ಮನೋಽಧ್ಯಾತ್ಮಂ ಮಂತವ್ಯಮಧಿಭೂತಂ ಚಂದ್ರಮಾಧಿದೈವತಂ ಸ್ಯಾತ್

ಅಹಂಕಾರೋಽಧ್ಯಾತ್ಮಂ ಅಭಿಮಾನೋಽಧಿಭೂತಂ ವಿರಿಂಚೋಽಧಿದೈವತಂ ಸ್ಯಾತ್

ಬುದ್ಧಿರಧ್ಯಾತ್ಮಂ ವ್ಯವಸಾಯೋಽಧಿಭೂತಂ ಬ್ರಹ್ಮಾಧಿದೈವತಂ ಸ್ಯಾತ್

ಏವಮವ್ಯಕ್ತೋ ಭಗವಾನ್ ಸಕೃತ್ ಕೃತ್ಸ್ನಾನ್ ಕುರುತೇ ಸಂಹರತೇ ಚ

ಕಸ್ಮಾತ್ ಕ್ರೀಡಾರ್ಥಮ್

ಮಹಾಭಾರತವು ಶ್ಲೋಕರೂಪದಲ್ಲಿಯೂ ಈ ಸಂಗತಿಗಳನ್ನು



ಮತ್ತೊಮ್ಮೆ ಹೇಳಿದೆ. ಅಲ್ಲಿ ವಿರಿಂಚನ ಬದಲಿಗೆ ರುದ್ರ ಬಂದಿದ್ದಾನೆ

**ವಾಯುಪುರಾಣದ** ಮಾಘಮಾಹಾತ್ಮ್ಯೆಯಲ್ಲಿ ಬಂದ ಮಾಧವಸ್ತವ ರಾಜದಲ್ಲಿ ಪ್ರತಿಯೊಂದು ತತ್ವಾಭಿಮಾನಿ ದೇವತೆಯ ರೂಪದಲ್ಲಿನ ಭಗವಂತನನ್ನೆ ಪ್ರಾರ್ಥಿಸಲಾಗಿದೆ. ಆಧಿಭೌತಿಕವಾಗಿ ಆಧಿದೈವಿಕವಾಗಿ ಆಧ್ಯಾತ್ಮಿಕವಾಗಿ ಇಲ್ಲಿ ಚಿಂತನೆ ಮಾಡಲಾಗಿದೆ. ಪ್ರತಿಯೊಂದು ತತ್ವದಲ್ಲಿರುವ ಆಯಾ ದೇವತೆಯ ಒಳಗಿರುವ ಆ ದೇವತಾನಾಮವನ್ನೆ ಹೊತ್ತಿರುವ ಆಯಾ ತತ್ವಾಭಿಮಾನಿ ದೇವತೆಗಳಿಂದ ಪೂಜೆಗೊಂಡ ಭಗವಂತನನ್ನು ನೆನೆಯಲಾಗಿದೆ –

**ಯಶ್ಚಕ್ಷುಗಃ ಸೂರ್ಯಗಶ್ಚ ಸೂರ್ಯಾಹ್ವಃ ಸೂರ್ಯಸೇವಿತಃ**
**ದಿಗ್ರೂಪೀ ಚ ಶ್ರುತಿಸ್ಥೋ ಯಃ ಸರ್ವಪ್ರತ್ಯಯಗೋಚರಃ**
**ನಾಸತ್ಯರೂಪೀ ಭಗವಾನ್ ನಾಸಾಸ್ಥೋ ಹರಿರವ್ಯಯಃ**
**ಜಿಹ್ವಾತ್ಮಾ ವರುಣಸ್ಥಶ್ಚ ಮಾಧವಾನಂತಶಕ್ತಿಧೃತ್**
**ಪ್ರಾಣಾಪಾನಾತ್ಮಕೋ ವಿಷ್ಣುಃ ತ್ವಕ್ ಸ್ಪರ್ಶಾತ್ಮಾ ಮಹಾಪ್ರಭುಃ**
**ಖಸ್ಥಃ ಖನಾಮಾ ಭಗವಾನ್ ಸರ್ವವ್ಯಾಪಿನ್ ಮಹಾವಿಭೋ**
**ವಾಯುಗೋ ವಾಯುನಾಮಾ ತ್ವಂ ಜಗತ್ಸಾರಾಚ್ಯುತಾವ್ಯಯ**
**ತೇಜಃಸ್ಥಿತೋ ವಹ್ನಿನಾಮಾ ಸ್ವಯಂ ಜ್ಯೋತಿಸ್ತ್ವಮಾದಿಕೃತ್**
**ಅಪ್‌ಸ್ಥಿತೋ ಭಗವಾನ್ವಿಷ್ಣುಃ ಅಬಾತ್ಮಾ ಜೀವನಪ್ರದಃ**
**ಭೂಮಿಸ್ಥೋ ಭೂಮಿನಾಮಾ ತ್ವಂ ಜಗದಾಧಾರ ಕೇಶವ**
**ಮಹಾನ್ಮಹದ್ಗತೋ ವಿಷ್ಣುಃ ಜಗದ್ಧೇತುರ್ಜ್ಜನಾರ್ದ್ದನ**
**ಯಚ್ಚಾಹಂಕಾರಗೋ ವಿಷ್ಣುಃ ಜಗದ್ವೈಕಾರಿಕಾಶ್ರಯ**
**ಮನಃಸ್ಥಿತಃ ಕಾಮರೂಪೀ ಪ್ರವರ್ತ್ತಕ ನಿವರ್ತ್ತಕ**
**ಬುದ್ಧಿಗೋ ಬುದ್ಧಿನಾಮಾ ತ್ವಂ ಬೋಧಾತ್ಮಾ ಹರಿರೀಶ್ವರ**
**ವಾಕ್‌ಸ್ಥಿತೋ ವಹ್ನಿರೂಪೀ ತ್ವಂ ಗುಣಾಭಾಸ ನಿರಾಶ್ರಯ**
**ಹಸ್ತಸ್ಥೋ ಭಗವಾನ್ ವಿಷ್ಣುಃ ಹಸ್ತಗಃ ಪುಣ್ಯವಿಗ್ರಹಃ**
**ಯಃ ಪಾದಸ್ಥೋ ಜಯಂತಾಹ್ವೋ ಭಗವಾನ್ ಗರುಡಾಸನಃ**



**ಗುಹ್ಯಸ್ಥಿತೋ ಗುಹ್ಯರೂಪೀ ಪ್ರಸವಿಷ್ಣೂ ರಮಾಪತಿಃ**

ವಿಷ್ಣು ಶಬ್ದದಿಂದ ತತ್ವಗಳೊಳಗೆ ಪ್ರವಿಷ್ಟನಾದ ದೇವರನ್ನು ಪುರಾಣ ಸೂಚಿಸಿದೆ. ಈ ಚಿಂತನೆಯನ್ನು ಆಚಾರ್ಯಮಧ್ವರು **ತಂತ್ರಸಾರಸಂಗ್ರಹ**ದಲ್ಲಿ ಅದೇ ಶಬ್ದದಿಂದ ಸೂಚಿಸಿದ್ದಾರೆ –

**ಏತೇಷು ಭಗವಾನ್ ವಿಷ್ಣುಃ ಪ್ರಧಾನತನುರೇವ ತು**

**ಮೋಕ್ಷಧರ್ಮಪರ್ವ**ದ ಮಾತೂ ಹಾಗೆಯೇ ಎಂಬುದು ಇಲ್ಲಿ ಉಲ್ಲೇಖಾರ್ಹ –

**ಪಂಚವಿಂಶತಿಮೋ ವಿಷ್ಣುಃ ನಿಸ್ತತ್ವಸ್ತತ್ವಸಂಜ್ಞಿತಃ**

**ಭಾಗವತ**ದಲ್ಲಿ ಎಲ್ಲ ತತ್ವರೊಳಗೆ ದೇವರ ಪ್ರವೇಶವನ್ನು ಹೇಳಿದ್ದಾರೆ –

**ತ್ರಯೋವಿಂಶತಿತತ್ವಾನಾಂ ಗಣಂ ಯುಗಪದಾವಿಶತ್**

ಹೀಗೆ ತಿಳಿದವರ ಫಲವಿಶೇಷವನ್ನು **ಭಾಗವತತಾತ್ಪರ್ಯ**ದಲ್ಲಿ ಆಚಾರ್ಯ ಮಧ್ವರು ಹೇಳಿದ್ದಾರೆ –

**ಜ್ಞಾತ್ವಾ ತತ್ವಾನಿ ತೇಷ್ವೀಶಂ ಸರ್ವತತ್ವೇಶ್ವರಂ ಪ್ರಭುಮ್**

**ಜಾನನ್ ಜ್ಞಾನೀ ಭವೇತ್ ಸ್ವಸ್ಯ ಯೋಗ್ಯಂ ಜ್ಞಾನಂ ವಿಶೇಷತಃ**

ಭಗವಂತನ ಮತ್ತು ತತ್ವದೇವತೆಗಳ ನಡುವೆ ಎಲ್ಲರಲ್ಲೂ ಪ್ರಾಣನ ಚಿಂತನೆಯನ್ನು **ಐತರೇಯಭಾಷ್ಯ**ದಲ್ಲಿ ಆಚಾರ್ಯರು ನೀಡಿದ್ದಾರೆ –

**ಶೇಷವೀಂದ್ರಶಿವಾದೀನಾಂ ಮನ ಆದಿಸ್ವರೂಪಿಣಾಮ್**

**ಆಶ್ರಯೋ ವಾಯುರೇವೈಕಃ ತಸ್ಯ ನಾರಾಯಣಃ ಸ್ವಯಮ್**

ಹೀಗೆ ಎಲ್ಲ ದೇವತೆಗಳಿಗೆ ಸಂಬಂಧಿಸಿದಂತೆ ತತ್ವನ್ಯಾಸವನ್ನು ಶಾಸ್ತ್ರಗಳು ವಿಧಿಸಿವೆ, ಮುಖ್ಯವಾಗಿ ಕೃಷ್ಣನ ಸನ್ನಿಧಾನಕ್ಕೆ ಈ ನ್ಯಾಸ ಎಂದು **ತತ್ವಕಣಿಕಾ**ದಲ್ಲಿ ಪ್ರಮಾಣವನ್ನು ನೀಡಲಾಗಿದೆ –

**ತತ್ವನ್ಯಾಸೋಽಯಮಚಿರಾತ್ ಕೃಷ್ಣಸಾನ್ನಿಧ್ಯಕಾರಕಃ**

**ಯಃ ಕುರ್ಯಾತ್ತತ್ವವಿನ್ಯಾಸಂ ಸಂಭೃತೋ ಭವತಿ ಧ್ರುವಮ್**

ಇಪ್ಪತ್ತೈದು ಪ್ರಪಂಚ ತತ್ವಗಳ ಜತೆ ಕೇವಲ ಭಗವಂತನ ಹನ್ನೊಂದು



ರೂಪಗಳನ್ನು ಹನ್ನೊಂದು ತತ್ವಗಳಾಗಿ ನ್ಯಾಸದಲ್ಲಿ ಸೇರಿಸಿಕೊಳ್ಳುವಂತೆ ಆಚಾರ್ಯ ಮಧ್ವರು ತಂತ್ರಸಾರಸಂಗ್ರಹದಲ್ಲಿ ತಿಳಿಸಿದ್ದಾರೆ –

**ತತ್ವಖ್ಯಾಃ ಕಾಲಮಾಯೇ ಚ ನಿಯತಿರ್ಮ್ಮತಿರೇವ ಚ**

**ವಿದ್ಯಾ ಕಲಾ ಪ್ರವೃತ್ತಿಶ್ಚ ದ್ವಾತ್ರಿಂಶತ್ತತ್ವಸಂಗ್ರಹಃ**

**ಸ್ಫೂರ್ತಿಃ ಸಂವಿತ್ಪ್ರತಿಷ್ಠಾ ಚ ಶಕ್ತಿರಿತ್ಯಪರಾಣಿ ಚ**

ಈ ಹನ್ನೊಂದು ತತ್ವಗಳೂ ಲಕ್ಷ್ಮಿಯ ರೂಪಗಳೂ ಹೌದು ಎನ್ನುವುದನ್ನು ಅಲ್ಲಿ ಹೇಳಲಾಗಿದೆ –

**ಮಹಾಲಕ್ಷ್ಮೀಸ್ವರೂಪಾಣಿ ಹ್ಯೇಕಾದಶ ವಿದೋ ವಿದುಃ**

**ವಿಷ್ಣೋರಪಿ ಹಿ ರೂಪಾಣಿ ತನ್ನಾಮ್ನೈಕಾದಶೈವ ತು**

**ಶಕ್ತ್ಯಾದಿ ದ್ವಾದಶಾತ್ಮಾಽಭೂತ್** ಎಂದು **ಪ್ರಕಾಶಸಂಹಿತೆ**ಯೂ ಪುರುಷ ರೂಪ ಸೇರಿಸಿ ಭಗವಂತನ ಈ ಹನ್ನೊಂದು ರೂಪಗಳನ್ನು ಗುರುತಿಸಿದೆ. ಈ ರೂಪಗಳ ಬಣ್ಣ ಹಾಗೂ ಆಯುಧಗಳ ಚಿಂತನೆಯನ್ನು ಆಚಾರ್ಯರು ನೀಡಿರುತ್ತಾರೆ. ಇದು ತತ್ವನ್ಯಾಸ ಮಾಡುವ ಮೊದಲು ಧ್ಯಾನಿಸಬೇಕಾದ ಅಂಶವಾಗಿದೆ –

**ಪ್ರಧಾನೋಪಮವರ್ಣ್ನಾನಿ ದ್ವಿಭುಜಾನ್ಯಶೇಷತಃ**

**ಕೃತಾಂಜಲಿಪುಟಾನ್ಯೇವ ಪ್ರಧಾನಂ ತಂ ಹರಿಂ ಪ್ರತಿ**

ಭಗವಂತನ ಮೂಲರೂಪದಂತೆಯೆ ಈ ಎಲ್ಲ ಹನ್ನೊಂದು ರೂಪಗಳೂ ಸೂರ್ಯನಂತೆ ಹೊಳೆಯುವ ಬಣ್ಣದವುಗಳು. ಎರಡು ಕೈಗಳುಳ್ಳ ಈ ರೂಪಗಳು ನಡುವೆ ಪ್ರಧಾನ ರೂಪಕ್ಕೆ ಕೈಮುಗಿದಿರುವಂತೆ ಸುತ್ತಲೂ ಸೇರಿವೆ.

ಭಗವಂತ ತನ್ನದೆ ರೂಪಗಳಿಂದ ಸುತ್ತುವರಿದಿದ್ದು ಸೇವೆಯನ್ನು ಪಡೆವಂತೆ ಕ್ರೀಡೆಯನ್ನು ತೋರಿಸುವನು. ಇದು ಭಗವಂತನ ವಿಶೇಷ ವಿಷಯಗಳಲ್ಲೊಂದು –

**ಅಂಗಾಂಗಿತ್ವೇನ ಭಗವಾನ್ ಕ್ರೀಡತೇ ಪುರುಷೋತ್ತಮಃ**

ಅಷ್ಟಾಕ್ಷರಮಂತ್ರದ ಧ್ಯಾನದಂತೆ ನಾರಾಯಣನು ವಿಶ್ವಾದಿ 8



ರೂಪಗಳಿಂದ ಸುತ್ತುವರಿದಿರುವನು. ಹಾಗೆಯೆ ಭಗವಂತನ ಆವರಣದಲ್ಲಿ ಮೊದಮೊದಲಲ್ಲಿ ಭಗವದ್ವ್ಯೂಹರೂಪಗಳೇ ಇರುವವು. ಹೀಗೆಯೆ ಇಲ್ಲಿ ತತ್ತ್ವರೂಪಗಳನ್ನು ನಾರಾಯಣನ ಸುತ್ತ ಇರುವಂತೆ ಚಿಂತಿಸಬೇಕು. ಈ ರೂಪಗಳ ಹತ್ತಿರ ಈ ನಾಮಗಳನ್ನೆ ಹೊತ್ತಿರುವ ಹನ್ನೊಂದು ಲಕ್ಷ್ಮೀರೂಪಗಳೂ ಸುತ್ತಲು ಸೇರಿವೆ. ಕೇವಲ ಲಕ್ಷ್ಮೀನಾರಾಯಣರ ರೂಪಗಳಷ್ಟೆ ಅಲ್ಲದೆ ಪ್ರಧಾನ ಭಗವಂತನ ಸುತ್ತ ಎಲ್ಲ ಇತರ ತತ್ತ್ವದೇವತೆಗಳೂ ಕೈಮುಗಿದು ಸೇವಕರಾಗಿ ನಿಂತಿದ್ದಾರೆ. ಭಗವಂತನಂತೆಯೆ ಹೊಳೆಯುವ ಬಣ್ಣಗಳನ್ನು ಆ ದೇವತೆಗಳು ಪಡೆದಿದ್ದಾರೆ. ಇದು ಪ್ರತಿಬಿಂಬದ ಲಕ್ಷಣ. ತತ್ತ್ವಾಭಿಮಾನಿಗಳಾಗಿ ದೇವತೆಗಳನ್ನು ಚಿಂತಿಸುವಾಗ ಅವರ ಬಳಿ ಆಯುಧಗಳ ವಾಹನಗಳ ಚಿಂತನೆ ನಡೆಸಬಾರದೆಂದು ಇಲ್ಲಿ ತಿಳಿಯುವುದು. ಇಲ್ಲಿ ಆಯುಧಗಳೂ ವಾಹನಗಳೂ ಪ್ರಪ್ರತ್ಯೇಕ ತತ್ತ್ವಗಳೆ ಆಗುವುವು. ಅವುಗಳ ಚಿಂತನೆ ಬಹಳ ವಿಸ್ತಾರವಾಗುವುದೆಂದು ನಮಗೆ 25 ದೇವತಾತತ್ತ್ವಗಳನ್ನಷ್ಟೇ ನ್ಯಾಸದಲ್ಲಿ ತಿಳಿಸಿದ್ದಾರೆ. ಈ ಎಲ್ಲ ತತ್ತ್ವದೇವತೆಗಳಲ್ಲೂ ಭಗವಂತನೆ ತುಂಬಿದ್ದು ವಿಶೇಷವಾಗಿ ಸಾಧಕನಿಗೆ ಅನುಗ್ರಹವನ್ನು ಮಾಡುವುದ ರಿಂದ ಪ್ರಪ್ರತ್ಯೇಕ ತತ್ತ್ವಮಂತ್ರಗಳೂ ಬಹಳಷ್ಟು ಫಲವನ್ನು ನೀಡುವಲ್ಲಿ ಸಮರ್ಥ ವಾಗಿದೆ. ಈ ವಿಷಯವನ್ನೂ ಆಚಾರ್ಯರು ಕೊನೆಯಲ್ಲಿ ಹೇಳಿದ್ದಾರೆ –

**ಜ್ಞೇಯಾ ಮಂತ್ರಾಃ ಸಮಸ್ತಾಸ್ತೇ ಪೃಥಙ್ಮೋಕ್ಷಾದಿದಾಯಕಾಃ**

ಶಕ್ತ್ಯಾದಿ ತತ್ತ್ವಗಳ ನ್ಯಾಸದಿಂದ ಶಕ್ತ್ಯಾದಿಗುಣಗಳು ನಮ್ಮಲ್ಲಿ ಸೇರಲಿವೆ ಎಂದು **ಯೋಗದೀಪಿಕಾ** ಹೇಳಿದೆ –

**ಶಕ್ತಿಃ ಸ್ಥಿತಿಃ ಸಂವಿದಾದ್ಯಾಃ ಜೀವಸ್ಥಾಶ್ಚ ಮನೋಗತಾಃ**
**ತೇಷಾಂ ನಿಯಂತಾ ಭಗವಾನ್ ಶ್ರೀಶ್ಚ ತತ್ತನ್ನಿಯಾಮಿಕಾ**
**ತನ್ನಾಮಕಾನಿ ರೂಪಾಣಿ ಹರೇಶ್ಚೈವ ಶ್ರಿಯೋಽಪಿ ಚ**
**ಸ್ಥಾಪಯೇದ್ಧೃದಯೇ ಭಕ್ತ್ಯಾ ಮಂತ್ರಸಿದ್ಧಿಮಭೀಪ್ಸತಾ**
**ತತ್ಪ್ರೇರಿತಾಶ್ಚ ಶಕ್ತ್ಯಾದ್ಯಾಃ ಜಾಯಂತೇ ನಿರ್ಮ್ಮಲಾ ಹೃದಿ**
**ತಸ್ಮಾತ್ಪೂಜ್ಯಾಶ್ಚ ನಮ್ಯಾಶ್ಚ ಧ್ಯೇಯಾಶ್ಚ ಹೃದಯೇ ನರೈಃ**



ತತ್ವಗಳನ್ನು ಮಂತ್ರಗಳಾಗಿ ಹೇಗೆ ಹೇಳಬೇಕೆಂಬುದನ್ನು **ತಂತ್ರಸಾರಸಂಗ್ರಹ**ದಲ್ಲಿ ಸೂಚಿಸಲಾಗಿದೆ –

**ಪರಾತ್ಮನೋರ್ಮ್ಮಧ್ಯೇ ತತ್ವನಾಮ ತದರ್ಥಯೋಃ**

**ಜಪೇ ನ್ಯಾಸೇ ನಮೋಽಂತಸ್ತು ಸ್ವಾಹಾಂತೋ ಹೋಮಕರ್ಮ್ಮಣಿ**

ಪರ ಮತ್ತು ಆತ್ಮ ಶಬ್ದಗಳ ನಡುವೆ ತತ್ವಗಳ ಹೆಸರನ್ನು ಹಾಕಬೇಕು. ಜಪ ಹಾಗೂ ನ್ಯಾಸದಲ್ಲಿ ನಮಃ ಎನ್ನಬೇಕು. ತತ್ವಹೋಮದಲ್ಲಿ ನಮಃ ಪದದ ಸ್ಥಾನದಲ್ಲಿ ಸ್ವಾಹಾ ಹೇಳಬೇಕು. ತತ್ವದೇವತೆಗೆ ನಮನವು ಎಂಬ ಚಿಂತನೆಯಲ್ಲಿ ಚತುರ್ಥೀವಿಭಕ್ತಿಯಲ್ಲಿ ಮಂತ್ರ ನಿಷ್ಪನ್ನವಾಗಲಿದೆ.

ನ್ಯಾಸಸ್ಥಾನಗಳನ್ನು ಆಚಾರ್ಯರು ಹೇಳಿದ್ದಾರೆ –

**ನ್ಯಾಸೋಽಂಗುಲೀಷೂರುಬಾಹುಮಧ್ಯೇಷು ವ್ಯುತ್ಕ್ರಮೇ ಸ್ಮೃತಃ**

**ಕ್ರಮೇ ವಿಪರ್ಯಯೇಣಾತ್ರ ಶಕ್ತ್ಯಾದಿತ್ವಂ ಪ್ರಕೀರ್ತ್ತಿತಮ್**

20 ಬೆರಳುಗಳು, ಎರಡು ತೊಡೆ. ಎರಡು ತೋಳು ಇವುಗಳಲ್ಲಿ 24 ತತ್ವಗಳನ್ನು ನ್ಯಾಸಗೈದು ಉಳಿದ 12 ತತ್ವಗಳನ್ನು ಹೃದಯದಲ್ಲಿಯೆ ನ್ಯಾಸಮಾಡಬೇಕು. ಎಡ ಕಾಲಿನ ಕಿರುಬೆರಳಿನಿಂದ ಹೆಬ್ಬೆರಳವರೆಗೆ ಮೊದಲು ನ್ಯಾಸ. ಮತ್ತೆ ಬಲಕಾಲಿನಲ್ಲಿ ನ್ಯಾಸ, ಹಾಗೆಯೆ ಎಡಕೈ ಮತ್ತು ಬಲಕೈಗಳಲ್ಲಿ ನ್ಯಾಸ. ಮತ್ತೆ ಎಡ ತೊಡೆ ಹಾಗೂ ಬಲತೊಡೆಯಲ್ಲಿ, ಎಡ ಭುಜದಲ್ಲಿ ಹಾಗೂ ಬಲಭುಜದಲ್ಲಿ ನ್ಯಾಸ ಮಾಡಿ, ಕಡೆಗೆ ಹೃದಯದಲ್ಲಿ ನ್ಯಾಸ ಮಾಡಿದರೆ ಇದನ್ನು **ಲಯನ್ಯಾಸ** ಎಂದು ಕರೆವರು. ದೇಹದ ಕೆಳಭಾಗದಿಂದ ಮೇಲ್ಭಾಗಕ್ಕೆ ಬರುವುದು. ಸಾಧಕನು ತನ್ನ ಶಕ್ತಿಯನ್ನು ಮೇಲ್ಮುಖವಾಗಿ ಕಳುಹಿಸಲು ಈ ರೀತಿಯ ನ್ಯಾಸವನ್ನು ಕೈಗೊಂಡು ತನ್ನ ಲಯವನ್ನು ಅವಸಾನವನ್ನು ಕೊನೆಯನ್ನು ಕಾಣಬೇಕು. ಇದು ಸಂನ್ಯಾಸಿಗಳಿಗೆ ಹೆಚ್ಚು ವಿಹಿತ.

ಬ್ರಹ್ಮಚಾರಿಗೆ ಸೃಷ್ಟಿನ್ಯಾಸವನ್ನು ವಿಧಿಸಿದ್ದಾರೆ. ಆತ ಮುಂದೆ ಬೆಳೆದು ಸಮಾಜಕ್ಕೆ ಕೊಡುಗೆಯನ್ನು ನೀಡಬೇಕು. ಲಯನ್ಯಾಸದ ವಿಪರೀತ ಕ್ರಮವೆ **ಸೃಷ್ಟಿನ್ಯಾಸ**. ಅಂದರೆ ಇಲ್ಲಿ ಹೃದಯದಿಂದ ನ್ಯಾಸವನ್ನಾರಂಭಿಸಿ ಎಡಕಾಲಿನ



ಕಿರುಬೆರಳವರೆಗೆ ನ್ಯಾಸವನ್ನು ಮಾಡುವುದು. ಅಂದರೆ ದೇಹದ ಮೇಲಿನ ಭಾಗದಿಂದ ಕೆಳಗಿನ ಅಂಗಗಳವರೆಗೆ. ಸೃಷ್ಟಿನ್ಯಾಸದಲ್ಲಿ ಬಲಬದಿ ಮೊದಲು, ಎಡಬದಿ ಮತ್ತೆ –

**ಮೂರ್ಧಾದಿ ಪಾದಪರ್ಯಂತಂ ಸೃಷ್ಟಿನ್ಯಾಸಂ ಪ್ರಕೀರ್ತಿತಮ್**

**ದಕ್ಷಿಣಾದಿ ತು ವಾಮಾಂತಂ ಸೃಷ್ಟಿನ್ಯಾಸಂ ಪ್ರಕೀರ್ತಿತಮ್** (ಅನಿರುದ್ಧಸಂಹಿತಾ)

ಗೃಹಸ್ಥರಿಗೆ ಸ್ಥಿತಿನ್ಯಾಸವನ್ನು ಶಾಸ್ತ್ರಕಾರರು ಗುರುತಿಸಿದ್ದಾರೆ. ಮೂರು ನ್ಯಾಸದ ಫಲವ್ಯತ್ಯಾಸವೂ ಅದರದರ ಯೋಗ್ಯರ ನಿರ್ದೇಶವೂ ಇಲ್ಲಿದೆ –

**ನ್ಯಾಸಸ್ತು ಸ್ಥಿತಿಸಂಜ್ಞೋ ವಾ ಇಹಾಮುತ್ರ ಫಲಪ್ರದಃ**
**ಸೃಷ್ಟಿಸ್ತ್ವೈಹಿಕಭೂಯಿಷ್ಠಾ ಸಂಹಾರೋ ಮೋಕ್ಷದಾಯಕಃ**
**ಸ್ಥಿತಿನ್ಯಾಸೋ ಗೃಹಸ್ಥಾನಾಂ ಉದ್ದಿಷ್ಟಸ್ಸರ್ವಸಿದ್ಧಿದಃ**
**ಪ್ರಥಮಾಶ್ರಮಿಣಾಂ ನ್ಯಾಸ ಉತ್ಪತ್ತಿಸ್ಸಮುದಾಹೃತಃ**
**ಯತೀನಾಂ ಚ ವನಸ್ಥಾನಾಂ ಸಂಹಾರಸ್ಸಮುದಾಹೃತಃ**
**ವಿರಕ್ತಸ್ಯ ಗೃಹಸ್ಥಸ್ಯ ಸಂಹಾರೋಽಪಿ ವಿಧೀಯತೇ**
**ಸಪತ್ನೀಕವನಸ್ಥಾನಾಂ ಸ್ಥಿತಿನ್ಯಾಸೋ ವಿಧೀಯತೇ**

ಹೃದಯದಲ್ಲಿ ಹನ್ನೊಂದು ತತ್ವಗಳ ನ್ಯಾಸದ ಬಳಿಕ ಕಾಲು, ಕೈ, ತೊಡೆ, ತೋಳುಗಳಲ್ಲಿ ನ್ಯಾಸ ಮಾಡಿದರೆ ಸ್ಥಿತಿನ್ಯಾಸವಾಗುವುದು. ಇದರಲ್ಲಿ ಮೊದಲು (ಹೃದಯಸ್ಥಾನದಲ್ಲಿ) ಸೃಷ್ಟಿನ್ಯಾಸವೂ ಮತ್ತೆ (ಉಳಿದೆಡೆ) ಲಯನ್ಯಾಸವೂ ಸೇರಿ ಕೊಂಡಿದೆ. ಈ ಮೂರು ಬಗೆಯ ನ್ಯಾಸಕ್ರಮಗಳನ್ನು ತತ್ವಕಣಿಕಾ ಸಂಗ್ರಹಿಸಿದೆ–

**ಶಕ್ತಿಃ ಪ್ರತಿಷ್ಠಾ ಸಂವಿಚ್ಚ ಸ್ಫೂರ್ತಿಃ ಸ್ಯಾತ್ತದನಂತರಮ್**
**ಪ್ರವೃತ್ತಿಶ್ಚ ಕಲಾ ವಿದ್ಯಾ ಮತಿರ್ನ್ನಿಯತಿರೇವ ಚ**
**ಮಾಯಾ ಕಾಲಶ್ಚ ತತ್ವಾನಿ ಇಮಾನ್ಯೇಕಾದಶೈವ ತತ್**
**ಪುರುಷೋಽವ್ಯಕ್ತಂ ಚ ಮಹಾನಹಂಕಾರೋ ಮನಸ್ತಥಾ**
**ಶ್ರೋತ್ರತ್ವಕ್ನೇತ್ರರಸನಘ್ರಾಣಾನೀಮಾನಿ ಪಂಚ ಚ**
**ವಾಗ್ಘಸ್ತಚರಣಾಃ ಪಾಯುಃ ಉಪಸ್ಥಮಿತಿ ಪಂಚಕಮ್**



ಶಬ್ದಸ್ಪರ್ಶೌ ರೂಪರಸೌ ಗಂಧಶ್ಚೇತಿ ಚ ಪಂಚಕಮ್

ಆಕಾಶವಾಯುತೇಜಾಂಸಿ ಜಲಂ ಭೂರಿತಿ ಪಂಚಕಮ್

ಇತಿ ಸೃಷ್ಟಿಕ್ರಮೇ ನ್ಯಾಸೇ ಷಟ್‌ತ್ರಿಂಶತ್ತತ್ವಸಂಗ್ರಹಃ

ಪೃಥಿವೀಜಲತೇಜಾಂಸಿ ವಾಯುರಾಕಾಶ ಏವ ಚ

ಉಪಸ್ಥಃ ಪಾಯುಚರಣೌ ಹಸ್ತೋ ವಾಕ್ಚೇತಿ ಪಂಚಕಮ್

ಘ್ರಾಣಂ ರಸನನೇತ್ರೇ ಚ ತ್ವಕ್ ಶ್ರೋತ್ರಂ ಚೇತಿ ಪಂಚಕಮ್

ಮನಸ್ತತ್ವಮಹಂಕಾರೋ ಮಹಾನವ್ಯಕ್ತಮೇವ ಚ

ಪುರುಷಃ ಕಾಲಮಾಯೇ ಚ ನಿಯತಿರ್ಮ್ಮತಿರೇವ ಚ

ವಿದ್ಯಾ ಕಲಾ ಪ್ರವೃತ್ತಿಶ್ಚ ಸ್ಫೂರ್ತಿಃ ಸಂವಿತ್ತಥೈವ ಚ

ಪ್ರತಿಷ್ಠಾ ಶಕ್ತಿರೇತಾನಿ ತನ್ನಾಮ್ನ್ಯೈಕಾದಶಾನಿ ತು

ಹರಿಲಕ್ಷ್ಮೀಸ್ವರೂಪಾಣಿ ಲಯೇ ನ್ಯಾಸೇ ಕ್ರಮಸ್ತ್ವಯಮ್

ಶಕ್ತಿಃ ಪ್ರತಿಷ್ಠಾ ಸಂವಿಚ್ಚ ಸ್ಫೂರ್ತಿಃ ಸ್ಯಾತ್ತದನಂತರಮ್

ಪ್ರವೃತ್ತಿಶ್ಚ ಕಲಾ ವಿದ್ಯಾ ಮತಿರ್ನ್ನಿಯತಿರೇವ ಚ

ಮಾಯಾ ಕಾಲಶ್ಚ ತತ್ವಾನಿ ಹೃದಯೇ ಸಂನ್ಯಸೇತ್ಕ್ರಮಾತ್

ಪೃಥಿವೀಜಲತೇಜಾಂಸಿ ವಾಯುರಾಕಾಶ ಏವ ಚ

ಉಪಸ್ಥಪಾಯುಚರಣಾ ಹಸ್ತೋ ವಾಕ್ಚೇತಿ ಪಂಚಕಮ್

ಘ್ರಾಣಂ ರಸನನೇತ್ರೇ ಚ ತ್ವಕ್ ಶ್ರೋತ್ರಂ ಚೇತಿ ಪಂಚಕಮ್

ಮನಸ್ತತ್ವಮಹಂಕಾರೋ ಮಹಾನವ್ಯಕ್ತಮೇವ ಚ

ಪುರುಷಶ್ಚೇತಿ ತತ್ವಾನಿ ಸ್ಥಿತಿನ್ಯಾಸೇ ಕ್ರಮಸ್ತ್ವಯಮ್

ದೇಹದಲ್ಲಿ ಯಾವ ಸ್ಥಾನದಿಂದ ನ್ಯಾಸ ಆರಂಭಿಸಬೇಕು, ಎಲ್ಲಿಂದ ಎಲ್ಲಿಯವರೆಗೆ ಎನ್ನುವುದರಲ್ಲಷ್ಟೆ ವ್ಯತ್ಯಾಸ ಹೊರತು ಮಂತ್ರಗಳಲ್ಲಿ ಯಾ ಸ್ಥಾನಗಳಲ್ಲಿ ವ್ಯತ್ಯಾಸವಿರದು. ತತ್ವಗಳಿಗೂ ಇಲ್ಲಿ ಹೇಳಿದ ಸ್ಥಾನಗಳಿಗೂ ಏನು ಸಂಬಂಧ ಎಂದು ದೊಡ್ಡ ಪ್ರಶ್ನೆ ಸಾಧಕರಿಗೆ ಮೂಡದಿರದು. ಸಂಹಿತೆಗಳು ಆಯಾ ತತ್ವಗಳಿಗೆ ಆಯಾ ಸ್ಥಾನಗಳನ್ನೆ ಹೇಳಿದ್ದುಂಟು. ಆದರೆ ಅಲ್ಲಿಯೂ



ಮನಸ್, ಜೀವ, ಪಂಚಭೂತಗಳು ಮುಂತಾದ ತತ್ವಗಳಿಗೆ ಸಂಬಂಧಪಟ್ಟ ಸ್ಥಾನವನ್ನು ಹೇಳಲಾಗದೆ ಅವುಗಳೂ ಸೋತದ್ದುಂಟು. ಹೀಗಾಗಿ ನಮ್ಮ ದೇಹದಲ್ಲಿ ಎಲ್ಲೆಡೆ ಎಲ್ಲ ತತ್ವದೇವತೆಗಳೂ ತತ್ವಗಳೂ ಇವೆಯಾದ್ದರಿಂದ ಆ ದೇವತೆಗಳ ಸನ್ನಿಧಾನವನ್ನು ಚಿಂತಿಸುವುದೆ ನ್ಯಾಸದ ತಾತ್ಪರ್ಯವಾದ್ದರಿಂದ ಪ್ರಧಾನವಾಗಿ ಬೆರಳುಗಳು ದೇಹದ ಶಕ್ತಿಯನ್ನು ಸಮರ್ಥವಾಗಿ ಪ್ರವಹಿಸುವುದರಿಂದ ತತ್ವಗಳ ನ್ಯಾಸವನ್ನೂ ಈ ಸ್ಥಾನಗಳಲ್ಲಿ ಹೇಳಲಾಗಿದೆ. ಪುರುಷಸೂಕ್ತ ಹೇಳುವ (**ತ್ರಿಃಸಪ್ತ ಸಮಿಧಃ**) 21 ಸಮಿಧೆಗಳು ಎನ್ನುವಲ್ಲಿ ಶ್ರೀವಾದಿರಾಜರು 20 ಬೆರಳುಗಳು ಹಾಗೂ ನಡುದೇಹವೆ ಯಜ್ಞದ ಸಮಿಧೆಗಳು ಎಂದರ್ಥೈಸಿದ್ದಾರೆ. ಇದರಂತೆ ಸಾಧಕನ ಈ ದೇಹ ಜಪಯಜ್ಞದಲ್ಲಿ ಒಂದು ದೊಡ್ಡ ಸಮಿಧೆಯ ಕಟ್ಟಿನಂತೆ ಕೆಲಸಮಾಡಲಿದೆ. ಅದು ತತ್ವನ್ಯಾಸದಲ್ಲಿ ಸ್ಪಷ್ಟವಾಗಿದೆ.

ಪ್ರತಿಷ್ಠೆಯ ಸಂದರ್ಭಗಳಲ್ಲಿ ಹಲವು ಬಾರಿ ತತ್ವಮಂತ್ರಗಳಿಂದ ಹೋಮ ನಡೆಸಲ್ಪಡುವಂತೆ ನಿತ್ಯ ಜಪದಲ್ಲಿಯೂ ತತ್ವನ್ಯಾಸವನ್ನು ಅನೇಕ ಬಾರಿ ಮಾಡಲು ಆಚಾರ್ಯರು ಅಪ್ಪಣೆ ನೀಡಿದ್ದಾರೆ –

**ತ್ರಿಚತುಃಷಡ್ದಶಾವೃತ್ತಿಃ ಏತೇಷಾಂ ತು ಹುತಾದಿಕೇ**

ಎಲ್ಲ ತತ್ವಮಂತ್ರಗಳನ್ನೂ ಇತರ ಮಂತ್ರಗಳಂತೆ ಜಪಿಸಲೂ ಬರಲಿದೆ. ತತ್ವಮಂತ್ರಜಪವನ್ನು ಸಾಧನೆಯಾಗಿ ಮಾಡಲು ಬರಲಿದೆ. ಆಯಾ ದೇವತೆಯ ಅನುಗ್ರಹ ಸಂಪಾದನೆಗೆ ಒಂದೊಂದನ್ನೂ ತತ್ವಮಂತ್ರವನ್ನು ಜಪಿಸಲು ಬರುವುದು. ಉದಾಹರಣೆಗೆ ಕಣ್ಣು ಚೆನ್ನಾಗಿ ಕಾಣದವ ಪ್ರತಿನಿತ್ಯ ಕನಿಷ್ಠ ನೂರು ಬಾರಿ ಕಣ್ಣಿಗೆ ಸಂಬಂಧಪಟ್ಟ ಇಲ್ಲಿಯ ತತ್ವಮಂತ್ರವನ್ನು ಜಪಿಸಬೇಕು (ಪರಾಯ ಚಕ್ಷುರಾತ್ಮನೇ ನಮಃ). ಹೀಗೆ ಸಕಲೇಂದ್ರಿಯಗಳ ಸೌಷ್ಠವಕ್ಕೆ ನಿತ್ಯ ತತ್ವನ್ಯಾಸದ ಜೊತೆಗೆ ತತ್ವಜಪವನ್ನು ಆಚಾರ್ಯರು ಸೂಚಿಸಿದ್ದಾರೆ. ವಾಹನ ಅಪಘಾತ ಸಂಭವಿಸದಂತೆ ಶರೀರದ ಅಂಗಾಂಗಗಳಿಗೆ ಧಕ್ಕೆ ಬರದಂತೆ ಮಾಡುವಲ್ಲಿ ಇದು ಹೆಚ್ಚು ಪ್ರಯೋಜನಕಾರಿಯೆನಿಸಿದೆ. ಅಕಾಲದಲ್ಲಿ ಯಾವುದೇ ಇಂದ್ರಿಯಗಳ ಬಲ ಕುಗ್ಗದಂತಾಗಲು ಈ ತತ್ವನ್ಯಾಸ ಮಹತ್ತಮಸ್ಥಾನವನ್ನು ಪಡೆದಿದೆ. ಇದಕ್ಕಾಗಿ



ಪ್ರತಿನಿತ್ಯ ತತ್ವನ್ಯಾಸವನ್ನು ಜಪದ ಆರಂಭದಲ್ಲಿ ಮತ್ತು ಕೊನೆಯಲ್ಲಿ ಹಾಗೆಯೆ ಪೂಜಾಕಾಲದಲ್ಲಿ ತನಗೆ ಹಾಗೂ ದೇವರಿಗೆ ನಡೆಸಬೇಕೆಂದು ತಂತ್ರಗಳು ಮತ್ತೆ ಮತ್ತೆ ತಿಳಿಸಿವೆ. **ಯೋಗದೀಪಿಕಾ**ದಲ್ಲಿ ಭಕ್ತಿ ಜ್ಞಾನಸಂಪಾದನೆಗೆ ಈ ತತ್ವನ್ಯಾಸ ಸಾಧಕ ಎಂದು ತಿಳಿಸಲಾಗಿದೆ.

**ತಥಾ ಬ್ರಹ್ಮಾದಿವಾಗಾದ್ಯಾಃ ಜೀವಾದೀನಾಂ ನಿಯಾಮಕಾಃ**

**ತಾತ್ವಿಕಾ ಸ್ಥಾಪಿತಾ ದೇಹೇ ಭಕ್ತಿದಾ ಜ್ಞಾನದಾ ನೃಣಾಮ್**

**ಅಗ್ನಿಪುರಾಣ**ದಲ್ಲಿಯೂ ವರ್ಗಾಕ್ಷರಗಳೊಡನೆ ತತ್ವಚಿಂತನೆಯನ್ನು ಮಾಡಲಾಗಿದೆ. ದೇವ ಮತ್ತು ದೇಹದಲ್ಲಿ ನ್ಯಾಸ ಮಾಡುವಂತೆ ಹೇಳಲಾಗಿದೆ –

**ಯಥಾ ದೇವೇ ತಥಾ ದೇಹೇ ತತ್ವಾನಿ ವಿನಿಯೋಜಯೇತ್**

ಕೆಲವು ಸಂಹಿತೆಗಳು ಆರಂಭದಲ್ಲಿಯೂ ನಮಃ ಪದವನ್ನು ಸೇರಿಸಿ ತತ್ವಮಂತ್ರಗಳನ್ನು ಬಣ್ಣಿಸಿವೆ. ಜೊತೆಗೆ ವ್ಯಂಜನಾಕ್ಷರಗಳನ್ನೂ ಮೊದಲಿಗೆ ಸಿಕ್ಕಿಸಿ ಹೇಳಿವೆ. ತತ್ವಗಳ ವಿವಿಧ ಬಣ್ಣಗಳನ್ನೂ ಕಡೆಗೆ ತಿಳಿಸಿವೆ. ಸ್ಥಾನಗಳಲ್ಲೂ ವ್ಯತ್ಯಾಸ ಇಲ್ಲಿವೆ. 10 ನಾಡೀತತ್ವಗಳನ್ನು ಸೇರಿಸಿ ಭಗವತ್ತತ್ವವನ್ನು ಪರಿಗಣಿಸಿ ಸಂಹಿತಾಗಳು 26 ತತ್ವಗಳನ್ನು ಮುಖ್ಯವಾಗಿ ಪ್ರತಿಪಾದಿಸಿವೆ. ಹೀಗೆ ವಿಸ್ತಾರವಾದ ತತ್ವನ್ಯಾಸಗಳು ಸಂಹಿತಾಗಳಲ್ಲಿ ಕಂಡುಬರುವವು. ಇದರ ಬಗ್ಗೆ ತತ್ವಕಣಿಕಾದಲ್ಲಿಯೂ ಸ್ವಲ್ಪ ಪ್ರಮಾಣಗಳು ಸಿಗುವವು.

(ಅದರೆಲ್ಲದರ ಸ್ಪಷ್ಟ ಸಂಗ್ರಹವನ್ನಿಲ್ಲಿ ಚಿಂತಕಸಾಧಕರಿಗಾಗಿ ನೀಡಲಾಗಿದೆ. ಇಲ್ಲಿ 24 ಕೇಶವಾದಿ ರೂಪಗಳ ಜತೆಗೆ ಮೂಲರೂಪದ ನಾರಾಯಣನನ್ನೂ ಸೇರಿಸಲಾಗಿದೆ. ಮತ್ತೆ ದಶಾವತಾರವನ್ನು ಚಿತ್ರಿಸಲಾಗಿದೆ, ಕಡೆಗೆ ಮೋಕ್ಷಪ್ರದ ವಾಸುದೇವ ರೂಪವನ್ನು ಧ್ಯಾನಿಸಲಾಗಿದೆ. ಕಡೆಗೆ **ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ । ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ** ಎನ್ನುವಂತೆ ಈಶ್ವರತತ್ವವಾಗಿ ಸ್ವರಾಕ್ಷರಗಳೆಲ್ಲದರ ಮೂಲವಾಗಿ ಅಕಾರವನ್ನು ಬೀಜವಾಗಿ ಸೇರಿಸಲಾಗಿದೆ. ಸಹಜವಾಗಿ ಅಕಾರವೆ ಎಲ್ಲ ಅಕ್ಷರಗಳ ಮೂಲ. ಅದಕೆಂದೇ ಈಶ್ವರತತ್ವದಲ್ಲಿ ಅದನ್ನು ಸಂಗ್ರಹಿಸಿದ್ದು. ಇತರ ಅಕ್ಷರಗಳ



ತತ್ವಚಿಂತನೆಗಳಿಗೆ ಪದ್ಮಪುರಾಣದಲ್ಲಿದೆ ಮೂಲ –

ಭೂತಾನಿ ಚ ಕವರ್ಗ್ಗೇಣ ಚವರ್ಗ್ಗೇಣೇಂದ್ರಿಯಾಣಿ ಚ

ಟವರ್ಗ್ಗೇಣ ತವರ್ಗ್ಗೇಣ ಜ್ಞಾನಗಂಧಾದಯಸ್ತಥಾ

ಮನಃ ಪಕಾರೇಣೈವೋಕ್ತಂ ಫಕಾರೇಣ ತ್ವಹಂಕೃತಿಃ

ಬಕಾರೇಣ ಭಕಾರೇಣ ಮಹಾನ್ ಪ್ರಕೃತಿರುಚ್ಯತೇ

ಆತ್ಮಾ ಸ ತು ಮಕಾರಃ ಸ್ಯಾತ್ ಪಂಚವಿಂಶಃ ಪ್ರಕೀರ್ತ್ತಿತಃ

ಅಕ್ಷರ ತತ್ವ ವರ್ಣ ಶ್ರೀಪುಂರೂಪ ಸ್ಥಾನಗಳು ಇಲ್ಲಿವೆ

1. ಓಂ ಕಂ ನಮಃ ಪರಾಯ ಆಕಾಶತತ್ವಾತ್ಮನೇ ಅಂಜನವರ್ಣಾಯ
   ಶ್ರೀ ಕೇಶವಾಯ ನಮಃ (ಮೂಗಿನಿಂದ ತಲೆಯವರೆಗೆ)
2. ಓಂ ಖಂ ನಮಃ ಪರಾಯ ವಾಯುತತ್ವಾತ್ಮನೇ ಧೂಮ್ರವರ್ಣಾಯ
   ಲಕ್ಷ್ಮೀ ನಾರಾಯಣಾಯ ನಮಃ (ಹೊಕ್ಕುಳಿನಿಂದ ಮೂಗಿನವರೆಗೆ)
3. ಓಂ ಗಂ ನಮಃ ಪರಾಯ ವಹ್ನಿತತ್ವಾತ್ವನೇ ಪಾಟಲವರ್ಣಾಯ
   ಕಮಲಾ ಮಾಧವಾಯ ನಮಃ (ಗುಹ್ಯದಿಂದ ಹೊಕ್ಕುಳಿನವರೆಗೆ)
4. ಓಂ ಘಂ ನಮಃ ಪರಾಯ ಅಪ್‌ತತ್ವಾತ್ಮನೇ ಶ್ವೇತವರ್ಣಾಯ
   ಪದ್ಮಾ ಗೋವಿಂದಾಯ ನಮಃ (ಮೊಣಕಾಲ್ಗಂಟಿನಿಂದ ಗುಹ್ಯದವರೆಗೆ)
5. ಓಂ ಙಂ ನಮಃ ಪರಾಯ ಪೃಥ್ವೀತತ್ವಾತ್ಮನೇ ಪೀತವರ್ಣಾಯ
   ಪದ್ಮಿನೀ ವಿಷ್ಣವೇ ನಮಃ (ಪಾದದಿಂದ ಕಾಲ್ಗಂಟಿನವರೆಗೆ)
6. ಓಂ ಚಂ ನಮಃ ಪರಾಯ ಉಪಸ್ಥತತ್ವಾತ್ಮನೇ ಹೇಮವರ್ಣಾಯ
   ಸತ್ಯಾ ಪ್ರದ್ಯುಮ್ನಾಯ ನಮಃ (ಗುಹ್ಯದಲ್ಲಿ)
7. ಓಂ ಛಂ ನಮಃ ಪರಾಯ ಪಾಯುತತ್ವಾತ್ಮನೇ ರಕ್ತವರ್ಣಾಯ
   ಹರಿಣೀ ವಾಸುದೇವಾಯ ನಮಃ (ಗುದದಲ್ಲಿ)
8. ಓಂ ಜಂ ನಮಃ ಪರಾಯ ಪಾದತತ್ವಾತ್ಮನೇ ರಕ್ತವರ್ಣಾಯ
   ಹಿರಣ್ಯಾ ಸಂಕರ್ಷಣಾಯ ನಮಃ (ಕಾಲುಗಳಲ್ಲಿ)
9. ಓಂ ಝಂ ನಮಃ ಪರಾಯ ಪಾಣಿತತ್ವಾತ್ಮನೇ ರಕ್ತವರ್ಣಾಯ



ಇಂದಿರಾ ದಾಮೋದರಾಯ ನಮಃ (ಕೈಗಳಲ್ಲಿ)

10. ಓಂ ಞಂ ನಮಃ ಪರಾಯ ವಾಕ್‌ತತ್ವಾತ್ಮನೇ ಸಿತವರ್ಣಾಯ

ಯಜ್ಞಾ ಪದ್ಮನಾಭಾಯ ನಮಃ (ಮಾತಿನಲ್ಲಿ)

11. ಓಂ ಟಂ ನಮಃ ಪರಾಯ ಘ್ರಾಣತತ್ವಾತ್ಮನೇ ಅಸಿತವರ್ಣಾಯ

ಸುಗಂಧಾ ಅಚ್ಯುತಾಯ ನಮಃ (ಮೂಗಿನಲ್ಲಿ)

12. ಓಂ ಠಂ ನಮಃ ಪರಾಯ ಜಿಹ್ವಾತತ್ವಾತ್ಮನೇ ಗೌರವರ್ಣಾಯ

ಸುಖಾ ನೃಸಿಂಹಾಯ ನಮಃ (ನಾಲಗೆಯಲ್ಲಿ)

13. ಓಂ ಡಂ ನಮಃ ಪರಾಯ ನೇತ್ರತತ್ವಾತ್ಮನೇ ಕೃಷ್ಣವರ್ಣಾಯ

ತ್ರಯೀ ಅಧೋಕ್ಷಜಾಯ ನಮಃ (ಕಣ್ಣಿನಲ್ಲಿ)

14. ಓಂ ಢಂ ನಮಃ ಪರಾಯ ತ್ವಕ್‌ತತ್ವಾತ್ಮನೇ ಹೇಮವರ್ಣಾಯ

ನಂದಾ ಪುರುಷೋತ್ತಮಾಯ ನಮಃ (ಚರ್ಮದಲ್ಲಿ)

15. ಓಂ ಣಂ ನಮಃ ಪರಾಯ ಶ್ರೋತ್ರತತ್ವಾತ್ಮನೇ ಪಾಟಲವರ್ಣಾಯ

ನಿತ್ಯಾ ಅನಿರುದ್ಧಾಯ ನಮಃ (ಕಿವಿಗಳಲ್ಲಿ)

16. ಓಂ ತಂ ನಮಃ ಪರಾಯ ಗಂಧತತ್ವಾತ್ಮನೇ ಅಸಿತವರ್ಣಾಯ

ವೃದ್ಧಿ ಹೃಷೀಕೇಶಾಯ ನಮಃ (ಮೂಗಿನಲ್ಲಿ)

17. ಓಂ ಥಂ ನಮಃ ಪರಾಯ ರಸತತ್ವಾತ್ಮನೇ ಪಾಂಡುರವರ್ಣಾಯ

ಧನ್ಯಾ ಶ್ರೀಧರಾಯ ನಮಃ (ನಾಲಗೆಯಲ್ಲಿ)

18. ಓಂ ದಂ ನಮಃ ಪರಾಯ ರೂಪತತ್ವಾತ್ಮನೇ ತೇಜೋವರ್ಣಾಯ

ವೃಷಾಕಪಿ ವಾಮನಾಯ ನಮಃ (ಕಣ್ಣುಗಳಲ್ಲಿ)

19. ಓಂ ಧಂ ನಮಃ ಪರಾಯ ಸ್ಪರ್ಶತತ್ವಾತ್ಮನೇ ಲೋಹಿತವರ್ಣಾಯ

ರಮಾ ತ್ರಿವಿಕ್ರಮಾಯ ನಮಃ (ಚರ್ಮದಲ್ಲಿ)

20. ಓಂ ನಂ ನಮಃ ಪರಾಯ ಶಬ್ದತತ್ವಾತ್ಮನೇ ಶುಕ್ಲವರ್ಣಾಯ

ಕಮಲಾಲಯಾ ಮಧುಸೂದನಾಯ ನಮಃ (ಕಿವಿಗಳಲ್ಲಿ)

21. ಓಂ ಪಂ ನಮಃ ಪರಾಯ ಮನಸ್ತತ್ವಾತ್ಮನೇ ಸಿತಾಸಿತವರ್ಣಾಯ



ಸುಂದರೀ ಜನಾರ್ದನಾಯ ನಮಃ (ಎದೆಯಲ್ಲಿ)

22. ಓಂ ಫಂ ನಮಃ ಪರಾಯ ಅಹಂಕಾರತತ್ವಾತ್ಮನೇ ಪಾಟಲವರ್ಣಾಯ
ಸುಶೀಲಾ ಹರಯೇ ನಮಃ (ಎದೆಯಲ್ಲಿ)

23. ಓಂ ಬಂ ನಮಃ ಪರಾಯ ಮಹತ್ತತ್ವಾತ್ಮನೇ ಸ್ಫಟಿಕವರ್ಣಾಯ
ವಿದ್ಯಾ ಉಪೇಂದ್ರಾಯ ನಮಃ (ಎದೆಯಲ್ಲಿ)

24. ಓಂ ಭಂ ನಮಃ ಪರಾಯ ಪ್ರಕೃತಿತತ್ವಾತ್ಮನೇ ಅಸಿತವರ್ಣಾಯ
ಸುಲಕ್ಷಣಾ ಕೃಷ್ಣಾಯ ನಮಃ (ಎದೆಯಲ್ಲಿ)

25. ಓಂ ಮಂ ನಮಃ ಪರಾಯ ಜೀವತತ್ವಾತ್ಮನೇ ಸ್ಫಟಿಕವರ್ಣಾಯ
ಲಕ್ಷ್ಮೀ ನಾರಾಯಣಾಯ ನಮಃ (ಎದೆಯಲ್ಲಿ)

26. ಓಂ ಯಂ ನಮಃ ಪರಾಯ ಪ್ರಾಣತತ್ವಾತ್ಮನೇ ರಾಜತವರ್ಣಾಯ
ವೇದಾ ಮತ್ಸ್ಯಾಯ ನಮಃ (ತಲೆ–ಸುಷುಮ್ನಾನಾಡಿಯಲ್ಲಿ)

27. ಓಂ ರಂ ನಮಃ ಪರಾಯ ಅಪಾನತತ್ವಾತ್ಮನೇ ಶ್ಯಾಮವರ್ಣಾಯ
ವೇದವತೀ ಕೂರ್ಮಾಯ ನಮಃ (ಎಡಮೂಗು–ಇಳಾನಾಡಿ)

28. ಓಂ ಲಂ ನಮಃ ಪರಾಯ ವ್ಯಾನತತ್ವಾತ್ಮನೇ ಅಸಿತವರ್ಣಾಯ
ಧಾತ್ರೀ ವರಾಹಾಯ ನಮಃ (ಬಲಮೂಗು–ಪಿಂಗಳಾ)

29. ಓಂ ವಂ ನಮಃ ಪರಾಯ ಉದಾನತತ್ವಾತ್ಮನೇ ಶ್ವೇತವರ್ಣಾಯ
ಮಹಾಲಕ್ಷ್ಮೀ ನರಸಿಂಹಾಯ ನಮಃ (ಎಡಕಣ್ಣು–ಗಂಧಿನೀ)

30. ಓಂ ಶಂ ನಮಃ ಪರಾಯ ಸಮಾನತತ್ವಾತ್ಮನೇ ಹೇಮವರ್ಣಾಯ
ಸುಖಾಲಯಾ ವಾಮನಾಯ ನಮಃ (ಬಲಕಣ್ಣು–ಹಸ್ತಿಜಿಹ್ವಾ)

31. ಓಂ ಷಂ ನಮಃ ಪರಾಯ ನಾಗತತ್ವಾತ್ಮನೇ ಪೀತವರ್ಣಾಯ
ಹರಿಣೀ ಪರಶುರಾಮಾಯ ನಮಃ (ಎಡಕಿವಿ–ಪೂಷಾ)

32. ಓಂ ಸಂ ನಮಃ ಪರಾಯ ಕೂರ್ಮತತ್ವಾತ್ಮನೇ ಶ್ಯಾಮವರ್ಣಾಯ
ಸೀತಾ ರಾಮಾಯ ನಮಃ (ಬಲಕಿವಿ–ಯಶಸ್ವಿನೀ)

33. ಓಂ ಹಂ ನಮಃ ಪರಾಯ ಕೃಕರತತ್ವಾತ್ಮನೇ ಧೂಮ್ರವರ್ಣಾಯ



ರುಗ್ಮಿಣೀ ಕೃಷ್ಣಾಯ ನಮಃ (ಗುದ-ಅಲಂಬುಸಾ)

34. ಓಂ ಳಂ ನಮಃ ಪರಾಯ ದೇವದತ್ತತತ್ವಾತ್ಮನೇ ನೀಲವರ್ಣ್ಣಾಯ

ರೇವತೀ ಬುದ್ಧಾಯ ನಮಃ (ಗುಹ್ಯ-ಕುಹೂ)

35. ಓಂ ಕ್ಷಂ ನಮಃ ಪರಾಯ ಧನಂಜಯತತ್ವಾತ್ಮನೇ ಶ್ವೇತವರ್ಣ್ಣಾಯ

ಪ್ರಭಾ ಕಲ್ಕಿನೇ ನಮಃ (ಕಾಲು-ಕೇಶಿನೀ)

36. ಓಂ ಅಂ ನಮಃ ಪರಾಯ ಈಶ್ವರತತ್ವಾತ್ಮನೇ ರವಿವರ್ಣ್ಣಾಯ

ಮಾಯಾ ವಾಸುದೇವಾಯ ನಮಃ (ಭ್ರೂಮಧ್ಯದಲ್ಲಿ)

ಇಲ್ಲ ಕೇಶವಾದಿಗಳ ಮತ್ಸ್ಯಾದಿಗಳ ಭಾರ್ಯಾರೂಪಗಳನ್ನು ಸೇರಿಸಿ ತತ್ವಮಂತ್ರಗಳನ್ನು ಚಿಂತನೆ ಮಾಡಲಾಗಿದೆ. ಭಾರ್ಯಾರೂಪಗಳ ಸಂಗ್ರಹ ಶ್ಲೋಕಗಳನ್ನು ವೃದ್ಧಹಾರೀತಸ್ಮೃತಿಯಲ್ಲಿ ನೀಡಲಾಗಿದೆ –

ಶ್ರೀರ್ಲಕ್ಷ್ಮೀಃ ಕಮಲಾ ಪದ್ಮಾ ಪದ್ಮಿನೀ ಕಮಲಾಲಯಾ

ರಮಾ ವೃಷಾಕಪಿರ್ಧನ್ಯಾ ವೃದ್ಧಿರ್ಯಜ್ಞಾ ತಥೇಂದಿರಾ

ಶಕ್ತಯಃ ಕೇಶವಾದೀನಾಂ ಸಂಪ್ರೋಕ್ತಾಃ ಪರಮೇ ಪದೇ

ಹಿರಣ್ಯಾ ಹರಿಣೀ ಸತ್ಯಾ ನಿತ್ಯಾ ನಂದಾ ತ್ರಯೀ ಸುಖಾ

ಸುಗಂಧಾ ಸುಂದರೀ ವಿದ್ಯಾ ಸುಶೀಲಾ ಚ ಸುಲಕ್ಷಣಾ

ಸಂಕರ್ಷಣಾದಿಮೂರ್ತೀನಾಂ ಶಕ್ತಯಃ ಸಂಪ್ರಕೀರ್ತ್ತಿತಾಃ

ವೇದಾ ವೇದವತೀ ಧಾತ್ರೀ ಮಹಾಲಕ್ಷ್ಮೀಃ ಸುಖಾಲಯಾ

ತಥೈವ ಹರಿಣೀ ಸೀತಾ ರುಗ್ಮಿಣೀ ರೇವತೀ ಪ್ರಭಾ

ಮತ್ಸ್ಯಕೂರ್ಮಾದಿಮೂರ್ತೀನಾಂ ಶಕ್ತಯಃ ಸಂಪ್ರಕೀರ್ತ್ತಿತಾಃ

25 ವಾಯುರೂಪಗಳನ್ನು ಮೊದಲೆ ತಿಳಿಸಲಾಗಿದೆ. ಮತ್ತೆ ಹತ್ತು ವಾಯುರೂಪಗಳು ಅವರ್ಗೀಯ ವ್ಯಂಜನದಲ್ಲಿರುವವುಗಳು ಆಯಾ ತತ್ವಗಳ ನಾಮಗಳಲ್ಲೆ ಇರುವವುಗಳು ಪ್ರಾಣಾದಿ ಪಂಚರೂಪಗಳು ಮತ್ತು ನಾಗಾದಿ ಪಂಚರೂಪಗಳು. ನಾಲ್ಕನೆಯ ಹಂತದಲ್ಲಿ ಈ ತತ್ವಗಳಿಗೆ ರುದ್ರೇಂದ್ರಚಂದ್ರಾದಿ ದೇವತೆಗಳು ಅಭಿಮಾನಿಗಳಾಗಿ ಚಿಂತನೆಗೆ ಬರುವರು. ಐದನೆಯ ಹಂತದಲ್ಲಿ



ಅವಾಂತರ ಅಭಿಮಾನಿಗಳು ಅರ್ಥವಾಗುವರು. ಉದಾಹರಣೆಗೆ – ರೂಪದಲ್ಲಿ ನಾಲ್ಕು ಬಣ್ಣಗಳಿವೆ. ರಸದಲ್ಲಿ ಆರು ರಸಗಳಿವೆ. ಆಕಾಶದಲ್ಲಿ ಕ್ಷುದ್ರ ಆಕಾಶಗಳಿವೆ. ಹೀಗೆ ಅವಾಂತರೇಶರು ನಮಗೆ ಚಿಂತನೆಗೆ ನಿಲುಕುವರು. ಹೀಗೆ ತತ್ವಗಳು ನೂರಾರುಗಳಿದ್ದು ನಮ್ಮ ಚಿಂತನೆಗೆ ನಿಲುಕದಷ್ಟು ದೇವತೆಗಳಿಂದ ನಿಯಮಿಸಲ್ಪಟ್ಟು ಅನಂತಭಗವದ್ರೂಪಗಳಿಂದ ತುಂಬಿದ್ದು ನಮ್ಮ ಸಾಧನೆಯಲ್ಲಿ ಎತ್ತರವನ್ನು ಕರುಣಿಸುವಲ್ಲಿ ಸಮರ್ಥವಾಗಿವೆ. ದೇಹಕ್ಕೆ ಸಂಬಂಧಿಸಿದಂತೆ 24 ತತ್ವಗಳ ಜಯವೆ ತತ್ವನ್ಯಾಸದ ಮುಖ್ಯ ಫಲ. ಪ್ರಾಣನ ಅನುಗ್ರಹಕ್ಕೆ ಪಾತ್ರನಾಗುವುದೆ ಹೇಗೆ ಪ್ರಾಣಜಯ ಎನ್ನುವುದು ಪ್ರಾಣಾಯಾಮದಿಂದ ಸಿದ್ಧಿಸುವುದೋ ಹಾಗೆ ತತ್ವಾಭಿಮಾನಿಗಳೆಲ್ಲರ ಅನುಗ್ರಹಪ್ರಾಪ್ತಿಯೇ ತತ್ವನ್ಯಾಸದ ಪ್ರಯೋಜನವಾಗಿದೆ.

ಇದೀಗ ಎಲ್ಲೆಡೆ ತತ್ವಮಂತ್ರಗಳನ್ನು ಅಭಿಮಾನಿದೇವತಾನಾಮದ ಜತೆಗೆ ಮುದ್ರಿಸಿದ್ದಾರೆ. ಇದರಿಂದ ತತ್ವಮಂತ್ರಗಳ ಸ್ವರೂಪ ಹಾನಿಯಾಗುವುದು. ಚಿಂತನೆಗಾಗಿಯಷ್ಟೆ ದೇವತೆಗಳನ್ನು ತಿಳಿಸಿದ್ದು ಹೊರತು ತತ್ವಮಂತ್ರಗಳೊಡನೆ ಸೇರಿಸಲಿಕ್ಕಿಲ್ಲ. ಒಂದೊಮ್ಮೆ ಸೇರಿಸಲಿದ್ದರೆ ಎಲ್ಲ ದೇವತೆಗಳನ್ನೂ ಸೇರಿಸ ಬೇಕಾಗುವುದು. ಹಾಗಾಗಿ ಆಚಾರ್ಯರು ತಿಳಿಸಿಕೊಟ್ಟಂತೆ ತತ್ವಮಂತ್ರಗಳು ಹಾಗೂ ನ್ಯಾಸಸ್ಥಾನಗಳನ್ನು ಸೃಷ್ಟಿಕ್ರಮದಲ್ಲಿ ಇಲ್ಲಿ ಪಟ್ಟಿಮಾಡಲಾಗಿದೆ. ಈ ಕ್ರಮದಿಂದ ಎಲ್ಲರೂ ತತ್ವನ್ಯಾಸವನ್ನು ಮಾಡಬಹುದಾಗಿದೆ.

**ತಂತ್ರಸಾರಸಂಗ್ರಹದಲ್ಲಿ ಆಚಾರ್ಯಮಧ್ವರು ತಿಳಿಸಿದಂತೆ**

**ತತ್ವನ್ಯಾಸದ ಋಷ್ಯಾದಿಗಳು**

**ತತ್ವಮಂತ್ರಾಣಾಂ ಅಂತರ್ಯಾಮೀ ಋಷಿಃ, ದೈವೀ ಗಾಯತ್ರೀ ಛಂದಃ**

**ಶಕ್ತ್ಯಾದಿತತ್ವರೂಪೀ ಪುರುಷಾದಿತತ್ವಾಂತರ್ಯಾಮೀ ನಾರಾಯಣೋ ದೇವತಾ**

**ಓಂ ಕೃದ್ಧೋಲ್ಕಾಯ ಹೃದಯಾಯ ನಮಃ, ಓಂ ಮಹೋಲ್ಕಾಯ ಶಿರಸೇ ಸ್ವಾಹಾ**

**ಓಂ ವೀರೋಲ್ಕಾಯ ಶಿಖಾಯೈ ವಷಟ್, ಓಂ ದ್ಯುಲ್ಕಾಯ ಕವಚಾಯ ಹುಮ್**

**ಓಂ ಸಹಸ್ರೋಲ್ಕಾಯ ಅಸ್ತ್ರಾಯ ಫಟ್**

**ಉದ್ಯದ್ಭಾಸ್ವತ್ಸಮಾಭಾಸಃ ಚಿದಾನಂದೈಕದೇಹವಾನ್**



ಚಕ್ರಶಂಖಗದಾಪದ್ಮಧರೋ ಧ್ಯೇಯೋಽಹಮೀಶ್ವರಃ
ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿಗಣಮಧ್ಯಗಃ
ಬ್ರಹ್ಮವಾಯುಶಿವಾಹೀಶವಿಪೈಃ ಶಕ್ರಾದಿಕೈರಪಿ
ಸೇವ್ಯಮಾನೋಽಧಿಕಂ ಭಕ್ತ್ಯಾ ನಿತ್ಯನಿಃಶೇಷಶಕ್ತಿಮಾನ್
ಪ್ರಧಾನೋಪಮವರ್ಣಾನಿ ದ್ವಿಭುಜಾನ್ಯಶೇಷತಃ
ಕೃತಾಂಜಲಿಪುಟಾನ್ಯೇವ ಪ್ರಧಾನಂ ತಂ ಹರಿಂ ಪ್ರತಿ

ಓಂ ಪರಾಯ ಶಕ್ತ್ಯಾತ್ಮನೇ ನಮಃ ಓಮ್ ಹೃದಯ
ಓಂ ಪರಾಯ ಪ್ರತಿಷ್ಠಾತ್ಮನೇ ನಮಃ ಓಮ್ ,,
ಓಂ ಪರಾಯ ಸಂವಿದಾತ್ಮನೇ ನಮಃ ಓಮ್ ,,
ಓಂ ಪರಾಯ ಸ್ಫೂರ್ತ್ಯಾತ್ಮನೇ ನಮಃ ಓಮ್ ,,
ಓಂ ಪರಾಯ ಪ್ರವೃತ್ತ್ಯಾತ್ಮನೇ ನಮಃ ಓಮ್ ,,
ಓಂ ಪರಾಯ ಕಲಾತ್ಮನೇ ನಮಃ ಓಮ್ ,,
ಓಂ ಪರಾಯ ವಿದ್ಯಾತ್ಮನೇ ನಮಃ ಓಮ್ ,,
ಓಂ ಪರಾಯ ಮತ್ಯಾತ್ಮನೇ ನಮಃ ಓಮ್ ,,
ಓಂ ಪರಾಯ ನಿಯತ್ಯಾತ್ಮನೇ ನಮಃ ಓಮ್ ,,
ಓಂ ಪರಾಯ ಮಾಯಾತ್ಮನೇ ನಮಃ ಓಮ್ ,,
ಓಂ ಪರಾಯ ಕಾಲಾತ್ಮನೇ ನಮಃ ಓಮ್ ,,
ಓಂ ಪರಾಯ ಪುರುಷಾತ್ಮನೇ ನಮಃ ಓಮ್ ,,
ಓಂ ಪರಾಯ ಅವ್ಯಕ್ತಾತ್ಮನೇ ನಮಃ ಓಮ್ ಬಲಭುಜ
ಓಂ ಪರಾಯ ಮಹದಾತ್ಮನೇ ನಮಃ ಓಮ್ ಎಡಭುಜ
ಓಂ ಪರಾಯ ಅಹಂಕಾರಾತ್ಮನೇ ನಮಃ ಓಮ್ ಬಲತೊಡೆ
ಓಂ ಪರಾಯ ಮನ ಆತ್ಮನೇ ನಮಃ ಓಮ್ ಎಡತೊಡೆ
ಓಂ ಪರಾಯ ಶ್ರೋತ್ರಾತ್ಮನೇ ನಮಃ ಓಮ್ ಬಲಕೈ ಹೆಬ್ಬೆರಳು
ಓಂ ಪರಾಯ ತ್ವಗಾತ್ಮನೇ ನಮಃ ಓಮ್ ತೋರುಬೆರಳು



| | |
|---|---|
| ಓಂ ಪರಾಯ ಚಕ್ಷುರಾತ್ಮನೇ ನಮಃ ಓಮ್ | ನಡುಬೆರಳು |
| ಓಂ ಪರಾಯ ಜಿಹ್ವಾತ್ಮನೇ ನಮಃ ಓಮ್ | ಉಂಗುರಬೆರಳು |
| ಓಂ ಪರಾಯ ಘ್ರಾಣಾತ್ಮನೇ ನಮಃ ಓಮ್ | ಕಿರುಬೆರಳು |
| ಓಂ ಪರಾಯ ವಾಗಾತ್ಮನೇ ನಮಃ ಓಮ್ | ಎಡಕೈ ಹೆಬ್ಬೆರಳು |
| ಓಂ ಪರಾಯ ಪಾಣ್ಯಾತ್ಮನೇ ನಮಃ ಓಮ್ | ತೋರುಬೆರಳು |
| ಓಂ ಪರಾಯ ಪಾದಾತ್ಮನೇ ನಮಃ ಓಮ್ | ನಡುಬೆರಳು |
| ಓಂ ಪರಾಯ ಪಾಯ್ವಾತ್ಮನೇ ನಮಃ ಓಮ್ | ಉಂಗುರ ಬೆರಳು |
| ಓಂ ಪರಾಯ ಉಪಸ್ಥಾತ್ಮನೇ ನಮಃ ಓಮ್ | ಎಡಕೈ ಕಿರುಬೆರಳು |
| ಓಂ ಪರಾಯ ಶಬ್ದಾತ್ಮನೇ ನಮಃ ಓಮ್ | ಬಲಕಾಲ ಹೆಬ್ಬೆರಳು |
| ಓಂ ಪರಾಯ ಸ್ಪರ್ಶಾತ್ಮನೇ ನಮಃ ಓಮ್ | ಹತ್ತಿರದ ಬೆರಳು |
| ಓಂ ಪರಾಯ ರೂಪಾತ್ಮನೇ ನಮಃ ಓಮ್ | ನಡುಬೆರಳು |
| ಓಂ ಪರಾಯ ರಸಾತ್ಮನೇ ನಮಃ ಓಮ್ | ಅನಂತರದ ಬೆರಳು |
| ಓಂ ಪರಾಯ ಗಂಧಾತ್ಮನೇ ನಮಃ ಓಮ್ | ಕಿರುಬೆರಳು |
| ಓಂ ಪರಾಯ ಆಕಾಶಾತ್ಮನೇ ನಮಃ ಓಮ್ | ಎಡಕಾಲ ಹೆಬ್ಬೆರಳು |
| ಓಂ ಪರಾಯ ವಾಯ್ವಾತ್ಮನೇ ನಮಃ ಓಮ್ | ತೋರುಬೆರಳು |
| ಓಂ ಪರಾಯ ತೇಜ ಆತ್ಮನೇ ನಮಃ ಓಮ್ | ನಡುಬೆರಳು |
| ಓಂ ಪರಾಯ ಅಬಾತ್ಮನೇ ನಮಃ ಓಮ್ | ಉಂಗುರಬೆರಳು |
| ಓಂ ಪರಾಯ ಪೃಥಿವ್ಯಾತ್ಮನೇ ನಮಃ ಓಮ್ | ಕಿರುಬೆರಳು |

25 ತತ್ವಗಳಲ್ಲಿ ಸಮಗ್ರ ಪ್ರಪಂಚವು ಸಂಗೃಹೀತವಾಗುವುದು. ರೂಪಾತ್ಮಕ ಪ್ರಪಂಚ ಇಷ್ಟೆ. ಬುದ್ಧಿತತ್ವವನ್ನು ಮನಸ್ತತ್ವದಲ್ಲೇ ಸೇರಿಸಲಾಗಿದೆ. ಹೀಗೆ ಕೆಲವು ತತ್ವಗಳನ್ನು ಕೆಲವಲ್ಲಿ ಸೇರಿಸಿ ಪುರಾಣಗಳು ಸೃಷ್ಟಿಪ್ರಕರಣಗಳಲ್ಲಿ ತಿಳಿಸಿಕೊಟ್ಟಿವೆ. ಭಾಗವತಪುರಾಣದ ತತ್ವಸೃಷ್ಟಿಯ ಮಾತನ್ನಿಲ್ಲಿ ಸಂಗ್ರಹಿಸಲಾಗಿದೆ–

ಆದ್ಯಸ್ತು ಮಹತಃ ಸರ್ಗೋ ಗುಣವೈಷಮ್ಯಮಾತ್ಮನಃ

ದ್ವಿತೀಯಸ್ತ್ವಹಮೋ ಯತ್ರ ದ್ರವ್ಯಜ್ಞಾನಕ್ರಿಯಾದಯಃ



ಭೂತಸರ್ಗಸ್ತೃತೀಯಸ್ತು ತನ್ಮಾತ್ರಾದ್ರವ್ಯಶಕ್ತಿಮಾನ್

ಚತುರ್ಥ ಐಂದ್ರಿಯಃ ಸರ್ಗೋ ಯಸ್ತು ಜ್ಞಾನಕ್ರಿಯಾತ್ಮಕಃ

ವೈಕಾರಿಕೋ ದೇವಸರ್ಗಃ ಪಂಚಮೋ ಯನ್ಮಯಂ ಮನಃ

ವಾಯುಪುರಾಣದ ನಾಲ್ಕನೇ ಅಧ್ಯಾಯದಲ್ಲಿ ವಿಶೇಷವಾಗಿ ತತ್ವಗಳ ಸೃಷ್ಟಿಯನ್ನು ಗುಣಪರಿಮಾಣದ ಲೆಕ್ಕಾಚಾರದೊಂದಿಗೆ ಹೇಳಲಾಗಿದೆ.

ಮಹಾಭಾರತ ಶಾಂತಿಪರ್ವ ತತ್ವಸೃಷ್ಟಿಯನ್ನು ತತ್ವಾಭಿಮಾನಿಗಳನ್ನು ಸ್ಪಷ್ಟವಾಗಿ ಬಿತ್ತರಿಸಿದೆ –

ಹಿರಣ್ಯಗರ್ಭೋ ಭಗವಾನ್ ಏಷ ಬುದ್ಧಿರಿತಿ ಸ್ಮೃತಃ

ಮಹಾನಿತಿ ಚ ಯೋಗೇಷು ವಿರಿಂಚಿರಿತಿ ಚಾಪ್ಯಜಃ

ಸಾಂಖ್ಯೇ ಚ ಪಠ್ಯತೇ ಶಾಸ್ತ್ರೇ ನಾಮಭಿರ್ಬಹುಧಾತ್ಮಕಃ

ವಿಚಿತ್ರರೂಪೋ ವಿಶ್ವಾತ್ಮಾ ಏಕಾಕ್ಷರ ಇತಿ ಸ್ಮೃತಃ

ತಥೈವ ಬಹುರೂಪತ್ವಾತ್ ವಿಶ್ವರೂಪ ಇತಿ ಸ್ಮೃತಃ

ಏಷ ವೈ ವಿಕ್ರಿಯಾಪನ್ನಃ ಸೃಜತ್ಯಾತ್ಮಾನಮಾತ್ಮನಾ

ಅಹಂಕಾರಂ ಮಹಾತೇಜಾಃ ಪ್ರಜಾಪತಿರಹಂಕೃತಮ್

ಅವ್ಯಕ್ತಾದ್ವ್ಯಕ್ತಮಾಪನ್ನಂ ವಿದ್ಯಾಸರ್ಗಂ ವದಂತಿ ತಮ್

ಮಹಾಂತಂ ಚಾಪ್ಯಹಂಕಾರಂ ಅವಿದ್ಯಾಸರ್ಗಮೇವಚ

ಅಪರಶ್ಚ ಪರಶ್ಚೈವ ಸಮುತ್ಪನ್ನೌ ತಥೈಕತಃ

ವಿದ್ಯಾವಿದ್ಯೇತಿ ವಿಖ್ಯಾತೇ ಶ್ರುತಿಶಾಸ್ತ್ರಾರ್ಥಚಿಂತಕೈಃ

ಭೂತಸರ್ಗಮಹಂಕಾರಾತ್ ತೃತೀಯಂ ವಿದ್ಧಿ ಪಾರ್ಥಿವ

ಅಹಂಕಾರೇಷು ಸರ್ವೇಷು ಚತುರ್ಥಂ ವಿದ್ಧಿ ವೈಕೃತಮ್

ವಾಯುರ್ಜ್ಯೋತಿರಥಾಕಾಶಂ ಆಪೋಽಥ ಪೃಥಿವೀ ತಥಾ

ಶಬ್ದಃ ಸ್ಪರ್ಶಂ ಚ ರೂಪಂ ಚ ರಸೋ ಗಂಧಸ್ತಥೈವ ಚ

ಏವಂ ಯುಗಪದುತ್ಪನ್ನಂ ದಶವರ್ಗಮಸಂಶಯಮ್

ಪಂಚಮಂ ವಿದ್ಧಿ ರಾಜೇಂದ್ರ ಭೌತಿಕಂ ಸರ್ಗಮರ್ಥವತ್



ಶ್ರೋತ್ರಂ ತ್ವಕ್ಚಕ್ಷುಷೀ ಜಿಹ್ವಾ ಘ್ರಾಣಮೇವ ಚ ಪಂಚಮಮ್

ವಾಕ್ಚ ಹಸ್ತೌ ಚ ಪಾದೌ ಚ ಪಾಯುರ್ಮೇಢ್ರಂ ತಥೈವ ಚ

ಬುದ್ಧೀಂದ್ರಿಯಾಣಿ ಚೈತಾನಿ ತಥಾ ಕರ್ಮೇಂದ್ರಿಯಾಣಿ ಚ

ಸಂಭೂತಾನೀಹ ಯುಗಪತ್ ಮನಸಾ ಸಹ ಪಾರ್ಥಿವ

ಏಷಾ ತತ್ವಚತುರ್ವಿಂಶತ್ ಸರ್ವಾಕೃತಿಷು ವರ್ತ್ತತೇ

ಯಾಂ ಜ್ಞಾತ್ವಾ ನಾಭಿಶೋಚಂತಿ ಬ್ರಾಹ್ಮಣಾಸ್ತತ್ವದರ್ಶಿನಃ

ಏತದ್ದೇಹಂ ಸಮಾಖ್ಯಾತಂ ತ್ರೈಲೋಕ್ಯೇ ಸರ್ವದೇಹಿಷು

ವೇದಿತವ್ಯಂ ನರಶ್ರೇಷ್ಠ ಸದೇವನರದಾನವೇ

ಸದಂಶಕೀಟಮಶಕೇ ಸಪೂತಿಕ್ರಿಮಿಮೂಷಕೇ

ಹಸ್ತ್ಯಶ್ವಖರಶಾರ್ದೂಲೇ ಸವೃಕೇ ಗವಿ ಚೈವ ಹ

ಯಚ್ಚ ಮೂರ್ತ್ತಿಮಯಂ ಕಿಂಚಿತ್ ಸರ್ವತ್ರೈತನ್ನಿದರ್ಶನಮ್

ಜಲೇ ಭುವಿ ತಥಾಕಾಶೇ ನಾನ್ಯತ್ರೇತಿ ವಿನಿಶ್ಚಯಃ

ಸ್ಥಾನಂ ದೇಹವತಾಮಸ್ತಿ ಇತ್ಯೇವಮನುಶುಶ್ರುಮ

ಏತದ್ಧಿ ಕ್ಷರಮಿತ್ಯುಕ್ತಂ ಕ್ಷರತೀದಂ ಯಥಾ ಜಗತ್

ಪಂಚವಿಂಶತಿಮೋ ವಿಷ್ಣುಃ ನಿಸ್ತತ್ವಸ್ತತ್ವಸಂಜ್ಞಿತಃ

ತತ್ವಸಂಶ್ರಯಣಾದೇತತ್ ತತ್ವಮಾಹುರ್ಮ್ಮನೀಷಿಣಃ

ಸ ಏವ ಹೃದಿ ಸರ್ವಾಸು ಮೂರ್ತ್ತಿಷ್ವಾತ್ಮಾವತಿಷ್ಠತೇ

ಚೇತಯಂಶ್ಚೇತನಾನ್ನಿತ್ಯಂ ಸರ್ವಮೂರ್ತ್ತಿರಮೂರ್ತ್ತಿಮಾನ್

ಗೋಚರೇ ವರ್ತ್ತತೇ ನಿತ್ಯಂ ನಿರ್ಗ್ಗುಣೋ ಗುಣಸಂಜ್ಞಿತೇ

ತಮಸಾ ತಾಮಸಾನ್ಭೂತಾನ್ ವಿವಿಧಾನ್ ಪ್ರತಿಪದ್ಯತೇ

ರಜಸಾ ರಾಜಸಾಂಶ್ಚೈವ ಸಾತ್ವಿಕಾನ್ ಸತ್ವಸಂಶ್ರಯಾತ್

ತಾಮಸಾ ನಿರಯಂ ಯಾಂತಿ ರಾಜಸಾ ಮಾನುಷಾನಥ

ಸಾತ್ವಿಕಾ ದೇವಲೋಕಾಯ ಗಚ್ಛಂತಿ ಸುಖಭಾಗಿನಃ

ನಿಷ್ಕೈವಲ್ಯೇನ ಪಾಪೇನ ತಿರ್ಯಗ್ಯೋನಿಮವಾಪ್ನುಯಾತ್



ಪುಣ್ಯಪಾಪೇನ ಮಾನುಷ್ಯಂ ಪುಣ್ಯೈರ್ನೈಕೇನ ದೇವತಾಃ

ಏವಮವ್ಯಕ್ತವಿಷಯಂ ಕ್ಷರಮಾಹುರ್ಮ್ಮನೀಷಿಣಃ

ಪಂಚವಿಂಶತಿಮೋ ಯೋಽಯಂ ಜ್ಞಾನಾದೇವ ಪ್ರವರ್ತ್ತತೇ

ಆಶ್ವಮೇಧಿಕಪರ್ವದಲ್ಲಿ ತತ್ವಗಳ ರೂಪಕಾಂಶಗಳು ಚೆನ್ನಾಗಿವೆ –

ಶ್ರೋತ್ರಂ ತ್ವಕ್ ಚಕ್ಷುಷೀ ಜಿಹ್ವಾ ನಾಸಿಕಾ ಚರಣೌ ಕರೌ

ಉಪಸ್ಥಂ ಪಾಯುರಿತಿ ವಾಕ್ ಹೋತೃಣಿ ದಶ ಭಾಮಿನಿ

ಶಬ್ದಸ್ಪರ್ಶೌ ರೂಪರಸೌ ಗಂಧೋ ವಾಕ್ಯಂ ಕ್ರಿಯಾ ಗತಿಃ

ರೇತೋಮೂತ್ರಪುರೀಷಾಣಾಂ ತ್ಯಾಗೋ ದಶ ಹವೀಂಷಿ ಚ

ದಿಶೋ ವಾಯೂ ರವಿಶ್ಚಂದ್ರಃ ಪೃಥ್ವ್ಯಗ್ನೀ ವಿಷ್ಣುರೇವ ಚ

ಇಂದ್ರಃ ಪ್ರಜಾಪತಿರ್ಮ್ಮಿತ್ರಂ ಅಗ್ನಯೋ ದಶ ಭಾಮಿನಿ

ಗರುಡಪುರಾಣ ವಿಷ್ಣುಸಹಸ್ರನಾಮಸ್ತೋತ್ರದಲ್ಲಿ ತತ್ವಚಿಂತನೆಗಾಗಿ ಹೇಳಿದ ಮಾತುಗಳು ಕೆಲವು ಇಲ್ಲಿವೆ –

ಚಕ್ಷುರಿಂದ್ರಿಯಹೀನಶ್ಚ ವಾಗಿಂದ್ರಿಯವಿವರ್ಜ್ಜಿತಃ

ಹಸ್ತೇಂದ್ರಿಯವಿಹೀನಶ್ಚ ಪಾದಾಭ್ಯಾಂ ಚ ವಿವರ್ಜ್ಜಿತಃ

ಪಾಯೂಪಸ್ಥವಿಹೀನಶ್ಚ ಬುದ್ಧ್ಯಾ ಚೈವ ವಿವರ್ಜ್ಜಿತಃ

ಚೇತಸಾ ವಿಗತಶ್ಚೈವ ಪ್ರಾಣೇನ ಚ ವಿವರ್ಜ್ಜಿತಃ

ಅಪಾನೇನ ವಿಹೀನಶ್ಚ ವ್ಯಾನೇನ ಚ ವಿವರ್ಜ್ಜಿತಃ

ಉದಾನೇನ ವಿಹೀನಶ್ಚ ಸಮಾನೇನ ವಿವರ್ಜ್ಜಿತಃ

ಆಕಾಶೇನ ವಿಹೀನಶ್ಚ ವಾಯುನಾ ಪರಿವರ್ಜ್ಜಿತಃ

ಅಗ್ನಿನಾ ಚ ವಿಹೀನಶ್ಚ ಉದಕೇನ ವಿವರ್ಜ್ಜಿತಃ

ಪೃಥಿವ್ಯಾ ಚ ವಿಹೀನಶ್ಚ ಶಬ್ದೇನ ಚ ವಿವರ್ಜ್ಜಿತಃ

ಸ್ಪರ್ಶೇನ ಚ ವಿಹೀನಶ್ಚ ಸರ್ವರೂಪವಿವರ್ಜ್ಜಿತಃ

ಪ್ರಕೃತೇಃ ಕ್ಷೋಭಕಶ್ಚೈವ ಮಹತಃ ಕ್ಷೋಭಕಸ್ತಥಾ

ಭೂತಾನಾಂ ಕ್ಷೋಭಕಶ್ಚೈವ ಬುದ್ಧೇಶ್ಚ ಕ್ಷೋಭಕಸ್ತಥಾ



ಇಂದ್ರಿಯಾಣಾಂ ಕ್ಷೋಭಕಶ್ಚ ವಿಷಯಕ್ಷೋಭಕಸ್ತಥಾ

ಬ್ರಹ್ಮಣಃ ಕ್ಷೋಭಕಶ್ಚೈವ ರುದ್ರಸ್ಯ ಕ್ಷೋಭಕಸ್ತಥಾ

ಅಗಮ್ಯಃ ಚಕ್ಷುರಾದೇಶ್ಚ ಶ್ರೋತ್ರಾಗಮ್ಯಸ್ತಥೈವ ಚ

ತ್ವಚಾ ನ ಗಮ್ಯಃ ಕೂರ್ಮ್ಮಶ್ಚ ಜಿಹ್ವಾಗ್ರಾಹ್ಯಸ್ತಥೈವ ಚ

ಘ್ರಾಣೇಂದ್ರಿಯಾಗಮ್ಯ ಏವ ವಾಚಾಗ್ರಾಹ್ಯಸ್ತಥೈವ ಚ

ಅಗಮ್ಯಶ್ಚೈವ ಪಾಣಿಭ್ಯಾಂ ಪಾದಾಗಮ್ಯಸ್ತಥೈವ ಚ

ಅಗ್ರಾಹ್ಯೋ ಮನಸಶ್ಚೈವ ಬುದ್ಧ್ಯಾಗ್ರಾಹ್ಯೋ ಹರಿಸ್ತಥಾ

ಅಹಂಬುದ್ಧ್ಯಾ ತಥಾಗ್ರಾಹ್ಯಃ ಚೇತಸಾಗ್ರಾಹ್ಯ ಏವ ಚ

ಶ್ರೋತಾ ಶ್ರೋತ್ರನಿಯಂತಾ ಚ ಶ್ರೋತವ್ಯಃ ಶ್ರವಣಸ್ತಥಾ

ತ್ವಕ್ಸ್ಥಿತಶ್ಚ ಸ್ಪರ್ಶಯಿತಾ ಸ್ಪೃಶ್ಯಂ ಚ ಸ್ಪರ್ಶನಂ ತಥಾ

ಚಕ್ಷುಃಸ್ಥೋ ರೂಪದ್ರಷ್ಟಾ ಚ ನಿಯಂತಾ ಚಕ್ಷುಷಸ್ತಥಾ

ದೃಶ್ಯಂ ಚೈವ ತು ಜಿಹ್ವಾಸ್ಥೋ ರಸಜ್ಞಶ್ಚ ನಿಯಾಮಕಃ

ಘ್ರಾಣಸ್ಥೋ ಘ್ರಾಣಕೃತ್ ಘ್ರಾತಾ ಘ್ರಾಣೇಂದ್ರಿಯನಿಯಾಮಕಃ

ವಾಕ್ಸ್ಥೋ ವಕ್ತಾ ಚ ವಕ್ತವ್ಯೋ ವಚನಂ ವಾಙ್ನಿಯಾಮಕಃ

ಪಾಣಿಸ್ಥಃ ಶಿಲ್ಪಕೃಚ್ಛಿಲ್ಪೋ ಹಸ್ತಯೋಶ್ಚ ನಿಯಾಮಕಃ

ಪದವ್ಯಶ್ಚೈವ ಗಂತಾ ಚ ಗಂತವ್ಯಂ ಗಮನಂ ತಥಾ

ನಿಯಂತಾ ಪಾದಯೋಶ್ಚೈವ ಪಾಯುಭಾಕ್ಚ ವಿಸರ್ಗ್ಗಕೃತ್

ವಿಸರ್ಗ್ಗಸ್ಯ ನಿಯಂತಾ ಚ ಹ್ಯುಪಸ್ಥಸ್ಥಃ ಸುಖಿಸ್ತಥಾ

ಉಪಸ್ಥಸ್ಯ ನಿಯಂತಾ ಚ ತದಾನಂದಕರಶ್ಚ ಹ

ಕಾರಣಂ ಮಹತಶ್ಚೈವ ಪುರಾಣಸ್ಯ ಚ ಕಾರಣಮ್

ಬುದ್ಧೀನಾಂ ಕಾರಣಂ ಚೈವ ಕಾರಣಂ ಮನಸಸ್ತಥಾ

ಕಾರಣಂ ಚೇತಸಶ್ಚೈವ ಅಹಂಕಾರಸ್ಯ ಕಾರಣಮ್

ಭೂತಾನಾಂ ಕಾರಣಂ ತದ್ವತ್ ಕಾರಣಂ ಚ ವಿಭಾವಸೋಃ

ಆಕಾಶಕಾರಣಂ ತದ್ವತ್ ಪೃಥಿವ್ಯಾಃ ಕಾರಣಂ ಪರಮ್



ಅಂಡಸ್ಯ ಕಾರಣಂ ಚೈವ ಪ್ರಕೃತೇಃ ಕಾರಣಂ ತಥಾ
ದೇಹಸ್ಯ ಕಾರಣಂ ಚೈವ ಚಕ್ಷುಷಶ್ಚೈವ ಕಾರಣಮ್
ಶ್ರೋತ್ರಸ್ಯ ಕಾರಣಂ ತದ್ವತ್ ಕಾರಣಂ ಚ ತ್ವಚಸ್ತಥಾ
ಜಿಹ್ವಾಯಾಃ ಕಾರಣಂ ಚೈವ ಘ್ರಾಣಸ್ಯೈವ ಚ ಕಾರಣಮ್
ಹಸ್ತಯೋಃ ಕಾರಣಂ ತದ್ವತ್ ಪಾದಯೋಃ ಕಾರಣಂ ತಥಾ
ವಾಚಶ್ಚ ಕಾರಣಂ ತದ್ವತ್ ಪಾಯೋಶ್ಚೈವ ತು ಕಾರಣಮ್
ಇಂದ್ರಸ್ಯ ಕಾರಣಂ ಚೈವ ಕುಬೇರಸ್ಯ ಚ ಕಾರಣಮ್
ಯಮಸ್ಯ ಕಾರಣಂ ಚೈವ ಈಶಾನಸ್ಯ ಚ ಕಾರಣಮ್
ದೇವಾನಾಂ ಕಾರಣಂ ಶ್ರೇಷ್ಠಂ ಧರ್ಮಸ್ಯೈವ ತು ಕಾರಣಮ್

ದೇಹಾತ್ಮಾ ಚೇಂದ್ರಿಯಾತ್ಮಾ ಚ ಆತ್ಮಾ ಬುದ್ಧೇಸ್ತಥೈವ ಚ
ಮನಸಶ್ಚ ತಥೈವಾತ್ಮಾ ಚಾತ್ಮಾಹಂಕಾರಚೇತಸಃ
ಜಾಗ್ರತಃ ಸ್ವಪತಶ್ಚಾತ್ಮಾ ಮಹದಾತ್ಮಾ ಪರಸ್ತಥಾ
ಪ್ರಧಾನಸ್ಯ ಪರಾತ್ಮಾ ಚ ಆಕಾಶಾತ್ಮಾ ಹ್ಯಪಾಂ ತಥಾ
ಪೃಥಿವ್ಯಾಃ ಪರಮಾತ್ಮಾ ಚ ರಸಸ್ಯಾತ್ಮಾ ತಥೈವ ಚ
ಗಂಧಸ್ಯ ಪರಮಾತ್ಮಾ ಚ ರೂಪಸ್ಯಾತ್ಮಾ ಪರಸ್ತಥಾ
ಶಬ್ದಾತ್ಮಾ ಚೈವ ಹಸ್ತಾತ್ಮಾ ಪಾದಾತ್ಮಾ ಪರಮಸ್ತಥಾ
ಶ್ರೋತ್ರಾತ್ಮಾ ಚ ತ್ವಗಾತ್ಮಾ ಚ ಜಿಹ್ವಾಯಾಃ ಪರಮಸ್ತಥಾ
ಘ್ರಾಣಾತ್ಮಾ ಚೈವ ಹಸ್ತಾತ್ಮಾ ಪಾದಾತ್ಮಾ ಪರಮಸ್ತಥಾ
ಉಪಸ್ಥಸ್ಯ ತಥೈವಾತ್ಮಾ ಪಾಯ್ವಾತ್ಮಾ ಪರಮಸ್ತಥಾ
ಇಂದ್ರಾತ್ಮಾ ಚೈವ ಬ್ರಹ್ಮಾತ್ಮಾ ರುದ್ರಾತ್ಮಾ ಚ ಮನೋಸ್ತಥಾ
ದಕ್ಷಪ್ರಜಾಪತೇರಾತ್ಮಾ ಸತ್ಯಾತ್ಮಾ ಪರಮಸ್ತಥಾ

ನಾರಾಯಣೋ ಮಹಾಭಾಗಃ ಪ್ರಾಣಸ್ಯ ಪತಿರೇವ ಚ
ಅಪಾನಸ್ಯ ಪತಿಶ್ಚೈವ ವ್ಯಾನಸ್ಯ ಪತಿರೇವ ಚ
ಉದಾನಸ್ಯ ಪತಿಃ ಶ್ರೇಷ್ಠಃ ಸಮಾನಸ್ಯ ಪತಿಸ್ತಥಾ



ಶಬ್ದಸ್ಯ ಚ ಪತಿಃ ಶ್ರೇಷ್ಠಃ ಸ್ಪರ್ಶಸ್ಯ ಪತಿರೇವ ಚ

ಅಹಂಕಾರೋ ಮನಶ್ಚಿತ್ತಂ ಗಗನಂ ಪೃಥಿವೀ ಜಲಮ್

ವಾಯುಶ್ಚಕ್ಷುಸ್ತಥಾ ಶ್ರೋತ್ರಂ ಜಿಹ್ವಾ ಚ ಘ್ರಾಣಮೇವ ಚ

ವಾಕ್ಪಾಣಿಪಾದೋ ಜವನಃ ಪಾಯೂಪಸ್ಥಸ್ತಥೈವ ಚ

ಘ್ರಾಣೇಂದ್ರಿಯವಿಹೀನಂ ಚ ಪಾಣಿಧರ್ಮ್ಮವಿವರ್ಜ್ಜಿತಮ್

ಮನೋವಿರಹಿತಂ ತದ್ವತ್ ಮನೋಧರ್ಮ್ಮವಿವರ್ಜ್ಜಿತಮ್

ಬುದ್ಧ್ಯಾ ವಿಹೀನಂ ದೇವೇಶಂ ಚೇತಸಾ ಪರಿವರ್ಜ್ಜಿತಮ್

ಅಹಂಕಾರವಿಹೀನಂ ವೈ ಬುದ್ಧಿಧರ್ಮ್ಮವಿವರ್ಜ್ಜಿತಮ್

ಬ್ರಹ್ಮಕಾಂಡದಲ್ಲಿ ಬಂದ ಕೆಲವು ಅಭಿಮಾನಿಗಳ ವಿವರ –

ಮಹತೋ ಬ್ರಹ್ಮವಾಯೂ ಚ ಜಜ್ಞಾತೇ ಸ್ವಾಭಿಮಾನಿನೌ

ಅಹಂತತ್ವಾಭಿಮಾನೀ ತು ಅದೌ ಶೇಷೋ ಬಭೂವ ಹ

ಮನೋಭಿಮಾನಿನಾವನ್ಯೌ ಇಂದ್ರಕಾಮೌ ಪ್ರಜಜ್ಞತುಃ

ಶಚೀ ರತಿಶ್ಚಾನಿರುದ್ಧಃ ತಥಾ ಸ್ವಾಯಂಭುವೋ ಮನುಃ

ಬೃಹಸ್ಪತಿಸ್ತಥಾ ದಕ್ಷ ಏತೇ ಪಾಣ್ಯಾತ್ಮಕಾಃ ಸ್ಮೃತಾಃ

ಸ್ವಾಯಂಭುವಮನೋರ್ಭಾರ್ಯಾ ಶತರೂಪಾ ಯಮಸ್ತಥಾ

ಚಂದ್ರಸೂರ್ಯೌ ತು ಚತ್ವಾರಃ ಚಕ್ಷುರಿಂದ್ರಿಯಮಾನಿನಃ

ಚಂದ್ರಃ ಶ್ರೋತ್ರಾಭಿಮಾನೀತಿ ತಥಾ ಜ್ಞೇಯಃ ಖಗೇಶ್ವರ

ಜಿಹ್ವೇಂದ್ರಿಯಾತ್ಮಾ ವರುಣಃ ಸೂರ್ಯಸ್ಯಾನಂತರೋಽಭವತ್

ವಾಗಿಂದ್ರಿಯಾಭಿಮಾನಿನ್ಯೋ ಹ್ಯಭವನ್ವರುಣಾದನು

ದಕ್ಷಪತ್ನೀ ಪ್ರಸೂತಿಶ್ಚ ಭೃಗುರಗ್ನಿಸ್ತಥೈವ ಚ

ವಿಶ್ವಾಮಿತ್ರೋ ವಸಿಷ್ಠೋಽತ್ರಿಃ ಮರೀಚಿಃ ಪುಲಹಃ ಕ್ರತುಃ

ಪುಲಸ್ತ್ಯೋಽಂಗಿರಸಶ್ಚೈವ ತಥಾ ವೈವಸ್ವತೋ ಮನುಃ

ಮನ್ವಾದಯೋಽನಂತಸಂಖ್ಯಾ ಉಪಸ್ಥಾತ್ಮಾನ ಈರಿತಾಃ

ಸೂರ್ಯೇಷು ದ್ವಾದಶಸ್ವೇಕೋ ಮಿತ್ರಸ್ತಾರಾ ಗುರೋಃ ಪ್ರಿಯಾ



**ಕೋಣಾಧಿಪೋ ನಿರ್‌ಋತಿಶ್ಚ ಪ್ರಾವಹೀ ಪ್ರವಹಪ್ರಿಯಾ**

**ಚತ್ವಾರ ಏತೇ ಪಕ್ಷೀಂದ್ರ ಪಾಯುತತ್ತ್ವಾಭಿಮಾನಿನಃ**

**ವಿಷ್ವಕ್ಸೇನೋ ವಾಯುಪುತ್ರ ಅಶ್ವಿನೌ ಗಣಪಸ್ತಥಾ**

**ವಿತ್ತಪಃ ಸಪ್ತವಸವ ಉಕ್ತೋ ಹ್ಯಗ್ನಿಸ್ತಥಾಷ್ಟಮಃ**

**ಘ್ರಾಣಾಭಿಮಾನಿನಃ ಸರ್ವೇ ಜಜ್ಞಿರೇ ದ್ವಿಜಸತ್ತಮ**

**ಆಕಾಶಸ್ಯಾಭಿಮಾನೀ ತು ಗಣಪಃ ಸಮುದಾಹೃತಃ**

**ಸ್ಪರ್ಶತತ್ತ್ವಾಭಿಮಾನೀ ತು ಅಪಾನಶ್ಚೇತ್ಯುದಾಹೃತಃ**

**ರೂಪಾಭಿಮಾನೀ ಸಂಜಜ್ಞೇ ವ್ಯಾನೋ ನಾಮ ಮಹಾನ್ ಪ್ರಭೋ**

**ರಸಾತ್ಮಕ ಉದಾನಶ್ಚ ಸಮಾನೋ ಗಂಧನಾಮಕಃ**

**ತತಃ ಶನೈಶ್ಚರೋ ಜಜ್ಞೇ ಪೃಥಿವ್ಯಾತ್ಮೇತಿ ವಿಶ್ರುತಃ**

**ತತ್ತ್ವಾಭಿಮಾನಿನೋ ದೇವಾನ್ ಏವಂ ಸೃಷ್ಟ್ವಾ ಹರಿಃ ಸ್ವಯಮ್**

**ಪ್ರವಿವೇಶ ಸ ದೇವೇಶಃ ತತ್ತ್ವೇಷು ರಮಯಾ ಸಹ**

**ಅಥರ್ವವೇದವು** ತತ್ತ್ವದೇವತೆಗಳಲ್ಲಿ ಮತ್ತವರ ಒಡೆಯನಾದ ನಾರಾಯಣನಲ್ಲಿ ಮಾಡಬೇಕಾದ ಸುಂದರ ಪ್ರಾರ್ಥನೆಯೊಂದನ್ನು ಸಂಗ್ರಹವಾಗಿ ನೀಡಿದೆ – **ಉಪ ತ್ವಾ ನಮಸಾ ವಯಂ ಹೋತರ್ವೈಶ್ವಾನರಂ ಸ್ತುಮಃ**

**ಸ ನಃ ಪ್ರಜಾಸ್ವಾತ್ಮಸು ಗೋಷು ಪ್ರಾಣೇಷು ಜಾಗೃಹಿ**

**ಪ್ರಜಾಸು ಆತ್ಮಸು** ಎನ್ನುವಲ್ಲಿ ಜ್ಞಾನೇಂದ್ರಿಯಗಳನ್ನು **ಗೋಷು ಪ್ರಾಣೇಷು** ಎನ್ನುವಲ್ಲಿ ಕರ್ಮೇಂದ್ರಿಯಗಳನ್ನು ಅರ್ಥೈಸಿಕೊಳ್ಳಬೇಕು.

**ಆತ್ಮಸು** ಎನ್ನುವಲ್ಲಿ ಮನಸ್ಸು, ಬುದ್ಧಿ, ಅಹಂಕಾರಗಳು ಬಂದಿವೆ.

**ಗೋಷು** ಎನ್ನುವಲ್ಲಿ ಶಬ್ದಾದಿ ವಿಷಯಗಳು ಇಣುಕಿವೆ.

**ಪ್ರಾಣೇಷು** ಎನ್ನುವಲ್ಲಿ ವಾಯ್ವಾದಿ ಭೂತಗಳು ಲಕ್ಷಿತಗಳಾಗಿವೆ.

**ಪ್ರಜಾಸು** ಎನ್ನುವಲ್ಲಿ ಪುರುಷಾವ್ಯಕ್ತಮಹತ್ತತ್ತ್ವಗಳು.

**ಓಂ ಸರ್ವಾಭ್ಯಃ ತತ್ತ್ವದೇವತಾಭ್ಯೋ ನಮಃ ಓಮ್**

**ಓಂ ಸರ್ವಾಭ್ಯೋ ಮಾತೃಕಾದೇವತಾಭ್ಯೋ ನಮಃ ಓಮ್**

# ಮಾತೃಕಾನ್ಯಾಸ

[ಅಕ್ಷರಗಳ ಬಗ್ಗೆ, ವಿಶೇಷವಾದ ಅರ್ಥ, ಪ್ರಯೋಗ, ರೂಪ ಚಿಂತನೆಗಳನ್ನು ತತ್ತ್ವ ಸಂಶೋಧನ ಸಂಸತ್ ಪ್ರಕಾಶಪಡಿಸಿದ ನನ್ನ **ಅಕ್ಷರ** ಪುಸ್ತಕದಲ್ಲಿ ಕಾಣಬಹುದು. 51–ಮೂರ್ತಿಸಮೀಕ್ಷೆಯಲ್ಲಿ ಶಿಕ್ಷಾಗ್ರಂಥಗಳಲ್ಲಿನ ಅಕ್ಷರದೇವತಾ ವಿಚಾರದೊಡನೆ ಹೆಚ್ಚಿನ ವಿವರಣೆ ಬರಲಿದೆ]

**ನ್ಯಾಸಮೇವಾತ್ರ ಪರಮಂ ವೈಷ್ಣವಾನಾಂ ಶುಭಾನನೇ**

**ತಸ್ಮಾತ್ತು ನ್ಯಾಸಮೇವೈಷಾಂ ಅತಿರಿಕ್ತಮಿಹೋಚ್ಯತೇ**

ಎಂದು **ಪಾದ್ಮವು** ನ್ಯಾಸವನ್ನು ಬಹಳವಾಗಿ ಕೊಂಡಾಡಿದೆ. ಎಲ್ಲಾ ಬಗೆಯ ನ್ಯಾಸಗಳಲ್ಲೂ ಲಿಪಿನ್ಯಾಸ ಅಂದರೆ ಅಕ್ಷರನ್ಯಾಸ ಬಹಳ ಮುಖ್ಯವಾಗಿದೆ. ಇದನ್ನು ವರ್ಣನ್ಯಾಸ ಮಾತೃಕಾನ್ಯಾಸ ಎಂದೂ ಕರೆಯುವರು. ಎಲ್ಲ ಮಂತ್ರಗಳೂ ಮೂಲತಃ 51 ಅಕ್ಷರಗಳಿಂದಲೆ ಹುಟ್ಟಿದವುಗಳಾದ್ದರಿಂದ ಯಾವ ಮಂತ್ರದ ಜಪಕ್ಕೂ ಈ ನ್ಯಾಸ ಮುಖ್ಯವಾಗುವುದು. ಇದರಿಂದ ಪೂರ್ಣ ಫಲವನ್ನು ಸಾಧಕ ಪಡೆಯುವನು. ಇದನ್ನೆ ಆಚಾರ್ಯಮಧ್ವರು **ತಂತ್ರಸಾರಸಂಗ್ರಹದಲ್ಲಿ** ತಿಳಿಸಿದ್ದಾರೆ–

**ಯಸ್ಯ ಕಸ್ಯಾಪಿ ಮಂತ್ರಸ್ಯ ನ್ಯಾಸಃ ಪಂಚಾಶದಕ್ಷರೈಃ ವೀರ್ಯದಃ**

ಮುಖ್ಯವಾಗಿ ಸಂಧ್ಯಾವಂದನೆಯಲ್ಲಿ ಮಂತ್ರಜಪದ ಆರಂಭದಲ್ಲಿ ತತ್ತ್ವನ್ಯಾಸದ ಬಳಿಕ ಮಾತೃಕಾನ್ಯಾಸವನ್ನೆಸಗಬೇಕು. ಅಕಾರದಿಂದ ಕ್ಷಕಾರದವರೆಗಿನ 51 ವರ್ಣಗಳನ್ನು ದೇಹದಲ್ಲಿ ನ್ಯಾಸ ಮಾಡುವಲ್ಲಿ ಆಯಾ ವರ್ಣಪ್ರತಿಪಾದ್ಯ ಭಗವದ್ರೂಪಗಳನ್ನು ದೇಹದಲ್ಲಿ ತಿಳಿದಿರಬೇಕು. ಅಕ್ಷರ ಅಂದರೆ ಅಕಾರದಿಂದ ಕ್ಷಕಾರದವರೆಗಿನ ರೂಪಗಳೆಂದು ಅರ್ಥ. ಈ ರೂಪಗಳು ಪ್ರಣವದ ಅಷ್ಟಾಕ್ಷರದಿಂದಲೆ ಅವತರಿಸಿದವು. ಆಚಾರ್ಯರು **ತಂತ್ರಸಾರಸಂಗ್ರಹದಲ್ಲಿ** ಹೇಳಿರುವ ಆ ಅಜಾದಿರೂಪಗಳೊಡನೆ ಅವರೇ ತಿಳಿಸಿರುವ ನ್ಯಾಸಸ್ಥಾನಗಳ ಜತೆಗೆ ನ್ಯಾಸಕ್ರಮವಿಲ್ಲಿದೆ – **ಯಸ್ಯ ಕಸ್ಯಾಪಿ ಮಂತ್ರಸ್ಯ ನ್ಯಾಸಃ ಪಂಚಾಶದಕ್ಷರೈಃ ವೀರ್ಯದಃ ಕೇಽಭಿತೋವಕ್ತ್ರಂ ಅಕ್ಷಿಕರ್ಣ್ಣೇಷು ನಾಸಯೋಃ**



गंडयोरोष्ठयोर्द्दंतपंक्त्योर्मूर्ध्नि वाचि च

दोःपत्सन्धिषु साग्रेषु पार्श्वयोः पृष्ठगुह्ययोः

तुंदे च हृदि धातूनां सप्तके प्राणजीवयोः

सक्षकारान्न्यसेद्वर्ण्णान् नृसिंहः क्षस्य देवता

जपे न्यासे च विहितः क्षोऽक्षराणां सदाऽन्ततः

ಆಚಾರ್ಯರ ಮಾತಿಗೆ ಮೂಲವೆಂಬಂತೆ ಸಪ್ತಧಾತುಗಳೊಡನೆ ಲಿಪಿನ್ಯಾಸದ ಸ್ಥಾನಗಳನ್ನು ಈಶ್ವರಸಂಹಿತೆಯಲ್ಲಿ ಕಾಣಬಹುದು. ಇಲ್ಲಿ ಳಕಾರಕ್ಕೆ ಸ್ಥಾನಮಾನ ಇಲ್ಲ ಎನ್ನುವುದು ಸೋಜಿಗ –

केशान्ते वक्त्रवृत्ते च नेत्रयोः श्रवणद्वये

घ्राणरन्ध्रद्वये गंडद्वये दक्षेतरक्रमात्

उत्तराधरयोर्गेन दंतयोस्तच्छदद्वये

मूर्ध्नि न्यसेत्स्वरानन्यान् सविसर्गाननंतरम्

कवर्ग्गं दक्षिणे बाहौ सन्धिपंचगतं क्रमात्

वामे तथा चवर्ग्गं च पादयोर्द्दक्षिणादितः

संधिगौ टतवर्गौ च पूर्ववत्तनुपार्श्वयोः

पृष्ठे नाभौ च हृदये पवर्ग्गं धातुसप्तके

यादिसान्तानि वर्ण्णानि हकारं हृदयान्तरे

क्षकारं हृदयाकाशे न्यस्यैवं मातृकां पुरा

ಶೇಷಸಂಹಿತೆಯಲ್ಲಿ ಸ್ಥಾನ ಸಮಾನವಿದ್ದರೂ ಪಾಠ ಶುದ್ಧಿಯಿಲ್ಲ –

आननवृत्तदृक्छ्रुतिनासागंडोष्ठदंतमूर्धास्यम्

दोःसन्ध्यग्रेषु हृदादिपाणिपादयुगे

जठराननयोर्व्यापकसंज्ञाम् न्यसेदक्षरान् क्रमशः

प्रणवादिनमोन्तं तु प्रत्येकं तच्चतुर्मुख

ಪಾದ್ಮಸಂಹಿತೆಯು ಲಿಪಿನ್ಯಾಸದಲ್ಲಿ ಅಜಾದಿಮಂತ್ರಗಳೆಂದೇ ಕರೆದು



ಅಕ್ಷರವಾಚ್ಯರೂಪಗಳಿಂದಲೇ ನ್ಯಾಸಗಳನ್ನು ಹೇಳಿದೆ –

**ಪಶ್ಚಾದಜಾದಿಮಂತ್ರಾಣಾಂ ನ್ಯಸನಂ ಪರಿಕೀರ್ತ್ತಿತಮ್**

ದೇವತೆಯೊಡನೆ ಲಿಪಿನ್ಯಾಸ ಮಾಡಿದರೆ ವಿಶೇಷವಾಗಿ ಮೋಕ್ಷಫಲ ಹೇಳಲ್ಪಟ್ಟಿದೆ – **ಓಮಾದ್ಯಂತೋ ನಮೋಂತೋ ವಾ ಸಬಿಂದುರ್ಬ್ಬಿಂದುವರ್ಜ್ಜಿತಃ**

**ಪಂಚಾಶದ್ವರ್ಣ್ಣವಿನ್ಯಾಸಃ .... ಮುಕ್ತಿದಾ ದೇವತಾಯುತಾ**

**ಅಗ್ನಿ**ಪುರಾಣದಲ್ಲಿ ಲಿಪಿನ್ಯಾಸ ಧಾತುಗಳ ನಾಮದೊಂದಿಗೆ –

**.... ಲಿಪಿನ್ಯಾಸೋಽಥ ಕಥ್ಯತೇ**

**ಕೇಶಾಂತೇಷು ಚ ವೃತ್ತೇಷು ಚಕ್ಷುಷೋಃ ಶ್ರವಣದ್ವಯೇ**

**ನಾಸಾಗಂಡೌಷ್ಠದಂತೇಷು ದ್ವೇ ದ್ವೇ ಮೂರ್ಧಾಸ್ಯಯೋಃ ಕ್ರಮಾತ್**

**ವರ್ಣ್ಣಾನ್ ಪಂಚಸು ವರ್ಗ್ಗಾಣಾಂ ಬಾಹುಚರಣಸಂಧಿಷು**

**ಪಾರ್ಶ್ವಯೋಃ ಪೃಷ್ಠತೋ ನಾಭೌ ಹೃದಯೇ ಚ ಕ್ರಮಾನ್ನ್ಯಸೇತ್**

**ಯಾದೀಂಶ್ಚ ಹೃದಯೇ ನ್ಯಸೇತ್ ಏಷಾಂ ಸ್ಯುಃ ಸಪ್ತಧಾತವಃ**

**ತ್ವಗಸೃಙ್ಮಾಂಸಮೇದೋಸ್ಥಿಮಜ್ಜಾಶುಕ್ರಾಣಿ ಧಾತವಃ**

ನಾರದೀಯಪುರಾಣದಲ್ಲಿ ದಂತಪಂಕ್ತಿಗೆ ನ್ಯಾಸವಿಲ್ಲದೆ ಉಳಿದ ಸಮಾನಸ್ಥಾನಗಳ ನಿರ್ದೇಶ ಕಾಣಬಹುದು. ಳ ಲಿಪಿ ಇಲ್ಲಿದೆ –

**ಏಕಂ ಮೌಲೌ ಮುಖೇ ಚೈಕಂ ದ್ವಿಕಂ ನೇತ್ರೇ ದ್ವಿಕಂ ಶ್ರುತೌ**

**ನಸೋರ್ದ್ವಯಂ ಕಪೋಲೇ ಚ ದ್ವಯಂ ದ್ವೇ ದ್ವಿರದಚ್ಛದೇ**

**ಏಕಂ ತು ರಸನಾಮೂಲೇ ಗ್ರೀವಾಯಾಮೇಕಮೇವ ಚ**

**ಕವರ್ಗ್ಗಂ ದಕ್ಷಿಣೇ ಬಾಹೌ ಚವರ್ಗ್ಗಂ ವಾಮಬಾಹುಕೇ**

**ಟತವರ್ಗ್ಗೌ ಪಾದಯೋಸ್ತು ಪಫೌ ಕುಕ್ಷಿದ್ವಯೇ ನ್ಯಸೇತ್**

**ಪೃಷ್ಠವಂಶೇ ಬಮಿತ್ಯುಕ್ತಂ ನಾಭೌ ಭಂ ಹೃದಯೇ ತು ಮಮ್**

**ಯಾದಿಸಪ್ತಾಪಿ ಧಾತುಸ್ಥಾ ಹಂ ಪ್ರಾಣೇ ಳಂ ತಥಾತ್ಮನಿ**

**ಕ್ಷಂ ಕ್ರೋಧೇ ಕ್ರಮತೋ ನ್ಯಸ್ಯ ವಿಷ್ಣುಪೂಜಾಕ್ಷಮೋ ಭವೇತ್**

ವರ್ಣಗಳ ಬಣ್ಣಗಳನ್ನು ಸನತ್ಕುಮಾರಸಂಹಿತೆ ಸಂಗ್ರಹಿಸಿದೆ–



**ಅಕಾರಾದ್ಯಾಃ ಸ್ವರಾ ಧೂಮ್ರಾಃ ಸಿಂಧೂರಾಭಾಸ್ತು ಕಾದಯಃ**

**ಡಾದಿಫಾಂತಾಃ ಗೌರವರ್ಣ್ಣಾ ಆರುಣಾ ಬಾದಯಶ್ಚ ಷಟ್**

**ವಾದಿಸಾಂತಾಃ ಕಾಂಚನಾಭಾ ಹಕ್ಷೌ ವಿದ್ಯುನ್ನಿಭೌ ಮತೌ**

ಈ ಆರು ಗುಂಪುಗಳೆ ದೇಹದ ಆರು ಚಕ್ರಗಳಲ್ಲಿರುವುದು. ಇದು ಅಂತರ್ನ್ಯಾಸ – **ಕಂಠೇ ವಿಶುದ್ಧಚಕ್ರೇ ತು ಷೋಡಶಾರೇ ಸ್ವರಾನ್ನ್ಯಸೇತ್**

**ಹೃದಯೇನಾಹತೇ ಕಾದಿಠಾಂತಾನ್ ದ್ವಾದಶ ವಿನ್ಯಸೇತ್**

**ನಾಭೌ ದಶದಳೇ ಡಾದಿಫಾಂತಾನ್ವೈ ಮಣಿಪೂರಕೇ**

**ಲಿಂಗಸ್ಯ ಪರಿತಃ ಸ್ವಾಧಿಷ್ಠಾನೇ ಷಡ್ ಬಾದಿಲಾಂತಿಮಾನ್**

**ಗುದಾದೂರ್ಧ್ವಂ ದ್ವ್ಯಂಗುಲಸ್ಥಮೂಲಾಧಾರೇ ಚತುರ್ದ್ದಳೇ**

**ವಾದಿಸಾಂತಾನ್ ಭ್ರುವೋರ್ಮ್ಮಧ್ಯೇ ಹಕ್ಷಾವಾಜ್ಞಾಭಿಧೇ ನ್ಯಸೇತ್**

**ಈಶ್ವರಸಂಹಿತೆ**ಯಲ್ಲಿ ಮಾತೃಕೆಗಳಿಂದ ಕರನ್ಯಾಸವನ್ನೂ ವಿಶೇಷವಾಗಿ ತಿಳಿಸಿಕೊಟ್ಟಿದ್ದಾರೆ. ಈಗ ಇದರ ಪ್ರಯೋಗ ಹೆಚ್ಚಾಗಿ ಕಂಡುಬರುತ್ತಿಲ್ಲ –

**ದಕ್ಷೇತರಕ್ರಮೇಣೈವ ಶಾಖಾಸು ತಳಯೋರಪಿ**

**ಅಂಗುಷ್ಠಾದಿಕನಿಷ್ಠಾಂತಂ ಏಕೈಕಸ್ಯಾಶ್ಚತುಶ್ಚತು**

**ಏವಂ ದ್ವಾವಿಂಶಕಂ ನ್ಯಸ್ಯ ತಳಯೋರ್ದ್ದಶಕಂ ತತಃ**

**ಮಧ್ಯೇ ಚ ದ್ವಿಚತುಷ್ಕೇ ಚ ಪಂಚಕಂ ಪಂಚಕಂ ತಥಾ**

**ಪ್ರಣವದ್ವಯಮಧ್ಯಸ್ಥಾನ್ ಏವಂ ನ್ಯಸ್ಯ ಕರದ್ವಯೇ**

ಅಕ್ಷರಸಾಮಾನ್ಯಜಾತಿಯ ಮೇಲೆಯೂ ಬಣ್ಣಗಳನ್ನು ತಿಳಿಸಲಾಗಿದೆ. (ಬಿಟ್ಟುಹೋದ ಳಕಾರದ ಬಣ್ಣ ಇಲ್ಲಿ ಷಟ್ಚಕ್ರದಲ್ಲಿ ಹೇಳಲಾಗಿದೆ.) –

**ಸ್ಫಟಿಕಾಭಾಃ ಸ್ವರಾಃ ಪ್ರೋಕ್ತಾಃ ಸ್ಪರ್ಶಾ ವಿದ್ರುಮಸನ್ನಿಭಾಃ**

**ಯಾದಯೋ ನವ ಪೀತಾಃ ಸ್ಯುಃ ಕ್ಷಕಾರಸ್ತ್ವರುಣೋ ಮತಃ**

**ಅಗ್ನಿಪುರಾಣ** ಅಕ್ಷರದೇವಿಯ ಸ್ವರೂಪವನ್ನು ಎರಡು ರೀತಿಯಲ್ಲಿ ಬಣ್ಣಿಸಿದೆ –

**ಪಂಚಾಶದ್ವರ್ಣ್ಣಮಾಲಾಂ ತು ಮುಕ್ತಾಸ್ರಗ್ದಾಮಭೂಷಿತಾಮ್**

**ವರದಾಭಯಾಕ್ಷಸೂತ್ರಪುಸ್ತಕಾಢ್ಯಾಂ ತ್ರಿಲೋಚನಾಮ್**



ಲಿಪಿದೇವೀ ಸಾಕ್ಷಸೂತ್ರಕುಂಭಪುಸ್ತಕಪದ್ಮಧೃತ್

ಕವಿತ್ವಾದಿ ಪ್ರಯಚ್ಛೇತ ಕರ್ಮ್ಮಾದೌ ಸಿದ್ಧಯೇ ನ್ಯಸೇತ್

ಯಾವ ಬೆರಳುಗಳಿಂದ ಯಾವ ಅಕ್ಷರನ್ಯಾಸ ಎನ್ನುವುದನ್ನು ತಂತ್ರಗಳು ತಿಳಿಸಿವೆ – ಅಕಾರೇಽನಾಮಿಕಾಮಧ್ಯೇ ದೀರ್ಘೇ ಮಧ್ಯಾ ಸತರ್ಜ್ಜನೀ

ಇಕಾರದ್ವಿತಯೇ ತರ್ಜ್ಜನ್ಯನಾಮಿಕಮುಕಾರಯೋಃ

ಕನಿಷ್ಠಾಗ್ರಂ ಕನಿಷ್ಠಾರ್ಘ್ಯೋಽಂಗುಷ್ಠೋ ಮುದ್ರಾ ಋಕಾರಯೋಃ

ಲೃಕಾರಯೋರ್ಮ್ಮಧ್ಯಮಾ ಸ್ಯಾತ್ ಏಕಾರಾದಿಚತುಷ್ಟಯೇ

ಅನಾಮಿಕಾಽಥ ಮಧ್ಯಾ ತು ಸ್ವರೇ ಪಂಚದಶೇ ಸ್ಮೃತಾ

ಅಂತ್ಯೇಂಗುಷ್ಠಃ ಕಕಾರಾದಿಬಕಾರಾಂತಾಸು ಮಾತೃಷು

ತ್ರಯೋವಿಂಶತಿಸಂಖ್ಯಾಸು ಕನಿಷ್ಠಾದಿತ್ರಯಂ ಭವೇತ್

ಭಕಾರೇ ತರ್ಜ್ಜನೀವರ್ಜ್ಜಂ ಸರ್ವಾ ಅಂಗುಲಯೋ ಮತಾಃ

ಸರ್ವಾಂಗುಲ್ಯೋ ಮಕಾರೇ ಸ್ಯುಃ ಯಕಾರಾದಿಷು ಪಂಚಸು

ವಾಮಹಸ್ತತಳಂ ಷಾದಿಪಂಚಕೇ ದಕ್ಷಿಣಸ್ಯ ಚ

ನ್ಯಾಸ ನಡೆಸುವಾಗ ಅಂ ನಿವೃತ್ತ್ಯೈ ನಮಃ, ಆಂ ಪ್ರತಿಷ್ಠಾಯೈ ನಮಃ ಎಂದು ಕಲೆಗಳ ಜೊತೆಗೆ ನಡೆಸುವಂತೆಯೂ ತಂತ್ರ ಹೇಳಿದೆ. ಐವತ್ತೊಂದು ಅಕ್ಷರ ಕಲೆಗಳು – ನಿವೃತ್ತಿಶ್ಚ ಪ್ರತಿಷ್ಠಾ ಚ ವಿದ್ಯಾ ಶಾಂತಿಸ್ತಥೇಂಧಿಕಾ

ದೀಪಿಕಾಽರೋಚಿಕಾ ಚಾಽಪಿ ಮೋಚಿಕಾ ಚ ಪರಾಭಿಧಾ

ಸೂಕ್ಷ್ಮಾ ಸೂಕ್ಷ್ಮಾಮೃತಾ ಜ್ಞಾನಾಮೃತಾ ಚಾಪ್ಯಾಯನೀ ತತಃ

ವ್ಯಾಪಿನೀ ತಾಪಿನೀ ವ್ಯೋಮರೂಪಾ ಸೃಷ್ಟಿಃ ಸಋದ್ಧಿಕಾ

ಸ್ಮೃತಿರ್ಮ್ಮೇಧಾ ತತಃ ಕಾಂತಿಃ ಲಕ್ಷ್ಮೀರ್ದ್ಯುತಿಃ ಸ್ಥಿರಾ ಸ್ಥಿತಿಃ

ಸಿದ್ಧಿರ್ಜ್ಜರಾ ಪಾಳಿನೀ ಚ ಕ್ಷಾಂತಿರೀಶ್ವರಿಕಾ ರತಿಃ

ಕಾಮಿಕಾ ವರದಾ ಚಾಪ್ಯಾಹ್ಲಾದಿನೀ ಪ್ರೀತಿಸಂಯುತಾ

ದೀರ್ಘಾ ತೀಕ್ಷ್ಣಾ ತಥಾ ರೌದ್ರೀ ಭದ್ರಾ ನಿತ್ಯಾ ಚ ತಂದ್ರಿಕಾ

ಕ್ಷುಧಾ ಸ್ಯಾತ್ಕ್ರೋಧಿನೀ ಪಶ್ಚಾತ್ ಕ್ರಿಯೋತ್ಕಾರೀ ಸಮೃತ್ಯುಕಾ



**ಪೀತಾ ಶ್ವೇತಾಽರುಣಾ ಪಶ್ಚಾತ್ ಅಸಿತಾಽನಂತಯಾಽನ್ವಿತಾ**

**ಅಹಿರ್ಬುಧ್ನ್ಯಸಂಹಿತೆಯಲ್ಲಿ** ವೈಷ್ಣವ ಹಾಗೂ ರೌದ್ರರೂಪಗಳ ವರ್ಣಚಿಂತನೆ ಬಂದಿದೆ. ಇವು 51 ಮೂರ್ತಿಸಮೀಕ್ಷಾದಲ್ಲಿ ಸ್ಥಾನ ಪಡೆದಿವೆ.

**ಈಶ್ವರಸಂಹಿತೆಯಲ್ಲಿ** ಲಿಪಿಚಕ್ರವನ್ನು ತಿಳಿಸಿದ್ದಾರೆ. ಇದರ ಆರಾಧನೆಯೊಂದಿಗೆ ಮಂತ್ರೋಪಾಸನೆಯನ್ನು ನಡೆಸುವಂತೆ ಹೇಳಿದ್ದಾರೆ –

**ಸುಗುಪ್ತೇ ಭೂತಲೇ ಶುದ್ಧೇ ವರ್ಣ್ಣಚಕ್ರಂ ಪರಿಸ್ತರೇತ್**
**ಅಕಾರಾದಿಕ್ಷಕಾರಾಂತಂ ಸರ್ವಾರ್ಣ್ಣಮಯರೂಪಿಣಮ್**
**ಸ್ವಕ್ಷನಾಭ್ಯರನೇಮೀಭಿಃ ಪ್ರಧೀಭಿಶ್ಚಾಪ್ಯಲಂಕೃತಮ್**
**ಕಾರಣಂ ಸರ್ವಮಂತ್ರಾಣಾಂ ಕ್ಷೇತ್ರೇ ಪ್ರಣವಮಾಲಿಖೇತ್**
**ಅಕಾರಾದ್ಯಾ ವಿಸರ್ಗ್ಗಾಂತಾಃ ಸ್ವರಾ ನಾಭ್ಯಂಗಮಾಶ್ರಿತಾಃ**
**ಕಕಾರಾದೀನಿ ಭಾಂತಾನಿ ತದರಾಣಾಂ ತ್ರಿರಷ್ಟಕೇ**
**ಮಾದಿಹಾಂತಾನಿ ನೇಮೌ ತು ಕ್ಷಾರ್ಣ್ಣಂ ಪ್ರಧಿಗಣೇ ಸ್ಥಿತಮ್**
**ಶಬ್ದಬ್ರಹ್ಮಮಯಂ ಚಕ್ರಂ ಪುರಾ ವರ್ಣ್ಣಗಣಂ ತತಃ**
**ಪ್ರಣವಾದ್ಯೈರ್ನ್ನಮೋಂತೈಶ್ಚ ಸಂಜ್ಞಾಭಿಃ ಕ್ರಮಶಸ್ತತಃ**
**ವಿನ್ಯಸ್ತಮಾತೃಯಂತ್ರಂ ಸ್ವಂ ದೇಶಿಕೋ ವಿಧಿವದ್ಗುರುಃ**
**ಸಮಭ್ಯರ್ಚ್ಯಾರ್ಘ್ಯಪುಷ್ಪಾದ್ಯೈಃ ಮಾತೃಕಾಮಂತ್ರವಿಗ್ರಹಮ್**
**ತತಃ ಸಮುದ್ಧರೇನ್ಮಂತ್ರಾನ್ ಸರ್ವಾಭಿಮತಸಿದ್ಧಿದಾನ್**

***ಮಾತೃಕಾನ್ಯಾಸಕ್ಕೆ ಋಷ್ಯಾದಿಗಳು***

*ಮಾತೃಕಾಮಂತ್ರಾಣಾಂ ಅಂತರ್ಯಾಮೀ ಋಷಿಃ, ದೈವೀ ಗಾಯತ್ರೀ ಛಂದಃ*
*ಅಜಾದಿರೂಪೀ ನಾರಾಯಣೋ ದೇವತಾ*
*ಓಂ ಭೂಃ ಹೃದಯಾಯ ನಮಃ, ಓಂ ಭುವಃ ಶಿರಸೇ ಸ್ವಾಹಾ*
*ಓಂ ಸ್ವಃ ಶಿಖಾಯೈ ವಷಟ್, ಓಂ ಭೂರ್ಭುವಃಸ್ವಃ ಕವಚಾಯ ಹುಮ್*
*ಓಂ ಸತ್ಯಂ ಅಸ್ತ್ರಾಯ ಫಟ್*
*ಉದ್ಯದ್ಭಾಸ್ವತ್ .......................ಶಕ್ತಿಮಾನ್*
*ತಾದೃಗ್ರೂಪಾಶ್ಚ ಪಂಚಾಶತ್ ಜ್ಞಾನಮುದ್ರಾಭಯೋದ್ಯತಾಃ*
*ಟಂಕೀ ದಂಡೀ ಚ ಧನ್ವೀ ಚ ತತ್ತದ್ಯುಕ್ತಾಸ್ತು ವಾಮತಃ*

# ಲೋಕನ್ಯಾಸ

ಗಾಯತ್ರೀಮಂತ್ರಜಪದ ಮೊದಲು ಲೋಕನ್ಯಾಸವನ್ನು ಕೆಲವು ಸ್ಮೃತಿಗಳು ತಿಳಿಸಿವೆ. ಇದನ್ನು **ಭೂಶುದ್ಧಿ** ಎಂದೂ ಕರೆದಿರುವರು. ಶ್ರೀವೈಷ್ಣವರಲ್ಲಿ ಇದು ಹೆಚ್ಚು ಬಳಕೆಯಲ್ಲಿದೆ. ಮಾಧ್ವರಲ್ಲೂ ಇದು ಪ್ರಯೋಗದಲ್ಲಿದ್ದರೂ ಬಹಳ ತಪ್ಪಾಗಿ ಲೋಕನ್ಯಾಸ ಆಚರಣೆಯಲ್ಲಿದೆ. ಪ್ರಾಣಾಯಾಮದೊಡನೆ ಇದು ಸೇರಿ ಕೊಂಡಂತೆ ಆಚರಿಸಲ್ಪಡುತ್ತಿರುವುದು ತುಂಬಾ ಹಾಸ್ಯಾಸ್ಪದ. ಪ್ರಾಣಾಯಾಮ ಬೇರೆ, ಲೋಕನ್ಯಾಸ ಬೇರೆ. ಸಾಧಕನ ದೇಹದಲ್ಲಿ ಸಮಸ್ತಲೋಕಗಳೂ ಸ್ಥಾನವನ್ನು ಪಡೆದಿವೆ. ಉತ್ತಮವಾದ ಏಳು ಲೋಕಗಳನ್ನು ಈ ದೇಹ ಸಂಕೇತಿಸಿದೆ. ಇಲ್ಲಿ ಆಯಾ ಲೋಕದಲ್ಲಿಯ ದೇವತೆಗಳು ಸನ್ನಿಹಿತರಾಗಿದ್ದು ಪುಣ್ಯಕರ್ಮವನ್ನು ಜಪವನ್ನು ನಡೆಸಿಕೊಡಲೆಂಬ ಆಶಯವೆ ಲೋಕನ್ಯಾಸದ ಮುಖ್ಯ ಉದ್ದೇಶ. ಸಪ್ತವ್ಯಾಹೃತಿಗಳನ್ನು ಪ್ರಣವಸಂಪುಟದೊಡನೆ ಸಪ್ತಾಂಗಗಳಲ್ಲಿ ನ್ಯಾಸಮಾಡಬೇಕು. ಈ ಅಂಗಗಳನ್ನು **ಸ್ಮೃತಿಚಂದ್ರಿಕಾ**ದಲ್ಲಿ ಹೇಳಲಾಗಿದೆ–

**ಪಾದಯೋರ್ಜ್ಙಂಘಯೋರ್ಜ್ಞಾನ್ವೋಃ ತಥೈವ ಜಠರೇಽಪಿ ಚ**
**ಕಂಠೇ ಮುಖೇ ತಥಾ ಮೂರ್ಧ್ನಿ ಕ್ರಮೇಣ ವ್ಯಾಹೃತೀರ್ನ್ಯಸೇತ್**

ವ್ಯಾಹೃತಿಗಳು – ನ್ಯಾಸಸ್ಥಾನಗಳು

**ಓಂ ಭೂಃ ಓಂ ಪಾದ**
**ಓಂ ಭುವಃ ಓಂ ಮೊಣಕಾಲು**
**ಓಂ ಸುವಃ ಓಂ ಕಾಲ್ಗಂಟು**
**ಓಂ ಮಹಃ ಓಂ ಹೊಟ್ಟೆ**
**ಓಂ ಜನಃ ಓಂ ಕುತ್ತಿಗೆ**
**ಓಂ ತಪಃ ಓಂ ಮುಖ**
**ಓಂ ಸತ್ಯಂ ಓಂ ತಲೆ**

**ಗಾಯತ್ರೀಪದ್ಧತಿ**ಯಲ್ಲಿ ಎದೆ ಮುಖ ತೋಳು ಕಾಲು ಹೊಟ್ಟೆಗಳಲ್ಲಿ

ನ್ಯಾಸ ಹೇಳಲಾಗಿದೆ.

ಭಗವಂತನ ವಿರಾಟ್‌ರೂಪವು ಹದಿನಾಲ್ಕು ಲೋಕಗಳನ್ನು ವ್ಯಾಪಿಸಿದೆ. ಭಾಗವತವು ಆ ಪ್ರಕಾರ ಚಿಂತನೆ ನೀಡಿದೆ. ಇಲ್ಲಿ ಸಪ್ತವ್ಯಾಹೃತಿಗಳ ನ್ಯಾಸವಷ್ಟೆ ವಿಹಿತ. ಮುಂದೆ ಪ್ರಾಣಾಯಾಮಕ್ಕೆ ಹೇಳಿದಂತೆ ಗಾಯತ್ರಿಯನ್ನು ಇಲ್ಲಿ ಪಠಿಸಲಿಕ್ಕಿಲ್ಲ. ನ್ಯಾಸವನ್ನು ಹಲವು ಬಾರಿ ನಡೆಸಬೇಕೆಂಬ ಮಾತಿಗನುಗುಣವಾಗಿ ಇದನ್ನು ಅನೇಕ ಬಾರಿ ನಡೆಸಬಹುದು. ಒಮ್ಮೆಯಾದರೂ ನಡೆಸಬೇಕು. ಪ್ರಾಣಾಯಾಮ ಮಂತ್ರವನ್ನು ಮೂರು ಬಾರಿ ಹೇಳುವುದರಿಂದ ಇದನ್ನು ಅದರ ಜತೆಯಲ್ಲಿ ಮೂರು ಬಾರಿ ನಡೆಸುವ ಕ್ರಮ ತಪ್ಪು. ತತ್ವನ್ಯಾಸ ಮಾತೃಕಾನ್ಯಾಸಗಳಂತೆ ಕೆಲವರು ಲೋಕನ್ಯಾಸವನ್ನೂ ಮಾಡುವುದಿಲ್ಲ. ಮಾಡುವ ಪರಿಪಾಠ ಇಲ್ಲದಿರುವುದೆ ಪ್ರಮಾಣವಲ್ಲ. ಅವರಿಗೂ ನ್ಯಾಸದ ಮಹತ್ತ್ವ ಗೊತ್ತಿಲ್ಲ ಎಂದಿಷ್ಟೆ ಹೇಳಿದರೆ ಸಾಕು. ಎಲ್ಲ ನ್ಯಾಸಗಳಂತೆ ಇದನ್ನೂ ಕುಳಿತೇ ನಡೆಸಬೇಕು.

ಮುಖ್ಯವಾಗಿ ಸಪ್ತವ್ಯಾಹೃತಿಗಳು ಭಗವಂತನೇ ಆಗಿರುತ್ತಾನೆ ಎಂಬ ಮಾತು **ವರಾಹಪುರಾಣದಲ್ಲಿದೆ** –

**ತ್ವಂ ಭೂಸ್ತ್ವಂ ಚ ಭುವಶ್ಚಸ್ತ್ವಂ ಜನಸ್ತ್ವಂ ಚ ಮಹಃ ಸ್ಮೃತಃ**

**ತ್ವಂ ತಪಸ್ತ್ವಂ ಚ ಸತ್ಯಂ ಚ ತ್ವಮು ದೇವ ಚರಾಚರಮ್**

ಆ ಭಗವಂತನ ಪೂರ್ಣಾನುಗ್ರಹ ಸಿದ್ಧಿಸಲು ಈ ವಿನಿಯೋಗ ತುಂಬಾ ಸೂಕ್ತ. ಈ ವ್ಯಾಹೃತಿಗಳ ಭಗವತ್ಪರ ಚಿಂತನೆಯನ್ನು **ವ್ಯಾಸತತ್ವಜ್ಞರು** ಆಚಾರ್ಯರ ಭಾಷ್ಯದ ನೆಲೆಯಲ್ಲಿ ಸಂಗ್ರಹಿಸಿದ್ದಾರೆ–

**ಐಶ್ವರ್ಯಾದಿಪ್ರಭುತ್ವಾಚ್ಚ ಭೂರಿತಿ ವ್ಯಾಹೃತೀರಿತಃ**

**ಲಕ್ಷ್ಮ್ಯಾ ಅಪಿ ಪರತ್ವೇನ ಭುವ ಇತ್ಯುಚ್ಯತೇ ಹರಿಃ**

**ಅನಂತಸುಖವತ್ತ್ವಾಚ್ಚ ಸುವರಿತ್ಯುಚ್ಯತೇಽಚ್ಯುತಃ**

**ಮಹಃ ಸರ್ವಪ್ರಪೂಜ್ಯತ್ವಾತ್ ಜಗತ್ಸ್ರಷ್ಟೃತ್ವತೋ ಜನಃ**

**ಲೀಲಾಲೋಚನಕರ್ತೃತ್ವಾತ್ ತಪ ಇತ್ಯೇವ ಶಬ್ದಿತಃ**

**ಸತ್ಯಜ್ಞಾನಪ್ರಮೋದತ್ವಾತ್ ಸತ್ಯಮಿತ್ಯಭಿಧೀಯತೇ**



# ಗಾಯತ್ರೀಜಪ

ಪ್ರತಿಯೊಂದು ಮಂತ್ರವನ್ನು ಜಪಿಸುವಾಗಲೂ ಆಯಾ ಮಂತ್ರದಿಂದ ಮೊದಲು ಪ್ರಾಣಾಯಾಮವನ್ನು ನಡೆಸಬೇಕು. ಇದರಿಂದ ಆ ಮಂತ್ರಮಯವಾದ ಗಾಳಿ ದೇಹದೊಳಗೆ ತುಂಬುವಂತಾಗಿ ಆತ ಮಂತ್ರದೇಹಿಯಾಗುವನು. ಮಂತ್ರದ ಋಷಿಛಂದೋದೇವತೆಗಳನ್ನು ನೆನೆಯಬೇಕು. ಇದರಿಂದ ಶುದ್ಧನಾಗಿ ಮಂತ್ರಲೋಕದಲ್ಲಿ ವಿಹರಿಸುವನೆಂದು **ಗರುಡಪುರಾಣ** ಹೇಳುವುದು –

**ವಿನಿಯೋಗಮೃಷಿಂ ಛಂದೋ ಜ್ಞಾತ್ವಾ ತು ಜಪಮಾರಭೇತ್**
**ಸರ್ವಪಾಪವಿನಿರ್ಮ್ಮುಕ್ತೋ ಬ್ರಹ್ಮಲೋಕಮವಾಪ್ನುಯಾತ್**

ಋಷ್ಯಾದಿನ್ಯಾಸದ ಅನಂತರ ಅಂಗುಲಿನ್ಯಾಸ, ಅಂಗನ್ಯಾಸ, ಅಕ್ಷರನ್ಯಾಸ ಗಳನ್ನು ಮಾಡಿ ದೇಹದಲ್ಲಿ ವ್ಯಾಪಕವಾಗಿ ಮಂತ್ರದೇವತೆಯ ಸನ್ನಿಧಾನವನ್ನು ತಂದುಕೊಳ್ಳಬೇಕು. ಮಂತ್ರದೇವೆಯ ಧ್ಯಾನವನ್ನು ಆದಷ್ಟು ಸಮಯ ನಡೆಸಿ ಆ ಧ್ಯಾನದ ಹಿನ್ನೆಲೆಯಲ್ಲಿ ಮಂತ್ರವನ್ನು ಜಪಿಸಬೇಕು. ಮಂತ್ರ ಜಪದ ಬಳಿಕ ಮಂತ್ರದೇವತೆಯನ್ನು ಸಂತೋಷಗೊಳಿಸಬೇಕು. ಇದನ್ನು ತರ್ಪಣ ಎನ್ನುವರು. ಮುಂದೆ ಮತ್ತೊಮ್ಮೆ ಧ್ಯಾನಮಾಡಿ ವಿಸರ್ಜನಾಂಗ ವಿಪರೀತ ಕ್ರಮದಲ್ಲಿ ನ್ಯಾಸಗಳನ್ನು ನಡೆಸಿ ಪ್ರಾಣಾಯಾಮ ಮಾಡಬೇಕು.

**ಸಮ್ಯಗುಚ್ಚಾರಣಂ ಪೂರ್ವಂ ಋಷಿದೇವಾದಿಚಿಂತನಮ್**
**ಪಶ್ಚಾನ್ನ್ಯಾಸಸ್ತದರ್ಥಸ್ಯಾನುಸಂಧಾನಂ ತತಃ ಪುನಃ**

ಗಾಯತ್ರೀಜಪದಲ್ಲಿ ಇನ್ನೂ ಅನೇಕ ಅಂಶಗಳನ್ನು ಸ್ಮೃತಿಕಾರರು ತಂತ್ರಜ್ಞರು ಸೇರಿಸಲು ತಿಳಿಸಿದ್ದಾರೆ. ಮುದ್ರೆಗಳು, ಕವಚ, ಹೃದಯ, ಪದನ್ಯಾಸ, ಕೇಶವಾದಿ ಧ್ಯಾನ ಇತ್ಯಾದಿಗಳು ಗಾಯತ್ರೀಜಪದಲ್ಲಿ ಇರಲೇಬೇಕೆನ್ನುವಂತೆ ತಿಳಿಸಲಾಗಿದೆಯಾದರೂ ಇಂದು ತೀರಾ ವಿರಳವಾಗಿ ಈ ಎಲ್ಲಾ ಅಂಶಗಳು ಬಳಕೆಯಲ್ಲಿವೆ. ಗಾಯತ್ರೀಮಂತ್ರವನ್ನು ಕಾಮ್ಯವಾಗಿ ಜಪಿಸುವಲ್ಲಿ ಈ ಎಲ್ಲ ಅಂಗಗಳ ಉಪಯೋಗ ಈಗ ಕಂಡುಬರುವುದು. ಇಲ್ಲಿ ಸಾಧಕ–ಚಿಂತಕರಿಗಾಗಿ ಈ ಎಲ್ಲವನ್ನು ಸೂಕ್ಷ್ಮವಾಗಿ ನೀಡಿ ಪರಿಚಯಿಸಲಾಗಿದೆ. ಇದು ನಿತ್ಯ ಜಪದಲ್ಲಿ



ಬಾರದಿದ್ದರೂ ತಿಳಿದುಕೊಳ್ಳುವುದು ಅತ್ಯಗತ್ಯ ಎಂಬ ದೃಷ್ಟಿಯಿಂದ ನೀಡಲಾಗಿದೆ. ಇನ್ನೂ ವಿಸ್ತಾರವಾಗಿ ಅಂದರೆ ಗಾಯತ್ರಿಯ ಮಂತ್ರದಲ್ಲಿನ ಅಕ್ಷರಗಳು ದೇಹದ ಹತ್ತಾರು ಸ್ಥಾನಗಳಲ್ಲಿ ಎಲ್ಲಿ ಎಲ್ಲಿ ಹುಟ್ಟಿವೆ ಎನ್ನುವುದರ ಚಿಂತನೆ, ಅವುಗಳಿಗೆ ಸಂಬಂಧಿಸಿದಂತೆ ಋಷಿ ಛಂದಸ್ಸು ವಿನಿಯೋಗಗಳ ಮಾಹಿತಿ, ಮತ್ತಲ್ಲಿ ಪದಗಳ ಉದಾತ್ತಾದಿ ಸ್ವರಗಳ ಪರಿಚಯ – ಆ ಸ್ವರಗಳಿಗೆ ಗೀತಸ್ವರಗಳಿಗಿರುವ ಸಂಬಂಧ, ಮತ್ತದರ ದೇವತಾ ವಿಷಯ ಇವನ್ನೆಲ್ಲಾ ಶಿಕ್ಷಾದಿ ಗ್ರಂಥಗಳಿಂದ ತಿಳಿಯಲಿದೆ. ಅವನ್ನಿಲ್ಲಿ ನಾನು ನೀಡಿಲ್ಲ. ಮುಂದೆ ಮುದ್ರಣದಲ್ಲಿ ಬರಲಿದೆ.

ಮೋಹಕವಾದ ಕೆಲವು ಅಂಶಗಳೂ ಗಾಯತ್ರ್ಯುಪಾಸನೆಯಲ್ಲಿ ಸೇರಿವೆ. ಉದಾಹರಣೆಗೆ ರುದ್ರಯಾಮಲದಲ್ಲಿ ಹೇಳಿದ ಗಾಯತ್ರ್ಯಕ್ಷರಸಹಸ್ರನಾಮಸ್ತೋತ್ರ, ವಸಿಷ್ಠಸಂಹಿತೆ ಹೇಳಿರುವ ಗಾಯತ್ರಿಪಂಜರ ಸ್ತೋತ್ರ ಇತ್ಯಾದಿ. ಇವನ್ನೆಲ್ಲ ಸಾಧಕರು ವಿಮರ್ಶಿಸಿ ತಿಳಿಯಬೇಕಾಗಿದೆ. ಇದರಂತೆ ಗಾಯತ್ರೀ ರಹಸ್ಯೋಪನಿಷತ್ ಮತ್ತು ಗಾಯತ್ರೀ ಉಪನಿಷತ್. ಇವನ್ನೂ ಉಪಯೋಗಕ್ಕಾಗುವಷ್ಟು ಕಾಣಬೇಕು.

**ಬ್ರಹ್ಮ ವೈ ಜಪಃ** ಎಂದು **ಕೌಷೀತಕೀಬ್ರಾಹ್ಮಣವು** ವೇದಮಂತ್ರದ ಜಪವನ್ನೇ ಜಪವನ್ನಾಗಿ ತಿಳಿಸಿದೆ. ವೇದೈಕವೇದ್ಯನಾದ ನಾರಾಯಣನನ್ನೇ ಪೂರ್ಣಾತ್ಮನನ್ನೇ ಜಪಿಸುವಂತೆ ತಿಳಿಸಿದೆ. **ವೇದೇನ ವೈ ದೇವಾ ಅಸುರಾಣಾಂ ವಿತ್ತಂ ವೇದ್ಯಮವಿಂದಂತ** ಎನ್ನುವುದಾಗಿ **ತೈತ್ತಿರೀಯಸಂಹಿತೆ**ಯು ದೇವತೆಗಳು ಅಸುರರನ್ನು ಗೆದ್ದು ಎಲ್ಲವನ್ನೂ ಪಡೆದದ್ದು ವೇದದಿಂದಲೇ ಎನ್ನುವುದಾಗಿ ಹೇಳಿದೆ. ಈ ವೇದಮಂತ್ರವು ಮುಖ್ಯವಾಗಿ ವೇದಸಾರವೆನಿಸಿದ ಗಾಯತ್ರಿಯೇ. **ಬ್ರಹ್ಮ ಹಿ ಗಾಯತ್ರೀ** ಎನ್ನುವುದಾಗಿ ತಾಂಡ್ಯ, ಜೈಮಿನೀಯ, ಐತರೇಯ, ಶತಪಥ ಬ್ರಾಹ್ಮಣಗಳ ಮಾತು. **ಗಾಯತ್ರೀ ವೈ ಪ್ರಾಣಃ** ಎನ್ನುವುದಾಗಿ ಶತಪಥ ಷಡ್ವಿಂಶ ಕೌಷೀತಕೀ ಬ್ರಾಹ್ಮಣಗಳು ಎಲ್ಲ ರೀತಿಯ ಬಲಪ್ರದ ಮಂತ್ರ ಗಾಯತ್ರಿ ಎಂದು ತಿಳಿಸಿವೆ. **ಗಾಯತ್ರ್ಯೇವ ಭರ್ಗಃ** ಎಂದು ಗೋಪಥ ಬ್ರಾಹ್ಮಣವು ತೇಜೋರೂಪನಾದ ಭಗವಂತನನ್ನು ಗಾಯತ್ರಿಯಲ್ಲಿ ಪರಿಚಯಿಸಿದೆ.

**ಉಪಾಸೀತ ಓಮಿತ್ಯೇತದಕ್ಷರೇಣ ವ್ಯಾಹೃತಿಭಿಃ ಸಾವಿತ್ರ್ಯಾ ಚೇತಿ**



ಗಾಯತ್ರೀಮಂತ್ರದ ಅನುಷ್ಠಾನಕ್ಕೆ ವ್ಯಾಹೃತಿ ಮತ್ತು ಪ್ರಣವ ಸೇರಿರಬೇಕು. ಗಾಯತ್ರೀಮಂತ್ರವು ಋಗ್ವೇದದಲ್ಲಿ (3–62–10) ಸಾಮವೇದದಲ್ಲಿ (1462), ಶುಕ್ಲ ಯಜುರ್ವೇದದಲ್ಲಿ ವಾಜಸನೇಯಸಂಹಿತೆಯಲ್ಲಿ (3–35, 22–9, 30–2, 36–3), ಕೃಷ್ಣ ಯಜುರ್ವೇದದಲ್ಲಿ ತೈತ್ತಿರೀಯಸಂಹಿತೆಯಲ್ಲಿ (1–5–7–4, 4–1–11–1), ತೈತ್ತಿರೀಯಾರಣ್ಯಕದಲ್ಲಿ (1–11–3) ಬಂದಿದೆ. ಮೂರು ವ್ಯಾಹೃತಿಯೊಡನೆ ಗಾಯತ್ರೀಮಂತ್ರವು ಕೃಷ್ಣಯಜುರ್ವೇದದ **ಕಾಣ್ವಸಂಹಿತೆಯಲ್ಲಿ** ಮಾತ್ರ ಕಂಡುಬರುವುದು.

**ಇತಿ ಯೋ ವಾ ಏತಾಂ ಸಾವಿತ್ರೀಮೇವಂ ವೇದಾಪಪುನರ್ಮೃತ್ಯುಂ ತರತಿ** ಎನ್ನುವುದಾಗಿ ಜೈಮಿನೀಯಾರಣ್ಯಕದ ಕೊನೆಯಲ್ಲಿ ವ್ಯಾಹೃತಿಯೊಡನೆ ಗಾಯತ್ರಿಯನ್ನು ಜಪಿಸಿದರೆ ನಿತ್ಯ ಚಿಂತನೆಯಿಂದಾಗಿ ಅಕಾಲ ಮರಣದಿಂದ ದೂರನಾಗುವನೆಂದು ಹೇಳಲಾಗಿದೆ. ವೇದಸಾರವೆನಿಸಿದ ಗಾಯತ್ರಿಯ ಜಪದಿಂದ ಅತೀಂದ್ರಿಯ ಶಕ್ತಿ ಬೆಳೆಯುವುದು. ಭಗವಂತನ ಅರಿವು ಉಂಟಾಗುವುದು. ಇಷ್ಟೇ ಅಲ್ಲದೆ ನಿತ್ಯದಲ್ಲಿ ಜಪದಿಂದ ಮಾನಸಿಕ ಸ್ವಾಸ್ಥ್ಯವನ್ನು ಪಡೆಯುವ ಮೂಲಕ ಇಹಫಲವನ್ನೂ ಸಹ ಇಲ್ಲಿ ಪ್ರಾಚೀನರು ಕಂಡಿದ್ದಾರೆ. ಮನಸ್ಸಿನ ಶಕ್ತಿಗಳು ಎಷ್ಟಿವೆ ಎನ್ನುವುದು **ವಾಲ್ಮೀಕಿರಾಮಾಯಣದಲ್ಲಿ** ಪಟ್ಟಿಯಾಗಿದೆ –

**ಗ್ರಹಣಂ ಧಾರಣಂ ಚೈವ ಸ್ಮರಣಂ ಪ್ರತಿಪಾದನಮ್**
**ಊಹಾಪೋಹೋಽರ್ಥವಿಜ್ಞಾನಂ ತತ್ತ್ವಜ್ಞಾನಂ ಚ ಧೀಗುಣಾಃ**

ವೇದಾಭ್ಯಾಸದ ಆರಂಭದಲ್ಲಿ ಯಾವಾಗಲೂ ಗಾಯತ್ರೀಮಂತ್ರವನ್ನು ಹೇಳಿಯೇ ಆರಂಭಿಸಬೇಕು ಎನ್ನುವುದಾಗಿ **ಚಾರಾಯಣೀಶಿಕ್ಷಾ** ಗ್ರಂಥದ ಮಾತು. ಇಲ್ಲಿ ಗಾಯತ್ರೀಮಂತ್ರವು ಪ್ರಣವ ಮತ್ತು ವ್ಯಾಹೃತಿಗಳೊಡನೆ ಸೇರಿರಬೇಕು ಎನ್ನಲಾಗಿದೆ. ಇದು ನಿತ್ಯ ಜಪದ ಮಂತ್ರ ಎನಿಸಿದೆ. ಇದರಿಂದ ಜಪ ಮುಗಿಸಿ ವೇದದ ಅಧ್ಯಯನ ಎನ್ನುವುದು ಮುಖ್ಯ ತಾತ್ಪರ್ಯ.

**ಪ್ರಣವಂ ಪ್ರಾಕ್ ಪ್ರಯುಂಜೀತ ವ್ಯಾಹೃತೀಸ್ತದನಂತರಮ್**
**ಸಾವಿತ್ರೀಂ ಚಾನುವಚನಂ ತತೋ ವೃತ್ತಾಂತಮಾರಭೇತ್**



ಗಾಯತ್ರೀಜಪದ ಆರಂಭದಲ್ಲಿ ಮತ್ತು ಅಂತ್ಯದಲ್ಲಿ ಹೇಳಲಿರುವ ಎರಡು ಮಂತ್ರಗಳನ್ನು **ಮಹಾನಾರಾಯಣೋಪನಿಷತ್ತು** ನಮಗೆ ನೀಡಿದೆ.

**ಆಯಾತು ವರದಾ ದೇವೀ ಅಕ್ಷರಂ ಬ್ರಹ್ಮಸಮ್ಮಿತಮ್**
**ಗಾಯತ್ರೀಂ ಛಂದಸಾಂ ಮಾತಾ ಇದಂ ಬ್ರಹ್ಮ ಜುಷಸ್ವ ಮೇ**
**ಉತ್ತಮೇ ಶಿಖರೇ ಜಾತೇ ಭೂಮ್ಯಾಂ ಪರ್ವತಮೂರ್ಧನಿ**
**ಬ್ರಾಹ್ಮಣೇಭ್ಯೋಽಭ್ಯನುಜ್ಞಾತಾ ಗಚ್ಛ ದೇವಿ ಯಥಾಸುಖಮ್**

ಮಂತ್ರಜಪದ ಬಳಿಕ ಗಾಯತ್ರೀ ವಿಸರ್ಜನೆಯ ಪ್ರಾರ್ಥನೆ **ಗರುಡಪುರಾಣದ** ಪಾಠ ಹೀಗಿದೆ–

**ಉತ್ತಮೇ ಶಿಖರೇ ಜಾತಾ ಭೂಮ್ಯಾಂ ಪರ್ವತವಾಸಿನಿ**
**ಬ್ರಹ್ಮಣಾ ಸಮನುಜ್ಞಾತಾ ಗಚ್ಛ ದೇವಿ ಯಥಾಸುಖಮ್**

ಗಾಯತ್ರಿಯಲ್ಲಿಯ 24 ಅಕ್ಷರಗಳಿಂದ ಪ್ರತಿಪಾದ್ಯಗಳಾದ ಭಗವಂತನ 24 ರೂಪವಿಶೇಷಗಳು ಕೇಶವಾದಿಗಳು ಎಂದು **ತಂತ್ರಸಾರಸಂಗ್ರಹದಲ್ಲಿ** ಆಚಾರ್ಯ ಮಧ್ವರ ಮಾತು –

**ನಾರಾಯಣಾಷ್ಟಾಕ್ಷರಾಚ್ಚ ವ್ಯಾಹೃತಿತ್ರಿಗುಣಾತ್ಪುನಃ**
**ವೇದಮಾತಾ ತು ಗಾಯತ್ರೀ ದ್ವಿಗುಣಾ ದ್ವಾದಶಾಕ್ಷರಾತ್**
**ಚತುರ್ವಿಂಶನ್ಮೂರ್ತ್ತಯೋಽಸ್ಯಾಃ ಕಥಿತಾ ವರ್ಣ್ಣದೇವತಾಃ**

ಗಾಯತ್ರೀಮಂತ್ರವು ಸರ್ವವೇದಗಳ ಸಾರವೆನಿಸಿದ್ದು ಮೂರು ಬಾರಿ ಉಚ್ಚರಿಸಲ್ಪಟ್ಟ ನಾರಾಯಣ ಅಷ್ಟಾಕ್ಷರ ಮಂತ್ರದಿಂದ ಉದ್ಭವಿಸಿದೆ. (3X8=24) ಹಾಗೆಯೇ ಎರಡು ಬಾರಿಯ ವಾಸುದೇವ ದ್ವಾದಶಾಕ್ಷರದಿಂದಲೂ. (2X12=24) ಈ 24 ಕೇಶವಾದಿ ರೂಪಗಳು ಗಾಯತ್ರಿಮಂತ್ರದ 24 ಅಕ್ಷರವಾಚ್ಯಗಳು ಆಚ ಮನದಲ್ಲಿ ಕೆಲವರಿಗೆ ಬಾರದಿದ್ದರೂ ಜಪದ ಆರಂಭದಲ್ಲಿ ತರ್ಪಣದಲ್ಲಿ ಬಂದ ರೂಪಗಳೆ ಇವು. ತರ್ಪಣದ ಸಂದರ್ಭದಲ್ಲಿ ಆ ರೂಪಗಳ ಚಿಂತನೆ ಆಗಬೇಕು. ಇಲ್ಲಿ ಮತ್ತೆ ಜಪದ ಸಂದರ್ಭದಲ್ಲಿಯೂ ಭಗವಂತನ ಆ 24 ರೂಪಗಳ ಧ್ಯಾನ ಆಗಬೇಕಾಗಿದೆ.



# ಮಹಾಭಾರತದಲ್ಲಿನ ಕೇಶವಾದಿಗಳು

ಮಹಾಭಾರತವು ಅಲ್ಲಲ್ಲಿ ಭಗವಂತನನ್ನು ತಿಳಿಸುವಾಗ ದೇವರ ಅನೇಕ ಗುಣನಾಮಗಳನ್ನು ಹೊತ್ತಿದೆ. ವಾಸುದೇವನ ಮಹಿಮೆಯೇ ಮುಖ್ಯವಸ್ತುವಾಗಿ ಉಳ್ಳ ಮಹಾಭಾರತಕ್ಕೆ ಇದು ಶೋಭೆಯೆನಿಸಿದೆ. ಹಾಗಾಗಿ ಅಲ್ಲಿ ಅಲ್ಲಲ್ಲಿ ಕೇಶವಾದಿ 24 ನಾಮಗಳ ಪ್ರಸ್ತುತಿ ಇದೆ. ಅದು ಗಾಯತ್ರಿಗೆ ಸಂಬಂಧಿಸಿದ 24 ರೂಪಗಳೇ ಆಗಬೇಕೆಂದೇನೂ ಇಲ್ಲ.

ಮಹಾಭಾರತವು ನಡುವೆ ವಿಶೇಷವಾಗಿ ಭಗವಂತನ ಸಾವಿರ ರೂಪಗಳ ನಾಮಸ್ತುತಿಯನ್ನು ಹೊತ್ತಿದೆ. ಅದರಲ್ಲಿ ನಡುನಡುವೆ ಬರುವ ಕೇಶವಾದಿ ನಾಮಗಳು ಈ 24 ವ್ಯೂಹರೂಪಗಳನ್ನು ಹೇಳುವುದಿಲ್ಲ. ಗಾಯತ್ರೀಮಂತ್ರದಲ್ಲಿನ 24 ರೂಪಗಳೇ ಬೇರೆ, ಮಹಾಭಾರತ ಹೇಳಿದ ವಿಷ್ಣುಸಹಸ್ರರೂಪನಾಮಸ್ತುತಿಯ ಎಲ್ಲಿ ಬರುವ ಸಾವಿರ ರೂಪಗಳೇ ಬೇರೆ.

ದೇವರ ರೂಪಗಳಿಗೆ ಸಮಾನ ನಾಮಗಳು ಹಲವೆಡೆ ಇವೆ. ಉದಾಹರಣೆಗೆ – ರಾಮ ಎಂಬ ಹೆಸರಿನಲ್ಲಿ ಎರಡು ರೂಪಗಳು ಇವೆ. ಒಂದು ಪರಶುರಾಮ, ಇನ್ನೊಂದು ಕೋದಂಡರಾಮ. ಹಾಗೆಯೇ ಕೃಷ್ಣ ಎಂಬ ಹೆಸರಿ ನಲ್ಲಿ ಎರಡು ರೂಪಗಳು – ವಾಸಿಷ್ಠಕೃಷ್ಣನಾಗಿ ವೇದವ್ಯಾಸ ಮತ್ತು ಯಾದವಕೃಷ್ಣನೆನಿಸಿದ ಪಾರ್ಥಸಾರಥಿ. ದಶಾವತಾರದ ನರಸಿಂಹನು ಸಿಂಹಮೋರೆಯವನು. ಕೇಶವಾದಿ 24ರಲ್ಲಿನ ನರಸಿಂಹನು ಸಿಂಹಮೋರೆಯವನಲ್ಲ. ಹೀಗೆ ಹೆಸರು ಒಂದಾದರೂ ರೂಪ ವ್ಯತ್ಯಾಸವಿದೆ. ರಾಶಿ ಬೇರೆ ಇದೆ. ಹೀಗೆ ಸಾವಿರರೂಪದಲ್ಲಿ ಬರುವ ಕೇಶವನಾರಾಯಣಗಳು ಗಾಯತ್ರೀ ಪ್ರತಿಪಾದ್ಯರೂಪಗಳು ಅಲ್ಲ.

ಗಾಯತ್ರೀ ಪ್ರತಿಪಾದ್ಯ 24 ಕೇಶವಾದಿ ರೂಪಗಳ ವಿಸ್ತಾರವಾದ ಚಿಂತನೆ ಹಾಗೂ ವಿಶೇಷ ವಿವರಣೆಗಳನ್ನು ನನ್ನ **ಮೂರ್ತಿಸಮೀಕ್ಷಾ**ದಲ್ಲಿ ಕಾಣಬಹುದು.

*(ಪುರಾಣಗಳಲ್ಲಿ ಸಂಹಿತೆಗಳಲ್ಲಿ ಅಲ್ಲಲ್ಲಿ ಬಂದಿರುವ 24 ರೂಪಗಳ ಸೂಕ್ಷ್ಮ ಪರಿಚಯವನ್ನು ನಾನಿಲ್ಲಿ ಮುಂದೆ ನೀಡಿರುವೆ.)*



# ೨೪ ರೂಪಗಳು

ಗಾಯತ್ರೀಮಂತ್ರದ ಅಕ್ಷರರೂಪಗಳಾದ ಕೇಶವಾದಿ 24 ರೂಪಗಳ ಬಗ್ಗೆ ಹತ್ತಾರು ಕಡೆಯಲ್ಲಿ ಸ್ಪಷ್ಟವಾದ ಮಾಹಿತಿ ದೊರಕುವುದು. ಶ್ರೀಮಧ್ವರು **ತಂತ್ರಸಾರಸಂಗ್ರಹ**ದಲ್ಲಿ ಕೇಶವಾದಿಗಳ ಆಯುಧಗಳ ವಿನ್ಯಾಸವನ್ನು ಹೊಸ ರೀತಿಯಲ್ಲಿ ಸಂಗ್ರಹಿಸಿರುತ್ತಾರೆ. ಅಲ್ಲಿ ಅಡಿಟಿಪ್ಪಣಿಯಲ್ಲಿ ಬನ್ನಂಜೆಯವರು **ಅಗ್ನಿಪುರಾಣ** ಮತ್ತು **ಸ್ಕಂದಪುರಾಣ**ದಲ್ಲಿ ಬರುವ ಕೇಶವಾದಿಗಳ ರೂಪಚಿಂತನೆಯನ್ನು ನೀಡಿದ್ದಾರೆ.

**ತತ್ವಕಣಿಕಾ**ದಲ್ಲಿ ಪಂಚರಾತ್ರದಲ್ಲಿ ಬಂದ ಕೇಶವಾದಿಗಳ ಸ್ತುತಿಯನ್ನು ಶಾರ್ದೂಲವಿಕ್ರೀಡಿತದಲ್ಲಿ ನಡೆಸಿದ್ದಾರೆ.

**ನಿರ್ಣಯಸಿಂಧು** ಆಯುಧಪ್ರಕಾರವನ್ನು ಸಂಕ್ಷೇಪವಾಗಿ ಹೇಳಿದೆ. **ಪಂಚಸಂಸ್ಕಾರಸಂಗ್ರಹ**ದಲ್ಲಿಯೂ ಮೂರ್ತಿಲಕ್ಷಣ ದೊರಕುವುದು. ಇಲ್ಲೆಲ್ಲ ಕೇಶವಾದಿ ರೂಪಗಳು ಚಕ್ರಾದಿ ಆಯುಧಗಳನ್ನು ಹೇಗೆ ಹೊತ್ತಿರುವರೆಂಬ ವಿಷಯದಲ್ಲಿ ಹೆಚ್ಚು ಮಾಹಿತಿ ದೊರಕುವುದು.

ಕೇಶವಾದಿ 24 ರೂಪಗಳ ಬಣ್ಣದ ವಿಷಯದಲ್ಲಿ **ಛಲಾರೀಯ**ದಲ್ಲಿ ಸಂಗ್ರಹವಿದೆ. **ಪಾದ್ಮಸಂಹಿತಾ**ದಲ್ಲಿ ಬಣ್ಣದ ಬಗ್ಗೆ ಸ್ಪಷ್ಟ ಮಾಹಿತಿ ಸಿಗುವುದು. **ಶ್ರೀಪ್ರಶ್ನಸಂಹಿತಾ**ದಲ್ಲಿಯೂ ಪಾದ್ಮಸಂಹಿತಾದಂತೆ ಆಯುಧ ಕ್ರಮವನ್ನು ಹೇಳಿದ ಕೇಶವಾದಿ ಲಕ್ಷಣ ಶ್ಲೋಕಗಳಿವೆ. ಇದರ ವಿಶೇಷ ಆರಂಭದಲ್ಲಿಯೆ ನಾಮಗಳನ್ನು ತಿಳಿಸಿದ್ದು.

ಮೇಲಿನ ಬಲಕೈಯಿಂದಲೆ ಆಯುಧಗಣನೆಯ ಕ್ರಮದಲ್ಲಿ ಕೇಶವಾದಿಗಳ ಲಕ್ಷಣವನ್ನು **ಪದ್ಮಪುರಾಣ** ತಿಳಿಸಿಕೊಟ್ಟಿದೆ. ಇದರಲ್ಲಿ ಪ್ರದಕ್ಷಿಣೆ ಮತ್ತು ಅಪ್ರದಕ್ಷಿಣೆ ಕ್ರಮಗಳನ್ನು ಕಾಣಬಹುದು.

ಕೆಳಗಿನ ಬಲಕೈಯಿಂದ ಆರಂಭಮಾಡಿ ಆಯುಧ ಚಿಂತನೆ ಮಾಡಿದ ಕೇಶವಾದಿಗಳ ಬಗ್ಗೆ ಶಿಲ್ಪಗ್ರಂಥ **ರೂಪಮಂಡನ**ದಲ್ಲಿದೆ. ಇದರಲ್ಲಿ ಆಯುಧಗಳನ್ನು ಸುದರ್ಶನ ಪಾಂಚಜನ್ಯ ಕೌಮೋದಕೀ ಎನ್ನುವ ಮೂಲನಾಮಗಳಿಂದ



ಗುರುತಿಸಲಾಗಿದೆ. **ಪಾಂಚರಾತ್ರಾಗಮ**ದಲ್ಲಿ ಪ್ರಪ್ರತ್ಯೇಕ ಧ್ಯಾನಶ್ಲೋಕಗಳು ಇವೆ. ಬಣ್ಣದ ವೈಭವವೂ ಇದೆ. ಆಯುಧದಲ್ಲಿ ಕ್ರಮವಿವಕ್ಷೆ ಇರದಿದ್ದರೂ ಭಗವಂತನ ಗುಣವಿಶೇಷಗಳನ್ನು ಸರ್ವಾಭರಣ ಸೌಂದರ್ಯವನ್ನು ಆ ಶ್ಲೋಕಗಳಲ್ಲಿ ನಾವು ಕಾಣಬಹುದು.

**ವ್ಯಾಹೃತಿತ್ರಿಗುಣಾತ್ ಗಾಯತ್ರೀ** ಎಂಬ ತಂತ್ರಸಾರಸಂಗ್ರಹದ ಮಾತಿನ ವಿವರಣೆ ಹೀಗಿದೆ – ವ್ಯಾಹೃತಿಪಾದ್ಯಗಳಾದ ವಾಸುದೇವಾದಿ ನಾಲ್ಕು ರೂಪಗಳಿಂದ ಈ 24 ರೂಪಗಳ ನಾಲ್ಕು ಗುಂಪಾಗಿ ಅಭಿವ್ಯಕ್ತಿಯನ್ನು ಪಂಚರಾತ್ರ ಹೇಳಿದ್ದನ್ನು **ತತ್ತ್ವಕಣಿಕಾ**ದಲ್ಲಿ ಸಂಗ್ರಹಿಸಲಾಗಿದೆ –

ವಾಸುದೇವನಿಂದ – ಕೇಶವ ನಾರಾಯಣ ಮಾಧವರು

ವಾಸುದೇವ

ಪುರುಷೋತ್ತಮ

ಜನಾರ್ದನ

ಸಂಕರ್ಷಣನಿಂದ – ಗೋವಿಂದ ವಿಷ್ಣು ಮಧುಸೂದನರು

ಸಂಕರ್ಷಣ

ಅಧೋಕ್ಷಜ

ಉಪೇಂದ್ರ

ಪ್ರದ್ಯಮ್ನನಿಂದ – ತ್ರಿವಿಕ್ರಮ ವಾಮನ ಶ್ರೀಧರರು

ಪ್ರದ್ಯುಮ್ನ

ನೃಸಿಂಹ

ಹರಿ

ಅನಿರುದ್ಧನಿಂದ – ಹೃಷಿಕೇಶ ಪದ್ಮನಾಭ ದಾಮೋದರರು

ಅನಿರುದ್ಧ

ಅಚ್ಯುತ

ಕೃಷ್ಣ.



# ೨೪ ಅಕ್ಷರಗಳು, ಭಗವದ್ರೂಪಗಳು, ಭಾರ್ಯಾರೂಪಗಳು, ಋಷಿಗಳು

| | | | | |
|---|---|---|---|---|
| 1 | ತತ್ | ಕೇಶವ | ಶ್ರೀ | ವಸಿಷ್ಠ |
| 2 | ಸ | ನಾರಾಯಣ | ಲಕ್ಷ್ಮೀ | ಭರದ್ವಾಜ |
| 3 | ವಿ | ಮಾಧವ | ಕಮಲಾ | ಗೌತಮ |
| 4 | ತುಃ | ಗೋವಿಂದ | ಪದ್ಮಾ | ಭೃಗು |
| 5 | ವ | ವಿಷ್ಣು | ಪದ್ಮಿನೀ | ಶಾಂಡಿಲ್ಯ |
| 6 | ರೇ | ಮಧುಸೂದನ | ಕಮಲಾಲಯಾ | ರೋಹಿತ |
| 7 | ಣಿ | ತ್ರಿವಿಕ್ರಮ | ರಮಾ | ಗರ್ಗ್ಗ |
| 8 | ಯಂ | ವಾಮನ | ವೃಷಾಕಪಿ | ಶಾತಾತಪ |
| 9 | ಭರ್ | ಶ್ರೀಧರ | ಧನ್ಯಾ | ಸನತ್ಕುಮಾರ |
| 10 | ಗೋ | ಹೃಷಿಕೇಶ | ವೃದ್ಧಿ | ಕಶ್ಯಪ |
| 11 | ದೇ | ಪದ್ಮನಾಭ | ಯಜ್ಞಾ | ಅತ್ರಿ |
| 12 | ವ | ದಾಮೋದರ | ಇಂದಿರಾ | ಭಾರ್ಗ್ಗವ |
| 13 | ಸ್ಯ | ಸಂಕರ್ಷಣ | ಹಿರಣ್ಯಾ | ಪರಾಶರ |
| 14 | ಧೀ | ವಾಸುದೇವ | ಹರಿಣೀ | ಪುಂಡರೀಕ |
| 15 | ಮ | ಪ್ರದ್ಯುಮ್ನ | ಸತ್ಯಾ | ಕ್ರತು |
| 16 | ಹಿ | ಅನಿರುದ್ಧ | ನಿತ್ಯಾ | ದಕ್ಷ |
| 17 | ಧಿ | ಪುರುಷೋತ್ತಮ | (ಆ)ನಂದಾ | ಅಂಗಿರಸ್ |
| 18 | ಯೋ | ಅಧೋಕ್ಷಜ | ತ್ರಯೀ | ಕಾರ್ತ್ತಿಕೇಯ |
| 19 | ಯೋ | ನೃಸಿಂಹ | ಸುಖಾ | ಮುದ್ಗಲ |
| 20 | ನಃ | ಅಚ್ಯುತ | ಸುಗಂಧಾ | ಉಶನಸ್ |
| 21 | ಪ್ರ | ಜನಾರ್ದ್ದನ | ಸುಂದರೀ | ರೋಮಶ |
| 22 | ಚೋ | ಉಪೇಂದ್ರ | ವಿದ್ಯಾ | ಮೃಗ |
| 23 | ದ | ಹರಿ | ಸುಶೀಲಾ | ಅಗಸ್ತ್ಯ |
| 24 | ಯಾತ್ | ಕೃಷ್ಣ | ಸುಲಕ್ಷಣಾ | ವಿಶ್ವಾಮಿತ್ರ |

## ೨೪ ಅಕ್ಷರಗಳ ಪಾಪಹರ ಸ್ವರೂಪಚಿಂತನೆ

**ಯರಲವಾಃ ಕ್ಷೈಪ್ರಾಃ**

**ಕ್ಷೈಪ್ರಸಂಯೋಗೈಕಾಕ್ಷರೀಭವಾನ್ ವ್ಯೂಹೇತ್**

ಎನ್ನುವುದಾಗಿ ಅಕ್ಷರದ ಉಚ್ಚಾರಣೆಯ ನಿಯಮ ಸೂತ್ರ. **ವರ್ಣರತ್ನಪ್ರದೀಪಿಕಾಶಿಕ್ಷಾದ** ಮಾತು –

**ಇ ಉ ವರ್ಣಾವುದಾತ್ತೌ ಚೇತ್ ಅನುದಾತ್ತಸ್ವರೋದಯೌ**

**ಯವಾಭ್ಯಾಂ ಚೈವ ಸಂಯುಕ್ತೌ ತದಾ ಕ್ಷೈಪ್ರಃ ಸ್ವರೋ ಭವೇತ್**

ಇಲ್ಲಿ ಪ್ರಸಿದ್ಧ ಗಾಯತ್ರೀ ಮಂತ್ರದಲ್ಲಿ ಏಳನೆಯ ಅಕ್ಷರವು ಣ್ಯ ಎಂದಿದೆ. ಇದರ ಉಚ್ಚಾರಣೆ ಣಿ ಮತ್ತು ಯ. ಹೀಗೆ ಇಲ್ಲಿ ಇಪ್ಪತ್ನಾಲ್ಕು ಅಕ್ಷರಗಳ ಚಿಂತನೆ ಸಾಗಿದೆ –

1. **ತತ್ಕಾರಂ** ಚಂಪಕಾಕಾರಂ ಬ್ರಹ್ಮವಿಷ್ಣುಶಿವಾತ್ಮಕಮ್
   ಶಾಂತಂ ಪದ್ಮಾಸನಾರೂಢಂ ಧ್ಯಾಯೇತ್ಸ್ವಸ್ಥಾನಸಂಸ್ಥಿತಮ್
2. **ಸಕಾರಂ** ಚಿಂತಯೇದ್ವ್ಯಾಮಂ ಅತಸೀಪುಷ್ಪಸನ್ನಿಭಮ್
   ಪರ್ವಮಧ್ಯಸ್ಥಿತಂ ಸೌಮ್ಯಂ ಉಪಪಾತಕನಾಶನಮ್
3. **ವಿಕಾರಂ** ಕಪಿಲಂ ಚಿಂತ್ಯಂ ಕಪಿಲಾಸನಸಂಸ್ಥಿತಮ್
   ಧ್ಯಾಯೇಚ್ಛಾಂತಂ ದ್ವಿಜಶ್ರೇಷ್ಠ ಮಹಾಪಾತಕನಾಶನಮ್
4. **ತುಕಾರಂ** ಚಿಂತಯೇತ್ಪ್ರಾಜ್ಞ ಇಂದ್ರನೀಲಸಮಪ್ರಭಮ್
   ನಿರ್ದಹೇತ್ಸರ್ವದುಃಖಂ ತು ಉಗ್ರರೋಗಸಮುದ್ಭವಮ್
5. **ವಕಾರಂ** ವಹ್ನಿದೀಪ್ತಾಭಂ ಚಿಂತಯೇತ್ತು ವಿಚಕ್ಷಣಃ
   ಭ್ರೂಣಹತ್ಯಾಕೃತಂ ಪಾಪಂ ತತ್ಕ್ಷಣಾದೇವ ನಶ್ಯತಿ
6. **ರೇಕಾರಂ** ವಿಮಲಂ ಧ್ಯಾಯೇತ್ ಶುದ್ಧಸ್ಫಟಿಕಸಂನಿಭಮ್
   ಪಾಪಂ ನಶ್ಯತಿ ತತ್ಕ್ಷಿಪ್ರಂ ಅಗಮ್ಯಾಗಮನೋದ್ಭವಮ್



7. **ಣಿಕಾರಂ** ಚಿಂತಯೇದ್ಯೋಗೀ ವಿದ್ಯುತ್ಸ್ಫಟಿಕಸಂನಿಭಮ್
ಅಭಕ್ಷ್ಯಭಕ್ಷಜಂ ಪಾಪಂ ತತ್ಕ್ಷಣಾದೇವ ನಶ್ಯತಿ

8. **ಯಕಾರಂ** ತಾರಕಾವರ್ಣ್ಣಂ ಇಂದುರೇಖಾವಿಭೂಷಿತಮ್
ಯೋಗಿನಾಂ ವರದಂ ಧ್ಯಾಯೇತ್ ಬ್ರಹ್ಮಹತ್ಯಾವಿನಾಶನಮ್

9. **ಭರ್ಕಾರಂ** ಕೃಷ್ಣವರ್ಣ್ಣಂ ತು ನೀಲಮೇಘಸಮಪ್ರಭಮ್
ಧ್ಯಾತ್ವಾ ಪುರುಷಹತ್ಯಾದಿಪಾಪಂ ನಾಶಯತಿ ದ್ವಿಜಾಃ

10. **ಗೋಕಾರಂ** ರಕ್ತವರ್ಣ್ಣಂ ತು ಕಮಲಾಸನಸಂಸ್ಥಿತಮ್
ಗೋಹತ್ಯಾದಿಕೃತಂ ಪಾಪಂ ನಾಶಯಂತಂ ವಿಚಿಂತಯೇತ್

11. **ದೇಕಾರಂ** ರಕ್ತಸಂಕಾಶಂ ಕಮಲಾಸನಸಂಸ್ಥಿತಮ್
ಸತತಂ ಚಿಂತಯೇದ್ಯೋಗೀ ಸ್ತ್ರೀಹತ್ಯಾಸಹನಂ ಪರಮ್

12. **ವಕಾರಂ** ಶುಕ್ಲವರ್ಣ್ಣಂ ತು ಜಾತಿಪುಷ್ಪಸಮಪ್ರಭಮ್
ಗುರುತಲ್ಪಕೃತಂ ಪಾಪಂ ಧ್ಯಾತ್ವಾ ದಹತಿ ತತ್ಕ್ಷಣಾತ್

13. **ಸ್ಯಕಾರಂ** ತು ತಥಾ ಪೀತಂ ಸುವರ್ಣ್ಣಸದೃಶಪ್ರಭಮ್
ಮನಸಾ ಚಿಂತಿತಂ ಪಾಪಂ ಧ್ಯಾತ್ವಾ ದಹತಿ ಚಾಽನಘ

14. **ಧೀಕಾರಂ** ಚಿಂತಯೇಚ್ಛುಕ್ಲಂ ಕುಂದಪುಷ್ಪಸಮಪ್ರಭಮ್
ಪಿತೃಮಾತೃವಧಾತ್ಪಾಪಾತ್ ಮುಚ್ಯತೇ ನಾತ್ರ ಸಂಶಯಃ

15. **ಮಕಾರಂ** ಪದ್ಮರಾಗಾಭಂ ಚಿಂತಯೇದ್ದೀಪ್ತತೇಜಸಮ್
ಪೂರ್ವಜನ್ಮಾರ್ಜ್ಜಿತಂ ಪಾಪಂ ತತ್ಕ್ಷಣಾದೇವ ನಶ್ಯತಿ

16. **ಹಿಕಾರಂ** ಶಂಖವರ್ಣ್ಣಂ ತು ಪೂರ್ಣ್ಣಚಂದ್ರಸಮಪ್ರಭಮ್
ಅಶೇಷಪಾಪದಹನಂ ಧ್ಯಾಯೇನ್ನಿತ್ಯಂ ವಿಚಕ್ಷಣಃ

17. **ಧಿಕಾರಂ** ಪಾಂಡುರಂ ಧ್ಯಾಯೇತ್ ಪದ್ಮಸ್ಯೋಪರಿ ಸಂಸ್ಥಿತಮ್
ಪ್ರತಿಗ್ರಹಕೃತಂ ಪಾಪಂ ಸ್ಮರಣಾದೇವ ನಶ್ಯತಿ

18. **ಯೋಕಾರಂ** ರಕ್ತವರ್ಣ್ಣಂ ತು ಇಂದ್ರಗೋಪಸಮಪ್ರಭಮ್
ಜ್ಞಾತ್ವಾ ಪ್ರಾಣಿವಧೇ ಪಾಪಂ ನಿರ್ದ್ದಹೇನ್ಮುನಿಪುಂಗವ



**19.** ದ್ವಿತೀಯಶ್ಚೈವ ಯಃ ಪ್ರೋಕ್ತೋ **ಯೋಕಾರೋ** ರುಗ್ಮಸಂನಿಭಃ
ನಿರ್ದ್ದಹೇತ್ಸರ್ವಪಾಪಾನಿ ನಾನ್ಯೈಃ ಪಾಪೈಶ್ಚ ಲಿಪ್ಯತೇ

**20. ನಕಾರಂ** ತು ಮುಖಂ ಪೂರ್ವಂ ಆದಿತ್ಯೋದಯಸನ್ನಿಭಮ್
ಸಕೃದ್ಧ್ಯಾತ್ವಾ ದ್ವಿಜಶ್ರೇಷ್ಠ ಸ ಗಚ್ಛೇದೀಶ್ವರಂ ಪದಮ್

**21.** ನೀಲೋತ್ಪಲದಳಶ್ಯಾಮಂ **ಪ್ರಕಾರಂ** ದಕ್ಷಿಣಾಮುಖಮ್
ಸಕೃದ್ಧ್ಯಾತ್ವಾ ದ್ವಿಜಶ್ರೇಷ್ಠ ಸ ಗಚ್ಛೇದ್ವೈಷ್ಣವಂ ಪದಮ್

**22.** ಸೌಮ್ಯಂ ಗೋರೋಚನಾಪೀತಂ **ಚೋಕಾರಂ** ಚೋತ್ತರಾತತಮ್
ಸಕೃದ್ಧ್ಯಾತ್ವಾ ದ್ವಿಜಶ್ರೇಷ್ಠ ಸ ಗಚ್ಛೇದ್ದೈವತಂ ಪದಮ್

**23.** ಶುಕ್ಲವರ್ಣ್ಣೇಷುಸಂಕಾಶಂ **ದಕಾರಂ** ಪಶ್ಚಿಮಾನನಮ್
ಸಕೃದ್ಧ್ಯಾತ್ವಾ ದ್ವಿಜಶ್ರೇಷ್ಠ ಸ ಗಚ್ಛೇದ್ಬ್ರಹ್ಮಣಃ ಪದಮ್

**24. ಯಾತ್ಕಾರಸ್ತು** ಶಿರಃ ಪ್ರೋಕ್ತಂ ಚತುರ್ವದನಸನ್ನಿಭಃ
ಪ್ರತ್ಯಕ್ಷಫಲದೋ ಬ್ರಹ್ಮವಿಷ್ಣುರುದ್ರಾ ಇತಿ ಸ್ಥಿತಿಃ

(ಬ್ರಹ್ಮಯಾಮಲದಲ್ಲಿ ಇನ್ನೊಂದು ತೆರನಾಗಿ ಹೇಳಲಾಗಿದೆ.)

## ೨೪ ಅಕ್ಷರಗಳ ಬಣ್ಣ

**ಗರುಡಪುರಾಣದಲ್ಲಿ** 23 ಅಕ್ಷರಗಳ ಬಣ್ಣವೇನೆಂದು ತಿಳಿಸಿದ್ದಾರೆ. ಕ್ಷೈಪ್ರಾಕ್ಷರವನ್ನು ಎರಡಾಗಿ ಪರಿಗಣಿಸಲಿಲ್ಲ. ಣ್ಯಂ (ಣಿಯಂ) ಅಕ್ಷರವೆರಡಕ್ಕೆ ಒಂದೇ ಬಣ್ಣ –

**ಇಂದ್ರನೀಲಂ ಚ ವಹ್ನಿಂ ಚ ಸಿತಂ ಶ್ಯಾಮಂ ಚ ಕಾಪಿಲಮ್**
**ಶ್ವೇತಂ ವಿದ್ಯುತ್ಪ್ರಭಂ ತಾರಂ ಕೃಷ್ಣಂ ರಕ್ತಂ ಕ್ರಮೇಣ ತತ್**
**ಶ್ಯಾಮಂ ಶುಕ್ಲಂ ತಥಾ ಪೀತಂ ಶ್ವೇತಂ ವೈ ಪದ್ಮರಾಗವತ್**
**ಶಂಖವರ್ಣ್ಣಂ ಪಾಂಡುರಂ ಚ ರಕ್ತಂ ಚಾಸವಸನ್ನಿಭಮ್**
**ಅರ್ಕವರ್ಣ್ಣಸಮಂ ಸೌಮ್ಯಂ ಶಂಖಾಭಂ ಶ್ವೇತಮೇವ ಚ**



# ೨೪ ಅಕ್ಷರಗಳ ಅಭಿಮಾನಿದೇವತೆಗಳು

**ಅಗ್ನಿರ್ಹ ವಾವ ರಾಜನ್ ಗಾಯತ್ರೀಮುಖಂ** ಎಂದು **ಜೈಮಿನೀಯಾರಣ್ಯಕ**ದಲ್ಲಿ ಗಾಯತ್ರೀಮಂತ್ರದ ಆರಂಭದಲ್ಲಿ ಅಗ್ನಿಯನ್ನು ಮುಖವೆಂದು ತಿಳಿಸಿದ್ದಾರೆ. ಇದರಿಂದ ಪ್ರಾರಂಭದ ದೇವತೆ ಅಗ್ನಿ ಎಂದು ತಿಳಿಯುವುದು. ಅದರಂತೆ ಅಗ್ನಿಯಿಂದ ಆರಂಭಿಸಿ ಇತರ ದೇವತೆಗಳ ಚಿಂತನೆಯನ್ನು ಗಾಯತ್ರಿಯಲ್ಲಿ ನಡೆಸುವಂತೆ ಸೂಚನೆ ಸಿಕ್ಕಿದೆ. ಮಧ್ವಾಚಾರ್ಯರು **ಸದಾಚಾರಸ್ಮೃತಿ**ಯಲ್ಲಿ ಅರ್ಘ್ಯಾನಂತರ ತರ್ಪಣವನ್ನು ಹೇಳುವಲ್ಲಿ **ತರ್ಪಯಿತ್ವಾ ಸುರಾದಿಕಾನ್** ಎನ್ನುತ್ತಾ ಸುರಾದಿಕ ಎನಿಸುವ ಅಗ್ನಿಯನ್ನು ನೆನಪಿಸಿದ್ದಾರೆ. ದೇವತೆಗಳಲ್ಲಿ ಕೆಳಗಿನಿಂದ ಮೊದಲಿಗನು ಅಗ್ನಿ – **ಅಗ್ನಿರ್ವೈ ದೇವಾನಾಮವಮಃ ವಿಷ್ಣುಃ ಪರಮಃ** ಎನ್ನುವುದಾಗಿ ಅನೇಕ ಬ್ರಾಹ್ಮಣಗಳ, ಆರಣ್ಯಕಗಳ ನೂರಾರು ಕಡೆಯ ಗೆರೆ. ಅದಕ್ಕಾಗಿಯೇ ಇಲ್ಲಿ ಅಗ್ನಿಯನ್ನು ಸುರಾದಿಕ ಶಬ್ದದಿಂದ ಗುರುತಿಸಿದ್ದಾರೆ. ಹಿಂದೆ ತರ್ಪಣದಲ್ಲಿ ಬಂದಿರುವ ದೇವತೆಗಳ ನಾಮಗಳಿಗಿಂತ ತುಸು ಭಿನ್ನವಾಗಿ ಇಲ್ಲಿ **ಪದ್ಮಪುರಾಣ**ವು ಹೇಳಿದೆ –

**ಆಗ್ನೇಯಂ ಪ್ರಥಮಂ ತು ಸ್ಯಾತ್ ವಾಯವ್ಯಂ ತು ದ್ವಿತೀಯಕಮ್**
**ತೃತೀಯಂ ಸೂರ್ಯದೈವತ್ಯಂ ಚತುರ್ಥಂ ವೈದ್ಯುತಂ ತಥಾ**
**ಪಂಚಮಂ ಯಮದೈವತ್ಯಂ ವಾರುಣಂ ಷಷ್ಠಮುಚ್ಯತೇ**
**ಬಾರ್ಹಸ್ಪತ್ಯಂ ಸಪ್ತಮಂ ತು ಪಾರ್ಜನ್ಯಂ ಚಾಷ್ಟಮಂ ವಿದುಃ**
**ಐಂದ್ರಂ ತು ನವಮಂ ಪ್ರೋಕ್ತಂ ಗಾಂಧರ್ವಂ ದಶಮಂ ಸ್ಮೃತಮ್**
**ಪೌಷ್ಣಮೇಕಾದಶಂ ಪ್ರೋಕ್ತಂ ಮೈತ್ರಂ ದ್ವಾದಶಕಂ ಸ್ಮೃತಮ್**
**ತ್ವಾಷ್ಟ್ರಂ ತ್ರಯೋದಶಂ ಪ್ರೋಕ್ತಂ ವಾಸವಂ ತು ಚತುರ್ದಶಮ್**
**ಮಾರುತಂ ಪಂಚದಶಕಂ ಸೌಮ್ಯಂ ಷೋಡಶಕಂ ಸ್ಮೃತಮ್**
**ಸಪ್ತದಶಂ ತ್ವಾಂಗಿರಸಂ ವೈಶ್ವದೇವಮತಃ ಪರಮ್**
**ಆಶ್ವಿನಂ ಚೈಕೋನವಿಂಶಂ ಪ್ರಾಜಾಪತ್ಯಂ ಚ ವಿಂಶಕಮ್**
**ಸರ್ವದೇವಮಯಂ ಪ್ರೋಕ್ತಂ ಏಕವಿಂಶಕಮಕ್ಷರಮ್**
**ರೌದ್ರಂ ದ್ವಾವಿಂಶಕಂ ಪ್ರೋಕ್ತಂ ಬ್ರಾಹ್ಮಂ ಚೈವ ತತಃ ಪರಮ್**
**ವೈಷ್ಣವಂ ತು ಚತುರ್ವಿಂಶಂ ಏತಾ ಅಕ್ಷರದೇವತಾಃ**
**ಜಪಕಾಲೇ ತು ಸಂಚಿಂತ್ಯ ತಾಸು ಸಾಯುಜ್ಯಮಾಪ್ನುಯಾತ್**

# ೨೪ ಅಕ್ಷರ ತತ್ವಗಳು

ಪಂಚಭೂತಗಳು, ಪಂಚವಿಷಯಗಳು, ಪಂಚಕರ್ಮೇಂದ್ರಿಯಗಳು, ಪಂಚಜ್ಞಾನೇಂದ್ರಿಯಗಳು, ಮನಸ್ಸು – ಅಹಂಕಾರ – ಮಹತ್ತತ್ವಗಳೊಡನೆ ಗುಣತ್ರಯಾಭಿಮಾನಿನಿ ಪ್ರಕೃತಿ ಸೇರಿ ಒಟ್ಟು 24 ತತ್ವಗಳು ಗಾಯತ್ರಿಯ 24 ಅಕ್ಷರಗಳಿಗೆ ಸಂಬಂಧಪಟ್ಟವುಗಳು. ಈ ಹಿಂದೆಯೇ ಜಪಾರಂಭದಲ್ಲಿ ತತ್ವನ್ಯಾಸದ ಸಂದರ್ಭದಲ್ಲಿ ಇವುಗಳ ಚಿಂತನೆ ಸಾಗಿದೆ.

**ಅಥ ತತ್ವಾನಿ ವಕ್ಷ್ಯಾಮಿ ಅಕ್ಷರಾಣಾಂ ವಿಶೇಷತಃ**
**ಪೃಥವೀ ಹ್ಯುದಕಂ ತೇಜೋ ವಾಯುರಂಬರಮೇವ ಚ**
**ಗಂಧೋ ರಸೋಽಥ ರೂಪಂ ಚ ಸ್ಪರ್ಶಃ ಶಬ್ದೋಽಥ ವಾಗಪಿ**
**ಹಸ್ತಾವುಪಸ್ಥಂ ಪಾಯುಶ್ಚ ಪಚ್ಛ್ರೋತ್ರಂ ತ್ವಕ್ಚ ಚಕ್ಷುಷೀ**
**ಜಿಹ್ವಾ ಘ್ರಾಣಂ ಮನಸ್ತತ್ವಂ ಅಹಂಕಾರೋ ಮಹಾಂಸ್ತಥಾ**
**ಗುಣತ್ರಯಂ ಚ ಸತತಂ ಕ್ರಮಶಸ್ತತ್ವನಿಶ್ಚಯಃ**

# ೨೪ ಅಕ್ಷರ ಶಕ್ತಿಗಳು

1 **ಸಹಾ** 2 **ನಿತ್ಯಾ** ತಥಾ 3 **ವಿಶ್ವಹೃದಯಾ** ಚ 4 **ವಿಲಾಸಿನೀ**
5 **ಪ್ರಭಾವತೀ** ತಥಾ 6 **ಲೋಲಾ** 7 **ಶಾಂತಾ** 8 **ಶಾಂತಿಸ್ತಥಾಷ್ಟಮೀ**
9 **ದುರ್ಗಾ** 10 **ಸರಸ್ವತೀ** 11 **ವಿಷ್ಣುರೂಪಾ** ಚಾಪಿ 12 **ವಿಶಾ** ಸ್ಮೃತಾ
13 **ಲೋಲಾವತೀ** ಚ 14 **ವಿಮಲಾ** ತಥೈವ ಚ 15 **ತಮೋಮಯೀ**
16 **ಹಿರಣ್ಯರೂಪಾ** ಸಂಪ್ರೋಕ್ತಾ ಷೋಡಶೀ ಶಕ್ತಿರೇವ ಹಿ
17 **ಸುಕರ್ಮಾ** ಸಪ್ತದಶಮೀ 18 **ವಿಶ್ವಯೋನಿರ್ಜ್ಞಯಾವಹಾ** 19
20 **ಪದ್ಮಾಲಯಾ** 21 **ವರಾ** ಚೈವ 22 **ಶೋಭನಾ** ಚ 23 **ಗದಾ** ಸ್ಮೃತಾ
24 **ರೂಪೇತಿ** ಶಕ್ತಯೋ ಹ್ಯೇತಾಃ ಗಾಯತ್ರ್ಯಕ್ಷರಸಂಗತಾಃ

(ಗಾಯತ್ರೀರಹಸ್ಯದಲ್ಲಿ 24 ಋಷಿಗಳಲ್ಲಿ ಕೆಲವು ವ್ಯತ್ಯಾಸದಂತೆ ದೇವತಾಶಕ್ತಿಗಳ ನಾಮಗಳಲ್ಲೂ ಕೆಲವು ವ್ಯತ್ಯಾಸಗಳನ್ನೂ ಕಾಣಬಹುದು.)



# ೨೪ ಅಕ್ಷರಗಳಿಂದ ಕರನ್ಯಾಸ

ವಿಶ್ವಾಮಿತ್ರ ಗಾಯತ್ರಿಯಿಂದ ಅಂಗುಲಿನ್ಯಾಸ –

**ಓಂ ಭೂರಂಗುಷ್ಠಯೋರ್ನ್ಯಸ್ಯ ಓಂಭುವಸ್ತರ್ಜನೀದ್ವಯೇ**
**ಓಂ ಸ್ವಶ್ಚೈವ ತಥಾ ನ್ಯಸ್ಯ ಮಧ್ಯಮಾಯಾಂ ಯತೇಂದ್ರಿಯಃ**
**ಅನಾಮಿಕಾದ್ವಯೇ ಧೀಮಾನ್ ನ್ಯಸೇತ್ತತ್ಪಾದಮಗ್ರತಃ**
**ಕನಿಷ್ಠಿಕಾದ್ವಯೇ ಭರ್ಗ್ಗಃ ಪಾಣ್ಯೋರ್ಮ್ಮಧ್ಯೇ ಧಿಯಃ ಪದಮ್**

ಇದರಲ್ಲಿ ಮೂರು ವ್ಯಾಹೃತಿಗಳಿಂದ ಹಾಗೂ ಮೂರು ಪಾದದ ಗಾಯತ್ರಿಯಿಂದ ಕರನ್ಯಾಸವನ್ನು ಹೇಳಲಾಗಿದೆ. ಈಗ ವಿಶ್ವಾಮಿತ್ರಗಾಯತ್ರೀ ಮಂತ್ರ ಜಪಿಸುವವರು ಸಂಧ್ಯಾವಂದನೆಯಲ್ಲಿ ಬ್ರಹ್ಮಗಾಯತ್ರಿಯ ಅಂಗನ್ಯಾಸ –ಕರನ್ಯಾಸಗಳನ್ನೆ ಮಾಡುವರು. ಇವರು ವಿಶ್ವಾಮಿತ್ರ ಗಾಯತ್ರಿಯಿಂದ ನಡೆಸಲಾಗುವ ಅಂಗನ್ಯಾಸಾದಿಗಳನ್ನು ತಿಳಿದಿಲ್ಲ.

**ತರ್ಜ್ಜನ್ಯಾದಿ ಕನಿಷ್ಠಾಂತಂ ಸೃಷ್ಟಿನ್ಯಾಸಂ ಪ್ರಕೀರ್ತ್ತಿತಮ್**

**ಅನಿರುದ್ಧಸಂಹಿತೆಯು** ಕರನ್ಯಾಸದಲ್ಲಿಯೂ ಸೃಷ್ಟಿಲಯನ್ಯಾಸವನ್ನು ಗುರುತಿಸಿದೆ. ತೋರುಬೆರಳಿನಿಂದ ಕಿರುಬೆರಳ ತನಕ ನ್ಯಾಸ ನಡೆಸಿದಾಗ ಇದು ಸೃಷ್ಟಿನ್ಯಾಸವೆನಿಸುವುದು. ಈಗ ಎಲ್ಲಾ ಮಂತ್ರಗಳ ಜಪದಲ್ಲಿಯೂ ಕರನ್ಯಾಸವನ್ನು ಹೀಗೆಯೇ ನಡೆಸಿಕೊಡುವರು.

**ಮುದ್ರಯಾ ಸಿದ್ಧ್ಯತೇ ಜ್ಞಾನಂ ತಥಾ ಕರ್ಮ್ಮ ಪ್ರಶಸ್ಯತೇ**
**ಮುದ್ರಯಾ ಪ್ರೀಯತೇ ದೇವಃ ತಥಾ ಸನ್ನಿಹಿತೋ ಭವೇತ್**

ಆಯಾ ಮುದ್ರೆಯಿಂದ ನ್ಯಾಸಮಾಡಿದಾಗ ಮಾತ್ರ ಅದು ದೇವಸಾನ್ನಿಧ್ಯಕ್ಕೂ ಭಕ್ತಿಜ್ಞಾನವೃದ್ಧಿಗೂ ಕರ್ಮಪೂರ್ತಿಗೂ ಕಾರಣವಾಗುತ್ತದೆ. ಕರನ್ಯಾಸಕ್ಕೆ ಹೆಬ್ಬೆರಳ ಸ್ಪರ್ಶ ವಿಹಿತ –

**ತರ್ಜ್ಜನೀಪೃಷ್ಠಸಂಸ್ಪರ್ಶೋಽಂಗುಷ್ಠೇನಾಂಗುಷ್ಠಮುದ್ರಿಕಾ**
**ತರ್ಜ್ಜನ್ಯಾದಿಪುರೋಭಾಗೇಷ್ವಾಮೂಲಾಗ್ರಂ ಸ್ಪೃಶಿಕ್ರಿಯಾ**
**ಅಂಗುಷ್ಠಾಗ್ರೇಣ ವಿಜ್ಞೇಯಾಃ ತರ್ಜ್ಜನ್ಯಾದಿಚತುಷ್ಟಯೇ**
**ಕರಯೋಸ್ತಲಪೃಷ್ಠಾಭ್ಯಾಂ ವ್ಯತ್ಯಾಸೇನ ಪರಸ್ಪರಮ್**
**ಸಂಸ್ಪರ್ಶಾದ್ಭವತೋ ಮುದ್ರೇ ಕರಯೋಸ್ತಲಪೃಷ್ಠಯೋಃ**



# ೨೪ ಅಕ್ಷರಗಳಿಂದ ಷಡಂಗನ್ಯಾಸ

**ಅಗ್ನಿಪುರಾಣವು** ಹೃದಯಾದಿ ಷಡಂಗನ್ಯಾಸವನ್ನು ನಡೆಸುವಾಗ ಮಂತ್ರದ ಕೊನೆಯಲ್ಲಿ ಹೇಳಬೇಕಾದ ಪದಗಳನ್ನು ಉದ್ಧರಿಸಿದೆ –

**ನಮಃ ಸ್ವಾಹಾ ತಥಾ ವಷಟ್ ಹುಮೌಷಟ್ ಫಟ್ ಕ್ರಮೇಣ ತು**
**ಜಾತಿಷಟ್ಕಂ ಹೃದಾದೀನಾಂ ....**

ನೇತ್ರನ್ಯಾಸ ಬಿಟ್ಟರೆ ಪಂಚಾಂಗನ್ಯಾಸ ಎಂದು **ಅಗ್ನಿಪುರಾಣ** –

**ಹೃದಾದೀನ್ಯಂಗಮಂತ್ರಾಂತ್ಯೈಃ ಯೋ ಜಪೇದ್ಧೃದಯೇ ನಮಃ**
**ಸ್ವಾಹಾ ಶಿರಸ್ಯಥ ವಷಟ್ ಶಿಖಾಯಾಂ ಕವಚೇ ಚ ಹುಮ್**
**ಔಷಣ್ಣೇತ್ರೇಽಸ್ತ್ರಾಯ ಫಟ್ ಸ್ಯಾತ್ ಪಂಚಾಂಗಂ ನೇತ್ರವರ್ಜ್ಜಿತಮ್**

ನ್ಯಾಸ ನಡೆಸುವಾಗ ಪ್ರಣವ ಆಚೀಚೆ ಸೇರಿಸಬೇಕೆಂದು **ಈಶ್ವರಸಂಹಿತೆ** –

**ಪ್ರಣವಾದೀನಿ ಚೈತಾನಿ ತುರ್ಯಾಂತ್ಯೈರ್ಹೃದಯಾದಿಭಿಃ**
**ನಮಃ ಸ್ವಾಹಾ ವಷಟ್ ಹುಂ ಫಟ್ ಔಷಡ್ಭಿರ್ಜ್ಜಾತಿಭಿಃ ಸಹ**

ಗಾಯತ್ರಿಯ 4,4,5,3,4 ಮತ್ತು 4 ಅಕ್ಷರಗಳಿಂದ 6 ಅಂಗಗಳಲ್ಲಿ ನ್ಯಾಸವನ್ನು ನಡೆಸುವಂತೆ ತಿಳಿಸಿದ್ದಾರೆ –

**ಚತುರ್ಭಿಃ ಹೃದಯಂ ಪ್ರೋಕ್ತಂ ಚತುರ್ಭಿಸ್ತು ಶಿರಃ ಸ್ಮೃತಮ್**
**ಪಂಚಭಿಃ ಸ್ಯಾಚ್ಛಿಖಾ ಪಶ್ಚಾತ್ ತ್ರಿಭಿಸ್ತು ಕವಚಂ ಸ್ಮೃತಮ್**
**ಚತುರ್ಭಿರ್ನ್ನೇತ್ರಮುದ್ದಿಷ್ಟಂ ಚತುರ್ಭಿಸ್ಸ್ಯಾತ್ತದಸ್ತ್ರಕಮ್**

ಮಂತ್ರಾಕ್ಷರಗಳ ಉಲ್ಲೇಖದೊಂದಿಗೆ ಷಡಂಗನ್ಯಾಸ ಹೀಗೆ –

**ಹೃದಿ ತತ್ಸವಿತುರ್ನ್ಯಸ್ಯ ವರೇಣ್ಯಂ ಶಿರಸಿ ನ್ಯಸೇತ್**
**ಭರ್ಗ್ಗೋ ದೇವಸ್ಯೇತಿ ಖಂಡಂ ಶಿಖಾಯಾಂ ತು ತತೋ ನ್ಯಸೇತ್**
**ಕವಚೇ ಧೀಮಹೀತಿ ಸ್ಯಾತ್ ಧಿಯೋ ಯೋ ನಶ್ಚ ನೇತ್ರಯೋಃ**
**ಪ್ರಚೋದಯಾದಿತಿ ಪದಂ ಅಸ್ತ್ರಾರ್ಥೇ ವಿನಿಯೋಜಯೇತ್**

ಹೀಗೆಯೇ ಅಂಗುಲಿನ್ಯಾಸವನ್ನು ಲೌಗಾಕ್ಷಿಸ್ಮೃತಿ ಹೇಳಿದೆ.



ವಿಶ್ವಾಮಿತ್ರಗಾಯತ್ರಿಯಿಂದ ಷಡಂಗನ್ಯಾಸ –

**ಓಂ ಭೂರ್ವಿನ್ಯಸ್ಯ ಹೃದಯೇ ಓಂ ಭುವಃ ಶಿರಸಿ ನ್ಯಸೇತ್**

**ಓಂ ಸ್ವಃ ಶಿಖಾಯಾಂ ವಿನ್ಯಸ್ಯ ಗಾಯತ್ರ್ಯಾಃ ಪ್ರಥಮಂ ಪದಮ್**

**ವಿನ್ಯಸೇತ್ಕವಚೇ ಧೀಮಾನ್ ದ್ವಿತೀಯಂ ನೇತ್ರಯೋರ್ನ್ಯಸೇತ್**

**ತೃತೀಯಪಾದೇನಾಸ್ತ್ರಂ ಸ್ಯಾತ್ ಏವಂ ನ್ಯಾಸವಿಧಿಃ ಸ್ಮೃತಃ**

**ಗರುಡಪುರಾಣದಲ್ಲಿ ತೃತೀಯೇನಾಂಗವಿನ್ಯಾಸಂ ಚತುರ್ಥಂ ಸರ್ವತೋ ನ್ಯಸೇತ್** ಎನ್ನುವುದಾಗಿ ಸಪ್ತಾಂಗವನ್ನು ಪರಿಚಯಿಸಿದ್ದಾರೆ.

ಈ ಷಡಂಗನ್ಯಾಸದಲ್ಲಿ ಪ್ರಣವಕ್ಕೆ ಮಾತ್ರ ಅಂಗನ್ಯಾಸ ಹೇಳಲಿಲ್ಲ. ಇದನ್ನು ಸೇರಿಸಿದ ಇನ್ನೊಂದು ತೆರನಾದ ಷಡಂಗನ್ಯಾಸವೂ ಇದೆ –

**ಓಂ ಓಂ ಹೃದಯಾಯ ನಮಃ**

**ಓಂ ಭೂಃ ಶಿರಸೇ ಸ್ವಾಹಾ**

**ಓಂ ಭುವಃ ಶಿಖಾಯೈ ವಷಟ್**

**ಓಂ ಸ್ವಃ ಕವಚಾಯ ಹುಮ್**

**ಓಂ ಭೂರ್ಭುವಃಸ್ವಃ ನೇತ್ರಾಭ್ಯಾಂ ವೌಷಟ್**

**ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ**

**ಧಿಯೋ ಯೋ ನಃ ಪ್ರಚೋದಯಾತ್ ಅಸ್ತ್ರಾಯ ಫಟ್**

ಇದರಲ್ಲಿ ನೇತ್ರನ್ಯಾಸವನ್ನು ಬಿಟ್ಟು ಪಂಚಾಂಗನ್ಯಾಸವನ್ನು ಮಾಡಬಹುದೆಂದು ತಂತ್ರಗಳ ಮಾತು.

ಹೃದಯಾದಿ ಷಡಂಗನ್ಯಾಸಕ್ಕೆ ಆಯಾ ಮುದ್ರೆಗಳನ್ನು ಬಳಸಬೇಕು.

ಹೆಬ್ಬೆರಳು ಒಳಗಿದ್ದ ಬಲಕೈ ಮುಷ್ಟಿಯನ್ನು ಹೃದಯದ ಸನಿಹ ಹಿಡಿದಾಗ **ಹೃದಯಮುದ್ರೆ** ಆಗುವುದು. ಬಲಕೈ ಬೆರಳುಗಳು ಒಳ ಮಡಿಸಿದ್ದು ಹೆಬ್ಬೆರಳ ತುದಿಗೆ ತೋರುಬೆರಳು ಸೇರಿಸಿ ಇದರಿಂದ ಹಣೆಯ ತುದಿಯನ್ನು ಮುಟ್ಟಿದಾಗ **ಶಿರೋಮುದ್ರೆ** ಆಗಲಿದೆ. ಬಲಕೈ ಮುಷ್ಟಿ ಹಿಡಿದು ಹೆಬ್ಬೆರಳು ನೇರವಾಗಿಸಿ ತಲೆಯ ಶಿಖಾಸ್ಥಾನದಲ್ಲಿ ನ್ಯಾಸ ಮಾಡಿದಾಗ **ಶಿಖಾಮುದ್ರೆ**ಯಾಗುವುದು.



ಎರಡೂ ಕೈಗಳಿಂದ ಎರಡೂ ತೋಳುಗಳನ್ನು ವ್ಯತ್ಯಾಸವಾಗಿ ಮೇಲಿನಿಂದ ಕೆಳಗೆ ಸವರಿದಂತೆ ಮಾಡಿದಾಗ **ಕವಚಮುದ್ರೆ** ಎನಿಸುತ್ತದೆ. ಬಲಕೈಯಿಂದ ಉಳಿದ ಬೆರಳುಗಳನ್ನು ಮಡಚಿ ನಡು ಹಾಗೂ ತೋರುಬೆರಳುಗಳಿಂದ ಕಣ್ಣೆರಡನ್ನು ಸ್ಪರ್ಶಿಸಿದಾಗ **ನೇತ್ರಮುದ್ರೆ** ಸಂಭವಿಸುವುದು. ಮೂರು ಬಾರಿ ಕೈಚಪ್ಪಾಳೆ ತಟ್ಟುವ ಮೂಲಕ **ಅಸ್ತ್ರಮುದ್ರೆ**ಯನ್ನು ರಚಿಸಲಾಗುವುದು.

ಕೆಲವು ತಂತ್ರಗಳಿಂದ ಸ್ವಲ್ಪ ವ್ಯತ್ಯಾಸವಾಗಿ ಇದರ ಲಕ್ಷಣಗಳೂ ಕಂಡು ಬರುವುದು. ಇಲ್ಲಿ **ಶ್ರೀಪ್ರಶ್ನಸಂಹಿತಾ**ದ ಪ್ರಮಾಣಗಳನ್ನು ನೀಡಲಾಗಿದೆ. ಇದರಂತೆ **ಕಪಿಂಜಲಸಂಹಿತಾ**ದಲ್ಲಿಯೂ ಲಕ್ಷಣಗಳಿವೆ–

**ಅನಾಮಿಕಾಮಧ್ಯಮಯೋಃ ಮಧ್ಯೇಂಗುಷ್ಠಂ ನಿವೇಶ್ಯ ಚ**<br>**ಮುಷ್ಟಿಂ ಕೃತ್ವಾ ತು ಹೃದಯೇ ನ್ಯಾಸೋ ಹೃದಯಮುದ್ರಿಕಾ**<br>**ಅಧೋ ಬದ್ಧ್ವಾ ತು ತಾಂ ಮುಷ್ಟಿಂ ತರ್ಜನ್ಯಂತೇನ ಯುಕ್ತಯಾ**<br>**ಅಂಗುಷ್ಠೇನ ಬ್ರಹ್ಮರಂಧ್ರಂ ಸಂಸ್ಪೃಶೇತ್ ಶೀರ್ಷಮುದ್ರಿಕಾ**<br>**ಊರ್ಧ್ವಾಂಗುಷ್ಠಯುತಾಂ ಮುಷ್ಟಿಂ ಶಿಖಾಯಾಂ ವಿನ್ಯಸೇದ್ಯದಿ**<br>**ಶಿಖಾಮುದ್ರೇತಿ ಸಾ ಪ್ರೋಕ್ತಾ–**<br>**ಅಂಗುಷ್ಠೌ ಸುದೃಢೌ ಚಾಂತಃ ಕೃತ್ವಾ ಮುಷ್ಟೀ ತು ಹಸ್ತಯೋಃ**<br>**ಮೂಲಭಾಗೇ ದೃಢಂ ನ್ಯಾಸೋ ವ್ಯತ್ಯಾಸೇನ ಭವೇದ್ಯದಿ**<br>**ಸಾ ಮುದ್ರಾ ಕವಚಾಖ್ಯಾ ಸ್ಯಾತ್ ಮಂತ್ರಮುಚ್ಚಾರ್ಯ ವಿನ್ಯಸೇತ್**<br>**ಯದಾ ನೇತ್ರದ್ವಯಂ ಪ್ರೋಕ್ತಂ ತದಾ ತರ್ಜನಿಮಧ್ಯಮಾ**<br>**ಪರಸ್ಪರತಲದ್ವಂದ್ವಂ ಪುನರಾಸ್ಫೋಟಯೇದ್ಭೃಶಮ್**

ಆಚಾರ್ಯಮಧ್ವರು ಅಂಗನ್ಯಾಸ ಮಂತ್ರಗಳ ಮುಖ್ಯ ಅರ್ಥ ನಾರಾಯಣನೆಂದು **ಹರಿರ್ಹಂ ಚ ಹುತಮಸ್ಮಿನ್ ಜಗದ್ಯತಃ** ಎಂಬಲ್ಲಿ ಹೇಳಿದ್ದಾರೆ. ನ್ಯಾಸ ಇಲ್ಲದಲ್ಲಿ ಮಂತ್ರ ವಿಕಲಾಂಗವಾಗುವುದೆಂದು **ವಿಶ್ವಾಮಿತ್ರಕಲ್ಪ**ದ ಮಾತು–

**ಅಂಗನ್ಯಾಸಂ ಕರನ್ಯಾಸಂ ದೇಹನ್ಯಾಸಂ ವಿನಾ ಜಪೇತ್**<br>**ಅಂಧತ್ವಂ ಬಧಿರತ್ವಂ ಚ ಮೂಕತ್ವಂ ಪ್ರಾಪ್ನುಯಾನ್ಮನುಃ**



# ೨೪ ನ್ಯಾಸಸ್ಥಾನಗಳು

**ಕರನ್ಯಾಸಂ ತು ಪೂರ್ವಂ ಸ್ಯಾತ್ ದೇಹನ್ಯಾಸಂ ತು ಪಶ್ಚಿಮಮ್**

**ಅನಿರುದ್ಧಸಂಹಿತೆಯು** ಮಂತ್ರಜಪದ ಆರಂಭದಲ್ಲಿ ಋಷ್ಯಾದಿನ್ಯಾಸದ ಬಳಿಕ ಕರನ್ಯಾಸವನ್ನು ನಡೆಸುವಂತೆ ಹೇಳಿದೆ. ಮತ್ತೆ ಮಂತ್ರಾಕ್ಷರನ್ಯಾಸವನ್ನು ದೇಹದಲ್ಲಿ ನಡೆಸುವಂತೆ ಕರೆಕೊಟ್ಟಿದೆ.

**ತದ್ದೇಹಂ ಮಲದೇಹಂ ಸ್ಯಾತ್ ಯದ್ದೇಹಂ ಮಂತ್ರಹೀನಕಮ್**

**ಯಥಾ ದೇಹೇ ತಥಾ ಬಿಂಬೇ ನ್ಯಾಸಕರ್ಮ್ಮ ಸಮಾಚರೇತ್**

ಮಂತ್ರ ಜಪಿಸುವ ಮೊದಲು ಮಂತ್ರದಲ್ಲಿನ ಅಕ್ಷರಗಳನ್ನು ದೇಹದಲ್ಲಿ ಗುರುತಿಸಿಕೊಳ್ಳಬೇಕು. ದೇಹ ಮಂತ್ರಮಯವಾಗಬೇಕು. ಇಲ್ಲದೇ ಹೋದಲ್ಲಿ ಆ ಮಂತ್ರಜಪಕ್ಕೆ ಈ ದೇಹ ಹೊಲಸು ಎಂದೇ ಲೆಕ್ಕ. ಹೇಗೆ ಪೂಜೆ ಮಾಡುವಾಗ ಆಯಾ ಪ್ರತಿಮೆಯ ದೇವರ ಮಂತ್ರಗಳ ಅಕ್ಷರನ್ಯಾಸವನ್ನು ಆ ಪ್ರತಿಮೆಯ ಅಂಗಾಂಗಗಳಲ್ಲಿ ನಡೆಸುವೆಯೋ ಹಾಗೆ ಪೂಜೆ ಮಾಡುವವನು ತನ್ನಲ್ಲಿಯೂ ಅಕ್ಷರನ್ಯಾಸ ನಡೆಸಬೇಕು. ಜಪಕ್ಕೆ ಮಾನಸ ಪ್ರತಿಮೆ ಮುಖ್ಯ. ಸಾಧಕ ಅದರ ಪ್ರತಿಬಿಂಬ. ಮಂತ್ರದೇವತೆ ಬಿಂಬ. ಹೀಗೆ ನ್ಯಾಸದ ಮುಖ್ಯತೆಯನ್ನು **ಶೇಷಸಂಹಿತೆ** ತಿಳಿಸಿದೆ. ಇದು ಎಲ್ಲ ಮಂತ್ರಗಳಿಗೂ ಅನ್ವಯ. ಇಲ್ಲಿದೆ ಗಾಯತ್ರಿಯ 24 ಅಕ್ಷರದ ನ್ಯಾಸಸ್ಥಾನಗಳು –

**ತತ್ಕಾರಂ ವಿನ್ಯಸೇತ್ಪಾಂಗೇ ಪಾದಾಂಗುಷ್ಠದ್ವಯೇ ದ್ವಿಜಃ**
**ಸಕಾರಂ ಗುಲ್ಫದೇಶೇ ತು ವಿಕಾರಂ ಜಂಘಯೋರ್ನ್ಯಸೇತ್**
**ಜಾನ್ವೋಸ್ತು ವಿದ್ಧಿ ತುಃಕಾರಂ ವಕಾರಂ ಚೋರುದೇಶತಃ**
**ರೇಕಾರಂ ವಿನ್ಯಸೇದ್ಗುಹ್ಯೇ ಣಿಕಾರಂ ವೃಷಣೇ ನ್ಯಸೇತ್**
**ಕಟಿದೇಶೇ ಯಕಾರಂ ಚ ಭರ್ಕ್ಕಾರಂ ನಾಭಿಮಂಡಲೇ**
**ಗೋಕಾರಂ ಜಠರೇ ಯೋಗೀ ದೇಕಾರಂ ಸ್ತನಯೋರ್ನ್ಯಸೇತ್**
**ವಕಾರಂ ಹೃದಿ ವಿನ್ಯಸ್ಯ ಸ್ಯಕಾರಂ ಕಂಠ ಏವ ತು**



ಧೀಕಾರಮಾಸ್ಯೇ ವಿನ್ಯಸ್ಯ ಮಕಾರಂ ತಾಲುಮಧ್ಯತಃ

ಹಿಕಾರಂ ನಾಸಿಕಾಗ್ರೇ ತು ಧಿಕಾರಂ ನಯನದ್ವಯೇ

ಭ್ರುವೋರ್ಮಧ್ಯೇ ತು ಯೋಕಾರಂ ಲಲಾಟೇ ಯೋದ್ವಿತೀಯಕಮ್

ಪೂರ್ವಾನನೇ ತು ನಃಕಾರಂ ಪ್ರಕಾರಂ ದಕ್ಷಿಣಾನನೇ

ಚೋಕಾರಂ ಪಶ್ಚಿಮೇ ನ್ಯಸ್ಯ ದಕಾರಂ ಚಾಸ್ಯ ಉತ್ತರೇ

ವಿನ್ಯಸೇನ್ಮೂರ್ಧ್ನಿ ಯಾತ್ಕಾರಂ ಸರ್ವವ್ಯಾಪಿನಮೀಶ್ವರಮ್

(ಪದ್ಮಪುರಾಣ ಸಂಹಾರಕ್ರಮದಲ್ಲಿ ಹೇಳಿದೆ. ಗರುಡಪುರಾಣವೂ ಈ ಸ್ಥಾನಗಳನ್ನೇ ನಿರ್ದೇಶ ಮಾಡಿದೆ. ಅಗ್ನಿಪುರಾಣವು ಇದೇ ಸ್ಥಾನಗಳನ್ನು ಅಕ್ಷರ ಹೇಳದೇ ನಿರ್ದೇಶಿಸಿದೆ.)

ಭವಿಷ್ಯಪುರಾಣದಲ್ಲಿ ಸ್ಥಿತಿನ್ಯಾಸ ಹೇಳಲಾಗಿದೆ –

ತತ್ಕಾರಂ ವಿನ್ಯಸೇನ್ಮೂರ್ಧ್ನಿ ಸಕಾರಂ ಮುಖಮಂಡಲೇ

ವಿಕಾರಂ ಕಂಠದೇಶೇ ತು ತುಕಾರಂ ಸರ್ವಸಂಧಿಷು

ವಕಾರಂ ಹೃದಿಮಧ್ಯೇ ತು ರೇಕಾರಂ ಪಾರ್ಶ್ವಯೋರ್ದ್ವಯೋಃ

ಣಕಾರಂ ದಕ್ಷಿಣೇ ಕುಕ್ಷೌ ಯಕಾರಂ ವಾಮಸಂಜ್ಞಕೇ

ಭಕಾರಂ ಕಟಿನಾಭಿಸ್ಥಂ ಗೋಕಾರಂ ಜಾನುಪರ್ವಸು

ದೇಕಾರಂ ಜಂಘಯೋರ್ನ್ಯಸ್ಯ ವಕಾರಂ ಪಾದಪದ್ಮಯೋಃ

ಸ್ಯಾರ್ಣಮಂಗುಷ್ಠಯೋರ್ನ್ಯಸ್ಯ ಧೀಕಾರಂ ಚೋರಸಿ ನ್ಯಸೇತ್

ಮಕಾರಂ ಜಾನುದೇಶೇ ತು ಹಿಕಾರಂ ಗುಹ್ಯಮಾಶ್ರಿತಮ್

ಧಿಕಾರಂ ಹೃದಯೇ ನ್ಯಸ್ಯ ಯೋಕಾರಂ ಚೋಷ್ಠಯೋರ್ನ್ಯಸೇತ್

ಯಕಾರಂ ನಾಸಿಕಾಗ್ರೇ ತು ನಕಾರಂ ನೇತ್ರಮಾಶ್ರಿತಮ್

ಪ್ರಕಾರಂ ತು ಭ್ರುವೋರ್ಮಧ್ಯೇ ಚಕಾರಂ ಪ್ರಾಣಮಾಶ್ರಿತಮ್

ದಕಾರಂ ವಿನ್ಯಸೇನ್ಮೂರ್ಧ್ನಿ ಯಾಕಾರಂ ಕೇಶಮಾಶ್ರಿತಮ್

ನ್ಯಾಸಂ ಕೃತ್ವಾತ್ಮನೋ ದೇಹೇ ದೇವೇ ಕುರ್ಯಾತ್ತಥಾ ನೃಪ

ಆಚಾರ್ಯಮಧ್ವರು ಹೇಳಿದಂತೆ ನ್ಯಾಸಸ್ಥಾನಗಳು ಇದಕ್ಕಿಂತ ಭಿನ್ನ

ವಾಗಿವೆ. ಕೈಕಾಲುಗಳ ಸಂಧಿಗಳಲ್ಲಿ ಐದೈದರಂತೆ ಇಪ್ಪತ್ತು ಅಕ್ಷರಗಳನ್ನು ನ್ಯಾಸಮಾಡಬೇಕು. ಕಡೆಯ ಪದದ ನಾಲ್ಕು ಅಕ್ಷರಗಳನ್ನು ನಾಭಿ, ಹೃದಯ, ಮುಖ, ತಲೆಗಳಲ್ಲಿ ನ್ಯಾಸ ಮಾಡಬೇಕು –

**ದೋಃಪತ್ಸಂಧಿಷು ಸಾಗ್ರೇಷು ನಾಭಿಹೃನ್ಮುಖಕೇಷು ಚ**

**ವರ್ಣ್ಣನ್ಯಾಸಶ್ಚ ಕರ್ತ್ತವ್ಯಃ** (ತಂತ್ರಸಾರಸಂಗ್ರಹ)

**ಪದ್ಮಪುರಾಣದಲ್ಲಿ** ಗಾಯತ್ರೀಮಂತ್ರಮಹಿಮೆಯನ್ನು ವಿಸ್ತಾರವಾಗಿ ಹೇಳಿದ್ದಾರೆ. ಅಲ್ಲಿ ಪ್ರತ್ಯಕ್ಷರ ದೇವತಾನ್ಯಾಸದ ಫಲ ಮೋಕ್ಷವೆಂದು ತಿಳಿಸಲಾಗಿದೆ. ಇದರಿಂದ ಕೇವಲ ಅಕ್ಷರನ್ಯಾಸಕ್ಕಿಂತ ಆಯಾ ಅಕ್ಷರದೇವತಾಪೂರ್ವಕ ನ್ಯಾಸ ಹೆಚ್ಚು ಪ್ರಶಸ್ತ ಎಂದು ತಿಳಿಯುವುದು. ಇದು ಇನ್ನೂ ಹೆಚ್ಚಿಗೆ ಮಾತೃಕಾನ್ಯಾಸಕ್ಕೆ ಅನ್ವಯಗೊಳ್ಳುವುದು. **ಅಕ್ಷೇಷು (ಅಕಾರಾದಿ ಕ್ಷಕಾರಾಂತೇಷು) ರಮಂತೇ** ಎನ್ನುವ ಅಭಿಪ್ರಾಯದಲ್ಲಿ ಅಕ್ಷರ ಎಂಬ ಶಬ್ದಕ್ಕೆ ಯೋಗರೂಢಿಯಿಂದ ಅಜಾದಿಗಳು ಎಂದೇ ಅರ್ಥ. ಪ್ರಮಾಣಾಂತರದ ಸಂವಾದದಿಂದ ಯೋಗರೂಢಿವೃತ್ತಿಯನ್ನೇ ಸ್ವೀಕರಿಸಬೇಕು –

**ಗಾಯತ್ರೀಂ ಯೋ ಜಪೇನ್ನಿತ್ಯಂ ಪ್ರಾಣಾಯಾಮಸಮನ್ವಿತಾಮ್**

**ಪ್ರತ್ಯಕ್ಷರಾಮರ್ರೈರ್ಯುಕ್ತಾಂ ಸ್ವಾಂಗೇ ವಿನ್ಯಸ್ಯ ತಾಮಪಿ**

**ಸರ್ವಪಾಪಾದ್ವಿನಿರ್ಮ್ಮುಕ್ತೋ ಜನ್ಮಕೋಟಿಕೃತಾದಪಿ**

**ಬ್ರಹ್ಮಣಃ ಪದವೀಂ ಪ್ರಾಪ್ಯ ಸ ಗಚ್ಛೇತ್ಪ್ರಕೃತೇಃ ಪರಮ್**

**ವಸಿಷ್ಠಕಲ್ಪದಲ್ಲಿ** ಮತ್ತು **ಗಾಯತ್ರೀಕಲ್ಪದಲ್ಲಿ** ಗಾಯತ್ರ್ಯಕ್ಷರನ್ಯಾಸಗಳನ್ನು ಹೇಳಲಾಗಿದೆ.

ಗಾಯತ್ರೀಮಂತ್ರದ ಪಾದನ್ಯಾಸ – **ತತ್ಸವಿತುರ್ವರೇಣ್ಯಂ** – ನಾಭಿ

**ಭರ್ಗ್ಗೋ ದೇವಸ್ಯ ಧೀಮಹಿ** – ಹೃದಯ

**ಧಿಯೋ ಯೋ ನಃ ಪ್ರಚೋದಯಾತ್** – ತಲೆ

**ಗಾಯತ್ರೀಕವಚದಲ್ಲಿ** ದಶಪದನ್ಯಾಸವನ್ನು ನೀಡಿದ್ದಾರೆ –

**ತತ್ಪದಂ ಪಾತು ಮೇ ಪಾದೌ ಜಂಘೇ ಮೇ ಸವಿತುಃ ಪದಮ್**



**ವರೇಣ್ಯಂ ಕಟಿದೇಶಂ ತು ನಾಭಿಂ ಭರ್ಗಸ್ತಥೈವ ಚ**

**ದೇವಸ್ಯ ಮೇ ತು ಹೃದಯಂ ಧೀಮಹೀತಿ ಚ ಮೇ ಗಳಮ್**

**ಧಿಯಃ ಪದಂ ಚ ಮೇ ನೇತ್ರೇ ಯಃ ಪದಂ ಮೇ ಲಲಾಟಕಮ್**

**ನಃ ಪದಂ ಪಾತು ಮೇ ಮೂರ್ಧ್ನಿ ಶಿಖಾಯಾಂ ಮೇ ಪ್ರಚೋದಯಾತ್**

ಗಾಯತ್ರೀಕವಚದಲ್ಲಿ ಅಕ್ಷರಗಳ ಸೃಷ್ಟಿನ್ಯಾಸವೂ ಹೇಳಲ್ಪಟ್ಟಿದೆ. ಈ ಎರಡು ಕವಚಮಂತ್ರಗಳನ್ನು ಗಾಯತ್ರೀಜಪದಲ್ಲಿ ಹೆಚ್ಚು ಉಪಯೋಗಿಸಿಕೊಳ್ಳುವರು. ಪದನ್ಯಾಸವು ಮುಖ್ಯವಾಗಿ ದಶಾವತಾರಗಳನ್ನು ಬಿಂಬಿಸಿದೆ. **ಐತರೇಯಸಂಹಿತೆ** ಯಲ್ಲಿನ ಮಾತಿನಿಂದ ಮಧ್ವಾಚಾರ್ಯರು ಈ ಅಂಶಗಳನ್ನು ಸೂಚಿಸಿದ್ದಾರೆ. ಎಲ್ಲ ಅವತಾರಗಳೂ ಜೀವನಲ್ಲಿ ನೆಲೆಗೊಂಡಿರುವುದನ್ನು ತಿಳಿಸದ್ದಾರೆ. ಜೀವನಲ್ಲಿರುವಂತೆ ಬಾಹ್ಯದಲ್ಲಿ ದೇಹದಲ್ಲಿಯೂ ಅವತಾರಗಳ ಚಿಂತನೆ ಯೋಗ್ಯವೆನಿಸಿದೆ –

**ಜಾತೋ ಮತ್ಸ್ಯಾದಿರೂಪೇಣ ಸರ್ವಭೂತೇಷು ಚಾವಿಶತ್**

**ತಸ್ಮಾತ್ಸರ್ವಾವತಾರಾಶ್ಚ ಸರ್ವಜೀವೇಷು ಚ ಸ್ಥಿತಾಃ**

ಹತ್ತವತಾರಗಳ ಶತಕಗಳ ಚಿಂತನೆಯಲ್ಲಿ ಭಗವಂತನ ಸಾವಿರರೂಪಗಳು ನೆಲೆಗೊಂಡಿವೆ. ಇವು ಪ್ರಸಿದ್ಧವಾದ ಮಹಾಭಾರತದಲ್ಲಿ ಬಂದಿರುವ ವಿಷ್ಣುಸಹಸ್ರ ರೂಪನಾಮಸ್ತೋತ್ರದಲ್ಲಿ ಹೇಳಲ್ಪಟ್ಟವುಗಳು. ಈ ಸಾವಿರರೂಪಗಳು ಬೃಹತೀಸಹಸ್ರಮಂತ್ರಗಳಿಗೆ ಸಂಬಂಧಿಸಿವೆ. ಬೃಹತೀಸಹಸ್ರಮಂತ್ರಗಳಲ್ಲಿ 72 ಸಾವಿರ ( 36 ಸಾವಿರ ವ್ಯಂಜನ + 36 ಸಾವಿರ ಸ್ವರ ) ಅಕ್ಷರಗಳಿವೆ. ಮನುಷ್ಯನ ದೇಹದಲ್ಲಿ ಬಲ ಮತ್ತು ಎಡದಲ್ಲಿ ಒಟ್ಟು ಸೇರಿ ಪ್ರಧಾನವಾಗಿ 72 ಸಾವಿರ ನಾಡಿಗಳಿವೆ. ಇವಕ್ಕೆ ಸಂಬಂಧಿಸಿದಂತೆ ಈ ಸಾವಿರ ರೂಪಗಳು ಇವೆ.

ಹಾಗೆಯೇ ಹೃದಯದಲ್ಲಿ ಪ್ರಧಾನವಾಗಿ ನೂರೊಂದು ನಾಡಿಗಳಿವೆ. ಇವುಗಳ ರೂಪಗಳು ಭಗವಂತನ ನಾರಾಯಣ, ನರ, ಶೌರಿ .... ಮುಂತಾದವುಗಳು. ಹತ್ತು, ನೂರು, ಸಾವಿರ, ಪರ, ಅಮಿತ, ..... ಈ ನೆಲೆಯಲ್ಲಿ ಭಗವಂತನ ಬಗೆಬಗೆಯ ರೂಪಗಳನ್ನು ಜೀವನಲ್ಲಿ ಮತ್ತು ದೇಹದಲ್ಲಿ ಇರುವುದನ್ನು ತಿಳಿಸಿರುತ್ತಾರೆ. 72 ಸಾವಿರ ನಾಡಿಗಳಿಗೆ ಮತ್ತೆ ಸಾವಿರಾರು ಉಪ–ಅವಾಂತರ



ನಾಡಿಗಳನ್ನು ತಿಳಿಸಿಕೊಟ್ಟು ಅಲ್ಲಿರುವ ದೇವರ ಲಕ್ಷೋಪಲಕ್ಷ ರೂಪಗಳನ್ನೂ ಗುರುತಿಸಿದ್ದಾರೆ. ಇವೆಲ್ಲಾ ಮನುಷ್ಯರಿಗೆ ನಿಲುಕದ ಸಂಗತಿಯಾಗಿದೆ. ಹೀಗಾಗಿ ನಾವು ಕೆಲವೇ ರೂಪರಾಶಿಗಳನ್ನಷ್ಟೇ ಬಲ್ಲೆವು.

**ಸ್ವಮೂರ್ತಿಗಣಮಧ್ಯಗಃ** ಎನ್ನುವ ಪದ ನಾರಾಯಣನ ಸುತ್ತ ನೆಲೆನಿಂತ ಅವನದ್ದೇ ಆದ ಅನೇಕ ರೂಪರಾಶಿಗಳ ಬಗ್ಗೆ ಸೂಚಿಸಿದೆ. ಈ ಎಲ್ಲ ರೂಪಗಳೂ ಗಾಯತ್ರೀಮಂತ್ರಪ್ರತಿಪಾದ್ಯಗಳೇ ಆಗಿವೆ. ಹೀಗಾಗಿ ಅರ್ಘ್ಯೆಯ ಬಳಿಕದ ತರ್ಪಣದ ಸಂದರ್ಭದಲ್ಲಿ ಈ ಎಲ್ಲ ರೂಪಗಳಿಗೂ ತರ್ಪಣ ನೀಡಲಿದೆ. ಅವಕಾಶದ ಪರಿಧಿಯೊಳಗೆ ನಾವು ಅತಿ ಪ್ರಧಾನರೂಪಗಳಿಗಷ್ಟೇ ತರ್ಪಣವನ್ನು ನೀಡುವಲ್ಲಿ ಸಫಲರಾಗಿದ್ದೇವೆ. ಉಳಿದದ್ದು ಸ್ಪಷ್ಟವಾಗಿ ತಿಳಿಯದೇ ಅಸಹಾಯಕರೂ ಆಗಿದ್ದೇವೆ.

ವಿಶ್ವಾಮಿತ್ರಗಾಯತ್ರೀಮಂತ್ರದಲ್ಲಿ ಪ್ರಣವ ಮತ್ತು ಮೂರು ವ್ಯಾಹೃತಿಗಳು ಸೇರಿವೆ. ಗಾಯತ್ರಿಯ 24 ಅಕ್ಷರಗಳಿಂದ ದೇಹದಲ್ಲಿ ನ್ಯಾಸ ಮಾಡುವಂತೆ ನಿತ್ಯ ಜಪಿಸುವಾಗ ಪ್ರಣವ ಮತು ವ್ಯಾಹೃತಿಗಳ ನ್ಯಾಸವನ್ನೂ ಮಾಡಬೇಕು. ವ್ಯಾಹೃತಿಯ ನ್ಯಾಸದಲ್ಲಿ ವ್ಯಸ್ತ ಮತ್ತು ಸಮಸ್ತ ಎಂಬ ನೆಲೆಯಲ್ಲಿ ಮೂರು ಮತ್ತೊಂದು ಒಟ್ಟು ನಾಲ್ಕು ಸ್ಥಾನಗಳು – ನಾಭಿ ಹೃದಯ ತಲೆ ಹಾಗೂ ಸರ್ವಾಂಗಗಳು ಎಂದು **ತಂತ್ರಸಾರಸಂಗ್ರಹ**ದಲ್ಲಿ ಹೇಳಲಾಗಿದೆ –

**ನಾಭಿಹೃತ್ಕೇಷು ಸರ್ವೇಷು ಚತಸ್ರೋ ವ್ಯಾಹೃತೀರ್ನ್ಯಸೇತ್**

ಪ್ರಣವದ ಮೂರು ಅಕ್ಷರಗಳನ್ನು ನಾಭಿ ಹೃದಯ ತಲೆಗಳಲ್ಲಿ ನ್ಯಾಸ ಮಾಡಬೇಕೆಂದು **ತಂತ್ರಸಾರಸಂಗ್ರಹ**ದಲ್ಲಿ –

**ಆದಿವರ್ಣತ್ರಯಂ ನಾಭಿಹೃಚ್ಛಿರಸ್ಸು ಯಥಾಕ್ರಮಮ್**

**ನ್ಯಸನೀಯಂ ಚ ತದ್ವರ್ಣದೇವತಾಧ್ಯಾನಪೂರ್ವಕಮ್**

(ಗಾಯತ್ರೀಮಂತ್ರದ ನ್ಯಾಸ ಮಂತ್ರ ಕ್ರಮ ಇತ್ಯಾದಿ ವಿವರಗಳನ್ನು ತತ್ವ ಸಂಶೋಧನ ಸಂಸತ್ ಪ್ರಕಾಶನಪಡಿಸಿದ ನನ್ನ **ಮೈತ್ರ** ಹೊತ್ತಗೆಯಲ್ಲಿ ಕಾಣಬಹುದು.)

# ೨೪ ಮುದ್ರೆಗಳು

ಗಾಯತ್ರೀಜಪಕ್ಕೆ ಮೊದಲು ಪ್ರಾಣಾಯಾಮವನ್ನು ಮೂರು ಬಾರಿ ಆಚರಿಸಬೇಕು. ಅನಂತರ ಅಂಗನ್ಯಾಸ ಕರನ್ಯಾಸ ವರ್ಣನ್ಯಾಸ ಪದನ್ಯಾಸಾದಿಗಳನ್ನು ಮಾಡಬೇಕು. ಕೊನೆಗೆ ಧ್ಯಾನವನ್ನು ನಡೆಸಬೇಕು. ಅದರಂತೆಯೆ 24 ಮುದ್ರೆಗಳನ್ನೂ ತೋರಿಸಬೇಕೆಂದು **ಸಚ್ಚರಿತ್ರಸುಧಾನಿಧಿ** ಸಾರಿದೆ –

**ಪ್ರಾಣಾಯಾಮತ್ರಯಂ ಕೃತ್ವಾ ನ್ಯಾಸಧ್ಯಾನಸಮನ್ವಿತಮ್**
**ಮುದ್ರಾಃ ಪ್ರದರ್ಶ್ಯ ಗಾಯತ್ರೀಂ ಜಪೇದಾಭಾಸ್ಕರೋದಯಮ್**

ಆ 24 ಮುದ್ರೆಗಳು ಯಾವುವು ಎಂದು ಇಲ್ಲಿವೆ –

1 **ಸಂಮುಖಂ** 2 **ಸಂಪುಟಂ** ಚೈವ 3 **ವಿತತಂ** 4 **ವಿಸ್ತೃತಂ** ತಥಾ
5 **ದ್ವಿಮುಖಂ** 6 **ತ್ರಿಮುಖಂ** ಚೈವ 7 **ಚತುಷ್ಕಂ** 8 **ಪಂಚಕಂ** ತಥಾ
9 **ಷಣ್ಮುಖಾಧೋಮುಖೇ** 10 ಚೈವ 11 **ವ್ಯಾಪಕಾಂಜಲಿಕಂ** ತಥಾ
12 **ಶಕಟಂ** 13 **ಯಮಪಾಶಂ** ಚ 14 **ಗ್ರಥಿತಂ** 15 **ಸನ್ಮುಖೋನ್ಮುಖಮ್**
16 **ಪ್ರಲಂಬಂ** 17 **ಮುಷ್ಟಿಕಂ** ಚೈವ 18 **ಮತ್ಸ್ಯಂ** 19 **ಕೂರ್ಮಂ** 20 **ವರಾಹಕಮ್**
21 **ಸಿಂಹಾಕ್ರಾಂತಂ** 22 **ಮಹಾಕ್ರಾಂತಂ** 23 **ಮುದ್ಗರಂ** 24 **ಪಲ್ಲವಂ** ತಥಾ

24 ಮುದ್ರೆಗಳ ಲಕ್ಷಣವಾಕ್ಯಗಳು ಇಲ್ಲಿವೆ –

**ಸಂಮುಖಂ ಸಂಧಿತೌ ಹಸ್ತೌ ಉತ್ತಾನೌ ಕುಂಚಿತಾಂಗುಲೀ**
**ಸಂಪುಟಂ ಪದ್ಮಕೋಶಾಭೌ ಕರಾವನ್ಯೋನ್ಯಸಂಹತೌ**
**ವಿತತಂ ಸಂಹತೌ ಹಸ್ತೌ ಉತ್ತಾನಾವಾಯತಾಂಗುಲೀ**
**ವಿಸ್ತೀರ್ಣಂ ಸಂಹತೌ ಪಾಣೀ ಮಿಥೋ ಮುಕ್ತಾಂಗುಲಿದ್ವಯಮ್**
**ಸಂಮುಖಾಸಕ್ತಯೋಃ ಪಾಣ್ಯೋಃ ಕನಿಷ್ಠಾದ್ವಯಯೋಗತಃ**
**ಶೇಷಾಂಗುಲೀನಾಂ ವೈಕಲ್ಯೇ ದ್ವಿಮುಖತ್ರಿಮುಖಾದಯಃ**
**ಶೇಷಾಂಗುಲೀನಾಂ ಸಂಯೋಗಾತ್ ಪೂರ್ವಸಂಯೋಗನಾಶನಮ್**
**ತಿರ್ಯಕ್ಸಂಯುಜ್ಯಮಾನಾಗ್ರೌ ಸಂಯುಕ್ತಾಂಗುಲಿಮಂಡಲೌ**



ಹಸ್ತೌ ಷಣ್ಮುಖಮಿತ್ಯುಕ್ತಾ ಮುದ್ರಾ ಮುದ್ರಾವಿಶಾರದೈಃ

ಆಕುಂಚಿತಾಗ್ರೌ ಸಂಯುಕ್ತೌ ನ್ಯುಬ್ಜೌ ಹಸ್ತಾವಧೋಮುಖೌ

ಉತ್ತಾನೌ ತಾದೃಶಾವೇವ ವ್ಯಾಪಕಾಕುಂಚಿತೌ ಕರೌ

ಅಧೋಮುಖೌ ಬುದ್ಧಮುಷ್ಟೀ ಮುಕ್ತಾಗ್ರಾಂಗುಷ್ಠಕೌ ಕರೌ

ಶಕಟಂ ಚಾऽಪಿ ಕಥಿತಂ ಯಮಪಾಶಮತಃ ಪರಮ್

ಬುದ್ಧಮುಷ್ಟಿಕಯೋಃ ಪಾಣ್ಯೋಃ ಉತ್ತಾನಾ ವಾಮತರ್ಜನೀ

ಕುಂಚಿತಾಗ್ರಾऽನ್ಯಯಾ ಮುಕ್ತಾ ತರ್ಜನ್ಯಾ ನ್ಯುಬ್ಜವಕ್ತ್ರಯಾ

ಉತ್ತಾನಸಂಧಿಸಂಲೀನಬದ್ಧಾಂಗುಲಿದಲೌ ಕರೌ

ಸಂಮುಖೌ ಘಟಿತೌ ದೀರ್ಘಾಂಗುಷ್ಠೌ ಗ್ರಥಿತಮುಚ್ಯತೇ

ಸಂಧಿತೋರ್ಧ್ವಾಂಗುಲಿರ್ವಾಮಃ ತಾದೃಶಾ ದಕ್ಷಿಣೇನ ತು

ಅಧೋಮುಖೇನ ಸಂಯುಕ್ತಃ ಸನ್ಮುಖೋನ್ಮುಖಮುಚ್ಯತೇ

ಉತ್ತಾನೋನ್ನತಕೋಟೀ ಚ ಪ್ರಲಂಬಃ ಕಥಿತೌ ಕರೌ

ಮುಷ್ಟೀ ಚಾನ್ಯೋನ್ಯಸಂಯುಕ್ತೌ ಉತ್ತಾನೌ ಮುಷ್ಟಿಕೋ ಭವೇತ್

ಮತ್ಸ್ಯಸ್ತು ಸಮ್ಮುಖೀಭೂತೌ ಯುಕ್ತಾನಾಮಿಕನಿಷ್ಠಕೌ

ಊರ್ಧ್ವಸಂಯುಕ್ತವಕ್ತ್ರಾಗ್ರಾ ಶೇಷಾಂಗುಲಿದಲೌ ಕರೌ

ಅಧೋಮುಖಃ ಕರೋ ವಾಮಃ ತಾದೃಶಾ ದಕ್ಷಿಣೇನ ತು

ಪೃಷ್ಠದೇಶೇ ಸಮಾಕ್ರಾಂತಃ ಕೂರ್ಮೋ ನಾಮಾಭಿಧೀಯತೇ

ಊರ್ಧ್ವಮಧ್ಯೇ ವಾಮಭುಜಃ ಕಕ್ಷಾಭ್ಯಾಮಾಶ್ರಯೇತ್ಕರೇ

ವರಾಹಃ ಕಥ್ಯತೇ ಕಕ್ಷಸಮೀಪಾಶ್ರಯಕೇ ಕರೇ

ಸಿಂಹಾಕ್ರಾಂತಂ ಸಮಾಖ್ಯಾತಂ ಕರ್ಣಾರ್ಪಿತಕರಾವುಭೌ

ಕಿಂಚಿದಾಕುಂಚಿತಾಗ್ರೌ ಚ ಮಹಾಕ್ರಾಂತಂ ತತಃ ಪರಮ್

ಊರ್ಧ್ವಂ ಕಿಂಚಿದ್ಗತೌ ಪಾಣೀ ಮುದ್ಗರೋ ನಾಮ ತರ್ಜನೀ

ಗ್ರಸ್ತಾ ದಕ್ಷಿಣಹಸ್ತೇನೇತ್ಯಾಹುರ್ಮುದ್ರಾವಿಶಾರದಾಃ

ಅಧೋಮುಖಃ ಸ್ಥಿತೋ ಮೂರ್ಧ್ನಿ ಪಲ್ಲವೋ ದಕ್ಷಿಣಃ ಕರಃ



ಗಾಯತ್ರೀಜಪದ ಅನಂತರದಲ್ಲಿ 8 ಮುದ್ರೆಗಳನ್ನು ತೋರಿಸಬೇಕೆಂದು ಪುರಾಣಗಳು ಹೇಳಿ ಆ ಮುದ್ರೆಗಳನ್ನು ತಿಳಿಸಿವೆ –

**ಸುರಭಿರ್ಜ್ಞಾನವೈರಾಗ್ಯೇ ಯೋನಿಃ ಶಂಖೋऽಥ ಪಂಕಜಮ್**
**ಲಿಂಗನಿರ್ವಾಣಮುದ್ರೇ** ಚ ಜಪಾಂತೇऽಷ್ಟೌ ಪ್ರದರ್ಶಯೇತ್

ತಂತ್ರಸಂಹಿತೆಗಳಲ್ಲಿ ಅಲ್ಲಲ್ಲಿ ಬಂದ ಎರಡೂ ಕೈಗಳಲ್ಲಿ ನಡೆಸುವ 8 ಮುದ್ರೆಗಳ ಲಕ್ಷಣಗಳು ಇಲ್ಲಿವೆ –

1. ಗ್ರಥಿತೌ ದ್ವೌ ಕರೌ ಕೃತ್ವಾ ಸುಶ್ಲಿಷ್ಟೌ ಚಾಪ್ಯಧೋಮುಖೌ
ಕನೀಯಾಂಸೌ ತಥಾಂಗುಷ್ಠೌ ಸುಶ್ಲೇಷೇಣ ನಿಯೋಜಯೇತ್
ಮಧ್ಯಮಾಂಗುಲಿಯುಗ್ಮಂ ತು ಅನ್ಯೋನ್ಯಕರಪೃಷ್ಠಗಮ್
ವಿಕ್ಷಿಪ್ತಾನಾಮಿಕಾಯುಗ್ಮಂ ತರ್ಜನೀಯುಗಳಂ ತಥಾ
**ಮುದ್ರೈಷಾ ಕಾಮಧೇನ್ವಾಖ್ಯಾ** ಸರ್ವೇಚ್ಛಾಪರಿಪೂರಣೀ

2. ತಥಾ ಸಂಲಗ್ನಕರಯೋಃ ಮಧ್ಯಮೇ ಯೋಜಯೇನ್ಮುಖಮ್
ತತ್ರಾಂಗುಷ್ಠಯುಗಂ ನ್ಯಸ್ಯ ಚೇತರಾಂಸ್ತು ಪ್ರಸಾರಯೇತ್
**ಜ್ಞಾನಮುದ್ರಾ** ಭವೇದೇಷಾ ಪೂಜಾಯಾಂ ಪೀಠಚಿಂತನೇ

3. ಅನಾಮಿಕಾಭ್ಯಾಂ ಚೇದೇವಂ ಕೃತಾ **ವೈರಾಗ್ಯಮುದ್ರಿಕಾ** (ಸಂಹಿತಾ)

4. ಮಿಥಃ ಕನಿಷ್ಠಿಕೇ ಬದ್ಧ್ವಾ ತರ್ಜನೀಭ್ಯಾಮನಾಮಿಕೇ
ಅನಾಮಿಕೋರ್ಧ್ವಗಾಶ್ಲಿಷ್ಟದೀರ್ಘಮಧ್ಯಮಯೋರಧಃ
ಅಂಗುಷ್ಠಾಗ್ರದ್ವಯಂ ನ್ಯಸೇತ್ **ಯೋನಿಮುದ್ರೇ**ಯಮೀರಿತಾ

5. ವಾಮಾಂಗುಷ್ಠಂ ತು ಸಂಗೃಹ್ಯ ದಕ್ಷಿಣೇನ ತು ಮುಷ್ಟಿನಾ
ಕೃತ್ವೋತ್ತಾನಂ ತಥಾ ಮುಷ್ಟಿಂ ಅಂಗುಷ್ಠಂ ತು ಪ್ರಸಾರಯೇತ್
ವಾಮಾಂಗುಲ್ಯಸ್ತಥಾಶ್ಲಿಷ್ಟಾಃ ಸಂಯುಕ್ತಾಸ್ತು ಪ್ರಸಾರಿತಾಃ
ದಕ್ಷಿಣಾಂಗುಷ್ಠಸಂಶ್ಲಿಷ್ಟಾಃ **ಮುದ್ರಾ ಶಂಖಸ್ಯ** ಚೋದಿತಾ (ಮುದ್ರಾಪ್ರಕಾಶ)

6. ಕರೌ ತು ಸಂಮುಖೀಕೃತ್ಯ ಸಂಹತಾವುನ್ನತಾಂಗುಲೀ
ತಳಾಂತರ್ಮಿಳಿತಾಂಗುಷ್ಠೌ ಕುರ್ಯಾದೇಷಾऽ**ಬ್ಜಮುದ್ರಿಕಾ** (ತಂತ್ರಸಾರ)



7. ಉಚ್ಛ್ರಿತಂ ದಕ್ಷಿಣಾಂಗುಷ್ಠಂ ವಾಮಾಂಗುಷ್ಠೇನ ವೇಷ್ಟಯೇತ್
   ವಾಮಂಗಲೀರ್ದಕ್ಷಿಣಾಭಿಃ ಅಂಗುಲೀಭಿಶ್ಚ ಬಂಧಯೇತ್
   **ಲಿಂಗಮುದ್ರೇಯಮಾಖ್ಯಾತಾ ಶಿವಸಾನ್ನಿಧ್ಯಕಾರಿಣೀ**

8. ಅಧೋಮುಖಂ ವಾಮಕರಂ ತದೂರ್ಧ್ವಂ ದಕ್ಷಿಣಂ ತಥಾ
   ಉತ್ತಾನಂ ಸ್ಥಾಪಯಿತ್ವಾ ಚ ಸಂಯುಕ್ತಾಂಗುಲಿಕೌ ತದಾ
   ಹಸ್ತೌ ತು ಮುಷ್ಟಿಕೌ ಕೃತ್ವಾ ಶ್ರೋತ್ರಪಾರ್ಶ್ವೇ ಚ ಕಾರಯೇತ್
   ತರ್ಜ್ಜನ್ಯೌ ದರ್ಶಯೇದೂರ್ಧ್ವೇ ಹ್ಯೇಷಾ **ನಿರ್ವಾಣಸಂಸ್ಮೃತಾ**

(ಗಾಯತ್ರಿಜಪಕ್ಕೆ ಸಂಬಂಧಿಸಿದಂತೆ 24+8 ಮುದ್ರೆಗಳ ಇತರ ಪ್ರಮಾಣವಾಕ್ಯಗಳ ಹಾಗೂ ನಿತ್ಯಸಂಧ್ಯಾವಂದನೆಗೆ ಸಂಬಂಧಿಸಿದ ನೂರಾರು ಮುದ್ರೆಗಳ ಚಿತ್ರಸಹಿತ ವಿವರವನ್ನು ನನ್ನ ಮುದ್ರಾಸಮೀಕ್ಷಾ 1 ಮತ್ತು 2 ಪುಸ್ತಕಗಳಲ್ಲಿ ಕಾಣಬಹುದು.)

ಮಾನವನ ಶರೀರದಲ್ಲಿನ 5 ಬೆರಳುಗಳು 5 ಭೂತಗಳನ್ನು ಸೂಚಿಸುವುದಕ್ಕಿಂತ ಹೆಚ್ಚಿಗೆ 5 ದೇವತೆಗಳ ಸನ್ನಿಧಾನವನ್ನು ವ್ಯಾಸರು **ಭವಿಷ್ಯ ಪುರಾಣದಲ್ಲಿ** ಬಹಿರಂಗಪಡಿಸಿದ್ದಾರೆ. ಇದರಿಂದ ಸಂಖ್ಯೆಯಲ್ಲಿ ಇತರ ಪ್ರಾಣಿಗಳಲ್ಲಿನ ಬೆರಳುಗಳಿಗಿಂತ ಮನುಷ್ಯ ಶರೀರದ ಬೆರಳುಗಳ ವೈಶಿಷ್ಟ್ಯ ಎದ್ದುಕಾಣುವುದು. ಇದರಿಂದ ಮುದ್ರೆಗಳ ಪ್ರಾಮುಖ್ಯ ಸಿದ್ಧಿಸುವುದು.

ಮುದ್ರೆ, ಅಕ್ಷಮಾಲೆ, ನ್ಯಾಸ, ಕೆಲವು ರಹಸ್ಯ ತಂತ್ರಾಂಶಗಳು ಇವನ್ನೆಲ್ಲಾ ಹಿರಿಯರೆದುರೂ ತೋರಿಸಲೇಬಾರದು –

**ಯಂತ್ರತಂತ್ರಾದಿಹೋಮಾಂಶ್ಚ ನ್ಯಾಸಾದೀನ್ಬಂಧಕಾದಿಕಮ್**
**ಅಕ್ಷಮಾಲಾಂ ಚ ಮುದ್ರಾಂ ಚ ಗುರೋರಪಿ ನ ದರ್ಶಯೇತ್**

***ನಿತ್ಯಜಪ ಮೋಕ್ಷದೆಡೆಗೆ***

*ಯೇ ಮಾನವಾ ವಿಗತರಾಗಪರಾವರಜ್ಞಾ*
*ನಾರಾಯಣಂ ಸುರುಗುರುಂ **ಸತತಂ ಸ್ಮರಂತಿ***
*ಧ್ಯಾನೇನ ತೇನ ಹತಕಿಲ್ಬಿಷಚೇತನಾಸ್ತೇ*
*ಮಾತುಃ ಪಯೋಧರರಸಂ **ನ ಪುನಃ ಪಿಬಂತಿ***

# ಜಪಪ್ರಾಯಶ್ಚಿತ್ತ

ಅಲ್ಲಲ್ಲಿ ಸ್ಮೃತಿಪುರಾಣಗಳಲ್ಲಿ ಬಹುಬಗೆಯ ಪಾಪಗಳ ಪ್ರಾಯಶ್ಚಿತ್ತವಾಗಿ ಗಾಯತ್ರೀಜಪ-ಹೋಮಾದಿಗಳನ್ನು ದ್ರವ್ಯವಿಶೇಷಗಳಿಂದ ವಿಸ್ತಾರವಾಗಿ ವಿಧಿಸಲಾಗಿದೆ. ಕೆಲವನ್ನಿಲ್ಲಿ ಸಂಗ್ರಹಿಸಲಾಗಿದೆ. **ಮಹಾಭಾರತವು** ಅನುಶಾಸನಪರ್ವದಲ್ಲಿ ನಿತ್ಯ ಶಾಂತಿಪ್ರದವಾದ್ದು ಗಾಯತ್ರೀಜಪ ಎಂದು ತಿಳಿಸುತ್ತ ಒಳಗಿನ ಶತ್ರುಗಳ ವಿರುದ್ಧ ಹೋರಾಡಲು ಗಾಯತ್ರೀ ನಮ್ಮಲ್ಲಿ ನಿತ್ಯವಿರಬೇಕಾದ ಅಸ್ತ್ರವನ್ನಾಗಿ ಸೂಚಿಸಿದೆ –

**ಚತುರ್ಣ್ಣಾಮಪಿ ವರ್ಣ್ಣಾನಾಂ ಆಶ್ರಮಸ್ಯ ವಿಶೇಷತಃ**
**ಕರೋತಿ ಸತತಂ ಶಾಂತಿಂ ಸಾವಿತ್ರೀಮುತ್ತಮಾಂ ಪಠನ್**
**ನಾಗ್ನಿರ್ದ್ದಹತಿ ಕಾಷ್ಠಾನಿ ಸಾವಿತ್ರೀ ಯತ್ರ ಪಠ್ಯತೇ**
**ನ ತತ್ರ ಬಾಲೋ ಮ್ರಿಯತೇ ನ ಚ ತಿಷ್ಠಂತಿ ಪನ್ನಗಾಃ**
**ನ ತೇಷಾಂ ವಿದ್ಯತೇ ದುಃಖಂ ಗಚ್ಛಂತಿ ಪರಮಾಂ ಗತಿಮ್**
**ಯೇ ಶೃಣ್ವಂತಿ ಮಹದ್ಬ್ರಹ್ಮ ಸಾವಿತ್ರೀಗುಣಕೀರ್ತ್ತನಮ್**
**ಪ್ರಸ್ಥಾನೇ ವಾ ಪ್ರವಾಸೇ ವಾ ಸರ್ವಾವಸ್ಥಾಂ ಗತಃ ಪಠೇತ್**
**ಹೃದಯಂ ಸರ್ವಭೂತಾನಾಂ ಶ್ರುತಿರೇಷಾ ಸನಾತನೀ**
**ವೃದ್ಧೈಃ ಕಾಶ್ಯಪಗೌತಮಪ್ರಭೃತಿಭಿರ್ಭೃಗ್ವಂಗಿರೋತ್ರ್ಯಾದಿಭಿಃ**
**ಶುಕ್ರಾಗಸ್ತ್ಯಬೃಹಸ್ಪತಿಪ್ರಭೃತಿಭಿರ್ಬ್ರಹ್ಮರ್ಷಿಭಿಃ ಸೇವಿತಮ್**
**ಭಾರದ್ವಾಜಮತಂ ಋಚೀಕತನಯೈಃ ಪ್ರಾಪ್ತಂ ವಸಿಷ್ಠಾತ್ಪುನಃ**
**ಸಾವಿತ್ರೀಮಧಿಗಮ್ಯ ಶಕ್ರವಸುಭಿಃ ಕೃತ್ಸ್ನಾ ಜಿತಾ ದಾನವಾಃ**
**ಸಾವಿತ್ರೀಮಪ್ಯಧೀಯಾನಃ ಶುಚೌ ದೇಶೇ ಮಿತಾಶನಃ**
**ಆಹಿಂಸೋ ಮಂದಕಂ ಜಲ್ಪಾತ್ ಮುಚ್ಯತೇ ಸರ್ವಕಿಲ್ಬಿಷಾತ್**

ಜಪಸಿದ್ಧಿಗೆ ಸಂಖ್ಯೆಯಂತೆ ತಾಣ, ಚಿಂತನೆ, ಆಹಾರಾದಿಗಳೂ ಕಾರಣಗಳೆಂದು ಹೆಚ್ಚಿನ ಪ್ರಮಾಣಪ್ರಪಂಚವು ಗುರುತಿಸಿದೆ –

**ನಿತ್ಯನೈಮಿತ್ತಿಕಾದ್ವಿಪ್ರೋ ಮುಮುಕ್ಷುರ್ಹರಿಪೂಜನಾತ್**



ಜಪಾಚ್ಚ ಸಾತ್ತ್ವಿಕಾಹಾರಾತ್ ಪೂತೋ ಭವತಿ ಸರ್ವದಾ (ಶೇಷಸಂಹಿತೆ)

ಯೋ ಜಪೇತ್ಪಾವನೀಂ ದೇವೀಂ ಗಾಯತ್ರೀಂ ವೇದಮಾತರಮ್

ನ ಸೀದೇತ್ಪ್ರತಿಗೃಹ್ಣಾನಃ ಪೃಥಿವೀಂ ಚ ಸಸಾಗರಾಮ್

ಯೇ ಚಾಸ್ಯ ದುಃಸ್ಥಿತಾಃ ಕೇಚಿತ್ ಗ್ರಹಾಃ ಸೂರ್ಯಾದಯೋ ದಿವಿ

ತೇ ಚಾಸ್ಯ ಸೌಮ್ಯಾ ಜಾಯಂತೇ ಶಿವಾಃ ಶುಭಕರಾಸ್ತಥಾ

ಯತ್ರಯತ್ರ ಸ್ಥಿತಾಶ್ಚೈವ ದಾರುಣಾಃ ಪಿಶಿತಾಶನಾಃ

ಘೋರರೂಪಾ ಮಹಾಕಾಯಾ ಧರ್ಷಯಂತಿ ನ ತಂ ದ್ವಿಜಮ್ (ಮಹಾಭಾರತ)

ವೇದಸ್ಯ ವದನಂ ಪ್ರೋಕ್ತಂ ಗಾಯತ್ರೀ ತ್ರಿಪದಾ ಪರಾ

ತಿಸೃಭಿಃ ಪ್ರಣವಾದ್ಯಾಭಿಃ ಮಹಾವ್ಯಾಹೃತಿಭಿಃ ಸಹ

ಸಹಸ್ರಂ ಸಾಧಿಕಂ ಕಿಂಚಿತ್ ತ್ರಿಕಮೇತಜ್ಜಪನ್ಯಮೀ

ಮಾಸಂ ಬಹಿಃ ಪ್ರತಿದಿನಂ ಮಹಾಘಾದಪಿ ಮುಚ್ಯತೇ (ಸ್ಕಂದಪುರಾಣ)

ಸಹಸ್ರಪರಮಾಂ ದೇವೀಂ ಶತಮಧ್ಯಾಂ ದಶವರಾಮ್

ಗಾಯತ್ರೀಂ ಯಃ ಪಠೇದ್ವಿಪ್ರೋ ನ ಸ ಪಾಪೇನ ಲಿಪ್ಯತೇ (ಲ.ಅ.ಸ.)

ಸಹಸ್ರಕೃತ್ವಸ್ತ್ವಭ್ಯಸ್ಯ ಬಹಿರೇತತ್ತ್ರಿಕಂ ದ್ವಿಜಃ

ಮಹತೋಽಪ್ಯೇನಸೋ ಮಾಸಾತ್ ತ್ವಚೇವಾಹಿರ್ವಿಮುಚ್ಯತೇ (ಮನು)

ಲಕ್ಷದ್ವಾದಶವಾರಂ ತು ಗಾಯತ್ರೀಜಪಮಾಚರೇತ್

ಪ್ರಾಯಶ್ಚಿತ್ತಂ ಮಹಾದಾನಸ್ವೀಕಾರೇ ಬ್ರಾಹ್ಮಣಸ್ಯ ಹಿ (ನಾರಾಯಣಸ್ಮೃತಿ)

ವ್ರತಾದಿಮಧ್ಯೇ ಶೃಣುಯಾತ್ ಯದ್ಯೇಷಾಂ ಧ್ವನಿಮುತ್ತಮಃ

ಅಷ್ಟೋತ್ತರಸಹಸ್ರಂ ತು ಜಪೇದ್ವೈ ವೇದಮಾತರಮ್ (ಬೃಹನ್ನಾರದೀಯ)

ಗಾಯತ್ರೀ ಪರಮಾ ದೇವೀ ಭುಕ್ತಿಮುಕ್ತಿಪ್ರದಾ ಚ ತಾಮ್

ಯೋ ಜಪೇತ್ತಸ್ಯ ಪಾಪಾನಿ ವಿನಶ್ಯಂತಿ ಮಹಾಂತ್ಯಪಿ (ಗರುಡಪುರಾಣ)

ಸವ್ಯಾಹೃತಿಕಾಂ ಸಪ್ರಣವಾಂ ಗಾಯತ್ರೀಂ ಶಿರಸಾ ಸಹ

ಯೇ ಜಪಂತಿ ಸದಾ ತೇಷಾಂ ನ ಭಯಂ ವಿದ್ಯತೇ ಕ್ವಚಿತ್

ಶಾಂತಿಕಾಮಸ್ತು ಜುಹುಯಾತ್ ಸಾವಿತ್ರೀಮಕ್ಷತೈಃ ಶುಚಿಃ



ಹಂತುಕಾಮೋಽಪಮೃತ್ಯುಂ ಚ ಘೃತೇನ ಜುಹುಯಾತ್ತಥಾ
ಶ್ರೀಕಾಮಸ್ತು ತಥಾ ಪದ್ಮೈಃ ಬಿಲ್ವೈಃ ಕಾಂಚನಕಾಮುಕಃ
ಬ್ರಹ್ಮವರ್ಚಸಕಾಮಸ್ತು ಪಯಸಾ ಜುಹುಯಾತ್ತಥಾ
ಘೃತಪ್ಲುತೈಸ್ತಿಲೈರ್ವಹ್ನಿಂ ಜುಹುಯಾತ್ಸುಸಮಾಹಿತಃ
ಗಾಯತ್ರ್ಯಯುತಹೋಮಾಚ್ಚ ಸರ್ವಪಾಪೈಃ ಪ್ರಮುಚ್ಯತೇ
ಪಾಪಾತ್ಮಾ ಲಕ್ಷಹೋಮೇನ ಪಾತಕೇಭ್ಯಃ ಪ್ರಮುಚ್ಯತೇ (ಶಂಖಸ್ಮೃತಿ)

ದಶಕೃತ್ವಃ ಪ್ರಜಪ್ತಾ ಸಾ ರಾತ್ರ್ಯಹ್ನಾ ಯತ್ಕೃತಂ ಲಘು
ತತ್ಪಾಪಂ ಪ್ರಣುದತ್ಯಾಶು ಶತಂ ಪಾಪೋಪನಾಶನೀ
ಸಹಸ್ರಜಪ್ತಾ ಸಾ ದೇವೀ ಚೋಪಪಾತಕನಾಶನೀ
ಲಕ್ಷಜಪ್ತಾ ತು ಸಾ ದೇವೀ ಮಹಾಪಾತಕನಾಶನೀ
ಕೋಟಿಜಪ್ಯೇನ ರಾಜೇಂದ್ರ ಯದಿಚ್ಛತಿ ತದಾಪ್ನುಯಾತ್
ಅರ್ಕಮಧ್ಯಗತಂ ಧ್ಯಾಯೇತ್ ಪುರುಷಂ ತಂ ಮಹಾದ್ಯುತಿಮ್ (ವಿಷ್ಣುಧರ್ಮ)

ಆಪೋಶನಮಕೃತ್ವಾ ತು ಯೋ ಭುಂಕ್ತೇ ನಾಪದಿ ದ್ವಿಜಃ
ಭುಂಜಾನೋ ವಾ ತಥಾ ಬ್ರೂಯಾತ್ ಗಾಯತ್ರ್ಯಷ್ಟಶತಂ ಜಪೇತ್
ನೃಣಾಂ ಭೋಜನಕಾಲೇ ತು ಯದಿ ದೀಪೋ ವಿನಶ್ಯತಿ
ತದನ್ನಂ ಪಾಣಿನಾ ಸ್ಪೃಷ್ಟ್ವಾ ಗಾಯತ್ರೀಂ ಮನಸಾ ಸ್ಮರೇತ್
ಯಃ ಸಂಧ್ಯಾಂ ಚೈವ ನೋಪಾಸ್ತೇ ಅಗ್ನಿಕಾರ್ಯಂ ಯಥಾವಿಧಿ
ಗಾಯತ್ರ್ಯಷ್ಟಸಹಸ್ರಂ ತು ಜಪೇತ್ ಸ್ನಾತ್ವಾ ಸಮಾಹಿತಃ (ಸ್ಮೃತ್ಯರ್ಥಸಾರ)
ಬ್ರಹ್ಮಸೂತ್ರಂ ವಿನಾ ಭುಂಕ್ತೇ ವಿಣ್ಮೂತ್ರಂ ಕುರುತೇಽಥವಾ
ಗಾಯತ್ರ್ಯಷ್ಟಸಹಸ್ರೇಣ ಪ್ರಾಣಾಯಾಮೇನ ಶುದ್ಧ್ಯತಿ (ಮರೀಚಿ)
ದಶಕೃತ್ವಃ ಪಿಬೇದಾಪೋ ಗಾಯತ್ರ್ಯಾ ಶ್ರಾದ್ಧಭುಗ್ ದ್ವಿಜಃ (ಉಶನಾ)

ಯತ್ರಯತ್ರ ಚ ಸಂಕೀರ್ಣ್ಣಂ ಆತ್ಮಾನಂ ಮನ್ಯತೇ ದ್ವಿಜಃ
ತತ್ರತತ್ರ ತಿಲೈರ್ಹೋಮೋ ಗಾಯತ್ರ್ಯಾ ಜಪನಂ ತಥಾ (ಯಾಜ್ಞವಲ್ಕ್ಯಸ್ಮೃತಿ)
ಗಾಯತ್ರ್ಯಾ ಲಕ್ಷಹೋಮೇ ತು ಮುಚ್ಯತೇ ಸರ್ವಪಾತಕೈಃ (ಯಮ)



ಜಪ್ತ್ವಾ ಸಹಸ್ರಂ ಗಾಯತ್ರ್ಯಾಃ ಶುದ್ಧ್ಯೇತ್ ಬ್ರಹ್ಮವಧಾದೃತೇ (ಯಾಜ್ಞವಲ್ಕ್ಯ)

ಸಾವಿತ್ರ್ಯಷ್ಟಸಹಸ್ರೇಣ ಕ್ಷೀರಶಾಂತಿಂ ಚ ಕಾರಯೇತ್

ಮೃತೋ ಪ್ರತ್ಯಾಗತೇ ತತ್ರ (ಧರ್ಮರಾಜ)

ಶ್ವಾನಂ ಶ್ವಪಾಕಂ ಯೂಪಚಿತಿಂ ಚಿತಿಕಾಷ್ಠಂ ಮದ್ಯಂ ಮದ್ಯಭಾಂಡಂ

ಮಾನುಷಾಸ್ಥಿ ಶವಸ್ಪೃಷ್ಟಂ ರಜಸ್ವಲಾಂ ಮಹಾಪಾತಕಿನಂ ಶವಂ

ಸ್ಪೃಷ್ಟ್ವಾ ಸಚೈಲಮಂಭೋಽವಗಾಹ್ಯೋತ್ತೀರ್ಯ ಅಗ್ನಿಮುಪಸ್ಪೃಶ್ಯ

ಗಾಯತ್ರೀಮಷ್ಟವಾರಂ ಜಪೇತ್ (ಚ್ಯವನ)

ಸರ್ವರೋಗವಿನಾಶಾಯ ಜಪಃ ಕಾರ್ಯೋ ವಿಶೇಷತಃ

ಪ್ರಾಯೇಣ ಸೂರ್ಯಃ ಸರ್ವೇಷಾಂ ರೋಗಾಣಾಮಧಿದೈವತಮ್

ಆರೋಗ್ಯಂ ಭಾಸ್ಕರಾದಿಚ್ಛೇದಿತಿ ಪ್ರಖ್ಯಾ ಶ್ರುತಿಃ ಸ್ಮೃತಿಃ (ಮಹಾರ್ಣವ)

ಆರೋಗ್ಯಕಾಮಃ ಸಾವಿತ್ರೇ ಮಂಡಲೇ ಮಾಂ ಸಮರ್ಚಯೇತ್

ರುಗ್ಮಾಭಂ ರುಗ್ಮಕೇಶಂ ಚ ರುಗ್ಮನೇತ್ರಂ ಚತುರ್ಭುಜಮ್

ಜಪಾಂತೇ ಸೂರ್ಯಪುರತಃ ಪ್ರಾತರೇವ ದ್ವಿಜಾಗ್ರಣೀಃ

ಸಾಷ್ಟಾಂಗಂ ಪ್ರಣಮೇದ್ಭೂಮೌ ಅಷ್ಟವಾರಂ ಚತುರ್ಮುಖ

ಉತ್ಥಾಯ ಚ ಪುನರ್ಧ್ಯಾಯೇತ್ ಸೂರ್ಯನಾರಾಯಣಂ ಹೃದಿ

(ನಾರಾಯಣಸಂಹಿತಾ)

ಪ್ರತಿಗ್ರಹೇಷು ಸರ್ವೇಷು ಜಪಹೋಮಾದಿಕಂ ಭವೇತ್

ಪ್ರತಿಗ್ರಹೈಶ್ಚ ಯೇ ವಿಪ್ರಾ ದೂಷಿತಾ ಉಗ್ರದಾನತಃ

ತ್ರಿಗುಣಂ ಚ ಜಪೇದ್ವೇದಂ ಗಾಯತ್ರ್ಯಾ ವಾಽಯುತಾತ್ಪರಮ್

ನಾರಾಯಣಾನುಸ್ಮರಣಾತ್ ಮುಚ್ಯತೇ ದುಷ್ಪ್ರತಿಗ್ರಹಾತ್

ಗಾಯತ್ರ್ಯಾ ದಶಲಕ್ಷೇಣ ಪ್ರಾಣಾಯಾಮಸಹಸ್ರತಃ (ಅರುಣಸ್ಮೃತಿ)

ಕಾಮಂ ಕರೋತಿ ಗಾಯತ್ರೀ ಪ್ರಾಣಾಯಾಮಾದ್ವಿಶೇಷತಃ

ಗಾಯತ್ರ್ಯಾ ತು ತಿಲೈರ್ಹೋಮಃ ಸರ್ವಪಾಪಪ್ರಣಾಶನಃ

ಶಾಂತಿಕಾಮೋ ಯವೈಃ ಕುರ್ಯಾತ್ ಆಯುಷ್ಕಾಮೋ ಘೃತೇನ ಚ



**ಛಂದೋಗಪರಿಶಿಷ್ಟದಲ್ಲಿ** ತಿಳಿಸಲಾಗಿದೆ. ಸಂಜೆಯ ಜಪವನ್ನು ಸೂರ್ಯಾಸ್ತಕ್ಕಿಂತ ಮೊದಲು 96 ನಿಮಿಷ ಆರಂಭಿಸಿ, ಅಸ್ತದ ಬಳಿಕ 48 ನಿಮಿಷದವರೆಗೆ ಜಪ ನಡೆಸಬೇಕು –

**ಮುಹೂರ್ತಮುದಯಾದರ್ವಾಕ್ ದ್ವಿಮುಹೂರ್ತಮತಃ ಪರಮ್**
**ಸಂಧ್ಯಾಕಾಲಃ ಸ್ಮೃತಃ ಪೂರ್ವಂ ವಿಪರೀತಂ ತು ಪಶ್ಚಿಮೇ**

**ಸ್ಕಾಂದಪುರಾಣವು** ಉದಯ ಹಾಗೂ ಅಸ್ತಮಾನದ 72 ನಿಮಿಷಗಳಲ್ಲಿನ ಆಯಾ ಹೊತ್ತಿನ ಜಪ ನಡೆಯದಿದ್ದರೆ ಪ್ರಾಯಶ್ಚಿತ್ತ ನಡೆಸಬೇಕೆಂದಿದೆ–

**ಉದಯಾಸ್ತಮಯಾದೂರ್ಧ್ವಂ ಯಾವತ್ಸ್ಯಾದ್ಘಟಿಕಾತ್ರಯಮ್**
**ತಾವತ್ಸಂಧ್ಯಾಮುಪಾಸೀತ ಪ್ರಾಯಶ್ಚಿತ್ತಮತಃ ಪರಮ್**

ಜಪಕ್ಕೆ ಹೇಳಿದ ಸಮಯದಲ್ಲಿ ಆರಂಭಗೊಳಿಸದೇ ಅದಕ್ಕೂ ಮೊದಲೋ ಅದರ ನಂತರವೋ ಕರ್ಮವನ್ನು ಆರಂಭಿಸಿದಲ್ಲಿ ನಡೆಸುವವನಿಗೆ ಲಾಭವಿಲ್ಲ. ಅದೇ ಶಾಸ್ತ್ರ ಹೇಳಿದ ಸಮಯಕ್ಕೆ ಸರಿಯಾಗಿ ಕರ್ಮ ಆರಂಭಿಸಿದರೆ ದೊಡ್ಡಮಟ್ಟಿನ ಲಾಭವಿದೆ –

**ಅಕಾಲೇ ಕೃತ್ಯಮಾರಬ್ಧಂ ಕರ್ತುರ್ನಾರ್ಥಾಯ ಕಲ್ಪತೇ**
**ತದೇವ ಕಾಲ ಆರಬ್ಧಂ ಮಹತೇಽರ್ಥಾಯ ಕಲ್ಪತೇ** (ಮಹಾಭಾರತ)
**ಸಕಾಲೇ ಯತ್ಕೃತಂ ಕರ್ಮ್ಮ ಸರ್ವಸಾಧನಮುಚ್ಯತೇ**
**ಅಕಾಲೇ ಸ್ಯಾದ್ಯದಿ ಕೃತಂ ಪ್ರತ್ಯುತಾನರ್ಥಕಾರಣಮ್** (ನಾರಾಯಣಸಂಹಿತೆ)

ಸೂರ್ಯ ಬಂದ ಬಳಿಕ ಬೆಳಗ್ಗಿನ ಜಪ ಮಾಡುವವ, ಸೂರ್ಯ ಹೋದ ಬಳಿಕ ಸಂಜೆ ಜಪ ಮಾಡುವವ ಹೆಸರಿಗೆ ಆರನೆಯ ಬ್ರಾಹ್ಮಣನೆನಿಸುವನು. (ರಾಜಸೇವಕ, ವ್ಯಾಪಾರಿ, ಬಹುಯಾಜ್ಯ, ದೇವರ ಪ್ರಸಾದ ಮಾರುವವ–ಈ ನಾಲ್ವರೊಡನೆ ಸೇರಿದವ ಹೀಗೆ ಐವರು ಹೆಸರಿಗೆ ಬ್ರಾಹ್ಮಣರು. ಬ್ರಾಹ್ಮಣರಲ್ಲ ವೆಂದೇ ತಾತ್ಪರ್ಯ)

**ಅನಾದಿತ್ಯಾಂ ತು ಯಃ ಪೂರ್ವಾಂ ಸಾದಿತ್ಯಾಂ ಚೈವ ಪಶ್ಚಿಮಾಮ್**
**ನೋಪಾಸೀತ ದ್ವಿಜಃ ಸಂಧ್ಯಾಂ ಸ ಷಷ್ಠೋ ಬ್ರಾಹ್ಮಣಃ ಸ್ಮೃತಃ** (ಶಾತಾತಪ)



**ಕಾಲಹೀನೇ ವೃಥಾ ಸಂಧ್ಯಾ** (ಆಹ್ನಿಕಕೌಸ್ತುಭ)

ಸಕಾಲದಲ್ಲಿ ಸಂಧ್ಯಾವಂದನೆಯನ್ನು ಸೋಮಾರಿತನದಲ್ಲಿ ನಡೆಸದಿದ್ದರೆ ಸೂರ್ಯನ ಶಾಪದಿಂದ ಗೂಬೆಯಾಗಿ ಮತ್ತೆ ಹುಟ್ಟುವನೆಂದು **ಅತ್ರಿ** ತಿಳಿಸಿರುವರು–

**ಯಃ ಸಂಧ್ಯಾಂ ಕಾಲತಃ ಪ್ರಾಪ್ತಾಂ ಆಲಸ್ಯಾದತಿವರ್ತ್ತತೇ**

**ಸೂರ್ಯಹತ್ಯಾಮವಾಪ್ನೋತಿ ಉಲೂಕತ್ವಮಿಯಾತ್ಸದಾ**

**ವಿಧಿನಾಽಪಿ ಕೃತಾ ಸಂಧ್ಯಾ ಕಾಲಾತೀತಾ ತು ನಿಷ್ಫಲಾ**

**ಶುಚಿರ್ವಾಪ್ಯಶುಚಿರ್ವಾಽಪಿ ಕಾಲೇ ಸಂಧ್ಯಾಂ ಸಮಾಚರೇತ್**

ಸಮರ್ಥನಾದವನು ಸೂರ್ಯನ ಉದಯಾಸ್ತಮಾನದ ಹೊತ್ತಿಗೆ ಮಲಗಿದ್ದರೆ ಆ ದಿನ ಆತ ಜಪಗೈಯುತ್ತಾ ಉಪವಾಸವಿರಬೇಕು. ಈ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದರೆ ಆತನಿಗೆ ದೊಡ್ಡಮಟ್ಟದ ಪಾಪವು ತಗಲುವುದು ಎಂದು **ಭವಿಷ್ಯಪುರಾಣ** –

**ತಂ ಚೇದಭ್ಯುದಿಯಾತ್ಸೂರ್ಯಃ ಶಯಾನಂ ಕಾಮಕಾರತಃ**

**ನಿಮ್ಲೋಚೇದ್ವಾಽಪ್ಯವಿಜ್ಞಾನಾತ್ ಜಪನ್ನುಪವಸೇದ್ದಿನಮ್**

**ಪ್ರಾಯಶ್ಚಿತ್ತಮಕುರ್ವಾಣೋ ಯುಕ್ತಸ್ಸ್ಯಾನ್ಮಹತೈನಸಾ**

ಸಣ್ಣಮಕ್ಕಳೆಂದು ಕೊಂಡಾಟದಿಂದ ಸೂರ್ಯನ ಉದಯಾಸ್ತಮಾನ ಕಾಲದಲ್ಲಿ ಜಪ ಮಾಡದೇ ಮಲಗಲು ಬಿಟ್ಟರೆ, ಮಕ್ಕಳು ಸುಖವನ್ನು ಬಯಸಿದರೆ, ತಂದೆತಾಯಿಗಳು ನೂರಾರು ವರ್ಷಗಳಲ್ಲಿಯೂ, ಇದರ ತಪ್ಪಿನ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲು ಸಮರ್ಥರಾಗುವುದಿಲ್ಲ ಎಂದು **ಸ್ಕಾಂದಪುರಾಣ** ಎಚ್ಚರಿಸಿದೆ –

**ಶಯಾನಮಭ್ಯುದಯತೇ ಬ್ರಧ್ನಶ್ಚೇದ್ಬ್ರಹ್ಮಚಾರಿಣಮ್**

**ಪ್ರಮಾದಾದಥ ನಿಮ್ಲೋಚೇತ್ ಜಪನ್ನುಪವಸೇದ್ದಿನಮ್**

**ಸುತಸ್ಯ ಸಂಭವೇ ಕ್ಲೇಶಂ ಸಹೇತೇ ಪಿತರೌ ಚ ಯತ್**

**ಶಕ್ಯಾ ವರ್ಷಶತೇನಾಪಿ ನೋ ಕರ್ತ್ತುಂ ತಸ್ಯ ನಿಷ್ಕೃತಿಃ**

ಸಂಧ್ಯಾಕಾಲದಲ್ಲಿ ಅನುಷ್ಠಾನ ನಡೆಸದಿದ್ದರೆ ಸೂರ್ಯ ಆತನನ್ನು ಶಿಕ್ಷಿಸುವನು ಎಂದು **ಗರುಡಪುರಾಣ** ಎಚ್ಚರಿಸಿದೆ –



**ತಂ ಹಂತಿ ಸೂರ್ಯಃ ಸಂಧ್ಯಾಯಾಂ ನೋಪಾಸ್ತಿಂ ಕುರುತೇ ತು ಯಃ**

ಸಕಾಲದಲ್ಲಿ ಆಗದಿದ್ದರೆ ಗೌಣಕಾಲದಲ್ಲಿಯಾದರೂ ಮಾಡಬೇಕು. ಗೌಣಕಾಲ ಸಕಾಲದ ಅನಂತರದ ಕಾಲ. ಆದ್ದರಿಂದ ಪ್ರಾತಃಸಂಧ್ಯೆಯನ್ನು ಪ್ರಾತಃಕಾಲ ಕಳೆದು ಮಾಡಬೇಕೇ ಹೊರತು ಮೊದಲೇ ಮಾಡಿದರಾಗದು. ಇದರಂತೆ ಸಾಯಂಸಂಧ್ಯೆಯನ್ನು ರಾತ್ರಿ ಮಾಡಲು ಬರುವುದೇ ಹೊರತು ಮಧ್ಯಾಹ್ನ ಆಗದು ಎಂದು **ತ್ರಿಕಾಂಡಮಂಡನದ** ಮಾತು

**ಸ್ವಕಾಲಾದುತ್ತರಃ ಕಾಲೋ ಗೌಣಃ ಸರ್ವಸ್ಯ ಕರ್ಮಣಃ**

ದ್ವಾದಶಿ ಕಡಿಮೆ ಇದ್ದಾಗ ಮಾತ್ರ ಮಾಧ್ಯಾಹ್ನಿಕ ಬೆಳಿಗ್ಗೆಯೆ ಆಗುವುದೆಂದು **ಸ್ಕಾಂದಪುರಾಣದ** ಮಾತು–

**ಯದಾ ಭವತಿ ಚಾಲ್ಪಾ ತು ದ್ವಾದಶೀ ಹ್ಯರುಣೋದಯೇ**

**ಉಷಃಕಾಲೇ ದ್ವಯಂ ಕುರ್ಯಾತ್ ಪ್ರಾತರ್ಮಾಧ್ಯಾಹ್ನಿಕಂ ತದಾ**

ತುಂಬಾ ತೊಂದರೆಗೊಳಗಾದರೆ ಸಾಯಂಸಂಧ್ಯಾವಂದನೆಯನ್ನು ನಡುರಾತ್ರಿಯೊಳಗೆ ಮುಗಿಸಬೇಕು ಎಂದು **ಬೃಹನ್ನಾರದೀಯಪುರಾಣ** –

**ಕದಾಚಿತ್ಕಾಲಲೋಪೇಽಪಿ ಸಂಕಟೇ ವಾ ಪಥಿ ಸ್ಥಿತಃ**

**ಆನಿಶೀಥಾತ್ ಪ್ರಕುರ್ವೀತ ಸಾಯಂ ಸಂಧ್ಯಾಂ ದ್ವಿಜೋತ್ತಮಾಃ**

ಇಡಿಯ ದಿನದಲ್ಲಿ ಕಾಲಕ್ಕನುಗುಣವಾಗಿ ಮೂರು ಹೊತ್ತಿನ ಜಪವನ್ನು ಅನಿವಾರ್ಯ ತೊಂದರೆಯಿಂದ ಮಾಡಲಾಗದಿದ್ದರೆ, ಸೂರ್ಯಾಸ್ತದ ಬಳಿಕ ಮೂರು ಗಂಟೆಯ ಒಳಗಿನ ರಾತ್ರಿಯಲ್ಲಿ ಮೂರು ಹೊತ್ತಿನ ಜಪವನ್ನೂ ಮಾಡಬೇಕೆಂದು **ಸ್ಮೃತಿಸಂಗ್ರಹದಲ್ಲಿನ** ಮಾತು –

**ದಿವೋದಿತಾನಿ ಕರ್ಮಾಣಿ ಪ್ರಮಾದಾದಕೃತಾನಿ ಚೇತ್**

**ಶರ್ವರ್ಯಾಃ ಪ್ರಥಮೇ ಯಾಮೇ ತಾನಿ ಸರ್ವಾಣಿ ಕಾರಯೇತ್**

ಸಮಯ ತಪ್ಪಿ ತಡಮಾಡಿ ಮಾಡುವ ಜಪಕ್ಕೆ ವಿಶ್ವಾಮಿತ್ರರು ಹೇಳುವ ಪ್ರಾಯಶ್ಚಿತ್ತ – ಮೂರು ಸಾವಿರ ಜಪ. ಇದು ಅವರು ಮಂತ್ರ ಕಂಡು ನಮಗೆ ಕೊಟ್ಟ ಜಪಕ್ಕೆ ನೀಡಿದ ಕಡಿಮೆ ಬೆಲೆ –



**ತ್ರಿಸಹಸ್ರಜಪಂ ಕುರ್ಯಾತ್ ಪ್ರಾಯಶ್ಚಿತ್ತಂ ವಿಧೀಯತೇ**

**ಕಾಲಾತೀತೇ ತು ಸಂಧ್ಯಾಯಾಂ.....**

ವಿಶ್ವಾಮಿತ್ರನ ಭ್ರಾತೃಸಂಬಂಧಿ **ಜಮದಗ್ನಿಯ** ನೆಲೆಯಲ್ಲಿ ಕಾಲಾತೀತದೋಷದ ಪರಿಹಾರಕ್ಕೆ ನೂರ ಎಂಟು ಜಪ –

**ಸಂಧ್ಯಾಕಾಲೇ ತ್ವತಿಕ್ರಾಂತೇ ಸ್ನಾತ್ವಾಽಽಚಮ್ಯ ಯಥಾವಿಧಿ**

**ಜಪೇದಷ್ಟಶತಂ ದೇವೀಂ ತತಃ ಸಂಧ್ಯಾಂ ಸಮಾಚರೇತ್**

ಊರ್ಧ್ವಪುಂಡ್ರ ಹಾಕಿಕೊಂಡು ಮಾಡಿದ ಜಪಕ್ಕೆ ಸಾವಿರಪಟ್ಟು ಅಧಿಕ ಫಲವಿದೆಯೆಂದು **ನಾರದೀಯದ** ಮಾತು –

**ಸಂಖ್ಯಾತಾದಪಿ ಸಾಹಸ್ರಃ ಸೋಽರ್ಧ್ವಪುಂಡ್ರತನೋರ್ಜಪಃ**

ಊರ್ಧ್ವಪುಂಡ್ರವಿಲ್ಲದೆ ಮಾಡಿದ ಜಪಾದಿ ಧರ್ಮಕರ್ಮಗಳ ಫಲವನ್ನು ರಾಕ್ಷಸರು ಎಳೆದೊಯ್ಯುವರೆಂದು **ಪದ್ಮಪುರಾಣ** –

**ಯಜ್ಞದಾನತಪಶ್ಚರ್ಯಾಜಪಹೋಮಾದಿಕಂ ಚ ಯತ್**

**ಊರ್ಧ್ವಪುಂಡ್ರಧರಃ ಕುರ್ಯಾತ್ ತಸ್ಯ ಪುಣ್ಯಮನಂತಕಮ್**

**ಊರ್ಧ್ವಪುಂಡ್ರವಿಹೀನಸ್ತು ಸಂಧ್ಯಾಕರ್ಮಾದಿಕಂ ಚರೇತ್**

**ತತ್ಸರ್ವಂ ರಾಕ್ಷಸೈರ್ನೀತಂ ನರಕಂ ಚಾಧಿಗಚ್ಛತಿ**

ಜಪಕ್ಕೆ ನೀರನ್ನು ತಾನೇ ತಂದಿರಬೇಕು, ಅಪರಿಚಿತರಿಂದಲ್ಲ ಎಂದು **ವಿಶ್ವಾದರ್ಶ** –

**ಶೂದ್ರಾಹೃತೇನ ನಾಚಾಮೇತ್ ಜಪಾದಿಹವನೇಷು ಚ**

ಜಪ ಹೋಮ ಮುಂತಾದ ಕ್ರಿಯೆಗಳನ್ನು ನಡೆಸುವಾತನು ಕಾರಣವಿಲ್ಲದೆ ಯಾರೊಬ್ಬನನ್ನು ಮುಟ್ಟಬಾರದು. ಕರ್ಮಾಂಗ ನಡೆಯುತ್ತಿರುವಾಗಲೇ ತಿಳಿಯದೇ ಮುಟ್ಟಿ ಹೋದಲ್ಲಿ, ಆಚಮನವನ್ನು ಮಾಡಿ ಕ್ರಿಯೆಯನ್ನು ಮುಂದುವರಿಸಬೇಕು. ಬೇಕೆಂದೇ ಮುಟ್ಟಿದಲ್ಲಿ ಮೂರು ಬಾರಿ ಪ್ರಾಣಾಯಾಮವನ್ನು ಪ್ರಾಯಶ್ಚಿತ್ತವಾಗಿ ಮಾಡಿ ಧರ್ಮಾಚರಣೆಯನ್ನು ಮುಂದುವರಿಸಬೇಕು.

**ಜಪಹೋಮಾದಿಷು ನರಂ ಅನ್ಯಂ ನಾಕಾರಣಾತ್ ಸ್ಪೃಶೇತ್**



**ಅಬುದ್ಧಿಪೂರ್ವಸಂಸ್ಪರ್ಶ: ಚೇತ್ತದಾ ವಾರ್ಯುಪಸ್ಪೃಶೇತ್**

**ಬುದ್ಧಿಪೂರ್ವಕಸಂಸ್ಪರ್ಶೇ ಪ್ರಾಣಾಯಾಮ: ತ್ರಯಂ ಚರೇತ್**

ಸ್ನಾನ, ಊಟ, ಹೋಮ, ಜಪ, ದಂತಧಾವನ, ಮಲಮೂತ್ರವಿಸರ್ಜನ ಇಲ್ಲೆಲ್ಲಾ ಮೌನವಿರಬೇಕು–

**ಸ್ನಾನಭೋಜನಯೋರ್ಹೋಮೇ ಜಪೇ ವೈ ದಂತಧಾವನೇ**

**ಪುರೀಷಮೂತ್ರೋತ್ಸರ್ಗೇ ಚ ಸಪ್ತ ಮೌನಂ ವಿಧೀಯತೇ**

ತ್ರಿಪಾದ್ಗಾಯತ್ರಿಯನ್ನು ಷಡ್ಜ ಋಷಭ ಧೈವತ ಸ್ವರಗಳಲ್ಲಿ ಹಾಡಬಹುದು. ಪ್ರಣವವು ನಾಲ್ಕನೆಯ ಪಾದವಾಗಿ ಪರಿಗಣಿಸಲ್ಪಡುವುದು. ಗಾಯತ್ರಿಯ ಪ್ರತಿಪಾದದಲ್ಲಿ ಎಂಟು ಅಕ್ಷರದಂತೆ ಪ್ರಣವವು ಅಷ್ಟಾಕ್ಷರವು ಎಂದು ಬೃಹದಾರಣ್ಯಕಭಾಷ್ಯದಲ್ಲಿನ ಪ್ರಮಾಣ –

**ಚತುರ್ಥಪಾದೋ ಗಾಯತ್ರ್ಯಾ: ಪ್ರಣವ: ಸಮುದಾಹೃತ:**

**ಅಕಾರಾದ್ಯತಿಶಾಂತಾಂತ: ಪ್ರಣವೋಽಷ್ಟಾಕ್ಷರೋ ಯತ:**

ಪ್ರಣವದಲ್ಲಿ ಭಗವಂತನ ಅನಂತರೂಪಗಳನ್ನು ಉಪಾಸನೆ ಮಾಡಬರುವುದು. ಇದರಿಂದ ಅನಂತವೇದಗಳು ಪ್ರಣವದಲ್ಲಿ ನೆಲೆನಿಂತಿವೆ ಎನ್ನುವುದು ಸೂಕ್ತವಾಗಿದೆ –

**ತ್ರಿಮಾತ್ರಮಾದಿತ: ಕೃತ್ವಾ ಯಾವಚ್ಚಾನಂತಮಾತ್ರಕಾ:**

**ಪ್ರಣವಾಸ್ತೇ ವಿಭೇದೇನ ಹ್ಯನಂತಾ ಪರಿಕೀರ್ತಿತಾ:**

ಎಲ್ಲ ಧಾರ್ಮಿಕ ಆಚರಣೆಯಲ್ಲಿಯಂತೆ ಜಪದಲ್ಲಿಯೂ ಆರಂಭದಲ್ಲಿ ಮತ್ತು ಕೊನೆಯಲ್ಲಿ ಆಚಮನವನ್ನು ಮಾಡಬೇಕು –

**ಸಂಧ್ಯಾಸು ಭೋಜನೇ ಸ್ನಾನೇ ಪೂಜಾಹೋಮಪ್ರತಿಗ್ರಹೇ**

**ವಂದನೇ ಬಲಿಕರ್ಮ್ಮಾದೌ ಆದ್ಯಂತ ಆಚಮೇದ್ದ್ವಿಜ:**

ಕರ್ಮದ ಆರಂಭದಲ್ಲಿ ಆಚಮನ ನಮ್ಮೆಡೆಗೆ ಎಲ್ಲ ದೇವತೆಗಳ ಆವಾಹನೆಗೆ ಪ್ರಾರ್ಥನೆಯಾಗಿ ಮತ್ತು ಕರ್ಮಾಚರಣೆಯ ಬಳಿಕ ಕೊನೆಗೆ ಆಚ ಮನ ಎಲ್ಲರ ವಿಸರ್ಜನೆಗೆ ಕೃತಜ್ಞತೆಯಾಗಿ.



# ಅಷ್ಟಾಕ್ಷರಜಪ

ವೇದವ್ಯಾಸರು ಮಹಾಭಾರತದಲ್ಲಿ ಜಪದ ನಾಲ್ಕು ಬಗೆಯನ್ನು ಹೇಳಿರುತ್ತಾರೆ. ವೇದಮಂತ್ರಗಳ ಜಪ, ತಂತ್ರ-ಸಂಹಿತಾಗಳಲ್ಲಿ ಬಂದ ಮಂತ್ರಗಳ ಜಪ, ಇತಿಹಾಸ-ಪುರಾಣಗಳಲ್ಲಿ ಬಂದಿರುವ ಮಂತ್ರಗಳ ಜಪ, ಹಾಗೆಯೇ ಸ್ಮೃತಿಗಳು ಸಂಗ್ರಹಿಸಿದ ಮಂತ್ರಗಳ ಜಪ.

**ಜಪಶ್ಚತುರ್ವಿಧಃ ಪ್ರೋಕ್ತೋ ವೈದಿಕಸ್ತಾಂತ್ರಿಕೋಽಪಿ ಚ**

**ಪೌರಾಣಿಕೋಽಥ ವಿದ್ವದ್ಭಿಃ ಕಥಿತಃ ಸ್ಮಾರ್ತ ಏವ ಚ**

ನಿತ್ಯ ಸಂಧ್ಯಾವಂದನೆಯಲ್ಲಿ ವೇದಮಂತ್ರದ ಜಪವಾಗಿ ವೇದಸಾರವೆನಿಸಿದ ಗಾಯತ್ರೀ ಮಂತ್ರದ ಜಪ ಬಂದಿದೆ. ಇದು ವೈದಿಕವಾಯಿತು. ತಾಂತ್ರಿಕವಾಗಿ ಮತ್ತು ಪೌರಾಣಿಕವಾಗಿ ನಾರಾಯಣನ ಅಷ್ಟಾಕ್ಷರದ ಮಂತ್ರಜಪ ನಿತ್ಯಸಂಧ್ಯಾವಂದನೆಯಲ್ಲಿ ಮುಖ್ಯವೆನಿಸಿದೆ.

ಅಷ್ಟಾಕ್ಷರಮಂತ್ರಜಪವನ್ನು ದಿಗುಪಸ್ಥಾನದ ಮೊದಲೆ ನಡೆಸುವಲ್ಲಿ ಶ್ರೀವೈಷ್ಣವರಲ್ಲೂ ವ್ಯವಸ್ಥೆ ಇದೆ. ಆದರೆ ಇಲ್ಲಿ ಕೆಲವರು ಗಾಯತ್ರೀಜಪದ ಬಳಿಕ ದಿಗುಪಸ್ಥಾನ ಮಾಡಿ ಅಷ್ಟಾಕ್ಷರಜಪವನ್ನು ನಡೆಸುವರು. ಕೆಲವು ಪುಸ್ತಕಗಳೂ ಹಾಗೆಯೇ ಮುದ್ರಣಗೊಂಡಿವೆ. ಆಚಾರ್ಯಮಧ್ವರು **ಸದಾಚಾರಸ್ಮೃತಿ**ಯಲ್ಲಿ ಗಾಯತ್ರೀ-ಅಷ್ಟಾಕ್ಷರಮಂತ್ರಗಳ ಜಪದ ಬಳಿಕವೆ **ಪ್ರಣಮ್ಯ ದೇವಾನ್ ವಿಪ್ರಾಂಶ್ಚ** ಎಂದು ದಿಗುಪಸ್ಥಾನವನ್ನು ತಿಳಿಸಿರುವರು. **ಕಾಶ್ಯಪಸ್ಮೃತಿ** ಇದಕ್ಕೆ ಸಂವಾದಿಯಾಗಿದೆ.

**ಗಾಯತ್ರೀಂ ತುರ್ಯಗಾಯತ್ರೀಂ ಮೂಲಮಂತ್ರಮಿತಿ ಕ್ರಮಾತ್**

**ಜಪ್ತ್ವೋಪಸ್ಥಾಯ ವಿಧಿವತ್....**

ಅಷ್ಟಾಕ್ಷರಮಂತ್ರಜಪದಿಂದ ನಾರಾಯಣನನ್ನು ಎಂಟು ಬಗೆಯಿಂದ ಆರಾಧಿಸುವಂತೆ **ವೇದವ್ಯಾಸರೇ** ಅನುಶಾಸನಗೈದಿದ್ದಾರೆ. ಅಷ್ಟಾಕ್ಷರಜಪವು ಎಲ್ಲ-ರಿಗೂ ಸದ್ಗತಿಗೆ ಸೋಪಾನವೆಂದೂ ಅರುಹಿದ್ದಾರೆ –

**ಉಪಾಯೋಽಯಂ ಪರಪ್ರಾಪ್ತೌ ಪರಮಃ ಪರಿಕೀರ್ತಿತಃ**

**ನಾರಾಯಣಸ್ಯಾನುಧ್ಯಾನಂ ಅರ್ಚನಂ ಯಜನಂ ಸ್ತುತಿಃ**



**ಶ್ರವಣಂ ತತ್ಕಥಾನಾಂ ಚ ವಿದ್ವತ್ಸಂರಕ್ಷಣಂ ತಥಾ**

**ವಿದ್ವತ್ಶುಶ್ರೂಷಣಪ್ರೀತಿಃ ಉಪದೇಶಾನುಪಾಲನಮ್**

**ಸ ಧ್ಯಾನೇನ ಜಪೇನಾಶು ಮುಚ್ಯತೇ ಪ್ರಾಕೃತೋಽಪಿ ವಾ**

ನಿತ್ಯಜಪದಲ್ಲಿ ಗಾಯತ್ರಿ ಮತ್ತು ನಾರಾಯಣಾಷ್ಟಾಕ್ಷರ ಜಪ ಕಡ್ಡಾಯ ಎನ್ನುವುದಕ್ಕೆ ಕಾರಣವನ್ನು **ಋಷ್ಯಶೃಂಗಸಂಹಿತೆಯಲ್ಲಿ** ಕಾಣಬಹುದು –

**ಸಾವಿತ್ರ್ಯಷ್ಟಾಕ್ಷರೀ ವಿದ್ಯಾ ಸರ್ವಾಧಿವ್ಯಾಧಿನಾಶಿನೀ**

ಮುಖ್ಯವಾಗಿ ಎಲ್ಲ ಬಗೆಯ ಶಾರೀರಿಕ ಮತ್ತು ಮಾನಸಿಕ ಕಾಯಿಲೆಗಳ ನಿವೃತ್ತಿಗೆ ಇವೆರಡರ ಜಪ. ಗಾಯತ್ರಿ ಜಪದಿಂದ ಒಳಗಿನ ಕಾಯಿಲೆ, ಮಾನಸಿಕ ತೊಂದರೆ, ಹುಚ್ಚು ಮುಂತಾದ ಜನ್ಮಾಂತರದ ಸೋಂಕುಗಳು ನಿವೃತ್ತಿಗೊಳ್ಳುವವು. ಅಷ್ಟಾಕ್ಷರಜಪದಿಂದ ಹೊರಗಿನ ಸಮಸ್ಯೆಗಳು, ಶಾರೀರಿಕ ತೊಂದರೆಗಳು, ಕೋಪ–ತಾಪಗಳು, ಈ ಜನ್ಮದ ಅಂಟುರೋಗಗಳು ನಾಶಗೊಳ್ಳುವುವು.

**ಕಿಂ ಕಾರ್ಯಂ ಬಹುಭಿರ್ಮಂತ್ರೈಃ ಮನೋವಿಭ್ರಮಕಾರಕೈಃ**

**ಓಂ ನಮೋ ನಾರಾಯಣಾಯೇತಿ ಮಂತ್ರಃ ಸರ್ವಾರ್ಥಸಾಧಕಃ**

ಇತರ ಮಂತ್ರಗಳ ಸಹವಾಸ ಹುಚ್ಚುಕಾರಕವೆಂದು **ಬ್ರಹ್ಮಪುರಾಣ** ಹೇಳಿದೆ –

**ಪರಸ್ಯ ದಾಸಭೂತಸ್ಯ ಸ್ವಾತಂತ್ರ್ಯಂ ನೇಹ ವಿದ್ಯತೇ**

**ತಸ್ಮಾನ್ಮಮತ್ವಾಹಂಕಾರೌ ನಮಸಾ ವಿನಿವರ್ತಯೇತ್**

ನಮ್ಮ ರೋಗರುಜಿನಗಳನ್ನು ನಿವೃತ್ತಿಗೊಳಿಸುವಲ್ಲಿ ನಮಗೆ ಸಾಮರ್ಥ್ಯವಿಲ್ಲ. ಇತರರಿಗೂ ಇತರ ವಸ್ತುಗಳಿಗೂ ನಮ್ಮ ಅಯೋಗ್ಯತೆಗೆ ಪ್ರಾರಬ್ಧಕ್ಕೆ ಚೆನ್ನಾಗಿ ಫಲ ನೀಡುವ ಸಹಾಯ ಮಾಡುವ ಶಕ್ತಿಯೂ ಇರುವುದಿಲ್ಲ. ಇದು ಅಸ್ವತಂತ್ರರಾದ ಎಲ್ಲ ದೇವತೆಗಳಿಗೂ ಅನ್ವಯಿಸುವುದು. ಹಾಗಾಗಿ ನಾರಾಯಣನೊಬ್ಬನೇ ಸ್ವತಂತ್ರನು. ನಮ್ಮ ಪರಿಪೂರ್ಣತೆಗೆ ಅವನಿಗೆ ನಾವು ನಮ್ಮನ್ನು ಸಮರ್ಪಿಸಿಕೊಂಡಾಗ ನಮ್ಮ ಅಸ್ವಾತಂತ್ರ್ಯವನ್ನು ಅಸ್ವಾಮಿತನವನ್ನು ಒಪ್ಪಿದಾಗ, ಅಹಂಕಾರ ತೊರೆದು ಆತನಿಗೆ ನಮಿಸಿದಾಗ ನಮಗೆ ಫಲ ಸಿಗಲಿದೆ. ಹೀಗೆ ಮಂತ್ರದಲ್ಲಿ ನಮಃ ಶಬ್ದದ ವೈಭವವನ್ನು **ಪಾದ್ಮಪುರಾಣವು** ತೋರಿಸಿದೆ.



**ಅಹಂಕೃತಿರ್ಮ್ಮಕಾರಃ ಸ್ಯಾತ್ ನಕಾರಸ್ತನ್ನಿಷೇಧಕಃ**

**ಸಾಹಂಕಾರೇಣ ಯುಕ್ತಸ್ಯ ಸುಖಂ ಕಿಂಚಿನ್ನ ವಿದ್ಯತೇ**

**ಅಹಂಕಾರವಿಮೂಢಾತ್ಮಾ ಅಂಧೇ ತಮಸಿ ಮಜ್ಜತಿ**

**ತಸ್ಮಾತ್ತು ತಪಸಾ ಕ್ಷೇತ್ರಸ್ವಾತಂತ್ರ್ಯಂ ಪ್ರತಿಷಿಧ್ಯತೇ**

**ತಸ್ಯ ದಾಸ್ಯಂ ಚತುರ್ಥ್ಯಂತಮಂತ್ರೈಃ ಪ್ರೋಕ್ತಂ ತು ಪಾರ್ವತಿ**

**ದಾಸಭೂತಮಿದಂ ತಸ್ಯ ಬ್ರಹ್ಮಾದ್ಯಂ ಸಕಲಂ ಜಗತ್**

**ಏವಮರ್ಥಂ ವಿದಿತ್ವಾ ವೈ ಪಶ್ಚಾನ್ಮಂತ್ರಂ ಪ್ರಯೋಜಯೇತ್**

**ಅವಿದಿತ್ವಾಽರ್ಥಂ ಮಂತ್ರಸ್ಯ ಸಂಸಿದ್ಧಿಂ ನಾಧಿಗಚ್ಛತಿ**

ಇಡಿಯ ಜಗತ್ತು ಈ ವಿಷಯದಲ್ಲಿ ನಾರಾಯಣನಿಗೆ ಅಡಿಯಾಳಾಗಿದೆ ಎನ್ನುವ ಅರ್ಥಚಿಂತನೆಯೇ ಇಲ್ಲಿ ಮುಖ್ಯವೆನಿಸಿದೆ ಎಂದು ಇಲ್ಲಿ **ಪದ್ಮಪುರಾಣವು** ಆದೇಶಿಸಿದೆ.

ಮಂತ್ರದಲ್ಲಿನ ನ ಮತ್ತು ಮಃ ಎರಡಕ್ಷರವು ನನ್ನದೇನೂ ಇಲ್ಲ, ಎಲ್ಲವೂ ನಿನ್ನಿಂದ ನಿನಗಾಗಿ ಎನ್ನುವ ಸರ್ವಾರ್ಪಣೆಯನ್ನು ಹೇಳಿದೆ –

**ಮಮತ್ವಮಾಹ ಮಃಶಬ್ದಃ ನಶಬ್ದಸ್ತನ್ನಿಷೇಧನಮ್**

**ಮಮತ್ವಂ ಸರ್ವತಸ್ತ್ಯಕ್ತ್ವಾ ತದರ್ಥಂ ಶರಣಾಗತಃ**

ಮಂತ್ರದಲ್ಲಿ **ನಾರಾಯಣಾಯ** ಎಂಬಲ್ಲಿ ಚತುರ್ಥೀ ವಿಭಕ್ತಿ ಭಗವಂತನಿಗೆ ನಾವು ಎಂದೆಂದೂ ದಾಸರೆನ್ನುವುದನ್ನು ಸ್ಪಷ್ಟಪಡಿಸುವುದು –

**ಸರ್ವೇಷು ದೇಶಕಾಲೇಷು ಸರ್ವಾವಸ್ಥಾಸು ಸರ್ವದಾ**

**ತಸ್ಯೈವ ಕಿಂಕರೋಽಸ್ಮೀತಿ ಚತುರ್ಥ್ಯಾ ಪರಮಾತ್ಮನಃ**

**ಭಗವತ್ಪರಿಚರ್ಯೈವ ಜೀವಾನಾಂ ಫಲಮುಚ್ಯತೇ**

**ತಸ್ಮಾಚ್ಚತುರ್ಥ್ಯಾ ಮಂತ್ರಸ್ಯ ಪ್ರಧಾನಂ ದಾಸ್ಯಮುಚ್ಯತೇ** (ವೃದ್ಧಹಾರೀತಸ್ಮೃತಿ)

**ಪೂರ್ಣ್ಣೇ ಸಂವತ್ಸರೇ ಭಕ್ತಿಂ ಹರೇಃ ಕೃತ್ವಾ ವಿಚಕ್ಷಣಃ**

**ಸಂವತ್ಸರಾರ್ಧೇ ತ್ರೇತಾಯಾಂ ಸಮಮೇತನ್ನ ಸಂಶಯಃ**

**ತ್ರಿಮಾಸೇ ದ್ವಾಪರೇ ಭಕ್ತ್ಯಾ ಪೂಜ್ಯ ಯಲ್ಲಭತೇ ಫಲಮ್**



**ನಮೋ ನಾರಾಯಣೇತ್ಯುಕ್ತ್ವಾ ಕಲೌ ತು ಲಭತೇ ಫಲಮ್**

**ವರಾಹಪುರಾಣವು** ಇತರ ಯುಗಗಳಲ್ಲಿ ವರ್ಷಗಟ್ಟಲೆ ಮಾಡುವ ಸಾಧನೆಯ ಸಂಕೋಚವನ್ನು ಕಲಿಯುಗದಲ್ಲಿ ನಾರಾಯಣನಾಮಜಪದಲ್ಲಿ ತಿಳಿಸಿಕೊಟ್ಟಿದೆ.

**ನಾರಾಯಣಃ ಪರಂಬ್ರಹ್ಮ ತತ್ವಂ ನಾರಾಯಣಃ ಪರಃ**
**ಪರಾದಪಿ ಪರಶ್ಚಾಸೌ ತಸ್ಮಾನ್ನಾಸ್ತಿ ಪರಾತ್ಪರಃ**
**ವಾಸುದೇವಂ ತಥಾ ವಿಷ್ಣುಂ ಆತ್ಮಾನಂ ಚ ತಥಾ ವಿದುಃ**
**ಸಂಜ್ಞಾಭೇದೈಃ ಸ ಏವೈಕಃ ಸರ್ವಶಾಸ್ತ್ರಾಭಿಸಂಸ್ಕೃತಃ**

ನಾರಾಯಣನಿಗಿಂತ ಮಿಗಿಲಾದವನು ಇಲ್ಲವೇ ಇಲ್ಲ ಎನ್ನುವುದಾಗಿ **ಮಹಾಭಾರತದ** ಶಾಸನ.

**ನ ರೂಪಾಣಾಂ ವಿಶೇಷೋಽಸ್ತಿ ಗುಣತೋ ನಾಮತೋಽಪಿ ವಾ**
**ತಥಾಽಪಿ ತತ್ಪ್ರಿಯಂ ನಾಮ ನಾರಾಯಣ ಇತಿ ಸ್ಮ ಹ**
**ವಿಶೇಷತಃ ಸಮಸ್ತಾನಾಂ ನಾಮ್ನಾಂ ತಸ್ಯಾರ್ಥ ಏವತು**
**ವಿಜ್ಞಾಯತೇ ಗುಣೈಃ ಪೂರ್ತಿಃ ನಾಮಸಾಮ್ಯಂ ತದಾ ತಥಾ**

**ಛಾಂದೋಗಭಾಷ್ಯದಲ್ಲಿ** ಆಚಾರ್ಯಮಧ್ವರು ನಾರಾಯಣನಾಮಕ್ಕಿರುವ ಔಚಿತ್ಯವನ್ನು ತಿಳಿಸಿದ ರೀತಿಯಿದು. ಎಲ್ಲ ನಾಮಗಳ ಚಿಂತನೆಯೂ ಇಲ್ಲಿದೆ. ಎಲ್ಲ ಗುಣಗಳ ಸಂಗ್ರಹವೂ ಇಲ್ಲಿದೆ. ಇದು ಜ್ಞಾನಿಗಳ ಮಾತು. ಅಜ್ಞಾನಿಗಳಿಗೂ ತಿಳಿಯುವ ಸಂಗತಿ. ಉಪಾಸಕರೂ ಈ ನಾಮಚಿಂತನೆಯಿಂದಲೆ ತಮ್ಮತನವನ್ನು ಪಡೆದ ವಿಷಯವನ್ನು ಆಚಾರ್ಯರು ತಿಳಿಸಿರುವರು –

**ನಾಮ್ನೋ ನಾರಾಯಣಾಖ್ಯಸ್ಯ ಗುಣೈಃ ಪೂರ್ತಿಂ ಹಿ ದೇವತಾಃ**
**ವಿಜ್ಞಾಯಾರ್ಥಮುಪಾಸ್ಯೈವ ಸರ್ವಾಧಿಕ್ಯಮಥಾಪಿರೇ**

ಉಳಿದ ಮಂತ್ರಗಳೇಕೆ? ಜ್ಞಾನಭಕ್ತಿ ಉಂಟಾಗಲು ಅಷ್ಟಾಕ್ಷರ ಒಂದು ಸಾಕೆಂದು **ಮೋಕ್ಷಧರ್ಮಪರ್ವದ** ಮಾತು–

**ಕಿಂ ತಸ್ಯ ಬಹುಭಿರ್ಮಂತ್ರೈಃ ಭಕ್ತಿರ್ಯಸ್ಯ ಜನಾರ್ದನೇ**



**ನಮೋ ನಾರಾಯಣಾಯೇತಿ ಮಂತ್ರಃ ಸರ್ವಾರ್ಥಸಾಧಕಃ**

ಸರ್ವಾರ್ಥಸಾಧಕವು ನಾರಾಯಣನ ಅಷ್ಟಾಕ್ಷರಮಂತ್ರ ಎನ್ನುವ ಈ ವಿಷಯವು, ಪ್ರಹ್ಲಾದ ಅಸುರಬಾಲಕರಿಗೆ ಈ ಮಂತ್ರವನ್ನು ಉಪದೇಶಿಸುವಲ್ಲಿ **ಲಿಂಗಪುರಾಣದಲ್ಲಿಯೂ** ಬಂದಿದೆ. ಬಯಸಿದ್ದನ್ನು ನೀಡಲಿದೆ ಈ ಮಂತ್ರ ಎಂದು **ವಿಷ್ಣುಧರ್ಮೋತ್ತರ** –

**ನಾರಾಯಣಾಯೇತ್ಯಥವಾ ನಮಃ ಪ್ರಣವಪೂರ್ವಕಮ್**
**ಜಪೇದಷ್ಟಾಕ್ಷರಂ ಮಂತ್ರಂ ವಾಂಛಿತಾರ್ಥಪ್ರದಾಯಕಮ್**

ಸಂಧ್ಯಾವಂದನೆಯಲ್ಲಿ ನಿತ್ಯ ಜಪಿಸುವಂತೆ ಶ್ರೀಕೃಷ್ಣನೇ ಧರ್ಮರಾಜನಿಗೆ ಹೇಳಿದ್ದಾನೆ. ಜೀವನ ಉದ್ಧಾರಕ್ಕೆ ಪಾಪದ ನಾಶಕ್ಕೆ ಇದು ಮುಖ್ಯವೆನಿಸಿದೆ ಎನ್ನುವ ಶ್ರೀಕೃಷ್ಣ ಸಂಧ್ಯಾವಂದನೆಯಲ್ಲಿ ಅಲ್ಲಿ ತಾನು ನೆಲೆಗೊಳ್ಳುವೆನೆಂದು ತಿಳಿಸಿರುತ್ತಾನೆ–

**ಮದ್ಭಕ್ತಾ ಯೇ ನರಶ್ರೇಷ್ಠ ಮದ್ಭಕ್ತಾ ಮತ್ಪರಾಯಣಾಃ**
**ಮದ್ಯಾಜಿನೋ ಮನ್ನಿಯಮಾಃ ತಾನ್ ಪ್ರಯತ್ನೇನ ಪೂಜಯೇತ್**
**ತೇಷಾಂ ತು ಪಾವನಾಯಾಹಂ ನಿತ್ಯಮೇವ ಯುಧಿಷ್ಠಿರ**
**ಉಭೇ ಸಂಧ್ಯೇಽಧಿತಿಷ್ಠಾಮಿ ಹ್ಯಸ್ಕನ್ನಂ ತದ್ವ್ರತಂ ಮಮ**
**ತಸ್ಮಾದಷ್ಟಾಕ್ಷರಂ ಮಂತ್ರಂ ಮದ್ಭಕ್ತೈರ್ವೀತಕಲ್ಮಷೈಃ**
**ಸಂಧ್ಯಾಕಾಲೇ ತು ಜಪ್ತವ್ಯಂ ಸತತಂ ಚಾತ್ಮಶುದ್ಧಯೇ**
**ಅನ್ಯೇಷಾಮಪಿ ವಿಪ್ರಾಣಾಂ ಕಿಲ್ಬಿಷಂ ಹಿ ವಿನಶ್ಯತಿ**
**ಉಭೇ ಸಂಧ್ಯೇ ಹ್ಯುಪಾಸೀತ ತಸ್ಮಾದ್ವಿಪ್ರೋ ವಿಶುದ್ಧಯೇ**

ನಿತ್ಯ ಭಕ್ತಿಯಿಂದ ನಾರಾಯಣನ ಪೂಜೆಯಲ್ಲಿ ಆಸಕ್ತರಾಗಿ ಮಂತ್ರಚಿಂತನೆಯಲ್ಲಿ ಆತನಿಗೆ ಸಮರ್ಪಿಸಿಕೊಂಡವರು ಅಷ್ಟಾಕ್ಷರಜಪ ನಡೆಸುವವರು ದುರ್ಗತಿಯನ್ನು ಪಡೆಯುವುದಿಲ್ಲ ಎನ್ನುವುದಾಗಿ ಮೈತ್ರೇಯರಿಗೆ **ವೇದವ್ಯಾಸರು** ನೀಡಿದ ಅನುಶಾಸನ –

**ತದರ್ಚನಪರೋ ನಿತ್ಯಂ ತದ್ಭಕ್ತಸ್ತಂ ನಮಸ್ಕುರು**
**ತದ್ಭಕ್ತಾ ನ ವಿನಶ್ಯಂತಿ ಹ್ಯಷ್ಟಾಕ್ಷರಪರಾಯಣಾಃ**



**ಮತ್ಸ್ಯಪುರಾಣ** ಈ ಮಂತ್ರವನ್ನು ಮೂಲಮಂತ್ರ ಎಂದೇ ಕರೆದು ಇದು ಎಲ್ಲ ಮಂತ್ರಗಳ ಮೂಲ ಎಂದು ತಿಳಿಸಿದೆ –

**ಓಂ ನಮೋ ನಾರಾಯಣಾಯೇತಿ ಮೂಲಮಂತ್ರ ಉದಾಹೃತಃ**

ಶಂಕರಭಾಷ್ಯದಲ್ಲಿಯೂ ನಾರಾಯಣನ ಧ್ಯಾನವೇ ಸರ್ವಶಾಸ್ತ್ರಸಂಮತ ಎಂಬ ಪುರಾಣಗಳ ಮಾತುಗಳ ಜೊತೆಗೆ **ಮಹಾಭಾರತದ** ಮಾತು ಉದ್ಧೃತವಾಗಿದೆ –

**ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃಪುನಃ**
**ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ**
**ಧ್ಯಾಯೇನ್ನಾರಾಯಣಂ ದೇವಂ ಸ್ನಾನಾದಿಷು ಚ ಕರ್ಮ್ಮಸು**
**ಪ್ರಾಯಶ್ಚಿತ್ತಂ ಹಿ ಸರ್ವಸ್ಯ ದುಷ್ಕೃತಸ್ಯೇತಿ ವೈ ಶ್ರುತಿಃ**
**ಮೂಹೂರ್ತಮಪಿ ಯೋ ಧ್ಯಾಯೇತ್ ನಾರಾಯಣಮನಾಮಯಮ್**
**ಸೋಽಪಿ ಸಿದ್ಧಿಮವಾಪ್ನೋತಿ ಕಿಂ ಪುನಸ್ತತ್ಪರಾಯಣಃ**

ಸಾಯುವ ಮೊದಲು ದೇಹ ದೃಢವಾಗಿರುವಾಗಲೇ ನಾರಾಯಣನನ್ನು ನೆನೆವಂತೆ **ಗರುಡಪುರಾಣವು** ಕರೆಕೊಟ್ಟಿದೆ –

**ಯಾವಚ್ಛರೀರಂ ಸಬಲಂ ಚೈವ ಪುಷ್ಟಂ**
**ರೋಗೈರ್ವಿಹೀನಂ ಮರಣಾಖ್ಯಾಂ ವಿಪತ್ತಿಮ್**
**ನಾಪ್ನೋತಿ ತಾವಚ್ಚ ಭಜೇಚ್ಚ ಮೂಢಾಃ**
**ನಾರಾಯಣಸ್ಯೈವ ಪದಾರವಿಂದಮ್**

ಎಲ್ಲ ಧಾರ್ಮಿಕ ಕರ್ಮಗಳಲ್ಲೂ ನಾರಾಯಣನ ಮಂತ್ರೋಚ್ಚಾರಣೆ ಮೊದಲು ಮತ್ತೆ ಕೊನೆಗೆ ಇರಲೆಂದು **ನರಸಿಂಹಪುರಾಣ** –

**ಜಪೇ ದಾನೇ ಚ ಹೋಮೇ ಚ ಗಮನೇ ಧ್ಯಾನಪರ್ವಸು**
**ಜಪೇನ್ನಾರಾಯಣಂ ಮಂತ್ರಂ ಕರ್ಮಪೂರ್ವೇ ಪರೇ ತಥಾ**

ದೇವಪೂಜೆಗೆ ಅಷ್ಟಾಕ್ಷರಮಂತ್ರೋಪದೇಶ ಅನಿವಾರ್ಯವೆಂದೇ ತಿಳಿಸಿ ಅಷ್ಟಾಕ್ಷರಮಂತ್ರ ತಿಳಿಯದಿರುವುದು ನೂರು ಅಪರಾಧಗಳಲ್ಲೊಂದೆಂದು



**ಗರುಡಪುರಾಣವು ಪಟ್ಟಿಮಾಡಿದೆ –**

**ಅಷ್ಟಾಕ್ಷರೋಪದೇಶಾಚ್ಚ ಋತೇ ದೇವಾರ್ಚನಂ ತಥಾ**

ಅಷ್ಟಾಕ್ಷರಮಂತ್ರಜಪದಿಂದಲೇ ಆಚಾರ್ಯನೆನಿಸಿಕೊಳ್ಳಬಲ್ಲನೆಂದು **ಕಣ್ವಸ್ಮೃತಿ** ತಿಳಿಸಿದೆ–

**ಏತನ್ಮಂತ್ರಜಪೇನ್ನೈವ ಬ್ರಾಹ್ಮಣಾನಾಂ ಮಹಾತ್ಮನಾಮ್**

**ಸರ್ವಲೋಕೈಕವಂದ್ಯತ್ವಂ ಸರ್ವಾಚಾರ್ಯತ್ವಮೇವಚ**

ಅಷ್ಟಾಕ್ಷರಮಂತ್ರೋಪದೇಶಕ್ಕೆ ಯಾವ ಮುಹೂರ್ತವನ್ನೂ ನೋಡಬೇಕಾಗಿಲ್ಲ. ಶ್ರದ್ಧೆ ಒಂದಿದ್ದರೆ ಸಾಕೆಂದು **ತತ್ವಕಣಿಕಾ** ತಿಳಿಸಿದೆ–

**ನಾಸ್ತಿ ನಕ್ಷತ್ರಸಂಬಂಧೋ ನ ನಿಮಿತ್ತಪರೀಕ್ಷಣಮ್**

**ಶ್ರದ್ಧೈಕಾವಶ್ಯಕೀ ನೃಣಾಂ ಅಷ್ಟಾಕ್ಷರಪರಿಗ್ರಹೇ**

**ಯಸ್ಯ ದೇವೇ ಚ ಮಂತ್ರೇ ಚ ಗುರೌ ಚ ತ್ರಿಷು ನಿಶ್ಚಲಾ**

**ನಾಸ್ತಿಕಾನ್ ಭಿನ್ನಮರ್ಯಾದಾನ್ ಕೃತಘ್ನಾನ್ ವೇದನಿಂದಕಾನ್**

**ಅಷ್ಟಾಕ್ಷರೋಪದೇಶೇಷು ದೂರತಃ ಪರಿವರ್ಜಯೇತ್**

**ಪಂಚಕಾಲಕ್ರಿಯಾದೀಪ**ಗಳಲ್ಲಿ ಈ ಮಂತ್ರಕ್ಕೆ ಸ್ವರವನ್ನೂ ತಿಳಿಸುವ ಮೂಲಕ ಇದು ವೇದಮಂತ್ರ ಎಂಬುದನ್ನು ಸೂಚಿಸಲಾಗಿದೆ–

।

**ಓಂ ನಮೋ ನಾರಾಯಣಾಯ**

–

**ಷಷ್ಠಾದ್ಯಯೋರುದಾತ್ತಃ ಸ್ಯಾತ್ ಸ್ವರಿತೋಽಂತ್ಯದ್ವಿತೀಯಯೋಃ**

**ಪ್ರಚಯಸ್ತ್ರಿಚತುರ್ಥಾಭ್ಯಾಂ ನಿಹತಂ ಪಂಚಮಾಕ್ಷರಮ್**

**ಪಂಚರಾತ್ರ**ದಲ್ಲಿ ಪ್ರತ್ಯಕ್ಷರಮಂತ್ರನಿಷ್ಪತ್ತಿಯ ಕ್ರಮವನ್ನು ಉಲ್ಲೇಖ ಮಾಡಿದ್ದಾರೆ –

**ಉದ್ಗೀಥಮಾದೌ ವಿದ್ಯೇಶಃ ಪ್ರಯೋಜ್ಯಸ್ತದನಂತರಮ್ (ಓಂ)**

**ಬ್ರಹ್ಮಸಾಧನಸಂಯುಕ್ತೋ (ನ) ಮಂದರಸ್ಸ್ಯಾದನಂತರಮ್ (ಮೋ)**

**ಆದಿದೇವಾವೃತೋ ಭದ್ರಬಾಹುಃ ಪಶ್ಚಾದುದೀರಿತಃ (ನ+ಆ)**



**ವಹ್ನಿರ್ಗೋಪವಸಂವೀತಃ (ರ+ಆ) ಶ್ವಸನೋ ವಿಷ್ಣುಶೀರ್ಷಕಃ (ಯ)**

**ವನಮಾಲೀ ತಥಾ ಯೋಜ್ಯೋ (ಣ) ಮಧುಸೂದನಸಂಯುತಃ (ಆ)**

**ಪ್ರಣವಾದಿಶಿರಾ ವಾಯುಃ (ಯ) ಇತಿ ವರ್ಣಕ್ರಮೋ ಮತಃ**

**ಪದ್ಮಪುರಾಣ** ಪದಗಳನ್ನೆ ಎತ್ತಿ ಹೇಳಿದೆ –

**ಓಮಿತ್ಯೇಕಾಕ್ಷರಂ ಪೂರ್ವಂ ದ್ವ್ಯಕ್ಷರಂ ನಮ ಇತ್ಯಥ**

**ತಥಾ ನಾರಾಯಣಾಯೇತಿ ಪಂಚಾಕ್ಷರಮುದೀರಯೇತ್**

**ಏವಮಷ್ಟಾಕ್ಷರೋ ಮಂತ್ರೋ ಜ್ಞೇಯಃ ಸರ್ವಾರ್ಥಸಾಧಕಃ**

**ಸರ್ವದುಃಖಹರಃ ಶ್ರೀಮಾನ್ ಸರ್ವಮಂತ್ರಾತ್ಮಕಃ ಶುಭಃ**

**ಶ್ರೀಪ್ರಶ್ನಸಂಹಿತಾ** ಮಂತ್ರನಿಷ್ಪತ್ತಿ ಹಾಗೂ ಋಷ್ಯಾದಿಗಳನ್ನು ಹೇಳಿದೆ. ಆಚಾರ್ಯಮಧ್ವರು **ತಂತ್ರಸಾರಸಂಗ್ರಹ**ದಲ್ಲಿ ಭಗವಂತನ ವಚನವಾಗಿ ನಾನೇ ಋಷಿ ಹಾಗೂ ದೇವತೆ ಎಂದಾಗ ಋಷ್ಯಾದಿಗಳನ್ನು ಹೇಗೆ ಹೇಳಬೇಕೆಂದು ಸ್ಪಷ್ಟ ತಿಳಿಯದು. ಅನುವಾದ–ಸಂವಾದದಲ್ಲಿ ಹೇಳಹೊರಟ ಪುರಾಣಗಳು ನಾರಾಯಣ ಶಬ್ದವನ್ನು ಉಲ್ಲೇಖಿಸಿದ್ದೂ ಇದೆ. ಇದನ್ನೇ ನಂಬಿ **ನಾರಾಯಣ ಋಷಿಃ** ಎಂದೇ ತಾಂತ್ರಿಕರನೇಕರು ಹೇಳುತ್ತ ಅಂತರ್ಯಾಮಿ ತತ್ವವನ್ನು ಹೀಯಾಳಿಸಿರುವರು. ಇದಕ್ಕೆ ಉತ್ತರವಾಗಿ ಸಂಹಿತಾ ಋಷ್ಯಾದಿಗಳನ್ನು ಬಾಯಿಬಿಟ್ಟು ಹೇಳಿದೆ –

**ಉಚ್ಚರೇತ್ಪ್ರಣವಂ ಪೂರ್ವಂ ನಮಃಶಬ್ದಂ ತತಃ ಪರಮ್**

**ನಾರಾಯಣಂ ಚತುರ್ಥ್ಯಂತಂ ಅಂತರ್ಯಾಮೀ ಮುನಿಃ ಸ್ಮೃತಃ**

**ದೇವೋ ನಾರಾಯಣಃ ಸಾಕ್ಷಾತ್ ಛಂದೋ ಗಾಯತ್ರಮೀರಿತಮ್**

**ಮಹಾನಾರಾಯಣೋಪನಿಷತ್ತು** ಈ ಮಂತ್ರವು ಮೋಕ್ಷವನ್ನು ನೀಡಲಿದೆ ಎಂದಿದೆ –

**ಓಮಿತ್ಯೇಕಾಕ್ಷರಮ್ । ನಮ ಇತಿ ದ್ವೇ ಅಕ್ಷರೇ । ನಾರಾಯಣಾಯೇತಿ ಪಂಚಾಕ್ಷರಾಣಿ । ಯೋ ಹ ವೈ ನಾರಾಯಣಸ್ಯಾಷ್ಟಾಕ್ಷರಂ ಪದಮಧ್ಯೇತಿ ಸರ್ವಮಾಯುರೇತಿ । ವಿಂದತೇ ಪ್ರಾಜಾಪತ್ಯಮ್ । ತತೋಽಮೃತತ್ವಮಶ್ನುತೇ**

ಓಂಕಾರದಿಂದ ಅಷ್ಟಾಕ್ಷರದ ನಿಷ್ಪತ್ತಿಯನ್ನು ಅಷ್ಟಾಕ್ಷರಮಂತ್ರದ ವಿಶ್ವಾದ್ಯಷ್ಟ



ಭಗವನ್ಮೂರ್ತಿಗಳ ಚಿಂತನೆಯನ್ನು ಮಂತ್ರಜಪಕ್ರಮವನ್ನೂ ಆಚಾರ್ಯಮಧ್ವರು **ತಂತ್ರಸಾರಸಂಗ್ರಹ**ದಲ್ಲಿ ತಿಳಿಸಿದ್ದಾರೆ (ಮಂತ್ರಚಿಂತನೆಯನ್ನು ಬನ್ನಂಜೆಯವರ ತಂತ್ರಸಾರಸಂಗ್ರಹದ ಕನ್ನಡಾನುವಾದದಲ್ಲಿ ವಿಸ್ತಾರವಾಗಿ ಕಾಣಬಹುದು.)

**ಅಕಾರಾದ್ಯತಿಶಾಂತಾಂತಃ ಸೋಽಯಮಷ್ಟಾಕ್ಷರೋ ಮತಃ**

**ಸ ವಿಶ್ವತೈಜಸಪ್ರಾಜ್ಞತುರೀಯಾತ್ಮಾಂತರಾತ್ಮನಾಮ್**

**ಪರಮಾತ್ಮಜ್ಞಾನಾತ್ಮಯುಜಾಂ ಮದ್ರೂಪಾಣಾಂ ಚ ವಾಚಕಃ**

**ನಾರಾಯಣಾಷ್ಟಾಕ್ಷರಶ್ಚ ತಾರಾಷ್ಟಾಕ್ಷರಭೇದವಾನ್**

**ಋಷಿಶ್ಚ ದೇವತೈಕೋಽಹಂ ತಾರಾದೀನಾಂ ವಿಶೇಷತಃ**

**ಛಂದೋ ಮದೀಯಾ ಗಾಯತ್ರೀ ತಾರಾಷ್ಟಾಕ್ಷರಯೋರ್ಮ್ಮತಾ**

**ಉದ್ಯದ್ಭಾಸ್ವತ್ಸಮಾಭಾಸಃ ಚಿದಾನಂದೈಕದೇಹವಾನ್**

**ಚಕ್ರಶಂಖಗದಾಪದ್ಮಧರೋ ಧ್ಯೇಯೋಽಹಮೀಶ್ವರಃ**

**ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿಗಣಮಧ್ಯಗಃ**

**ಬ್ರಹ್ಮವಾಯುಶಿವಾಹೀಶವಿಪೈಃ ಶಕ್ರಾದಿಕೈರಪಿ**

**ಸೇವ್ಯಮಾನೋಽಧಿಕಂ ಭಕ್ತ್ಯಾ ನಿತ್ಯನಿಃಶೇಷಶಕ್ತಿಮಾನ್**

**ಮೂರ್ತಯೋಽಷ್ಟಾವಭಿಧ್ಯೇಯಾಃ ಚಕ್ರಶಂಖವರಾಭಯೈಃ**

**ಯುಕ್ತಾಃ ಪ್ರದೀಪವರ್ಣ್ಣಾಶ್ಚ ಸರ್ವಾಭರಣಭೂಷಿತಾಃ**

**ಕ್ರುದ್ಧಮಹಾವೀರದ್ಯುಸಹಸ್ರಸಹಿತೋಲ್ಕಕಾಃ**

**ಚತುರ್ಥ್ಯಂತಾ ಹೃದಾದೀನಿ ಪೃಥಗ್ರೂಪಾಣಿ ತಾನಿ ಚ**

**ವಿಷ್ಣೋರೇವಾತ್ಯಭೇದೇಽಪಿ ತದೈಶ್ವರ್ಯಾತ್ತದನ್ಯವತ್**

**ಚಕ್ರಶಂಖವರಾಭೀತಿಹಸ್ತಾನ್ಯೇತಾನಿ ಸರ್ವಶಃ**

**ಮೂಲರೂಪಸವರ್ಣ್ಣಾನಿ ಕೃಷ್ಣವರ್ಣ್ಣಾ ಶಿಖೋಚ್ಯತೇ**

**ಪಜ್ಜಾನುನಾಭಿಹೃದಯವಾಙ್ನಸಾನೇತ್ರಕೇಷು ಚ**

**ಅಷ್ಟಾಕ್ಷರಾಣಾಂ ನ್ಯಾಸಃ ಸ್ಯಾತ್.....**

ಆಚಾರ್ಯಮಧ್ವರು **ತಂತ್ರಸಾರಸಂಗ್ರಹ**ದಲ್ಲಿ ಸಂಹಾರಕ್ರಮದಲ್ಲಿ ಅಷ್ಟಾಕ್ಷರ



ನ್ಯಾಸವನ್ನು ಹೇಳಿದ್ದಾರೆ. **ಪಾದ್ಮಸಂಹಿತೆ** ಸೃಷ್ಟಿಕ್ರಮದಿಂದ ಅಷ್ಟಾಕ್ಷರನ್ಯಾಸವನ್ನು ಬೆರಳುಗಳ ಪ್ರತ್ಯೇಕ ವಿನ್ಯಾಸದ ಜತೆಗೆ ತಿಳಿಸಿದೆ. ಕೆಲವು ಸ್ಥಾನ ವ್ಯತ್ಯಾಸಗಳಿವೆ –

**ಮೂರ್ಧ್ನಿ ಮಧ್ಯಮಯಾಂಗುಲ್ಯಾ ತರ್ಜನೀ ಸಾ ಚ ಚಕ್ಷುಷಿ**

**ನ್ಯಸೇನ್ಮುಖೇಽನಾಮಿಕಯಾ ಚಾಂಗುಷ್ಠೇನ ಚ ಮಂತ್ರವಿತ್**

**ಅಂಗುಷ್ಠತರ್ಜನೀಭ್ಯಾಂ ಚ ಹೃದಯೇ ನ್ಯಾಸಮಾಚರೇತ್**

**ತಥಾಂಗುಷ್ಠಕನಿಷ್ಠಾಭ್ಯಾಂ ನ್ಯಾಸೋ ನಾಭೌ ಪ್ರಶಸ್ಯತೇ**

**ವಿನಾಂಗುಷ್ಠೇನ ಶೇಷಾಭಿಃ ಗುಹ್ಯೇ ಜಾನುನಿ ಚೋಭಯೋಃ**

**ಸಮಸ್ತಾಭಿಶ್ಚರಣಯೋಃ ಇತ್ಯಷ್ಟಾಕ್ಷರಭೂಮಯಃ**

**ಈಶ್ವರಸಂಹಿತೆಯು** ಇದೇ ತೆರನಾಗಿ ಸ್ಥಾನಗಳನ್ನು ಬೆರಳುಗಳನ್ನು ನಿರ್ದೇಶಿಸಿದೆ. ಮಂತ್ರದಲ್ಲಿನ ಅಕ್ಷರವನ್ನು ನ್ಯಾಸ ಮಾಡುವಾಗ ಆಯಾ ಅಕ್ಷರಕ್ಕೆ ಓಂಕಾರವನ್ನು ಮೊದಲು ಮತ್ತು ಕೊನೆಯಲ್ಲಿ ಹಾಕುವಂತೆ ಈ ಸಂಹಿತೆ ತಿಳಿಸಿದೆ. ಅಕ್ಷರನ್ಯಾಸದ ಬಳಿಕ ಅಂಗನ್ಯಾಸ ಮಾಡುವಂತೆ ಇಲ್ಲಿ ಹೇಳಲಾಗಿದೆ –

**ಮಂತ್ರಾಕ್ಷರಂ ತು ಸರ್ವತ್ರ ತಾರಸಂಪುಟಿತಂ ಭವೇತ್**

**ಏವಮಷ್ಟಾಕ್ಷರನ್ಯಾಸಂ ಕೃತ್ವಾಂಗನ್ಯಾಸಮಾಚರೇತ್**

**ಗರುಡಪುರಾಣ** ತಿಳಿಸಿರುವಂತೆಯೆ **ಭಾಗವತಪುರಾಣವೂ** ನಾರಾಯಣ ವರ್ಮದ ಆರಂಭದಲ್ಲಿ ಅಷ್ಟಾಕ್ಷರನ್ಯಾಸಸ್ಥಾನಗಳನ್ನು ಸ್ವಲ್ಪ ವ್ಯತ್ಯಾಸವಾಗಿ ತಿಳಿಸಿದೆ–

**ಪಾದಯೋರ್ಜಾನುನೋರೂರ್ವೋಃ ಉದರೇ ಹೃದ್ಯಥೋರಸಿ**

**ಮುಖೇ ಶಿರಸ್ಯಾನುಪೂರ್ವ್ಯಾತ್ ಓಂಕಾರಾದೀನಿ ವಿನ್ಯಸೇತ್**

ಬ್ರಹ್ಮಪುರಾಣ ಬೇರೆ ರೀತಿಯಲ್ಲಿ ನ್ಯಾಸಸ್ಥಾನಗಳನ್ನು ಹೇಳಿದೆ. ಮೊದಲು ಅಕ್ಷರಗಳಿಂದ ಕರನ್ಯಾಸವನ್ನೂ ಅರುಹಿದೆ –

**ಸ್ಮರೇನ್ನಾರಾಯಣಂ ಧ್ಯಾಯೇತ್ ಹಸ್ತೇ ಕಾಯೇ ಚ ವಿನ್ಯಸೇತ್**

**ಓಂಕಾರಂ ಚ ನಕಾರಂ ಚ ಅಂಗುಷ್ಠೇ ಹಸ್ತಯೋರ್ನ್ಯಸೇತ್**

**ಶೇಷೈರ್ಹಸ್ತತಳಂ ಯಾವತ್ ತರ್ಜನ್ಯಾದಿಷು ವಿನ್ಯಸೇತ್**

**ಓಂಕಾರಂ ವಾಮಪಾದೇ ತು ನಕಾರಂ ದಕ್ಷಿಣೇ ನ್ಯಸೇತ್**



ಮೋಕಾರಂ ವಾಮಕಟ್ಯಾಂ ತು ನಾಕಾರಂ ದಕ್ಷಿಣೇ ನ್ಯಸೇತ್

ರಾಕಾರಂ ನಾಭಿದೇಶೇ ತು ಯಕಾರಂ ವಾಮಬಾಹುಕೇ

ಣಕಾರಂ ದಕ್ಷಿಣೇ ನ್ಯಸ್ಯ ಯಕಾರಂ ಮೂರ್ಧ್ನಿ ವಿನ್ಯಸೇತ್

ದೇಹದ ಸುತ್ತಲೂ ನಾರಾಯಣನ ಚಿಂತನೆಯನ್ನು ನಡೆಸುವಂತೆ ಬ್ರಹ್ಮಪುರಾಣ ಹೇಳಿ ಕವಚರೂಪಗಳನ್ನು ಹೇಳಿದೆ –

ಅಧಶ್ಚೋರ್ಧ್ವಂ ಚ ಹೃದಯೇ ಪಾರ್ಶ್ವತಃ ಪೃಷ್ಠತೋಽಗ್ರತಃ

ಧ್ಯಾತ್ವಾ ನಾರಾಯಣಂ ಪಶ್ಚಾತ್ ಆರಭೇತ್ಕವಚಂ ಬುಧಃ

ಪೂರ್ವೇ ಮಾಂ ಪಾತು ಗೋವಿಂದಃ ದಕ್ಷಿಣೇ ಮಧುಸೂದನಃ

ಪಶ್ಚಿಮೇ ಶ್ರೀಧರೋ ದೇವಃ ಕೇಶವಸ್ತು ತಥೋತ್ತರೇ

ಪಾತು ವಿಷ್ಣುಸ್ತಥಾಗ್ನೇಯೇ ನೈರ್ಋತೇ ಮಾಧವೋಽವ್ಯಯಃ

ವಾಯವ್ಯೇ ತು ಹೃಷೀಕೇಶಃ ತಥೇಶಾನೇ ಚ ವಾಮನಃ

ಭೂತಳೇ ಪಾತು ವಾರಾಹಃ ತಥೋರ್ಧ್ವಂ ಚ ತ್ರಿವಿಕ್ರಮಃ

ನ್ಯಾಸದಲ್ಲಿ ಅಕ್ಷರಸ್ವರೂಪವನ್ನು ಚಿಂತಿಸಬೇಕೆಂದು ಪದ್ಮಸಂಹಿತಾ ಹೇಳಿದೆ–

ರೂಪಂ ಕ್ರಮೇಣಾಕ್ಷರಾಣಾಂ ನ್ಯಾಸಕಾಲೇ ವಿಚಿಂತಯೇತ್

ಶುಕ್ಲಂ ಹಿರಣ್ಮಯಂ ಕೃಷ್ಣಂ ರಕ್ತಂ ಕುಂಕುಮಸನ್ನಿಭಮ್

ಪದ್ಮಕಿಂಜಲ್ಕಕಂ ನೀಲಂ ಸವರ್ಣ್ಣಕಮಥಾಷ್ಟಕಮ್

ಅಷ್ಟಾಕ್ಷರದ ಬಣ್ಣಗಳನ್ನು ನರಸಿಂಹಪುರಾಣ ಹೀಗೆ ಹೇಳಿದೆ –

ಶುಕ್ಲವರ್ಣ್ಣಂ ಚ ಓಂಕಾರಂ ನಕಾರಂ ರಕ್ತಮುಚ್ಯತೇ

ಮೋಕಾರಂ ವರ್ಣ್ಣತಃ ಕೃಷ್ಣಂ ನಾಕಾರಂ ರಕ್ತಮುಚ್ಯತೇ

ರಾಕಾರಂ ಕುಂಕುಮಾಭಂ ತು ಯಕಾರಂ ಪೀತಮುಚ್ಯತೇ

ಣಕಾರಮಂಜನಾಭಂ ತು ಯಕಾರಂ ಬಹುವರ್ಣ್ಣಕಮ್

ನಾರಾಯಣನ ಚಿಂತನೆಯಲ್ಲಿ ಕೈಗಳಲ್ಲಿ ಆಯುಧಗಳಿವೆ. ಆಸನದಲ್ಲಿ ಭಾರ್ಯೆಯರಿದ್ದಾರೆ. ಸುತ್ತಲೂ ಭಗವಂತನ ಅನೇಕ ರೂಪಗಳ ಆವರಣಗಳಿವೆ.



ಅದರಾಚೆಗೆ ದೇವರ ಸೇವಕರು ಸುತ್ತುವರಿದಿದ್ದಾರೆ. ಈ ಚಿಂತನೆಯಲ್ಲಿ ಭಗವಂತನ ಆಯುಧದೇವತೆಗಳೂ ಸುತ್ತಿನಲ್ಲಿ ಸಿಗುವರು. ಶ್ರೀಭೂರೂಪಗಳೆಲ್ಲ ಆಯುಧದೇವತೆಗಳಾಗಿಯೂ ಕಾಣಿಸಿಕೊಳ್ಳುತ್ತಾರೆ. ಪತ್ನಿಯರಾಗಿಯೂ ಸೇವೆ ಸಲ್ಲಿಸುವರು.

**ಸ್ವಮೂರ್ತಿಗಣಮಧ್ಯಗಃ** ಎನ್ನುವುದು ಭಗವಂತನ ನಾರಾಯಣನ ಸುತ್ತಲೂ ಆತನದ್ದೇ ಅನೇಕ ವ್ಯೂಹರೂಪಗಳು ನೆಲೆನಿಂತಿವೆ ಎನ್ನುವ ಅಭಿಪ್ರಾಯದಲ್ಲಿ. ಮೊದಲಿಗೆ ಅಷ್ಟಮಾತ್ರೆಯ ಓಂಕಾರದಿಂದ ಉಗಮಿಸಿದ ನಾರಾಯಣಮಂತ್ರದ 8 ಅಕ್ಷರದ ದೇವರ ರೂಪಗಳು ವಿಶ್ವಾದಿಗಳು ನಾರಾಯಣನನ್ನು ಸುತ್ತುವರೆದಿವೆ. ಹೀಗೆಯೇ ನಾರಾಯಣಾಷ್ಟಾಕ್ಷರ ಮಂತ್ರದ ಅಂಗನ್ಯಾಸರೂಪಗಳೂ ಸುತ್ತಿವೆ. ಆ ಆರು ರೂಪಗಳ ಬಣ್ಣಬಣ್ಣನೆಗಳು **ಈಶ್ವರಸಂಹಿತೆ**ಯಲ್ಲಿ ಬಂದಿವೆ –

**ಏವಮೇವ ಹಿ ಹೃನ್ಮಂತ್ರಂ ಧ್ಯಾಯೇತ್ಕುಮುದಪಾಂಡರಮ್**
**ಪದ್ಮರಾಗಾಚಲಾಕಾರಂ ಆರಕ್ತಂ ಚ ಶಿರಃ ಸ್ಮರೇತ್**
**ಅಂಜನಾದ್ರಿಪ್ರತೀಕಾಶಂ ಶಿಖಾಮಂತ್ರಂ ತಥಾಕೃತಿಮ್**
**ಪರಿತಃ ಸೂರ್ಯಸಂತಪ್ತಂ ಯಥಾ ಕನಕಪರ್ವತಮ್**
**ತಥಾ ಕವಚಮಂತ್ರಂ ಚ ಧ್ಯಾನಕಾಲೇ ವಿಚಿಂತ್ಯ ಚ**
**ವೃತಂ ಜ್ವಾಲಾಸಹಸ್ರೈಸ್ತು ಅಯಸ್ಕಾಂತಸಮದ್ಯುತಿ**
**ಸರ್ವಾಸ್ತ್ರಶಕ್ತಿಸಂಪೂರ್ಣ್ಣಂ ಅಸ್ತ್ರಮಂತ್ರಂ ಪ್ರಕೀರ್ತಿತಮ್**
**ನಿರ್ಧೂಮಾಂಗಾರಸದೃಶಂ ಭಾವಯೇನ್ನೇತ್ರಮಂತ್ರಕಮ್**
**ಧ್ಯೇಯಾಃ ಸ್ವರುಚಿಸಂಯುಕ್ತಾಃ ದ್ವಿಭುಜಾಃ ಪುರುಷೋತ್ತಮಾಃ**

ಸುತ್ತುವರಿದವರೆಲ್ಲರೂ ಪ್ರಧಾನ ನಾರಾಯಣನ ಮೋರೆಯನ್ನು ನೋಡುತ್ತಿರುವರು. ಪ್ರಧಾನ ಮೂರುತಿ ನಿಂತ ಭಂಗಿಯಲ್ಲಿದ್ದರೆ, ಆವರಣ ರೂ ನಿಂತಿರುವರು. ಮಧ್ಯದವನು ಕೂತಿದ್ದರೆ ಸುತ್ತಲಿನವರೂ ಕೂತಂತೆ ಚಿಂತನೆಗೈಯಬಹುದು. ನಡುವಿನವನು ವಾಹನದಲ್ಲಿರುವಂತೆ ಇದ್ದರೆ



ಪರಿವಾರದವರನ್ನೂ ವಾಹನಸಮೇತರನ್ನಾಗಿ ಚಿಂತನೆಗೈಯಬೇಕು. ಮಲಗಿದ ಮೂರ್ತಿಯನ್ನು ನಡುವೆ ಆರಾಧಿಸುವಂತಿದ್ದರೆ ಸುತ್ತಮುತ್ತಲಿರುವವರನ್ನು ಮಲಗಿರುವವರಂತೆ ಚಿಂತನೆಗೈಯುವಂತಿಲ್ಲ. ಅವರನ್ನು ನಿಂತಂತೆಯೋ ಕುಳಿತಂತೆಯೊ ಆರಾಧಿಸಬೇಕೆಂದು **ಈಶ್ವರಸಂಹಿತೆಯ** ಕರೆ –

**ವೀಕ್ಷ್ಯಮಾಣಾನ್ ವಿಭೋರ್ವಕ್ತ್ರಂ ಧ್ಯಾಯೇದೇತಾನ್ಮುನೀಶ್ವರಾಃ**

**ಸ್ಥಿತಾನಾಮಾದಿಮೂರ್ತೀನಾಂ ಸ್ಥಿತಾನ್ ಧ್ಯಾಯೇತ್ಸದೈವ ಹಿ**

**ಆಸೀನಾನಾಮಥಾಸೀನಾನ್ ವಾಹನಸ್ಥೇ ಸವಾಹನಾನ್**

**ಶಯಿತಾನಾಮಥಾಸೀನಾನ್ ಉತ್ಥಿತಾನ್ವಾ ಸ್ಮರೇದ್ಧಿಯಾ**

**ಲೌಗಾಕ್ಷಿಸ್ಮೃತಿ** ಅಷ್ಟಾಕ್ಷರಮಂತ್ರದ ಅಂಗಮಂತ್ರಗಳನ್ನು ಆಚಾರ್ಯ ಮಧ್ವರು ತಂತ್ರಸಾರಸಂಗ್ರಹದಲ್ಲಿ ತಿಳಿಸಿರುವಂತೆಯೆ ಹೇಳಿದೆ–

**ಕ್ರುದ್ಧೋಲ್ಕಾಯ ಮಹೋಲ್ಕಾಯ ವೀರೋಲ್ಕಾಯೇತಿ ಚ ಕ್ರಮಾತ್**

**ದ್ಯುಲ್ಕಾಯ ಸಹಸ್ರೋಲ್ಕಾಯ....**

ಋಷ್ಯಶೃಂಗಸಂಹಿತಾವು ಬಣ್ಣದ ಜೊತೆ ಅಂಗಮಂತ್ರಗಳನ್ನು ಹೇಳಿದೆ. **ಅಗ್ನಿಪುರಾಣವು** ಅದೇ ರೂಪಗಳಿಂದ ಕರನ್ಯಾಸವನ್ನು ಅಂಗನ್ಯಾಸವನ್ನೂ ಹೇಳಿದೆ. ಬಣ್ಣವನ್ನೂ ತಿಳಿಸಿದೆ. ಮುಂದೆ ನಾರಾಯಣನ ಪೂಜೆಯಲ್ಲಿ ಇದರ ಆವರಣಾದಿಗಳನ್ನೂ ತಿಳಿಸಿದೆ. ಅದರ ಸಂಗ್ರಹ ಇಲ್ಲಿದೆ –

**ಕ್ರುದ್ಧೋಲ್ಕಾಯ ಮಹೋಲ್ಕಾಯ ವೀರೋಲ್ಕಾಯ ಶಿಖಾ ಭವೇತ್**

**ದ್ಯೂಲ್ಕಾಯ ಸಹಸ್ರೋಲ್ಕಾಯ ವೈಷ್ಣವೋಽಷ್ಟಾಕ್ಷರೋ ಮನುಃ**

**ಕನಿಷ್ಠಾದಿತದಷ್ಟಾನಾಂ ಅಂಗುಲೀನಾಂ ಚ ಪರ್ವಸು**

**ಜ್ಯೇಷ್ಠಾಗ್ರೇಣ ಕ್ರಮಾತ್ತಾರಂ ಮೂರ್ಧನ್ಯಷ್ಟಾಕ್ಷರಂ ನ್ಯಸೇತ್**

**ತರ್ಜನ್ಯಾಂ ತಾರಮಂಗುಷ್ಠೇ ಲಗ್ನೇ ಮಧ್ಯಮಯಾ ಚ ತತ್**

**ತಲೇಽಂಗುಷ್ಠೇ ತದುತ್ತಾರಂ ಬೀಜೋತ್ತಾರಂ ತತೋ ನ್ಯಸೇತ್**

**ರಕ್ತಗೌರಧೂಮ್ರಹರಿಜ್ಞಾತರೂಪಾಃ ಸಿತಾಸ್ತ್ರಯಃ**

**ಏವಂ ರೂಪಾನಿಮಾನ್ವರ್ಣಾನ್ ತಾವದ್ಬುದ್ಧ್ವಾ ನ್ಯಸೇತ್ಕ್ರಮಾತ್**



**ಹೃದಾಸ್ಯನೇತ್ರಮೂರ್ಧಾಂಘ್ರಿತಾಲುಗುಹ್ಯಕರಾದಿಷು**

**ಅಂಗಾನಿ ಚ ನ್ಯಸೇದ್ದ್ವಿಜಾನ್ ನ್ಯಸ್ಯಾಥ ಕರದೇಹಯೋಃ**

**ಯಥಾತ್ಮನಿ ತಥಾ ದೇವೇ ನ್ಯಾಸಃ ಕಾರ್ಯಃ ಕರಂ ವಿನಾ**

**ಹೃದಾದಿಸ್ಥಾನಗಾನ್ವರ್ಣಾನ್ ಗಂಧಪುಷ್ಪೈಃ ಸಮರ್ಚಯೇತ್**

ಜ್ಯಾನೋಲ್ಕಾಯ ಎಂಬುದಾಗಿ ಷಡಂಗನ್ಯಾಸದಲ್ಲಿ ನೇತ್ರಸ್ಥಾನದಲ್ಲಿ ಬಳಸುವ ಪದ್ಧತಿಯೂ ಕೆಲವೆಡೆ ಇದೆ.

ಅಂಗರೂಪಗಳನ್ನು ನಾರಾಯಣನ ಆವರಣಗಳಾಗಿ ಚಿಂತನೆಗೈಯಲು **ತಂತ್ರಸಾರಸಂಗ್ರಹದ**ಲ್ಲಿ ರೂಪಲಕ್ಷಣದೊಂದಿಗೆ ಹೇಳಲಾಗಿದೆ –

**ಹೃದಯಾದೀನ್ ತಥೇಂದ್ರಾದೀನ್ ದಿಕ್ಷ್ವಸ್ತ್ರಂ ಕೋಣಕೇಷು ಚ**

**ಭವಿಷ್ಯಪುರಾಣ**ದಲ್ಲಿಯೂ ವೇದವ್ಯಾಸರು ತಿಳಿಸಿದ್ದಾರೆ –

**ಮಹೇಂದ್ರಾದಿದಿಶಶ್ಚೈತಾಃ ಪೂಜಯೇದ್ವಿಧಿವನ್ನೃಪ**

ಅಂಗನ್ಯಾಸಮಂತ್ರಗಳಲ್ಲಿ ಬರುವ ವಷಟ್ ಮುಂತಾದ ಪದಗಳಿಗೂ ವಿಶೇಷ ಅರ್ಥವನ್ನು **ಅಗ್ನಿಪುರಾಣ** ಹೇಳಿದೆ –

**ಪೂಜನೇ ತು ನಮಸ್ಕಾರಃ ಸ್ವಾಹಾಂತೇ ಹವನಂ ತಥಾ**

**ಆಪ್ಯಾಯನೇ ವಷಟ್ಕಾರಂ ಪುಷ್ಟೌ ವೌಷಣ್ನಿಯೋಜಯೇತ್**

ಗಾಯತ್ರೀಮಂತ್ರಕ್ಕೆ ಹೇಳಲಾದ ಷಡಂಗನ್ಯಾಸದಲ್ಲಿ ದೇವರ ಆರು ರೂಪಗಳಿರುತ್ತವೆ. ಅಷ್ಟಾಕ್ಷರಮಂತ್ರಕ್ಕೆ ಹೇಳಲಾದ ಪಂಚಾಂಗನ್ಯಾಸದಲ್ಲಿ ಪಂಚರೂಪನ ಉಪಾಸನೆ ನಡೆಯಲಿದೆ. ಹೀಗೆಯೇ ಕೇಶವಾದಿ 24 ರೂಪಗಳ ಮತ್ಸ್ಯಾದಿ ದಶರೂಪಗಳ ಅಜಾದಿ 51 ರೂಪಗಳ ನಾರಾಯಣಾದಿ 100 ರೂಪಗಳ ವಿಶ್ವಾದಿ ಸಾವಿರ ರೂಪಗಳ ಮತ್ತೆ ಇನ್ನೂ ಅನೇಕ ರೂಪಗಳ ಆವರಣಗಳನ್ನು **ಸ್ವಮೂರ್ತಿಗಣಮಧ್ಯಗಃ** ಎನ್ನುವುದರಿಂದ ಚಿಂತನೆಗೈಯಲಿದೆ. ವಾಸುದೇವಾದಿಗಳ ಆವರಣವನ್ನು ಹೇಳುತ್ತಾ, ಅವರ ಭಾರ್ಯೆಯರಾದ ಮಾಯಾದಿಗಳನ್ನು ಆವರಣರನ್ನಾಗಿ ಮಧ್ವಾಚಾರ್ಯರು ತಂತ್ರಸಾರಸಂಗ್ರಹದಲ್ಲಿ ತಿಳಿಸಿದ್ದಾರೆ. ಹೀಗೆಯೇ ಎಲ್ಲಾ ಭಗವದ್ರೂಪಗಳ ಭಾರ್ಯೆಯರನ್ನೂ ಚಿಂತನೆಗೈಯಬೇಕು.



ಇದನ್ನು **ಈಶ್ವರಸಂಹಿತೆಯೂ** ಆದೇಶಿಸಿದೆ.

**ಮೂರ್ತ್ತಯೋ ವಾಸುದೇವಾದ್ಯಾಃ ಕೇಶವಾದ್ಯಾಶ್ಚ ಮೂರ್ತ್ತಯಃ**
**ಪದ್ಮನಾಭಾದಯಶ್ಚಾಪಿ ಯತ್ರ ಪೂಜ್ಯಾ ಮುನೀಶ್ವರಾಃ**
**ತತ್ತಚ್ಛಕ್ತೀಸ್ತತ್ರತತ್ರ ಯಜೇತ್ತಾನೇವ ವಾ ಕ್ರಮಾತ್**
**ಯದ್ವಾ ತಚ್ಛಕ್ತಿಭಿಸ್ಸಾರ್ಧಂ ಪೂಜಯೇತ್ತಾನ್ಯಥಾಕ್ರಮಮ್**

ಇಲ್ಲಿ ಪದ್ಮನಾಭಾದಿ ಮೂವತ್ತೆಂಟು ರೂಪಗಳನ್ನು ಸಂಹಿತೆಯು ಅಪೂರ್ವವಾಗಿ ಪ್ರಕಾಶಪಡಿಸಿದೆ. ಅವರ ಮಡದಿಯರನ್ನೂ ಹೆಸರಿಸಿದೆ. ಇವೆಲ್ಲಾ ನನ್ನ **ತಂತ್ರಸಮೀಕ್ಷೆಯಲ್ಲಿ** ಇವೆ.

ಗಾಯತ್ರೀಮಂತ್ರಕ್ಕಿಂತ ಮೂರು ಪಾಲು ಅಷ್ಟಾಕ್ಷರಮಂತ್ರವನ್ನು ಜಪಿಸಲು ಆಚಾರ್ಯಮಧ್ವರು **ಸದಾಚಾರಸ್ಮೃತಿಯಲ್ಲಿ** ಹೇಳಿದ್ದಾರೆ.

**ಗಾಯತ್ರ್ಯಾಸ್ತ್ರಿಗುಣಂ ವಿಷ್ಣುಂ ಧ್ಯಾಯನ್ನಷ್ಟಾಕ್ಷರಂ ಜಪೇತ್**

ಎಂಟು ಅಕ್ಷರದ ನಾರಾಯಣ ಮಂತ್ರ ಮೂರು ಬಾರಿ ಪಠಿಸಿದರೆ 24 ಅಕ್ಷರದ ಗಾಯತ್ರಿಯನ್ನೊಮ್ಮೆ ಹೇಳಿದಂತೆ ಆಗುವುದು. ಈ ತತ್ವವನ್ನು ಇತರ ಸ್ಮೃತಿಗಳೂ ತಿಳಿಸಿವೆ. ವ್ಯಾಸತತ್ವಜ್ಞರ ಸಾರಸಂಗ್ರಹದಲ್ಲಿ ಪ್ರಣವಾಷ್ಟಾಕ್ಷರಕ್ಕೆ ಮೂರು ಮೂರು ಕೇಶವಾದಿಗಳ ರೂಪಗಳು ವಾಚ್ಯಗಳೆಂದು ಹೇಳಲಾಗಿದೆ. ಆದ್ದರಿಂದಲೂ 3 ಬಾರಿ ಪಠಿಸುವುದು ಅರ್ಥ ಪೂರ್ಣವಾಗುವುದು. ಇದರಿಂದ ಶ್ರೀವೈಷ್ಣವರಲ್ಲಿ ಆಚಾರಕಾಂಡದಲ್ಲಿ ಬಂದ ಮಾತು **ಅಷ್ಟಾಕ್ಷರಂ ಗಾಯತ್ರೀಸಮಸಂಖ್ಯಾಕಂ ಜಪೇತ್** ಎನ್ನುವುದು ತಪ್ಪಾಗುತ್ತದೆ. ಇಷ್ಟೇ ಅಲ್ಲ ಆಚಾರ್ಯಮಧ್ವರು ವೈಷ್ಣವರಾಗಿದ್ದರಿಂದ ಮೂರುಪಾಲು ಹೇಳಿದ್ದು, ನಾವು ಶೈವರಾಗಿ ಶಿವಮಂತ್ರವನ್ನು ಐದು ಬಾರಿ ಮಾಡುವ ಎಂಬೆಲ್ಲ ಕುಚೋದ್ಯಗಳಿಗೆ ತೆರೆಬೀಳುವುದು. ತಂತ್ರ-ಮಂತ್ರ-ಗ್ರಂಥಗಳು ಸಂಧ್ಯಾವಂದನೆಯಲ್ಲಿ ಗಾಯತ್ರೀ ಹಾಗೂ ನಾರಾಯಣಾಷ್ಟಾಕ್ಷರ ಮಂತ್ರಗಳನ್ನು ಬಿಟ್ಟು ಇನ್ನಾವ ಮಂತ್ರಗಳ ಜಪವನ್ನು ನಿತ್ಯವಾಗಿ (ಕಡ್ಡಾಯವಾಗಿ) ವಿಧಿಸಿಲ್ಲ. ಪಂಚಾಕ್ಷರಿಯನ್ನು ನಿತ್ಯಜಪದಲ್ಲಿ ಐದುಪಾಲು ಜಪಿಸಬೇಕೆಂಬ ಮಾತೇ ತಂತ್ರಗಳಲ್ಲಿಲ್ಲ.



**ಸಂಧ್ಯಾಂಗಾಯಾಸ್ತು ಗಾಯತ್ರ್ಯಾಃ ತ್ರಿಗುಣೋ ಮೂಲಮಂತ್ರಕಃ**

**ಜಪ್ತವ್ಯಃ ಸರ್ವಥಾನ್ಯೇ ತು ಯಥೇಷ್ಟಂ ಜಪಯೋಗಿನಃ** (ವರಾಹಪುರಾಣ)

**ಗಾಯತ್ರ್ಯಾಸ್ತ್ರಿಗುಣಂ ಮಂತ್ರಂ ಜಪೇತ್ಪ್ರತಿದಿನಂ ಬುಧಃ** (ನಾರದೀಯ)

**ಅಭಿವಂದ್ಯ ತತೋ ದೇವೀಂ ತಥಾ ಸರ್ವಾಶ್ಚ ದೇವತಾಃ**

**ತತಸ್ತ್ರಿಗುಣಮಷ್ಟಾರ್ಣ್ಣಂ ಅನ್ಯಮಂತ್ರಾಂಶ್ಚ ಸಂಜಪೇತ್** (ಸಂನ್ಯಾಸವಿಧಿ)

**ಪ್ರಾತಃಸಂಧ್ಯಾಮುಪಾಸ್ಯೇವಂ ಆಸನೇ ಸುಸಮಾಹಿತಃ**

**ತತ ಅಷ್ಟಾಕ್ಷರಂ ಮಂತ್ರಂ ಗಾಯತ್ರ್ಯಾಸ್ತ್ರಿಗುಣಂ ಜಪೇತ್**

ಕೆಲವರು ಪ್ರಾತಃಸಂಧ್ಯಾವಂದನೆಯಲ್ಲಿ ಮಾತ್ರ ಅಷ್ಟಾಕ್ಷರವನ್ನು ಜಪಿಸಿ ಮಾಧ್ಯಾಹ್ನಿಕದಲ್ಲಿ ಸಾಯಂಸಂಧ್ಯಾವಂದನೆಯಲ್ಲಿ ಅಷ್ಟಾಕ್ಷರವನ್ನು ಜಪಿಸುವುದಿಲ್ಲ. ಗಾಯತ್ರೀಜಪ ಹೇಳಿದಲ್ಲೆಲ್ಲ ಅಷ್ಟಾಕ್ಷರಮಂತ್ರಜಪಕ್ಕೂ ವಿಧಿ ಇದ್ದೇ ಇದೆ ಎಂದು ತಿಳಿಯಬೇಕು –

**ತಸ್ಮಾದಷ್ಟಾಕ್ಷರಂ ಮಂತ್ರಂ ಮದ್ಭಕ್ತೈರ್ವಿಗತಕಲ್ಮಷೈಃ**

**ಸಂಧ್ಯಾಕಾಲೇಷು ಜಪ್ತವ್ಯಂ ಸತತಂ ಚಾತ್ಮಶುದ್ಧಯೇ**

**ಅಷ್ಟಾಕ್ಷರಂ ಜಪೇನ್ನಿತ್ಯಂ ಪುನಾತಿ ಭುವನತ್ರಯಮ್**

**ಅಷ್ಟೋತ್ತರಸಹಸ್ರಂ ವಾ ಶತಮಷ್ಟೋತ್ತರಂ ತು ವಾ**

**ತ್ರಿಸಂಧ್ಯಾಸು ಜಪೇನ್ಮಂತ್ರಂ ತದರ್ಥಮನುಚಿಂತಯನ್**

**ಕಾಲತ್ರಯಂ ಯಥೋಕ್ತಂ ಚ ಜಾಪ್ಯಂ ನಾರಾಯಣಂ ಪರಮ್**

ನಾರಾಯಣಧ್ಯಾನವನ್ನು ಆಚಾರ್ಯರು ತಿಳಿಸಿದಂತೆ ಪುರಾಣಗಳೂ ತಿಳಿಸಿವೆ–

**ಚಕ್ರಶಂಖಗದಾಪದ್ಮೈಃ ದಕ್ಷೋರ್ಧ್ವಾದಿಕರೈರ್ಯುತಃ**

**ವಾಮದಕ್ಷವಿಭಾಗಸ್ಥಶ್ರೀಧರಾಭ್ಯಾಂ ಸಮಾಶ್ರಿತಃ**

ಮೊದಲ ಆವರಣವಾಗಿ ರಮೆಯ ಎರಡು ರೂಪಗಳೆ ಇರುವವು ಮುಂದೆ ಅಕ್ಷರವಾಚ್ಯಗಳಾದ ವಿಶ್ವಾದಿಗಳ, ಅಂಗರೂಪಗಳ, ಓಂಕಾರದ ಅಷ್ಟಾಕ್ಷರದಿಂದ ಅಭಿವ್ಯಕ್ತಗಳಾದ ಅಜಾದಿ ರೂಪಗಳ, ಅಷ್ಟಾಕ್ಷರದಿಂದ ಅಭಿವ್ಯಕ್ತಗಳಾದ ಕೇಶವಾದಿರೂಪಗಳ ಆವರಣಗಳಿವೆ. ಪದವಾಚ್ಯಗಳಾದ



ದಶಾವತಾರಗಳ ಆವರಣವೂ ಇದೆ. ಇವೆಲ್ಲ ಭಗವದ್ರೂಪಗಳೇ ಆಗಿವೆ. ಇದರೊಡನೆ ನಾರಾಯಣನ ಪೂಜೆಯಲ್ಲಿ ಹೇಳಿದಂತೆ ವಾಸುದೇವಾದಿರೂಪಗಳೂ ಆವರಣಗಳಾಗಿ ಇವೆ. ಈ ಎಲ್ಲ ಭಗವದ್ರೂಪಗಳ ಭಾರ್ಯಾರೂಪಗಳೂ ಪ್ರತ್ಯೇಕವಾಗಿ ಆವರಣಗಳಾಗಿರುವಂತೆ ಪದ್ಮಪುರಾಣ ಹೇಳಿದೆ. ಮಧ್ವಾಚಾರ್ಯರು ನಾರಾಯಣನ ಪೂಜೆಯ ಸಂದರ್ಭದಲ್ಲಿ ಇದನ್ನು ಸೂಕ್ಷ್ಮವಾಗಿ ತಿಳಿಸಿರುತ್ತಾರೆ. ನಾರಾಯಣನ ಕುಳಿತ ಪೀಠದಲ್ಲಿಯೂ ವಿಮಲಾದಿರೂಪಗಳು-ಲಕ್ಷ್ಮೀರೂಪಗಳೂ ಇಲ್ಲಿ ಉಪಾಸ್ಯಗಳೇ ಆಗಿವೆ –

ಅಷ್ಟದಿಕ್ಷು ದಳಾಗ್ರೇಷು ವಿಮಲಾದ್ಯಾಶ್ಚ ಶಕ್ತಯಃ
ವಿಮಲೋತ್ಕರ್ಷಿಣೀ ಜ್ಞಾನಾ ಕ್ರಿಯಾ ಯೋಗಾ ತಥೈವ ಚ
ಪ್ರಹ್ವೀ ಸತ್ಯಾ ತಥೇಶಾನಾ ಮಹಿಷ್ಯಃ ಪರಮಾತ್ಮನಃ
ಗೃಹೀತ್ವಾ ಚಾಮರಾನ್ ದಿವ್ಯಾನ್ ಸುಧಾಕರಸಮಪ್ರಭಾನ್
ಮತ್ಸ್ಯಕೂರ್ಮಾದಿಲೋಕಾಸ್ತು ತೃತೀಯಾವರಣಂ ಪರಮ್

ಹೀಗೆಯೇ ಆಯುಧಗಳೂ ಭಗವದ್ರೂಪದಲ್ಲಿಯೂ ಇತರ ದೇವತಾರೂಪದಲ್ಲಿಯೂ ಕಂಗೊಳಿಸಿವೆ–

ಸುದರ್ಶನಾದಿಭಿಶ್ಶಾಸ್ತ್ರೈಃ ಮೂರ್ತಿಮದ್ಭಿರುಪಾಸಿತಮ್ (ಭಾಗವತ)
ಶಂಖಚಕ್ರಗದಾಖಡ್ಗಶಾರ್ಙ್ಗಾದ್ಯೈರ್ಹೇತಿಭಿಸ್ತಥಾ
ಪರಿತಃ ಪುರುಷಾಕಾರೈಃ ತಂ ಲೋಕಂ ಪರಿರಕ್ಷತಿ (ಪದ್ಮಪುರಾಣ)

ಆಯುಧಗಳ ವಿನ್ಯಾಸವನ್ನು, ಇರುವಿಕೆಯನ್ನು ಈಶ್ವರಸಂಹಿತೆ ಸ್ಪಷ್ಟಪಡಿಸಿದೆ –

ಶ್ರೋಣೀತಟನಿವಿಷ್ಟೇನ ವಾಮಹಸ್ತೇನ ಲೀಲಯಾ
ಧ್ರಿಯಮಾಣಂ ಗದಾಂ ಗುರ್ವೀಂ ನಿಷಣ್ಣಾಂ ಧರಣೀತಳೇ
ಪಶ್ಚಾದ್ದಕ್ಷಿಣಹಸ್ತೇನ ಚಕ್ರಂ ಕಾಲಾನಲದ್ಯುತಿ
ಪ್ರಣವಧ್ವನಿಗರ್ಭಂ ತು ಹಿಮಾದ್ರಿಶತಶೋಭಿತಮ್
ಶಂಖಂ ವಾಮಕರೇಣಾಪಿ ದಧಾನಮತುಲಪ್ರಭಮ್
ಸಾಕ್ಷಾಲ್ಲಕ್ಷ್ಮೀಪತಿಂ ದೇವಂ ಧ್ಯಾಯೇನ್ನಾರಾಯಣಂ ಪ್ರಭುಮ್



ವೈಷ್ಣವನಾಗಿ ಪಂಚಾಯುಧಚಿಹ್ನಿತನಾಗಿ ನಾರಾಯಣನ ಮಂತ್ರ ಜಪಿಸುವವನು ನಾರಾಯಣನಲ್ಲಿ ಪಂಚಾಯುಧಗಳನ್ನು ಧರಿಸಿರುವಂತೆ ಚಿಂತನೆ ಗೈಯಬಹುದು. ಹೀಗೆ ಬಾಣ ತುಂಬಿದ ಅಕ್ಷಯ ಬತ್ತಳಿಕೆಯ ಲಕ್ಷಣಯುತನಾದ ನಾರಾಯಣನು ವಾಮನಾವತಾರದಲ್ಲಿ ತ್ರಿವಿಕ್ರಮನಾದಾಗ ಕಾಣಿಸಿಕೊಂಡಿದ್ದಾನೆ.

**ಸುದರ್ಶನಂ ಚಕ್ರಮಸಹ್ಯತೇಜೋ ಧನುಶ್ಚ ಶಾರ್ಙ್ಗಂ ಸ್ತನಯಿತ್ನುಘೋಷಮ್**
**ಪರ್ಜನ್ಯಘೋಷೋ ಜಲಜಃ ಪಾಂಚಜನ್ಯಃ ಕೌಮೋದಕೀ ವಿಷ್ಣುಗದಾ ತರಸ್ವಿನೀ**
**ವೈದ್ಯಾಧರೋಽಸಿಃ ಶತಚಂದ್ರಯುಕ್ತಃ ತೂಣೋತ್ತಮಾವಕ್ಷಯಸಾಯಕೌ ಚ**

(ಭಾಗವತ)

ಆಯುಧಗಳಲ್ಲಿ ಮುಖ್ಯವಾಗಿ ಸೇವೆಗಾಗಿ ನಾರಾಯಣನ ಕೈಯಲ್ಲಿ ಶ್ರೀಭೂದುರ್ಗೆಯರೇ ನೆಲೆನಿಂತಿರುವರು. ನಾರಾಯಣನ ಕೈಯಲ್ಲಿನ ಪದ್ಮ, ಚಕ್ರ, ಗದೆ, ಶಂಖಗಳು ಸೃಷ್ಟಿ, ಸ್ಥಿತಿ, ಸಂಹಾರ, ಮೋಕ್ಷಗಳನ್ನು ತಿಳಿಸಿವೆ. ಇದು ಬ್ರಹ್ಮಜಿಜ್ಞಾಸೆಯ ವಿಷಯ ವಾಕ್ಯ.

**ಸ್ಥಿತ್ಯೈ ಚಕ್ರಂ ಸರಸಿಜಂ ದಧಾನಂ ಸೃಷ್ಟಯೇ ಪುನಃ**
**ಮುಕ್ತಯೇ ಪಾಂಚಜನ್ಯಂ ಚ ಗದಾಂ ಸಂಹೃತಯೇ ತಥಾ** (ಶೇಷಸಂಹಿತೆ)

ನಾರಾಯಣನ ಅಪ್ಪುಗೆಯಲ್ಲಿ ಶ್ರೀದೇವಿ–ಭೂದೇವಿಯರಿರುವರು. ಅವರ ಬಣ್ಣನೆಯನ್ನು ವೃದ್ಧಹಾರೀತಸ್ಮೃತಿಯಲ್ಲಿ ಕಾಣಬಹುದು.

**ತತ್ರ ಚಾಧಾರಶಕ್ತ್ಯಾದ್ಯೈಃ ಧರ್ಮಾದ್ಯೈಃ ಸೂರಿಭಿರ್ವೃತೈಃ**
**ದಿವ್ಯರತ್ನಮಯೇ ಪೀಠೇ ಪಂಕಜೇಽಷ್ಟದಲೇ ಶುಭೇ**
**ತತ್ಕರ್ಣಿಕೋಪರಿತಲೇ ತಪ್ತಕಾಂಚನಸನ್ನಿಭೇ**
**ದೇವೀಭ್ಯಾಂ ಸಹಿತಂ ತಸ್ಮಿನ್ ಆಸೀನಂ ಪಂಕಜಾಸನೇ**
**ಚಿಂತಯೇದ್ದಕ್ಷಿಣೇ ಪಾರ್ಶ್ವೇ ಲಕ್ಷ್ಮೀಂ ಕಾಂಚನಸನ್ನಿಭಾಮ್**
**ಪದ್ಮಹಸ್ತಾಂ ವಿಶಾಲಾಕ್ಷೀಂ ದುಕೂಲವಸನಾಂ ಶುಭಾಮ್**
**ವಾಮೇ ದೂರ್ವಾದಲಶ್ಯಾಮಾಂ ವಿಚಿತ್ರಾಂಬರಭೂಷಿತಾಮ್**
**ಚಿಂತಯೇದ್ಧರಣೀಂ ದೇವೀಂ ನೀಲೋತ್ಪಲಧರಾಂ ಶುಭಾಮ್**



**ಈಶ್ವರಸಂಹಿತೆಯಲ್ಲಿ** ಶ್ರೀಭೂದುರ್ಗೆಯರ ಚಿಂತನಕ್ರಮ ಸ್ಪಷ್ಟವಾಗಿದೆ –

**ತತ್ರ ಶ್ರಿಯಾದಿದೇವೀನಾಂ ರೂಪತ್ರಯಮುದಾಹೃತಮ್**

**ಶ್ರೀವತ್ಸಗಾ ಯೋಗಲಕ್ಷ್ಮೀಃ ಭೋಗಲಕ್ಷ್ಮೀಸ್ತು ಪಾರ್ಶ್ವಗಾ**

**ವೀರಲಕ್ಷ್ಮೀ ಪೃಥಕ್‌ಸ್ಥಾನೇ ಸ್ವಾತಂತ್ರ್ಯೇಣ ಪ್ರತಿಷ್ಠಿತಾ**

**ಯೋಗಲಕ್ಷ್ಮೀಭೋಗಲಕ್ಷ್ಮ್ಯೋಃ ದೇವೇನ ಸಹ ಪೂಜನಮ್**

**ವೀರಲಕ್ಷ್ಮೀಂ ಪೃಥಗ್ಗೇಹೇ ಪೂಜಯೇತ ಯಥಾವಿಧಿ**

**ಪದ್ಮಪುರಾಣ**ದಲ್ಲಿ ನಾರಾಯಣನ ಲೋಕಗಳ ವರ್ಣನೆಯಲ್ಲಿ ರಮೆಯ ರೂಪಗಳ ಬಗ್ಗೆ ಹೀಗೆ ಬಣ್ಣಿಸಲಾಗಿದೆ –

**ತಸ್ಯ ದಕ್ಷಿಣಪಾರ್ಶ್ವೇ ಚ ಜಗನ್ಮಾತಾ ಹಿರಣ್ಮಯೀ**

**ವಸುಪಾತ್ರಂ ಮಾತುಲುಂಗಂ ಸ್ವರ್ಣ್ಣಪದ್ಮಂ ಧೃತಂ ಕರೈಃ**

**ವಾಮತಃ ಪೃಥಿವೀ ದೇವೀ ನೀಲೋತ್ಪಲದಳದ್ಯುತಿಃ**

**ಸಂಧೃತಂ ಚೋರ್ಧ್ವಬಾಹುಭ್ಯಾಂ ರಮ್ಯಂ ರಕ್ತೋತ್ಪಲದ್ವಯಮ್**

**ಇತರಾಭ್ಯಾಂ ಧೃತಂ ದೇವ್ಯಾ ಧಾನ್ಯಪಾತ್ರಯುಗಂ ತಥಾ**

**ಶಂಖಚಕ್ರಗದಾಪದ್ಮಪಾಣಿಭಿಃ ದಿವ್ಯಭೂಷಣೈಃ**

ಹೃತ್ಪದ್ಮದ ಅಷ್ಟದಲದಲ್ಲಿ ವಿಶ್ವಾದಿ ರೂಪಗಳು ಮಧ್ಯೆ ನಾರಾಯಣನ ಚಿಂತನೆ ಅಧ್ಯಾತ್ಮಧ್ಯಾನದ ಕ್ರಮ –

**ಅಷ್ಟಪತ್ರೇ ತು ಹೃತ್ಪದ್ಮೇ ಮಧ್ಯೇ ಸೂರ್ಯೇಂದುವಹ್ನಿಗಮ್**

**ಪೀಠತನ್ಮಧ್ಯಪದ್ಮಸ್ಥಂ ನಾರಾಯಣಮನಾಮಯಮ್**

ಕಡೆಗೆ ಬ್ರಹ್ಮಾದಿ ಲೋಕಪಾಲಕರ ಆವರಣವಿರುವಂತೆ ಧ್ಯಾನವನ್ನು ನಡೆಸಬೇಕು –

**ಐಂದ್ರಪಾವಕಯಾಮ್ಯಾನಿ ನೈರ್ಋತಂ ವಾರುಣಂ ತಥಾ**

**ವಾಯವ್ಯಂ ಸೌಮ್ಯಮೀಶಾನಂ ಸಪ್ತಮಂ ಮುನಿಭಿಃ ಸ್ಮೃತಮ್** (ಪದ್ಮಪುರಾಣ)

ಮಂತ್ರಮಹಿಮೆಯನ್ನು ಹೇಳಿದ **ಅಗ್ನಿಪುರಾಣ**ದಲ್ಲಿಯೂ ಪೀಠ ಚಿಂತನೆಯೊಂದಿಗೆ ನಾರಾಯಣನ ಪೂಜೆ ಹೇಳಲ್ಪಟ್ಟಿದೆ. ಅಲ್ಲಿ ಕೊನೆಗೆ



ಆಯುಧಾವರಣದೊಂದಿಗೆ ಇಂದ್ರಾದಿ ಪರಿಚಾರಕರ ಪೂಜೆಯನ್ನೂ ಹೇಳಿದ್ದಾರೆ-

ಇಂದ್ರಾದಿಪರಿಚಾರೇಣ ಸಂಪೂಜ್ಯ ಸಮವಾಪ್ನುಯಾತ್

ಪದ್ಮಪುರಾಣವು ಅಷ್ಟಾಕ್ಷರಮಂತ್ರಜಪಾಧಿಕಾರಕ್ಕೆ ವೈಷ್ಣವದೀಕ್ಷೆಯನ್ನು ಹೇಳಿದೆ -

ಕೃತ್ವಾ ತಾಪಾದಿಸಂಸ್ಕಾರಾನ್ ಪಶ್ಚಾನ್ಮಂತ್ರಮುದೀರಯೇತ್
ಚಕ್ರೇಣ ವಿಧಿನಾ ತಪ್ತಂ ತಾಪ ಇತ್ಯಭಿಧೀಯತೇ
ಶ್ರೀಮದಷ್ಟಾಕ್ಷರಂ ಮಂತ್ರಂ ಅಭ್ಯಸೇದ್ದ್ವಿಜಸತ್ತಮಃ

ನಾರದೀಯಪುರಾಣದ ಅಷ್ಟಾಕ್ಷರಕಲ್ಪದಲ್ಲಿ ಅಷ್ಟಾಕ್ಷರಮಂತ್ರಮಹಿಮೆ ಪ್ರಯೋಗಕ್ರಮ ಬಹಳವಾಗಿ ಬಂದಿವೆ-

ಧರ್ಮಾರ್ಥಕಾಮಮೋಕ್ಷಾಣಾಂ ಏಕಾಂತಫಲದಂ ಶುಭಮ್
ಬಹವೋಽಪಿ ಮಹಾತ್ಮಾನೋ ಮುನಯಸ್ಸನಕಾದಯಃ
ಅಷ್ಟಾಕ್ಷರಂ ಸಮಾಶ್ರಿತ್ಯ ನಿರ್ಜಗ್ಮುರ್ವೈಷ್ಣವಂ ಪದಮ್
ಏಕೋಽಷ್ಟಾಕ್ಷರ ಏವಾಯಂ ಅಲಮಾತ್ಮವಿಶುದ್ಧಯೇ
ಅಷ್ಟಾಕ್ಷರಜಪಾದನ್ಯತ್ ಕೇವಲಂ ಕಾಲಯಾಪನಮ್
ಗುರು ವಾಽಪ್ಯಲ್ಪಕಂ ಪಾಪಂ ಜನ್ಮಾಂತರಮಥಾಪಿ ವಾ
ಅಷ್ಟಾಕ್ಷರಜಪೇನೈವ ಕ್ಷೀಯತೇ ನಾಽತ್ರ ಸಂಶಯಃ
ವ್ಯಕ್ತಂ ಹಿ ಭಗವಾನೇವ ಸಾಕ್ಷಾನ್ನಾರಾಯಣಃ ಸ್ವಯಮ್
ಅಷ್ಟಾಕ್ಷರಸ್ವರೂಪೇಣ ಮುಖೇಷು ಪರಿವರ್ತ್ತತೇ
ಯಥಾ ಸರ್ವೇಷು ವೇದೇಷು ನಾಸ್ತಿ ನಾರಾಯಣಾತ್ಪರಃ
ತಥಾ ಸರ್ವೇಷು ಮಂತ್ರೇಷು ನಾಸ್ತಿ ಚಾಷ್ಟಾಕ್ಷರಾತ್ಪರಮ್
ಆಯುಷ್ಕಾಮೋ ದ್ವಿಲಕ್ಷಂ ತು ಜಪೇದ್ದೂರ್ವಾಂಕುರಾಣಿ ಚ
ಹುತ್ವಾ ದಶಸಹಸ್ರಾಣಿ ದೀರ್ಘಮಾಯುಶ್ಚ ವಿಂದತಿ
ಪ್ರತೀಕಾರಸ್ಯ ಸರ್ವೇಷಾಂ ವೃಜಿನವ್ಯಾಧಿರಕ್ಷಸಾಮ್
ದಧಿಮಧ್ವಾಜ್ಯಸಂಯುಕ್ತಾಃ ಚತುರಂಗುಲಸಂಮಿತಾಃ
ಗುಡೂಚೀರಯುತಂ ಹುತ್ವಾ ಮೃತ್ಯುಮೇವಾತಿವರ್ತ್ತತೇ



ಶನೈಶ್ಚರದಿನೇಽಶ್ವತ್ಥಂ ಜಪೇದಾಲಭ್ಯ ಪಾಣಿನಾ

ಅಷ್ಟಾಕ್ಷರಶತಂ ಶುದ್ಧೋ ಮ್ರಿಯತೇ ನಾಪಮೃತ್ಯುಭಿಃ

ಉದಕುಂಭಂ ನವಂ ಪೂರ್ಣ್ಣಂ ಉಪಸ್ಪೃಶ್ಯಾಯುತಂ ಜಪೇತ್

ತೇನಾಭಿಷಿಕ್ತಸ್ತೋಯೇನ ವ್ಯಾಧಿಭಿಃ ಪರಿಮುಚ್ಯತೇ

ಅಶ್ನೀಯಾದನ್ವಹಂ ವಿದ್ವಾನ್ ಅನ್ನಂ ಸಪ್ತಾಭಿಮಂತ್ರಿತಮ್

ಆರೋಗ್ಯಂ ಮಹದಾಪ್ನೋತಿ ಬಲಂ ತೇಜಶ್ಚ ವಿಂದತಿ

ಭಕ್ಷಯೇತ್ಸರ್ವಭಕ್ಷ್ಯಾಂಶ್ಚ ಕೃತ್ವೈವಮಭಿಮಂತ್ರಿತಮ್

ತತ್ಸರ್ವಂ ಜೀರ್ಯತೇ ಸಮ್ಯಕ್ ಅಪಿ ಹಾಲಾಹಲಂ ವಿಷಮ್

ಶತಮಷ್ಟೋಕ್ಷರಂ ಜಪ್ತ್ವಾ ಮಂತ್ರಪೂತಂ ಜಲಂ ಪಿಬೇತ್

ಅಹನ್ಯಹನಿ ಷಣ್ಮಾಸಾತ್ ತತೋ ಮೇಧಾ ವಿವರ್ಧತೇ

ಯ ಉತ್ಥಾಯ ಜಪೇದ್ಬ್ರಾಹ್ಮೇ ಮುಹೂರ್ತೇ ಲಕ್ಷಯೋರ್ದ್ವಯಮ್

ತಸ್ಯ ಸಂಸ್ಕಾರಕಲ್ಯಾಣೀ ಜಾಯತೇ ವಾಕ್ ಸರಸ್ವತೀ

ಉಪಸ್ಪೃಶ್ಯಾಷ್ಟಸಾಹಸ್ರಂ ಉದಕುಂಭಚತುಷ್ಟಯಮ್

ತತೋಽಭಿಷೇಕಮಾತ್ಮಾನಂ ಅಲಕ್ಷ್ಮೀಸ್ತೇನ ನಶ್ಯತಿ

ಅಷ್ಟಕೃತ್ವೋಷ್ಟಕೃತ್ವಸ್ತು ಜಪ್ತ್ವಾಂಜಲಿಭಿರಷ್ಟಭಿಃ

ಸ್ನಾತ್ವಾ ಸೂರ್ಯೋದಯೇ ಷಿಂಚೇತ್ ಮೂರ್ಧನಿ ಶ್ರಿಯಮಶ್ನುತೇ

ದಧಿಮಧ್ವಾಜ್ಯಸಂಯುಕ್ತೈಃ ಅಲಕ್ಷ್ಮೀನಾಶನೈಃ ಫಲೈಃ

ಬಿಲ್ವೈರಯುತಹೋಮೇನ ಮಹಾಧನಪತಿರ್ಭವೇತ್

ಬಾಹುದ್ವಯಂ ಸಮುದ್ಧೃತ್ಯ ಲಕ್ಷಮೇಕಮಿಮಂ ಜಪೇತ್

ಸೋಽಚಿರೇಣೈವ ಕಾಲೇನ ಧನವಾನ್ಸ್ಯಾತ್ ಕುಬೇರವತ್

ವಿದ್ವೇಷಣಂ ಸಂಹನನಂ ಸ್ತಂಭನಂ ಪರಿಮೋಹನಮ್

ಉಚ್ಚಾಟನಂ ಚ ಶತ್ರೂಣಾಂ ತತೋತ್ಪಾಟನಮಾರಣೇ

ಏವಮಾದೀನಿ ಸಿದ್ಧ್ಯಂತಿ ಸಪ್ತಭಿಸ್ಸಪ್ತಭಿರ್ದಿನೈಃ

ನಾರಾಯಣಸಂಹಿತೆಯು ವಿಶೇಷವಾಗಿ ಅಷ್ಟಾಕ್ಷರದ ಮಂತ್ರ



ಸ್ವರೂಪವನ್ನು ಅರ್ಥಚಿಂತನೆಗಳನ್ನು ಒಳಗೊಂಡಿದೆ. ಈ ಸಂಹಿತೆಯಲ್ಲಿ ಮಂತ್ರಸಿದ್ಧಿಯಾಗಲು ಅಕ್ಷರಸಂಖ್ಯೆಯ ನಿಯಮದಂತೆ ಎಂಟು ಲಕ್ಷ ಜಪಿಸಿ ತಿಲತರ್ಪಣದೊಂದಿಗೆ ಹೋಮ ನಡೆಸುವಂತೆ ಹೇಳಲಾಗಿದೆ –

**ಜಪೇಲ್ಲಕ್ಷಾಷ್ಟಕಂ ಮಂತ್ರಂ ತದರ್ಧಂ ತಿಲತರ್ಪಣಮ್**

**ತದರ್ಧಂ ಜುಹುಯಾದಗ್ನೌ ತತಃ ಸಿದ್ಧ್ಯತಿ ಮಂತ್ರರಾಟ್**

**ನರಸಿಂಹಪುರಾಣವು** ಅಷ್ಟಾಕ್ಷರಪ್ರಕರಣದಲ್ಲಿ ಒಂದರಿಂದ ಎಂಟು ಲಕ್ಷದಷ್ಟು ಜಪಕ್ಕೂ ಪ್ರತ್ಯೇಕವಾಗಿ ಎಂಟು ಫಲಗಳನ್ನು ಹೇಳಿದೆ – ಆತ್ಮಶುದ್ಧಿ, ಮಂತ್ರಸಿದ್ಧಿ, ಸ್ವರ್ಗಲೋಕಪ್ರಾಪ್ತಿ, ಹರಿಸಾಮೀಪ್ಯ, ನಿರ್ಮಲಜ್ಞಾನ, ವಿಷ್ಣುಭಕ್ತಿ, ಸ್ವಾಪರೋಕ್ಷ ಮತ್ತು ಮೋಕ್ಷ.

**ನಾರಾಯಣಸಂಹಿತೆಯು** ಈ ಮಂತ್ರವನ್ನು ಸಂಪತ್ಪ್ರದವನ್ನಾಗಿ ಹೇಳಿದೆ. ಸಮುದ್ರದ ದಂಡೆಯಲ್ಲಿ ಜಪಿಸುವಂತೆ ಸೂಚಿಸಿದೆ. ಚಿಂತನೆಯಲ್ಲಿ ಸೂರ್ಯ ಮಂಡಲಮಧ್ಯವರ್ತಿಯಾಗಿಯೇ ನಾರಾಯಣನನ್ನು ತಿಳಿಸುವ ಮೂಲಕ ಅಷ್ಟಾಕ್ಷರಮಂತ್ರಕ್ಕೆ ಗಾಯತ್ರಿಯ ಸಂಬಂಧವನ್ನು ಹೇಳಲಾಗಿದೆ. ಅಂದರೆ ಗಾಯತ್ರಿಯ ನಾರಾಯಣರೂಪವೂ ಅಷ್ಟಾಕ್ಷರದ ನಾರಾಯಣರೂಪವೂ ಒಂದೇ ತೆರನಾಗಿರುವುದೆಂದು ಸ್ಪಷ್ಟವಾಗುವುದು –

**ಯದೀಚ್ಛತಿ ಬುಧೋ ರತ್ನಾನ್ಯಮೂಲ್ಯಾನಿ ತದಾ ತು ಸಃ**

**ಸಾಗರಸ್ಯ ತಟೇ ಸ್ಥಿತ್ವಾ ಸೂರ್ಯಮಂಡಲಮಧ್ಯಗಮ್**

**ಮಾಮುದ್ದಿಶ್ಯ ಜಪೇನ್ಮಂತ್ರಂ ಅಷ್ಟಾಕ್ಷರಮತಂದ್ರಿತಃ**

**ದಶಾಹಂ ವಾಽಪಿ ಸಪ್ತಾಹಂ ಪಂಚಾಹಂ ತ್ರ್ಯಹಮೇವ ವಾ**

**ಯಾವತ್ಪಶ್ಯೇತ್ಸ ರತ್ನಾನಿ ಸ್ವಪಾದಾಗ್ರತಟೇಽಬ್ಜಜ**

ಅನೇಕ ಪಾಪಗಳ ನಿವೃತ್ತಿಯಲ್ಲಿ ಅಷ್ಟಾಕ್ಷರಜಪವನ್ನು ಈ ಸಂಹಿತೆ ವಿಧಿಸಿದೆ. ವಿಶೇಷವಾಗಿ ಅನ್ಯದೇವತೆಗಳ ಸ್ವತಂತ್ರಕಲ್ಪನೆಯಲ್ಲಿ ಸ್ವೀಕರಿಸಿದ ಪ್ರಸಾದಾದಿಗಳ ಪ್ರಾಯಶ್ಚಿತ್ತಕ್ಕೆ ಅಷ್ಟಾಕ್ಷರಜಪವನ್ನು ವಿಧಿಸಲಾಗಿದೆ –

**ಮಹಾಪಾತಕಸಂಘಾಶ್ಚ ಉಪಪಾತಕಸಂಚಯಾಃ**



**ಸರ್ವೇ ಶಾಮ್ಯಂತಿ ಮಂತ್ರೇಣ ನಾಮ್ನಾ ತ್ವಷ್ಟಾಕ್ಷರೇಣ ಹಿ**

**ಅಸ್ಪರ್ಶಸ್ಪರ್ಶನೇ ಚೈವ ಪಾಖಂಡಪತಿತಾದಿಭಿಃ**

**ಸಾಂಗತ್ಯೇ ತ್ವನ್ಯದೇವಾನಾಂ ಪ್ರಸಾದಾದಿಕಭಕ್ಷಣೇ**

ಅಪಮೃತ್ಯು ಪರಿಹಾರಕ್ಕೆ ಶನಿವಾರ ಅಶ್ವತ್ಥಮರದ ಸ್ಪರ್ಶದೊಂದಿಗಿನ ಜಪ ಇಲ್ಲಿನ ವಿಶೇಷಾಂಶ –

**ಮಂದವಾರೇಷು ಚಾಶ್ವತ್ಥಂ ಸ್ಪೃಷ್ಟ್ವಾ ದಕ್ಷಿಣಪಾಣಿನಾ**

**ಜಪತೋ ನಾಪಮೃತ್ಯುಃ ಸ್ಯಾತ್ ಪೂರ್ವಮೀರಿತಸಂಖ್ಯಯಾ**

ಯಾವ ಧಾನ್ಯಗಳ ಹೆಚ್ಚಳವನ್ನು ಬಯಸುವನೋ ಆಯಾ ಧಾನ್ಯಗಳನ್ನು ಹೋಮಿಸಬೇಕು –

**ಯದ್ಯತ್ಕಾಮಯತೇ ಮಂತ್ರೀ ಧಾನ್ಯಜಾತಿಮನೇಕಧಾ**

**ತತ್ತದ್ಧೋಮೇನ ತತ್ಸರ್ವಂ ಲಭತೇ ಮಂತ್ರವೈಭವಾತ್**

ನಾರಾಯಣಮಂತ್ರಹೋಮದಿಂದ ಲೋಕದ ಕ್ಷೇಮವನ್ನು ನಾರಾಯಣನು ಚತುರ್ಮುಖನಿಗೆ ಈ ಸಂಹಿತೆಯಲ್ಲಿ ಹೇಳಿದ್ದಾನೆ. ಬಯಸಿ ಮಾಡಿದ್ದನ್ನೆಲ್ಲಾ ಬಯಸಿದಂತೆ ಪಡೆವನು. ನಿಷ್ಕಾಮನಾಗಿ ನಡೆಸಿದ ಹವನದಿಂದ ಮೋಕ್ಷದ ಪ್ರಾಪ್ತಿ –

**ಏತನ್ಮಹಾಮಂತ್ರರಾಜಹವನೇ ಚ ಚತುರ್ಮುಖ**

**ಲೋಕಾಃ ಸಮಸ್ತಾಃ ಕ್ಷಿಪ್ರಂ ವೈ ಭವಂತಿ ಸುಖಿನೋ ಧ್ರುವಮ್**

**ಸಕಾಮಾ ಯದಿ ಲೋಕೇಽಸ್ಮಿನ್ ಲಭಂತೇ ಸಕಲೇಪ್ಸಿತಮ್**

**ನಿಷ್ಕಾಮಾಶ್ಚೇತ್ಪ್ರಾಪ್ನುವಂತಿ ದುರ್ಲಭಂ ಮೋಕ್ಷಮವ್ಯಯಮ್**

ಸಂಹಿತೆಯಲ್ಲಿ ಮಂತ್ರದ ವೈಶಿಷ್ಟ್ಯದ ಒಂದು ಪ್ರಾಯಶ್ಚಿತ್ತ ಹೇಳಲಾಗಿದೆ. ಜಪ ಮಾಡುವವನನ್ನು ಕಂಡರೇನೇ ಪಾಪನಿವೃತ್ತಿಯ ಘೋಷಣೆ ಇಲ್ಲಿದೆ.

**ಏತದ್ರೂಪಾಲ್ಪಪಾಪೇಷು ಸಂಭೂತೇಷು ಯಥಾಽಬ್ಜಜ**

**ಅಷ್ಟಾಕ್ಷರಮಹಾಮಂತ್ರಜಾಪಿನಂ ವೈಷ್ಣವಾಗ್ರಗಮ್**

**ದೃಷ್ಟ್ವಾ ಚ ಭಕ್ತಿಭಾವೇನ ನಮಸ್ಕೃತ್ಯ ಚ ತಂ ಭುವಿ**



**ತತ್‌ಕ್ಷಣಂ ಮುಚ್ಯತೇ ತತ್ತತ್ ಪಾಪೇಭ್ಯಸ್ತು ಸರೋಜ್ಜಜ**

ಸಕಲ ಶಾಸ್ತ್ರಗಳ ಸಾರವಾಗಿ ನಾರಾಯಣ ಮಂತ್ರವಿದೆ. ಆ ಮಂತ್ರ ಜಪಿಸಿದವಗೆ ಎಲ್ಲ ಜನ್ಮಗಳ ಪಾಪನಿವೃತ್ತಿಯ ಜೊತೆಗೆ ವೈಕುಂಠದ ಪ್ರಾಪ್ತಿಯು ನಿಶ್ಚಯ ಎನ್ನುವುದಾಗಿ ಈ ಸಂಹಿತೆ ಬಣ್ಣಿಸಿದೆ –

**ಷಡಂಗಾನಿ ಚ ವೇದಾಶ್ಚ ಮಂತ್ರಾಶ್ಚಾನ್ಯೇ ಪರಃಶತಾಃ**

**ಅನ್ಯಚ್ಚ ವಾಙ್ಮಯಂ ಸರ್ವಂ ಮಂತ್ರೇಽಸ್ಮಿನ್ ಸುಸಮಾಹಿತಮ್**

**ಅಪುನರ್ಭವಲಿಪ್ಸೂನಾಂ ಗತಿರಷ್ಟಾಕ್ಷರಂ ಮತಮ್**

**ಜನ್ಮನ್ಯಸ್ಮಿನ್ನತೀತೇ ವಾ ಯದೇತತ್ಸಂಚಿತಂ ಮಹತ್**

**ತನ್ಮಂತ್ರಜಪಮಾತ್ರೇಣ ಪ್ರಳಯಂ ಯಾತಿ ನಿಶ್ಚಯಮ್**

**ಮ್ರಿಯಮಾಣಃ ಶುಚಿರ್ಭೂತ್ವಾ ಮಂತ್ರಮೇತಮುದೀರಯನ್**

**ಪ್ರಾಪ್ನೋತಿ ವೈಷ್ಣವಂ ಸ್ಥಾನಂ ದುಷ್ಪ್ರಾಪಮವಿನಾಶನಮ್**

ಬೃಹದ್ಬ್ರಹ್ಮಸಂಹಿತೆಯು ಮಂತ್ರಮಹಿಮೆಯನ್ನು ಕೊಂಡಾಡುತ್ತಾ, ಜಪ ನಡೆಸಿ ದರ್ಭೆಯಿಂದ ನೀರು ಪ್ರೋಕ್ಷಣೆಗೈದರೆ ಪ್ರೇತಬಾಧೆಯನ್ನೂ ನಿವೃತ್ತಿಗೊಳಿಸಬಹುದೆಂಬ ಪ್ರಯೋಗವನ್ನು ಸೂಚಿಸಿದೆ –

**ಅನನ್ಯಾರ್ಹಂ ಚ ಸಂಬಂಧಂ ವಕ್ತಿ ಪ್ರಣವ ಏವ ಚ**

**ಅನನ್ಯಸಾಧನಂ ವಕ್ತಿ ದ್ವಿತೀಯಂ ಪದಮುತ್ತಮಮ್**

**ಪ್ರಾಪ್ಯಂ ನಾರಾಯಣ ಇತಿ ಚತುರ್ಥೀ ದ್ವಿಜಸತ್ತಮ**

**ನಿರ್ದಿಶತ್ಯೇಷು ಮುಕ್ತಾನಾಂ ತಥಾನನ್ಯಪ್ರಯೋಜನೇ**

**ಏವಂ ನಾರಾಯಣಪರೋ ಮಂತ್ರರಾಜಮಹರ್ನ್ನಿಶಮ್**

**ಯೋಽನುಸ್ಮರತಿ ಭೂತಾತ್ಮಾ ಯಾತಿ ವಿಷ್ಣೋಃ ಪರಂ ಪದಮ್**

**ಸಾಯಮೇತದಧೀಯಾನಃ ತಾಪಂ ದಿನಕೃತಂ ಮಹತ್**

**ಮಧ್ಯಂದಿನಮಧೀಯಾನಃ ತಾಪಂ ಪ್ರಾತಃಕೃತಂ ಮಹತ್**

**ಪ್ರಾತರೇತಮಧೀಯಾನಃ ಪಾಪಂ ರಾತ್ರಿಕೃತಂ ಮಹತ್**

**ಭಸ್ಮೀಕರೋತಿ ತತ್ಸರ್ವಂ ಸ್ಥೂಲರಾಶಿಮಿವಾನಲಃ**



ಅಷ್ಟಾಕ್ಷರಪ್ರಜಪ್ತಾರಂ ಚಕ್ರಶಂಖಾದಿಧಾರಿಣಮ್

ದೃಷ್ಟ್ವಾ ವಿಲಯಮಾಯಾಂತಿ ನೀಹಾರಾ ಇವ ಗೋಪತಿಮ್

ಪ್ರಜಪ್ತ್ವಾ ಮಂತ್ರರಾಜೇನ ಜಲಮಷ್ಟೋತ್ತರಂ ಶತಮ್

ಪ್ರೋಕ್ಷಣಾತ್ಕುಶಪತ್ರೈಶ್ಚ ಪೈಶಾಚತ್ವಂ ವಿನಶ್ಯತಿ

ಸ್ಕಂದಪುರಾಣವು ಅಷ್ಟಾಕ್ಷರಮಂತ್ರದ ಸಿದ್ಧಿಕ್ರಮವನ್ನು ಸ್ಪಷ್ಟಪಡಿಸಿದೆ. ಪ್ರತಿನಿತ್ಯದ ಜಪಾನಂತರದಲ್ಲಿ ಸೂರ್ಯೋದಯದ ನಂತರದಲ್ಲಿ ಪ್ರತಿನಿತ್ಯ ಮೂರುಸಾವಿರ ಜಪಿಸಬೇಕು. ಪ್ರತಿನಿತ್ಯ ಜಪಕ್ಕೆ ಅನುಗುಣವಾಗಿ ಹತ್ತಕ್ಕೊಂದರಂತೆ ಮುನ್ನೂರು ತರ್ಪಣ ನೀಡಬೇಕು. ಹೀಗೆ ಒಂದು ವರ್ಷ ಜಪಿಸಿದ ಬಳಿಕ ಉದ್ಯಾಪನೆಯನ್ನು ನಡೆಸಬೇಕು. ಮೂರುಸಾವಿರದ ಐನೂರು ಬಾರಿ ಮಂತ್ರದಿಂದ ಆಜ್ಯಾಹುತಿಯನ್ನು ಅಗ್ನಿಮುಖದಲ್ಲಿ ನೀಡಬೇಕು. ಮುನ್ನೂರೈವತ್ತು ಜ್ಞಾನಿಗಳಿಗೆ ಅನ್ನದಾನವನ್ನು ನಡೆಸಬೇಕು. ಹೀಗೆ ಸರ್ವಾಭೀಷ್ಟವನ್ನು ಪಡೆಯುವ ಸ್ಪಷ್ಟ ಪ್ರಯೋಗ ಇಲ್ಲಿದೆ. ಇದನ್ನು ಪ್ರತಿವರ್ಷವೂ ಮುಂದುವರಿಸಬಹುದು –

ಓಂ ನಮೋ ನಾರಾಯಣಾಯೇತಿ ಜಪೇದ್ಯಃ ಸುಸಮಾಹಿತಃ

ಸೂರ್ಯೋದಯೇ ಶುಚಿರ್ಭೂತ್ವಾ ತ್ರಿಸಹಸ್ರಂ ದಿನೇ ದಿನೇ

ಸಾರ್ಧಂ ಲಕ್ಷತ್ರಯಂ ಯಾವತ್ ತತ ಉದ್ಯಾಪಯೇದ್ಬುಧಃ

ತರ್ಪಣಂ ಹವನಂ ಚೈವ ಬ್ರಹ್ಮಭೋಜ್ಯಂ ದಶಾಂಶತಃ

ಏವಂ ಯಃ ಕುರುತೇ ಭಕ್ತ್ಯಾ ತಸ್ಯ ಯಚ್ಛಾಮಿ ವಾಂಛಿತಮ್

ಧನಂ ಧಾನ್ಯಂ ತಥಾ ದಾರಾನ್ ಪುತ್ರಾಂಶ್ಚಾನ್ಯಾಂಶ್ಚ ವಾಂಛಿತಮ್

ಹಾರೀತಸ್ಮೃತಿಯಲ್ಲಿಯ ಅಷ್ಟಾಕ್ಷರದ ಪಂಚವಿಧಮಹಿಮೆಯನ್ನು ಪಂಚಸಂಸ್ಕಾರಸಂಗ್ರಹ ಸಂಗ್ರಹಿಸಿದೆ –

ಜಪಶ್ಚಾಷ್ಟಾಕ್ಷರೋ ಮಂತ್ರಃ ಸರ್ವಪಾಪಪ್ರಣಾಶನಃ

ಸರ್ವದುಃಖಹರಃ ಶ್ರೀಮಾನ್ ಸರ್ವಕಾಮಫಲಪ್ರದಃ

ಸರ್ವವೇದಾತ್ಮಕೋ ಮಂತ್ರಃ ಸರ್ವಸಿದ್ಧಿಪ್ರದೋ ನೃಣಾಮ್

ಅತಿ ಮಹತ್ತರವಾದ ಮಹಿಮೆಯನ್ನು ಪಡೆದಿರುವ ಈ ಮಂತ್ರವು



ಇಂದು, ಇಷ್ಟು ಸಮರ್ಥವಾಗಿ ಫಲವನ್ನು ನೀಡುತ್ತಿಲ್ಲ. ಸರಿಯಾದ ಅರ್ಥ ಚಿಂತನೆಯ ನ್ಯೂನತೆಯೊಂದು ಕಾರಣವಾದರೆ ಮತ್ತೊಂದು ಉಪದೇಶದ ವಿಷಯದಲ್ಲಿ ನಮ್ಮ ಉದಾಸೀನತೆ. ಉಪನಯನದ ಸಂದರ್ಭದಲ್ಲಿ ಈ ಅಷ್ಟಾಕ್ಷರ ನಾರಾಯಣಮಂತ್ರದ ಉಪದೇಶ ಆಗಿರುವುದಿಲ್ಲ. ಆದರೂ ಸರಿಯಾಗಿರುವುದಿಲ್ಲ. ವೈಷ್ಣವದೀಕ್ಷಾಬದ್ಧವಾಗಿ ಇದು ನಡೆದಿರುವುದಿಲ್ಲ. ಹೀಗಾಗಿ ಮಂತ್ರವು ಸಫಲವಾಗಿಲ್ಲ. ಮುಖ್ಯವಾಗಿ ಶಾಸ್ತ್ರವಿಧಿಗನುಗುಣವಾಗಿ ಮಂತ್ರೋಪದೇಶ ಗುರುಮುಖದಿಂದಲೇ ಆಗಬೇಕು ಎನ್ನುವುದಾಗಿ **ನಾರಾಯಣಸಂಹಿತೆ** –

**ತಸ್ಮಾತ್ಸರ್ವಪ್ರಯತ್ನೇನ ಮಂತ್ರಂ ಮಂತ್ರಾರ್ಥಮಾದರಾತ್**
**ಲಭೇದ್ಗುರುಮುಖಾದೇವ ಅನ್ಯಥಾ ದೋಷಕೃದ್ಭವೇತ್**

**ನಾರಾಯಣತಂತ್ರವು** ಸ್ಮರಣೆಗಿಂತ ಧ್ಯಾನ ಶ್ರೇಷ್ಠ ಎಂದು ತಿಳಿಸುತ್ತ ಎಲ್ಲೆಂದರಲ್ಲಿ ನಾರಾಯಣಸ್ಮರಣೆಯನ್ನು ನಡೆಸುತ್ತಲೆ ಇರಬೇಕು. ಆದರೆ ಧ್ಯಾನವನ್ನು ನಿಯತ ಆಸನದಲ್ಲಿದ್ದುಕೊಂಡೆ ಮಾಡಬೇಕು ಎಂದಿದೆ. ನಿರಂತರ ಭಗವಂತನ ಚಿಂತನೆಯೇ ಧ್ಯಾನ ಎನಿಸುವುದು. ಈ ಧ್ಯಾನವು ಮಲಗಿದ್ದಾಗ ನಡೆದಾಡುತ್ತಿರುವಾಗ ಸಿದ್ಧಿಸದು ಎಂದು **ನಾರಾಯಣತಂತ್ರ** ಸ್ಪಷ್ಟಪಡಿಸಿದೆ –

**ಸ್ಮರಣೋಪಾಸನಂ ಚೈವ ಧ್ಯಾನಾತ್ಮಕಮಿತಿ ದ್ವಿಧಾ**
**ಸ್ಮರಣಂ ಸರ್ವದಾ ಯೋಗ್ಯಂ ಧ್ಯಾನೋಪಾಸನಮಾಸನೇ**
**ನೈರಂತರ್ಯಂ ಮನೋವೃತ್ತೇಃ ಧ್ಯಾನಮಿತ್ಯುಚ್ಯತೇ ಬುಧೈಃ**
**ಆಸೀನಸ್ಯ ಚರೇತ್ತತ್ತು ನ ಶಯಾನಸ್ಯ ನಿದ್ರಯಾ**
**ಸ್ಥಿತಸ್ಯ ಗಚ್ಛತೋ ವಾಽಪಿ ವಿಕ್ಷೇಪಸ್ಯೈವ ಸಂಭವಾತ್**
**ಸ್ಮರಣಾತ್ಪರಮಂ ಜ್ಞೇಯಂ ಧ್ಯಾನಂ ನಾಸ್ತ್ಯತ್ರ ಸಂಶಯಃ**

ಜಪ ನಡೆಸುವಾಗ ಅಶುಚಿಯಾದಲ್ಲಿ ಪ್ರಾಣಾಯಾಮ ಮಾಡಿ ಜಪವನ್ನು ಮುಂದುವರಿಸಬೇಕೆಂದು ತತ್ವಕಣಿಕಾ ಪ್ರಮಾಣವನ್ನು ನೀಡಿದೆ –

**ಅಷ್ಟಾಕ್ಷರಜಪಂ ಕುರ್ವನ್ ಅಶುಚಿಂ ಯದಿ ಪಶ್ಯತಿ**
**ಪ್ರಾಣಾಯಾಮಂ ಸಕೃತ್ಕೃತ್ವಾ ಜಪಶೇಷಂ ಸಮಾಚರೇತ್**



# ಅಕ್ಷಮಾಲೆಯಲ್ಲಿ ಅಷ್ಟಾಕ್ಷರಜಪ

ಪಾದ್ಮತಂತ್ರವು ಅಷ್ಟಾಕ್ಷರವನ್ನು ಅಕ್ಷಮಾಲೆಯಲ್ಲಿಯೇ ಜಪಿಸಬೇಕೆಂದಿದೆ-

**ತಮಕ್ಷಮಾಲಯಾ ಶುದ್ಧಂ ಜಪೇನ್ಮಂತ್ರಂ ಸಮಾಹಿತಾಃ**

ನಾರದೀಯಪುರಾಣದಲ್ಲಿ ವರ್ಣಾನುಗುಣವಾಗಿ ಅಕ್ಷಮಾಲೆಯನ್ನು ತಿಳಿಸಿದ್ದಾರೆ-

**ಕುಶಸ್ತಂಬೈಃ ಜಪೇದ್ವಿಪ್ರಃ ಸುವರ್ಣ್ಣಮಣಿಭಿರ್ನೃಪಃ**
**ಪುತ್ರಜೀವಫಲೈರ್ವೈಶ್ಯಃ ಪದ್ಮಾಕ್ಷೈಃ ಸರ್ವ ಏವವಾ**

ಜಪಮಾಡುವಾಗ ಅಕ್ಷಮಾಲೆಯು ಯಾರಿಗೂ ಕಾಣಿಸದಂತೆ ಮುಚ್ಚಿಕೊಂಡಿರಬೇಕು. ಇಲ್ಲವಾದರೆ ಜಪ ವ್ಯರ್ಥ ಎಂದು ವೇದವ್ಯಾಸರು –

**ಅಕ್ಷಮಾಲಾ ಪ್ರಗೋಪ್ತವ್ಯಾ ಜಪಕಾಲೇ ತು ಧೀಮತಾ**
**ಪರದೃಷ್ಟಿಗತಾ ಮಾಲಾ ನಿಷ್ಫಲಾ ಜಪಕರ್ಮ್ಮಣಿ**

ಪಾದ್ಮಸಂಹಿತಾವು ಅಕ್ಷಮಾಲೆಯ ರಚನೆ, ಕಾಯಿ, ಮಣಿಯ ಸಂಖ್ಯೆ, ಫಲ, ಶುದ್ಧಿ, ಜಪಕ್ರಮ ಇವುಗಳ ಬಗ್ಗೆ ವಿವರವನ್ನು ನೀಡಿದೆ-

**ಸರ್ವಲೋಹೈಶ್ಚ ರತ್ನೈಶ್ಚ ಸ್ಫಟಿಕೈರ್ವಿವಿಧೈರಪಿ**
**ಜಲಜೈಃ ಸ್ಥಳಜೈರ್ವಾಪಿ ಕಾರಯೇದಕ್ಷಮಾಲಿಕಾಮ್**
**ಅಷ್ಟೋತ್ತರಶತಂ ಸಂಖ್ಯಾ ಮಣೀನಾಂ ಶ್ರೇಯಸೀ ಭವೇತ್**
**ತದರ್ಧಸಂಖ್ಯಾ ಕಥಿತಾ ಮಧ್ಯಮಾ ವಾಽಧಮಾ ಸ್ಮೃತಾ**
**ಸಪ್ತವಿಂಶತಿ ಸಂಖ್ಯಾ ವೈ ಭವೇದಸ್ಯಾಕ್ಷಮಾಲಿಕಾ**
**ಸ್ವರ್ಗಾಪವರ್ಗ್ಗದಂ ರತ್ನಂ ಸುವರ್ಣ್ಣಂ ವಿಭವಪ್ರದಮ್**
**ರಜತಂ ಕೀರ್ತ್ತಿಧನದಂ ತಾಮ್ರಂ ಶಾಂತಿಕರಂ ಭವೇತ್**
**ಪುತ್ರದಂ ಪುತ್ರಜೀವಂ ಸ್ಯಾತ್ ಇಂದ್ರಾಕ್ಷಃ ಸರ್ವಕಾಮದಃ**
**ಬ್ರಹ್ಮವರ್ಚ್ಚಸಕಾಮಸ್ಯ ಕುಶಗ್ರಂಥಿಃ ಪ್ರಶಸ್ಯತೇ**
**ರಾಜ್ಯಕಾಮಸ್ಯ ಪದ್ಮಾಕ್ಷೈಃ ಜಪ್ತುಃ ಸಿದ್ಧ್ಯತಿ ಚ ಧ್ರುವಮ್**
**ಕ್ಷಾಳಿತಾನ್ ಪಂಚಭಿರ್ಗ್ಗವ್ಯೈಃ ಪಂಚವೇದಾಂತವಿದ್ಯಯಾ**
**ಪೃಷ್ಠೇನ ಪೃಷ್ಠಭಾಗೇನ ಮುಖಭಾಗೇ ಮುಖೇ ತತಃ**
**ಪರಸ್ಪರೇಣ ಸನ್ನದ್ಧಾ ಮಣಯಃ ಸದೃಶಾಃ ಶುಭಾಃ**



**ತ್ರಿಂಶದಕ್ಷೈಃ ಕೃತಾ ಮಾಲಾ ಧನದಾ ಜಪಕರ್ಮಣಿ**

**ಅಷ್ಟಾವಿಂಶತಿಸಂಖ್ಯಾಭಿಃ ಅಕ್ಷೈಃ ಪುಷ್ಟಿಪ್ರದಾ ಭವೇತ್**

**ಪಂಚವಿಂಶತಿಸಂಖ್ಯಾಕೈಃ ಕೃತಾ ಮುಕ್ತಿಂ ಪ್ರಯಚ್ಛತಿ**

**ಪಂಚಾಶದ್ಭಿಃ ಕಾಮಕರ್ಮಸಿದ್ಧಿಃ ಸ್ಯಾಚ್ಚತುರುತ್ತರೈಃ**

**ಅಷ್ಟೋತ್ತರಶತೈಃ ಸರ್ವಸಿದ್ಧಿರಕ್ಷೈಃ ಕೃತಸ್ರಜಾ**

**ಮಧ್ಯಮಾನಾಮಿಕಾಂಗುಷ್ಠೈಃ ಗೃಹೀತ್ವಾ ಜಪಮಾಚರೇತ್**

**ಅಂಗುಷ್ಠತರ್ಜನೀಭ್ಯಾಂ ತು ಮಾಲಾಕರ್ಷಸ್ತು ಮಧ್ಯಮಃ**

**ಕನಿಷ್ಠಾಂಗುಷ್ಠಯೋಗೇನ ಕನಿಷ್ಠಾ ಸಿದ್ಧಿರೀರಿತಾ**

**ಅಗ್ನಿಪುರಾಣ**ದಲ್ಲಿ ಜಪದ ವೈವಿಧ್ಯಕ್ಕೆ ಕ್ರಮದ ವೈವಿಧ್ಯವನ್ನೂ ಹೇಳಿದ್ದಾರೆ –

**ಆಪ್ಯಾಯನೇ ಶಂಖಸೂತ್ರಂ ಮೌಕ್ತಿಕಂ ಪುತ್ರವರ್ಧನಮ್**

**ಸ್ಫಾಟಿಕಂ ಭೂತಿದಂ ಕೌಶಂ ಮುಕ್ತಿದಂ ರುದ್ರನೇತ್ರಜಮ್**

**ಧಾತ್ರೀಫಲಪ್ರಮಾಣೇನ ರುದ್ರಾಕ್ಷಂ ಚೋತ್ತಮಂ ತತಃ**

**ಸಮೇರುಂ ಮೇರುಹೀನಂ ವಾ ಸೂತ್ರಂ ಜಪ್ಯಂ ತು ಮಾನಸಮ್**

**ಅನಾಮಾಂಗುಷ್ಠಮಾಕ್ರಮ್ಯ ಜಪಂ ಭಾಷ್ಯಂ ತು ಕಾರಯೇತ್**

**ತರ್ಜನ್ಯಂಗುಷ್ಠಮಾಕ್ರಮ್ಯ ನ ಮೇರುಂ ಲಂಘಯೇಜ್ಜಪೇ**

**ಪ್ರಮಾದಾತ್ ಪತಿತೇ ಸೂತ್ರೇ ಜಪ್ತವ್ಯಂ ತು ಶತದ್ವಯಮ್**

ಅಕ್ಷಮಾಲೆ ಧರಿಸಿರುವ ದೇವನನ್ನು ನೆನೆದು ಗುರು ಹೋಮವನ್ನು ನಡೆಸಿ ಸಮಿಚ್ಚರ್ವಾಜ್ಯಗಳಿಂದ ದೇವನನ್ನು ಸಂತೋಷಗೊಳಿಸಿ ಅಕ್ಷಮಾಲೆಯನ್ನು ಯಜಮಾನನಿಗೆ ಪ್ರಣವಪುರಸ್ಸರವಾಗಿ ನೀಡಬೇಕೆಂದೂ ಸಂಹಿತೆ ಅಕ್ಷಮಾಲಾ ಗ್ರಹಣವಿಧಾನವನ್ನೆಲ್ಲ ವಿಸ್ತಾರವಾಗಿ ಹೇಳಿದೆ. **ಮಂತ್ರದೇವಪ್ರಕಾಶಿಕೆ**ಯಲ್ಲಿ ಮತ್ತು **ತಂತ್ರಚಿಂತಾಮಣಿ**ಯಲ್ಲಿ ಮಾಲಾಸಂಸ್ಕಾರವಿಧಿ ತಿಳಿಸಲಾಗಿದೆ.

**ಮಾ** ಎಂದರೆ ನನ್ನನ್ನು ಎಂದು ಅರ್ಥ. ಲಾ ಎಂದರೆ ನೀಡುವುದೆಂದು ಅರ್ಥ. ಹೀಗೆ ನನ್ನನ್ನು ಹರಿಭಕ್ತರಿಗೆಲ್ಲಾ ಸಮರ್ಪಿಸುವುದರಿಂದ ಮಾಲೆ ಎನಿಸಿದೆ ಎನ್ನುವುದಾಗಿ **ಸ್ಕಾಂದಪುರಾಣ**ವು ನಿರ್ವಚನವನ್ನು ನೀಡಿದೆ. ಅಲ್ಲಿ ಗಾಯತ್ರೀಮಂತ್ರದಿಂದ ಅಭಿಮಂತ್ರಿಸಿ ಪಂಚಗವ್ಯದಿಂದ ಜಪಸರವನ್ನು ಶುದ್ಧಿಗೊಳಿಸುವುದನ್ನು ಹೇಳಿದ್ದಾರೆ –



दानाल्लब्धातुरद्दिष्टो लासि मां हरिवल्लभे
भक्तेभ्यश्च समस्तेभ्यः तेन माला निगद्यते
क्षालितां पञ्चगव्येन मूलमन्त्रेण मन्त्रिताम्
गायत्र्या चाष्टकृत्वा च मन्त्रितां धूपधूपिताम्

ಜನಿವಾರದಿಂದಲೆ ಲೆಕ್ಕಮಾಡುತ್ತ ಹೋಮ ಜಪ ಮಾಡುವುದು ತಪ್ಪು –

ಸಂಖ್ಯಾನೇ ಯಜ್ಞಸೂತ್ರೇಣ ಜಪಹೋಮಾದಿ ನಿಷ್ಫಲಮ್

ತಂತ್ರಗಳು ಅಕ್ಷಮಾಲೆಯ ಮಂತ್ರ, ಪ್ರಯೋಗ ವೈಶಿಷ್ಟ್ಯಗಳನ್ನೆಲ್ಲ ಕಲೆಹಾಕಿವೆ –

ಅಷ್ಟೋತ್ತರಶತಾ ಮಾಲಾ ಉತ್ತಮಾ ಪರಿಕೀರ್ತಿತಾ
ಚತುಃಪಂಚಾಶಿಕಾ ವತ್ಸ ಮಧ್ಯಮಾ ಸಾ ಪ್ರಕೀರ್ತಿತಾ
ಅಧಮಾ ಪ್ರೋಚ್ಯತೇ ನಿತ್ಯಂ ಸಪ್ತವಿಂಶತಿಸಂಖ್ಯಯಾ

ಓಂ ಮಾಂ ಮಾಲೇ ಮಹಾಮಾಯೇ ಸರ್ವಶಕ್ತಿಸ್ವರೂಪಿಣಿ
ಚತುರ್ವರ್ಗಸ್ತ್ವಯಿ ನ್ಯಸ್ತಃ ತಸ್ಮಾನ್ಮೇ ಸಿದ್ಧಿದಾ ಭವ

ನ ಧಾರಯೇತ್ಕರೇ ಮೂರ್ಧ್ನಿ ಕಂಠೇ ವಾ ಜಪಮಾಲಿಕಾಮ್
ಜಪಕಾಲೇ ಜಪಂ ಕೃತ್ವಾ ಸದಾ ಶುದ್ಧಸ್ಥಳೇ ಕ್ಷಿಪೇತ್

ಕಲಿಃ ಖಟಖಟಾಶಬ್ದೇ ದೋಲಮಾನೇ ಚಲನ್ಮತಿಃ
ಚಲಿತೇ ಚೈವ ವಿದ್ವೇಷಃ ಸ್ಫುಟಿತೇ ವ್ಯಾಧಿಸಂಭವಃ
ಹಸ್ತಚ್ಯುತೇ ಮಹಾವಿಘ್ನಃ ಸೂತ್ರಚ್ಛೇದೇ ವಿನಶ್ಯತಿ

ನಾಕ್ಷತೈರ್ನ ಚ ಪರ್ವೈರ್ವಾ ನ ಧಾನ್ಯೈರ್ನ ಚ ಪುಷ್ಪಕೈಃ
ನ ಮೃಣ್ಮಯೈರ್ಫಲೈರ್ವಾಪಿ ಜಪಸಂಖ್ಯಾಂ ತು ಕಾರಯೇತ್

ಯಾವುದಲ್ಲಾದರೂ ಲೆಕ್ಕಮಾಡಿಯೇ ಜಪಿಸಬೇಕೆಂದು ಪರಾಶರಸ್ಮೃತಿಯ ಮಾತು

ಅಭಾವೇ ತ್ವಕ್ಷಮಾಲಾಯಾಃ ಕುಶಗ್ರಂಥ್ಯಾಽಥ ಪಾಣಿನಾ
ಯಥಾಕಥಂಚಿದ್ಗಣಯೇತ್ ಸಸಂಖ್ಯಂ ತದ್ಭವೇದ್ಯಥಾ

ಅಶ್ವತ್ಥದ ಏಳು ಎಲೆಯ ಮೇಲೆ ಮಾಲೆಯನ್ನು ಇಡಬೇಕೆಂಬ ವಿಶೇಷಾಂಶಗಳೊಂದಿಗೆ ಬ್ರಹ್ಮವೈವರ್ತಪುರಾಣದ ಮಾತು –

ಶ್ವೇತಪಂಕಜಬೀಜಾನಾಂ ಸ್ಫಾಟಿಕಾನಾಂ ಚ ಸಂಸ್ಕೃತಾಮ್
ಕೃತ್ವಾ ವಾ ಮಾಲಿಕಾಂ ರಾಜನ್ ಜಪೇ ತೀರ್ಥೇ ಸುರಾಲಯೇ



**ಸಂಸ್ಥಾಪ್ಯ ಮಾಲಾಮಶ್ವತ್ಥಪತ್ರಸಪ್ತಸು ಸಮ್ಮತಃ**

**ಕೃತ್ವಾ ಗೋರೋಚನಾಕ್ತಾಂ ಚ ಗಾಯತ್ರ್ಯಾ ಸ್ನಾಪಯೇತ್ಸುಧೀಃ**

**ಗಾಯತ್ರೀಶತಕಂ ತಸ್ಯಾಂ ಜಪೇಚ್ಚ ವಿಧಿಪೂರ್ವಕಮ್**

**ಅಥವಾ ಪಂಚಗವ್ಯೇನ ಸ್ನಾತಾ ಮಾಲಾ ಚ ಸಂಸ್ಕೃತಾ**

**ಅಥ ಗಂಗೋದಕೇನೈವ ಸ್ನಾತಾ ವಾತಿಸುಸಂಸ್ಕೃತಾ**

ಕಡೆಯ ಪಕ್ಷವಾಗಿ ಬೆರಳಿನಿಂದ ಜಪ ಲೆಕ್ಕ ಮಾಡುವುದನ್ನು **ಶಿವತತ್ತ್ವ ರತ್ನಾಕರ**ದಲ್ಲಿ ತಿಳಿಸಲಾಗಿದೆ –

**ಅಲಾಭೇ ಜಪಮಾಲಾಯಾಃ ಕರಶಾಖಾಸು ಪರ್ವಭಿಃ**

**ಅಥವಾ ಕರಶಾಖಾಭಿಃ ಜಪ್ತವ್ಯೋ ಜಾಪಕೈರ್ಜ್ಜಪಃ**

ಹೆಬ್ಬೆರಳಿನಿಂದ ಮಣಿಗಳನ್ನೆಳೆದು ಜಪಿಸುವುದನ್ನು ಅಲ್ಲಿ ತಿಳಿಸಲಾಗಿದೆ –

**ಮಧ್ಯಮಾನಾಮಿಕಾಂಗುಷ್ಠೈಃ ಅಕ್ಷಮಾಲಾಮಣಿಂ ಸ್ಪೃಶೇತ್**

**ಮಧ್ಯಮಾಯಾಂ ನ್ಯಸ್ತಮಾಲಾಂ ಜ್ಯೇಷ್ಠೇನಾವರ್ತ್ತಯೇತ್ಕ್ರಮಾತ್**

**ಉಡ್ಡೀಶತಂತ್ರ**ದಲ್ಲಿ ಜಪಮಾಲೆಯಲ್ಲಿ ಸ್ಫಟಿಕಮಣಿ ಸಂಖ್ಯೆಯಲ್ಲಿನ ಫಲಭೇದಗಳನ್ನು ತಿಳಿಸಲಾಗಿದೆ. 25, 27, 30 ಈ ಸಂಖ್ಯೆಗಳಿಗೂ ಇಲ್ಲಿ ಸ್ಥಾನವಿದೆ. **ಸ್ಫಟಿಕಮಾಲಯಾ** ಎಂಬ ಪದದ ಬದಲಿಗೆ **ಏವ ಮಹೇಶ್ವರಿ** ಎಂಬ ಪಾಠದಲ್ಲಿ **ಯೋಗಿನೀತಂತ್ರ**ವು ಎಲ್ಲ ಜಾತಿಯ ಮಣಿಗಳಿಗೂ ಈ ಫಲವನ್ನೇ ಸಾರಿದೆ. ಇದು ಶಿವನ ಮಾತು – **ಪಂಚವಿಂಶತಿಭಿರ್ಮೋಕ್ಷಂ ಪುಷ್ಟೌ ಸ್ಯಾತ್ಸಪ್ತವಿಂಶತಿಃ**

**ತ್ರಿಂಶದ್ಭಿರ್ಧನಸಿದ್ಧಿಸ್ತು ಪಂಚಾಶನ್ಮಂತ್ರಸಿದ್ಧಯೇ**

**ಅಷ್ಟೋತ್ತರಶತೈಃ ಸರ್ವಸಿದ್ಧಿಃ ಸ್ಫಟಿಕಮಾಲಯಾ**

**ಭಾರದ್ವಾಜಸ್ಮೃತಿ**ಯಲ್ಲಿ ಅಕ್ಷಮಾಲಾಜಪದ ಬಗ್ಗೆ ಅನೇಕ ಸಂಗತಿಗಳಿವೆ –

**ಅಷ್ಟೋತ್ತರಶತಂ ಮಾಲಾ ಮಣಿಭಿರ್ಯಾ ವಿನಿರ್ಮ್ಮಿತಾ**

**ಸರ್ವಾಭೀಷ್ಟೈಕಫಲದಾ ಸದಾ ಜಪಕೃತಾಮಲಮ್**

**ಮಣಿಭಿರ್ಮೋಕ್ಷಮಾಲಾ ಚ ಸಪ್ತವಿಂಶತಿಸಂಖ್ಯಕೈಃ**

**ಜಪೋ ಮೋಕ್ಷಪ್ರದೋಽಂಗುಷ್ಠೋ ಮಧ್ಯಾಽಽಯುಃಪುಷ್ಟಿವೃದ್ಧಿದಾ**

**ಸಮಸ್ತಾಭೀಷ್ಟಫಲದಾಽನಾಮಿಕಾ ಮರಣಾದಿಷು**

**ಕ್ಷುದ್ರಕರ್ಮ್ಮಸು ಸರ್ವೇಷು ತರ್ಜ್ಜನೀ ತತ್ಫಲಪ್ರದಾ**



ನ್ಯಾಯಾಗತಾ ಯೇ ಮಣಯಃ ತೇ ಶುಭಾ ಜಪಕರ್ಮ್ಮಣಿ

ವಿಪ್ರಭೂಪತಿವಿಟ್‌ಶೂದ್ರಾಃ ರುದ್ರಾಕ್ಷಾಃ ಸ್ಮೃಶ್ಚತುರ್ವಿಧಾಃ

ಸಿತರಕ್ತಸುವರ್ಣ್ಣಾಭಕೃಷ್ಣಾಶ್ಚೇತಿ ಯಥಾಕ್ರಮಮ್

ನಿರ್ಮ್ಮಲಾ ದೋಷರಹಿತಾ ಏತೇ ಸನ್ಮಣಯಃ ಸ್ಮೃತಾಃ

ಬಿಂದ್ವಾವರ್ತ್ತಂ ತುಷಂ ತ್ರಾಸರೇಖಾಕಾಂಚನಕೀಲಕಾಃ

ಸಪ್ತೈತೇ ಕಥಿತಾ ದೋಷಾಃ ರತ್ನಶಾಸ್ತ್ರವಿಶಾರದೈಃ

ಗ್ರಂಥಿಂ ಪೃಥಕ್‌ಪೃಥಕ್ ಕುರ್ವನ್ ಮಣೇನಾಮಮಂತರೇ ಬುಧಃ

ಸ್ಪೃಶನ್ ಜಪೇಚ್ಚ ಪ್ರಣವಂ ಅಷ್ಟೋತ್ತರಶತಂ ಜಪೇತ್

ತತಸ್ತದೈವ ಗಾಯತ್ರೀಂ ಅಷ್ಟೋತ್ತರಶತಂ ಜಪೇತ್

ಗಾಯತ್ರ್ಯಾ ಜುಹುಯಾದ್ಧೀಮಾನ್ ತಾರವ್ಯಾಹೃತಿಪೂರ್ವಯಾ

ಅಲಾಭೇಽಷ್ಟಾವಿಂಶತಿರ್ವಾ ದ್ರವ್ಯಾಣಾಂ ಜುಹುಯಾತ್ತತಃ

ಗುರುಹಸ್ತೇನ ಲಬ್ಧೇನ ತಯಾ ಮಾಲಿಕಯಾ ಜಪೇತ್

ಪ್ರಣವಂ ವ್ಯಾಹೃತೀಃ ಸಪ್ತ ಗಾಯತ್ರೀಂ ವೈದಿಕಾನ್ಮನೂನ್

ವಿನಾ ಅನ್ಯಾನ್ ಜಪೇನ್ಮಂತ್ರಾನ್ ಅನಯಾ ಜಪಮಾಲಯಾ

ಕರೇ ಕಂಠೇಽಥವಾ ಸ್ಕಂಧೇ ಧಾರಯೇನ್ನ ಕದಾಚನ

ವಾಮೇನ ನ ಸ್ಪೃಶೇನ್ಮಾಲಾಂ ಕರೇಣ ಬ್ರಾಹ್ಮಣಃ ಕ್ವಚಿತ್

ದೋಷದುಷ್ಟಾಕ್ಷಮಾಲಾಂ ತಾಂ ಮಹಾನದ್ಯಾಂ ಹ್ರದೇಽಥವಾ

ಪುಣ್ಯತೀರ್ಥೇಽಥವಾ ವಿಪ್ರೋ ಮಂತ್ರೇಣೈವ ವಿನಿಕ್ಷಿಪೇತ್

ಅಕ್ಷಮಾಲೆಯಲ್ಲಿ ಜಪಿಸಿದ್ದರ ಫಲವನ್ನು ಬಣ್ಣಿಸುತ್ತ ಪಾದ್ಮವು ತುಳಸೀ ಮಣಿಯಿಂದ ರಚಿತವಾದ ಅಕ್ಷಮಾಲೆಯಲ್ಲಿ ಜಪಿಸಿದರೆ ಅನಂತಫಲ ಎಂದಿದೆ-

ಅಂಗುಲೀಜಪಸಂಖ್ಯಾನಂ ಏಕಮೇಕಂ ವರಾನನೇ

ದಶಕಂ ಪರ್ವಣಿ ಪ್ರೋಕ್ತಂ ಪುತ್ರಜೀವಫಲೈರ್ದ್ದಶ

ಶತಂ ವೈ ಶಂಖಮಣಿಭಿಃ ಪ್ರವಾಳೈಶ್ಚ ಸಹಸ್ರಕಮ್

ಮೌಕ್ತಿಕೈಃ ಶತಸಾಹಸ್ರಂ ಸೌವರ್ಣ್ಣೈರ್ಲ್ಲಕ್ಷಮೇವಚ

ಕುಶಗ್ರಂಥ್ಯಾ ಕೋಟಿಗುಣಂ ತುಳಸ್ಯಾನಂತಕಂ ಫಲಮ್

ತುಳಸೀಮಣಿನಾ ಯೇನ ಗಣಿತಂ ಚಾಕ್ಷಯಂ ಫಲಮ್



# ನಾರಾಯಣಃ ಸ್ಮೃತಃ

1. ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ
ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ (ಅಗ್ನಿಪುರಾಣ)

2. ದೇಹೋಽಯಂ ಮೇ ಸದಾನಂದೋ ನಾಯಂ ಪ್ರಕೃತಿನಿರ್ಮಿತಃ
ಪರಿಪೂರ್ಣ್ಣಶ್ಚ ಸರ್ವತ್ರ ತೇನ ನಾರಾಯಣೋಽಸ್ಮ್ಯಹಮ್ (ಬ್ರಹ್ಮವೈವರ್ತ)

3. ನಾರಾ ಇತ್ಯಾತ್ಮನಾಂ ಸಂಘಾಃ ತೇಷಾಂ ಗತಿರಸೌ ಪರಾ
ಭವಂತಿ ತೇ ಚಾಯತನಂ ತೇನ ನಾರಾಯಣಃ ಸ್ಮೃತಃ (ಪದ್ಮಪುರಾಣ)

4. ಕಲ್ಪಾಂತೇ ಚ ಜಗತ್ ಕೃತ್ಸ್ನಂ ಗ್ರಸಿತ್ವಾ ಯೇನ ಧಾರ್ಯತೇ
ಪುನಃ ಸಂಸೃಜ್ಯತೇ ಯೇನ ಸ ವೈ ನಾರಾಯಣಃ ಸ್ಮೃತಃ (ಪದ್ಮಪುರಾಣ)

5. ಚರಾಚರಂ ಜಗತ್ ಕೃತ್ಸ್ನಂ ನಾರಮಿತ್ಯಭಿಧೀಯತೇ
ತಸ್ಯಾಪ್ಯಾಸ ಗತಿರ್ಯೇನ ತೇನ ನಾರಾಯಣಃ ಸ್ಮೃತಃ (ಪದ್ಮಪುರಾಣ)

6. ಯೋ ಹಿ ನಿತ್ಯಪದೇ ಲೋಕೇ ನಿತ್ಯಮುಕ್ತೈಕಭೋಗವಾನ್
ಈಶಃ ಸರ್ವಸ್ಯ ಜಗತಃ ಸ ವೈ ನಾರಾಯಣಃ ಸ್ಮೃತಃ (ಪದ್ಮಪುರಾಣ)

7. ನಾರೋ ಬ್ರಹ್ಮೇಂದ್ರರುದ್ರೇಷು ನಿರ್ದ್ದೋಷೇ ಜಲಧೌ ಜಲೇ
ನಾರಾಣಾಮಯನಂ ಯಸ್ಮಾತ್ ತಸ್ಮಾನ್ನಾರಾಯಣಃ ಸ್ಮೃತಃ (ಬ್ರಹ್ಮವೈವರ್ತ)

8. ನಾರಾಯೋ ದೈತ್ಯ ಇತ್ಯುಕ್ತಃ ಣಾತಿ ಹಂತಿ ತತಃ ಸ್ಮೃತಃ

9. ಬ್ರಹ್ಮಾಂಡಾಧಾರಕತ್ವಾದ್ಧಿ ನಾರಾಯಣ ಇತೀರಿತಃ

10. ಪರಿಪೂರ್ಣ್ಣಗುಣೈರ್ಯುಕ್ತೋ ನಾರಾಯಣ ಇತಿ ಸ್ಮೃತಃ

11. ಯಃ ಪರಃ ಪ್ರಕೃತೇಃ ಪ್ರೋಕ್ತಃ ಪುರುಷಃ ಪಂಚವಿಂಶಕಃ
ಸ ಏವ ಸರ್ವಭೂತಾತ್ಮಾ ನರ ಇತ್ಯಭಿಧೀಯತೇ
ನರಾಜ್ಜಾತಾನಿ ತತ್ವಾನಿ ನಾರಾಣೀತಿ ತತೋ ವಿದುಃ
ತಾನ್ಯೇವ ಚಾಯನಂ ತಸ್ಯ ತೇನ ನಾರಾಯಣಃ ಸ್ಮೃತಃ (ಮಹಾಭಾರತ)

12. ಅನ್ಯತ್ವಾತ್ಸರ್ವಜೀವೇಭ್ಯೋ ಜಡೇಭ್ಯಶ್ಚ ಸದೈವ ಹಿ
ಸರ್ವದೋಷೋಜ್ಝಿತತ್ವಾಚ್ಚ ಸರ್ವತೋಽಪ್ಯಧಿಕತ್ವತಃ



ನಿರಾಸನಾಚ್ಚ ದೋಷಾಣಾಂ ಸ್ವಭಕ್ತೇಭ್ಯಃ ಸಮಂತತಃ

ಸರ್ವದೋಷವಿರುದ್ಧೋರುಗುಣಪೂರ್ಣ್ಣಸ್ವರೂಪತಃ

ನಾರಾಯಣ ಇತಿ ಪ್ರೋಕ್ತೋ ಹ್ಯಕಾರಾರ್ಥೋಽಯಮೇವಹಿ (ಐತರೇಯಭಾಷ್ಯ)

13. ದೋಷಾರಚ್ಛಿದ್ರಶಬ್ದಾನಾಂ ಪರ್ಯಾಯತ್ವಂ ಯತಸ್ತತಃ

ಗುಣಾ ನಾರಾ ಇತಿ ಜ್ಞೇಯಾಃ ತದ್ವಾನ್ನಾರಾಯಣಃ ಸ್ಮೃತಃ (ಅನುವ್ಯಾಖ್ಯಾನ)

14. ನರಾಣಾಂ ಸ್ವಾಪನಂ ಬ್ರಹ್ಮ ತಸ್ಮಾನ್ನಾರಾಯಣಃ ಸ್ಮೃತಃ (ಬ್ರಹ್ಮಾಂಡ)

15. ಆಪೋ ನಾರಾಸ್ತತ್ತನವ ಇತ್ಯರ್ಥಾ ನನು ಶುಶ್ರುಮ

ಆಪೂರ್ಯಮಾಣಾಸ್ತತ್ರಾಸ್ತೇ ತೇನ ನಾರಾಯಣಃ ಸ್ಮೃತಃ (ಬ್ರಹ್ಮಾಂಡ)

16. ನರಾಣಾಮಯನೋ ಯಸ್ಮಾತ್ ತೇನ ನಾರಾಯಣಃ ಸ್ಮೃತಃ

(ಕೂರ್ಮಪುರಾಣ)

17. ಆಪೋ ನಾರಾ ವೈ ತನವ ಇತ್ಯೇವಂ ನಾಮ ಶುಶ್ರುಮಃ

ತಾಸು ಶೇತೇ ಸ ಯಸ್ಮಾಚ್ಚ ತೇನ ನಾರಾಯಣಃ ಸ್ಮೃತಃ (ವಾಮನ)

18. ನಾರೇತ್ಯುಕ್ತಾ ಹಿ ಶ್ರೀದೇವೀ ಪ್ರಾಣಸ್ಯ ಜನನೀ ಯತಃ

ತವಾಶ್ರಯತ್ವಾದ್ಭಗವಾನ್ ನಾರಾಯಣ ಇತಿ ಸ್ಮೃತಃ (ನಾರದೀಯ)

19. ನರೋಽಹಂ ಮಮ ಪತ್ನೀತ್ವಾತ್ ನಾರಾಸಿ ತ್ವಂ ವರಾನನೇ

ತವಾಶ್ರಯತ್ವತೋ ಮೇ ಸ್ಯಾತ್ ನಾರಾಯಣ ಇತಿ ಪ್ರಥಾ (ವರಾಹಪುರಾಣ)

20. ಆತ್ಮನೋಽಯನಮನ್ವಿಚ್ಛನ್ ಅಪೋಽಸ್ರಾಕ್ಷೀಚ್ಛುಚಿಃ ಶುಚೀಃ

ತಾಸ್ವವಾಸೀತ್ಸ್ವಸೃಷ್ವಾಸು ಸಹಸ್ರಪರಿವತ್ಸರಾನ್

ತೇನ ನಾರಾಯಣೋ ನಾಮ ಯದಾಪಃ ಪುರುಷೋದ್ಭವಾಃ (ಭಾಗವತ)

21. ಆಪೋ ನಾರಾ ಇತಿ ಪ್ರೋಕ್ತಾಃ ಮುನಿಭಿಸ್ತತ್ವದರ್ಶಿಭಿಃ

ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ (ಮಾರ್ಕಂಡೇಯ)

22. ಯಃ ಶೇತೇ ಪ್ರಳಯೇ ವಿಷ್ಣುಃ ಶೂನ್ಯನಾಮಾ ಮಹಾಕೃತಿಃ

ಸ ತು ನಾರಾಯಣೋ ನಾಮ ನರಾಣಾಮಯನತ್ವತಃ (ವ್ಯೋಮಸಂಹಿತಾ)

23. ನಮ್ಯತೇ ದೇವ ಏವೈಕಃ ತೇಷಾಮೇಕಂ ಪರಾಯಣಮ್



# ನಾರಾಯಣಃ ಸ್ಮೃತಃ

1. ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ
ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ (ಅಗ್ನಿಪುರಾಣ)

2. ದೇಹೋಽಯಂ ಮೇ ಸದಾನಂದೋ ನಾಯಂ ಪ್ರಕೃತಿನಿರ್ಮಿತಃ
ಪರಿಪೂರ್ಣ್ಣಶ್ಚ ಸರ್ವತ್ರ ತೇನ ನಾರಾಯಣೋಽಸ್ಮ್ಯಹಮ್ (ಬ್ರಹ್ಮವೈವರ್ತ)

3. ನಾರಾ ಇತ್ಯಾತ್ಮನಾಂ ಸಂಘಾಃ ತೇಷಾಂ ಗತಿರಸೌ ಪರಾ
ಭವಂತಿ ತೇ ಚಾಯತನಂ ತೇನ ನಾರಾಯಣಃ ಸ್ಮೃತಃ (ಪದ್ಮಪುರಾಣ)

4. ಕಲ್ಪಾಂತೇ ಚ ಜಗತ್ ಕೃತ್ಸ್ನಂ ಗ್ರಸಿತ್ವಾ ಯೇನ ಧಾರ್ಯತೇ
ಪುನಃ ಸಂಸೃಜ್ಯತೇ ಯೇನ ಸ ವೈ ನಾರಾಯಣಃ ಸ್ಮೃತಃ (ಪದ್ಮಪುರಾಣ)

5. ಚರಾಚರಂ ಜಗತ್ ಕೃತ್ಸ್ನಂ ನಾರಮಿತ್ಯಭಿಧೀಯತೇ
ತಸ್ಯಾಪ್ಯಾಸ ಗತಿರ್ಯೇನ ತೇನ ನಾರಾಯಣಃ ಸ್ಮೃತಃ (ಪದ್ಮಪುರಾಣ)

6. ಯೋ ಹಿ ನಿತ್ಯಪದೇ ಲೋಕೇ ನಿತ್ಯಮುಕ್ತೈಕಭೋಗವಾನ್
ಈಶಃ ಸರ್ವಸ್ಯ ಜಗತಃ ಸ ವೈ ನಾರಾಯಣಃ ಸ್ಮೃತಃ (ಪದ್ಮಪುರಾಣ)

7. ನಾರೋ ಬ್ರಹ್ಮೇಂದ್ರರುದ್ರೇಷು ನಿರ್ದ್ದೋಷೇ ಜಲಧೌ ಜಲೇ
ನಾರಾಣಾಮಯನಂ ಯಸ್ಮಾತ್ ತಸ್ಮಾನ್ನಾರಾಯಣಃ ಸ್ಮೃತಃ (ಬ್ರಹ್ಮವೈವರ್ತ)

8. ನಾರಾಯೋ ದೈತ್ಯ ಇತ್ಯುಕ್ತಃ ಣಾತಿ ಹಂತಿ ತತಃ ಸ್ಮೃತಃ

9. ಬ್ರಹ್ಮಾಂಡಾಧಾರಕತ್ವಾದ್ಧಿ ನಾರಾಯಣ ಇತೀರಿತಃ

10. ಪರಿಪೂರ್ಣ್ಣಗುಣೈರ್ಯುಕ್ತೋ ನಾರಾಯಣ ಇತಿ ಸ್ಮೃತಃ

11. ಯಃ ಪರಃ ಪ್ರಕೃತೇಃ ಪ್ರೋಕ್ತಃ ಪುರುಷಃ ಪಂಚವಿಂಶಕಃ
ಸ ಏವ ಸರ್ವಭೂತಾತ್ಮಾ ನರ ಇತ್ಯಭಿಧೀಯತೇ
ನರಾಜ್ಜಾತಾನಿ ತತ್ವಾನಿ ನಾರಾಣೀತಿ ತತೋ ವಿದುಃ
ತಾನ್ಯೇವ ಚಾಯನಂ ತಸ್ಯ ತೇನ ನಾರಾಯಣಃ ಸ್ಮೃತಃ (ಮಹಾಭಾರತ)

12. ಅನ್ಯತ್ವಾತ್ಸರ್ವಜೀವೇಭ್ಯೋ ಜಡೇಭ್ಯಶ್ಚ ಸದೈವ ಹಿ
ಸರ್ವದೋಷೋಜ್ಝಿತತ್ವಾಚ್ಚ ಸರ್ವತೋಽಪ್ಯಧಿಕತ್ವತಃ



ನಿರಾಸನಾಚ್ಚ ದೋಷಾಣಾಂ ಸ್ವಭಕ್ತೇಭ್ಯಃ ಸಮಂತತಃ

ಸರ್ವದೋಷವಿರುದ್ಧೋರುಗುಣಪೂರ್ಣ್ಣಸ್ವರೂಪತಃ

ನಾರಾಯಣ ಇತಿ ಪ್ರೋಕ್ತೋ ಹ್ಯಕಾರಾರ್ಥೋಽಯಮೇವಹಿ (ಐತರೇಯಭಾಷ್ಯ)

13. ದೋಷಾರಚ್ಛಿದ್ರಶಬ್ದಾನಾಂ ಪರ್ಯಾಯತ್ವಂ ಯತಸ್ತತಃ

ಗುಣಾ ನಾರಾ ಇತಿ ಜ್ಞೇಯಾಃ ತದ್ವಾನ್ನಾರಾಯಣಃ ಸ್ಮೃತಃ (ಅನುವ್ಯಾಖ್ಯಾನ)

14. ನರಾಣಾಂ ಸ್ವಾಪನಂ ಬ್ರಹ್ಮ ತಸ್ಮಾನ್ನಾರಾಯಣಃ ಸ್ಮೃತಃ (ಬ್ರಹ್ಮಾಂಡ)

15. ಆಪೋ ನಾರಾಸ್ತತನವ ಇತ್ಯರ್ಥಾ ನನು ಶುಶ್ರುಮ

ಆಪೂರ್ಯಮಾಣಾಸ್ತತ್ರಾಸ್ತೇ ತೇನ ನಾರಾಯಣಃ ಸ್ಮೃತಃ (ಬ್ರಹ್ಮಾಂಡ)

16. ನರಾಣಾಮಯನೋ ಯಸ್ಮಾತ್ ತೇನ ನಾರಾಯಣಃ ಸ್ಮೃತಃ

(ಕೂರ್ಮಪುರಾಣ)

17. ಆಪೋ ನಾರಾ ವೈ ತನವ ಇತ್ಯೇವಂ ನಾಮ ಶುಶ್ರುಮಃ

ತಾಸು ಶೇತೇ ಸ ಯಸ್ಮಾಚ್ಚ ತೇನ ನಾರಾಯಣಃ ಸ್ಮೃತಃ (ವಾಮನ)

18. ನಾರೇತ್ಯುಕ್ತಾ ಹಿ ಶ್ರೀದೇವೀ ಪ್ರಾಣಸ್ಯ ಜನನೀ ಯತಃ

ತವಾಶ್ರಯತ್ವಾದ್ಭಗವಾನ್ ನಾರಾಯಣ ಇತಿ ಸ್ಮೃತಃ (ನಾರದೀಯ)

19. ನರೋಽಹಂ ಮಮ ಪತ್ನೀತ್ವಾತ್ ನಾರಾಸಿ ತ್ವಂ ವರಾನನೇ

ತವಾಶ್ರಯತ್ವತೋ ಮೇ ಸ್ಯಾತ್ ನಾರಾಯಣ ಇತಿ ಪ್ರಥಾ (ವರಾಹಪುರಾಣ)

20. ಆತ್ಮನೋಽಯನಮನ್ವಿಚ್ಛನ್ ಅಪೋಽಸ್ರಾಕ್ಷೀಚ್ಛುಚಿಃ ಶುಚೀಃ

ತಾಸ್ವವಾಸೀತ್ಸ್ವಸೃಷ್ಟಾಸು ಸಹಸ್ರಪರಿವತ್ಸರಾನ್

ತೇನ ನಾರಾಯಣೋ ನಾಮ ಯದಾಪಃ ಪುರುಷೋದ್ಭವಾಃ (ಭಾಗವತ)

21. ಆಪೋ ನಾರಾ ಇತಿ ಪ್ರೋಕ್ತಾಃ ಮುನಿಭಿಸ್ತತ್ವದರ್ಶಿಭಿಃ

ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ (ಮಾರ್ಕಂಡೇಯ)

22. ಯಃ ಶೇತೇ ಪ್ರಳಯೇ ವಿಷ್ಣುಃ ಶೂನ್ಯನಾಮಾ ಮಹಾಕೃತಿಃ

ಸ ತು ನಾರಾಯಣೋ ನಾಮ ನರಣಾಮಯನತ್ವತಃ (ವ್ಯೋಮಸಂಹಿತಾ)

23. ನಮ್ಯತೇ ದೇವ ಏವೈಕಃ ತೇಷಾಮೇಕಂ ಪರಾಯಣಮ್



ನರೋ ದೇವಃ ಪರಃ ಸ್ರಷ್ಟಾ ಸರ್ಗಾದೌ ಪಾಥಸಾಮಥ

ತಸ್ಮಾನ್ನಾರಾಣಿ ಪಾಥಾಂಸಿ ತಾನ್ಯೇವಾಯನಮುಚ್ಯತೇ

ದೇವಸ್ಯ ಹೇತೋಶ್ಚಾಮುಷ್ಮಾತ್ ನಾರಾಯಣಸಮಾಹ್ವಯಃ (ಪಂಚರಾತ್ರ)

24. ನಾರಾವಾಯನಮಾವಾಸಃ ಪುರುಷಸ್ಯ ಮಧುದ್ವಿಷಃ

ಅಣ್ ಪ್ರತ್ಯಯಃ ಪ್ರಕೃತ್ಯರ್ಥೇ ತತೋ ವಾಸಸಮಾಹ್ವಯಃ (ಶ್ರೀಪ್ರಶ್ನಸಂಹಿತಾ)

25. ನರಾದುತ್ಪನ್ನತತ್ವಾನಾಂ ಸಂಗ್ರಹೇ ನಾರಸಂಜ್ಞಕೇ

ಅಯನಂ ತಸ್ಯ ಯದಭೂತ್ ತಸ್ಮಾನ್ನಾರಾಯಣಃ ಸ್ಮೃತಃ (ಸಾತ್ತ್ವತತಂತ್ರ)

26. ಆಪೋ ನಾರಾ ಇತಿ ಪ್ರೋಕ್ತಾ ಋಷಿಭಿಸ್ತತ್ವದರ್ಶಿಭಿಃ

ಅಯನಂ ತಸ್ಯ ತಾ ಆಪಃ ತೇನ ನಾರಾಯಣಃ ಸ್ಮೃತಃ

ಅರ ಇತ್ಯೇವ ಶೀಘ್ರಾರ್ಥೋ ನಿಪಾತಃ ಕವಿಭಿಃ ಸ್ಮೃತಃ

ಆಪ ಏವಾರ್ಣ್ಣವಾ ಭೂತ್ವಾ ನ ಶೀಘ್ರಾಸ್ತೇನ ತಾ ನರಾಃ (ಭವಿಷ್ಯಪುರಾಣ)

27. ಸರ್ವಂ ಹಿ ಚಿದಚಿದ್ವಸ್ತು ಶ್ರೂಯತೇ ದೃಶ್ಯತೇ ಕ್ವಚಿತ್

ಯೋಽಸೌ ವ್ಯಾಪ್ಯ ಸ್ಥಿತೋಽನಂತಃ ಸ ವೈ ನಾರಾಯಣಃ ಸ್ಮೃತಃ

(ನಾರಾಯಣಸಂಹಿತೆ)

28. ಪ್ರಭವಂತಿ ಯತೋ ಲೋಕಾ ಮಹಾಬ್ಧೌ ಪೃಥುಫೇನವತ್

ಪುನರ್ಯಸ್ಮಿನ್ ಪ್ರಲೀಯಂತೇ ತಸ್ಮಾನ್ನಾರಾಯಣಃ ಸ್ಮೃತಃ (ಪಾದ್ಮ)

29. ಸಾರೂಪ್ಯಮುಕ್ತಿವಚನೋ ನಾರೇತಿ ಚ ವಿದುರ್ಬುಧಾಃ

ಯೋ ದೇವೋಽಪ್ಯಯನಂ ತಸ್ಯ ಸ ಚ ನಾರಾಯಣಃ ಸ್ಮೃತಃ (ಬ್ರಹ್ಮವೈವರ್ತ)

30. ನಾರಾಶ್ಚ ಕೃತಪಾಪಾಶ್ಚಾಪ್ಯಯನಂ ಗಮನಂ ಸ್ಮೃತಮ್

ಯತೋ ಹಿ ಗಮನಂ ತೇಷಾಂ ಸೋಽಯಂ ನಾರಾಯಣಃ ಸ್ಮೃತಃ (ಬ್ರಹ್ಮವೈವರ್ತ)

31. ನಾರಂ ಚ ಮೋಕ್ಷಣಂ ಪುಣ್ಯಂ ಅಯನಂ ಜ್ಞಾನಮೀಪ್ಸಿತಮ್

ತಯೋರ್ಜ್ಞಾನಂ ಭವೇದ್ಯಸ್ಮಾತ್ ಸೋಽಯಂ ನಾರಾಯಣಃ ಪ್ರಭುಃ

(ಬ್ರಹ್ಮವೈವರ್ತ)

32. ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ



ತಾ ಯದಸ್ಯಾಯನಂ ಪೂರ್ವಂ ತೇನ ನಾರಾಯಣಃ ಸ್ಮೃತಃ (ಮನುಸ್ಮೃತಿ)

33. ಆಪೋ ಹಿ ನರಜನ್ಮತ್ವಾತ್ ನಾರಾಃ ಪ್ರೋಕ್ತಾಃ ಮನೀಷಿಭಿಃ

ನಾರಾಶ್ಚಾಸ್ಯಾಯನಂ ಯಸ್ಮಾತ್ ತೇನ ನಾರಾಯಣಃ ಸ್ಮೃತಃ (ಪದ್ಮಪುರಾಣ)

34. ಸೃಷ್ಟ್ವಾ ನಾರಾಸ್ತಾ ಅಥೋ ತತ್ರ ಚಾಹಂ

ಯೇನೈವ ಸ್ಯಾನ್ನಾಮ ನಾರಾಯಣೇತಿ (ವರಾಹಪುರಾಣ)

35. ಆಪೋ ನಾರಾಶ್ಚ ಸೂನವ ಇತ್ಯಪಾಂ ನಾಮ ಶುಶ್ರುಮಃ

ಆಪೂರ್ಯ ನಾಭಿರಯನಂ ಕೃತವಾನಾತ್ಮನೋ ಯತಃ

ಅಪ್ಸು ಶೇತೇ ಯತಸ್ತಸ್ಮಾತ್ ತತೋ ನಾರಾಯಣಃ ಸ್ಮೃತಃ (ಲಿಂಗಪುರಾಣ)

36. ಆಪೋ ನರಾಖ್ಯಾಸ್ತನವಃ ಇತ್ಯಪಾಂ ನಾಮ ಶುಶ್ರುಮ

ಆಪೂರ್ಯ ನಾಭಿಂ ತತ್ರಾಸ್ತೇ ತೇನ ನಾರಾಯಣಃ ಸ್ಮೃತಃ (ವಾಯುಪುರಾಣ)

37. ನಾರಾಸ್ತ್ವದಾದಯೋ ಜೀವಾಃ ತೇಷಾಮಯನಮಾಶ್ರಯಃ

ನಾರಾಯಣೋಽಸ್ಮ್ಯಹಂ ತೇನ ಸರ್ವಲೋಕೇಶ್ವರೇಶ್ವರಃ (ಋಷ್ಯಶೃಂಗಸಂಹಿತಾ)

38. ಆಪೋ ನರಸ್ಯ ಸೂನುತ್ವಾತ್ ನಾರಾ ಇತೀಹ ಕೀರ್ತ್ತಿತಾಃ

ವಿಷ್ಣೋಸ್ತಾಸ್ತ್ವಯನಂ ಪೂರ್ವಂ ತೇನ ನಾರಾಯಣಃ ಸ್ಮೃತಃ (ಬ್ರಹ್ಮಪುರಾಣಃ)

39. ನಾರಾ ಇತಿ ಸಮೂಹತ್ವೇ ಬಹುಲತ್ವಾಜ್ಜನಸ್ಯ ಚ

ತೇಷಾಮಯನಮಾವಾಸಃ ತೇನ ನಾರಾಯಣಃ ಸ್ಮೃತಃ (ವೃದ್ಧಹಾರೀತಸ್ಮೃತಿ)

40. ಪ್ರವಾಹರೂಪೇಣೈವೈಷಾಂ ನಾರತ್ವೇನೋಚ್ಯತೇ ಜಗತ್

ತೇಷಾಮಪಿ ನಿವಾಸತ್ವಾತ್ ನಾರಾಯಣ ಇತೀರಿತಃ (ವೃದ್ಧಹಾರೀತಸ್ಮೃತಿ)

41. ನರಾಣಾಂ ಸರ್ವಜಗತಾಂ ಅಯನಂ ಶರಣಂ ಹರಿಃ

ತಸ್ಮಾನ್ನಾರಾಯಣ ಇತಿ ಮುನಿಭಿಃ ಸಂಪ್ರಕೀರ್ತ್ಯತೇ (ವೃದ್ಧಹಾರೀತಸ್ಮೃತಿ)

42. ಆಪೋ ನಾರಾ ವೈ ತನವ ಇತ್ಯಪಾಂ ನಾಮ ಶುಶ್ರುಮ

ಅಪ್ಸು ಶೇತೇ ಚ ಯತ್ತಸ್ಮಾತ್ ತೇನ ನಾರಾಯಣಃ ಸ್ಮೃತಃ (ವಾಯುಪುರಾಣ)

43. ನಾರೋ ನರಾಣಾಂ ಸಂಘಾತಃ ತಸ್ಯಾಯಮಯನಂ ಗತಿಃ

ತೇನಾಸ್ಮಿ ಮುನಿಭಿರ್ನಿತ್ಯಂ ನಾರಾಯಣ ಇತೀರಿತಃ (ನಾರಾಯಣಸಂಹಿತೆ)



44. ನಾರಾಸ್ಥಿತಿ ಸ ವೈ ಪುಂಸಾಂ ಸಮೂಹಃ ಪರಿಕೀರ್ತಿತಃ

ಗತಿರಾಲಂಬನಂ ತೇಷಾಂ ತಸ್ಮಾನ್ನಾರಾಯಣಃ ಸ್ಮೃತಃ (ಪದ್ಮಪುರಾಣ)

45. ನರಾಜ್ಜಾತಾನಿ ತತ್ವಾನಿ ನಾರಾ ಇತಿ ಜಗುರ್ಬುಧಾಃ

ತಾನ್ಯೇವ ಚಾಯನಂ ತಸ್ಯ ತೇನ ನಾರಾಯಣಃ ಸ್ಮೃತಃ (ಪದ್ಮಪುರಾಣ)

46. ಯಸ್ಮಾತ್ಸರ್ವಂ ಸಮುದ್ಭೂತಂ ಜಗದ್ವಿಷ್ಣೋಃ ಸನಾತನಮ್

ತಸ್ಮಾತ್ಸರ್ವಮಯೋ ವಿಷ್ಣುಃ ನಾರಾಯಣ ಇತೀರಿತಃ (ಪದ್ಮಪುರಾಣ)

47. ಆಪೋ ನಾರಾ ಇತಿ ಪ್ರೋಕ್ತಾ ಯಸ್ಮಾತ್ತಾ ನರಸೂನವಃ

ಅಯನಂ ಪ್ರಥಮಂ ಚಾಸ್ಯ ತಸ್ಮಾದಪ್ಸು ಹರಿಂ ಸ್ಮರೇತ್ (ಸ್ಕಂದಪುರಾಣ)

48. ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ

ಅಯನಂ ತಸ್ಯ ತಚ್ಚ್ರೋಕ್ತಾ ತೇನ ನಾರಾಯಣಃ ಸ್ಮೃತಃ (ವಿಷ್ಣುಪುರಾಣ)

49. ನಾರಾ ಆಪಃ ಸಮಾಖ್ಯಾತಾಃ ತಾಸಾಮಯನಮಾದಿತಃ

ಯತಸ್ತ್ವಂ ಭೂತಭವ್ಯೇಶ ತನ್ನಾರಾಯಣಶಬ್ದಿತಃ (ಹರಿವಂಶ)

50. ಪ್ರಕೃತೇಃ ಪರ ಏವಾನ್ಯಃ ಸ ನರಃ ಪಂಚವಿಂಶಕಃ

ತಸ್ಯೇಮಾನಿ ಚ ಭೂತಾನಿ ನಾರಾಣೀತಿ ಪ್ರಚಕ್ಷತೇ

ತೇಷಾಮಪ್ಯಯನಂ ಯಸ್ಮಾತ್ ತಸ್ಮಾನ್ನಾರಾಯಣಃ ಸ್ಮೃತಃ (ಶ.ಕ)

51. ನರಾಣಾಮಯನಾಚ್ಚಾಪಿ ತತೋ ನಾರಾಯಣಃ ಸ್ಮೃತಃ (ಮಹಾಭಾರತ)

*ಬ್ರಹ್ಮಪುರಾಣದಲ್ಲಿ*

*ನಾರಾಯಣಪರಾ ವೇದಾಃ ನಾರಾಯಣಪರಾ ದ್ವಿಜಾಃ*
*ನಾರಾಯಣಪರಾ ಯಜ್ಞಾಃ ನಾರಾಯಣಪರಾ ಕ್ರಿಯಾಃ*
*ನಾರಾಯಣಪರಾ ಪೃಥ್ವೀ ನಾರಾಯಣಪರಂ ಜಲಮ್*
*ನಾರಾಯಣಪರೋ ವಹ್ನಿಃ ನಾರಾಯಣಪರಂ ನಭಃ*
*ನಾರಾಯಣಪರೋ ವಾಯುಃ ನಾರಾಯಣಪರಂ ಮನಃ*

*ಭಾಗವತಪುರಾಣದಲ್ಲಿ*

*ನಾರಾಯಣಪರಾ ವೇದಾಃ ದೇವಾ ನಾರಾಯಣಾಂಗಜಾಃ*
*ನಾರಾಯಣಪರಾ ಲೋಕಾಃ ನಾರಾಯಣಪರಾ ಮಖಾಃ*
*ನಾರಾಯಣಪರೋ ಯೋಗೋ ನಾರಾಯಣಪರಂ ತಪಃ*
*ನಾರಾಯಣಪರಂ ಜ್ಞಾನಂ ನಾರಾಯಣಪರಾ ಗತಿಃ*



# ಉಪಸ್ಥಾನ

ಮಹಾಭಾರತ ಸಂಧ್ಯಾಪ್ರಕರಣದಲ್ಲಿ ಈ ಮಂತ್ರಗಳನ್ನು ಹೇಳಲು ಹೇಳಿದೆ –

**ಉದುತ್ಯಂ ಚ ಜಪೇನ್ಮಂತ್ರಂ ಚಿತ್ರಂ ತಚ್ಚಕ್ಷುರಿತ್ಯಪಿ**

ಸ್ಕಾಂದಪುರಾಣದಲ್ಲಿ ಈ ಉಪಸ್ಥಾನ ಮಂತ್ರಗಳು ಸಿದ್ಧಿಪ್ರದಗಳೆಂದು ಸಾರಲಾಗಿದೆ –

**ಉದ್ವಯಂ ತಮುದುತ್ಯಂ ಚ ಚಿತ್ರಂ ದೇವೇತಿ ತತ್ಪರಮ್**

**ತಚ್ಚಕ್ಷುರಿತ್ಯುಪಸ್ಥಾನಮಂತ್ರಾಃ ಬ್ರಧ್ನಸ್ಯ ಸಿದ್ಧಿದಾಃ**

ಬೆಳಿಗ್ಗೆ ಮತ್ತು ಸಂಜೆ ಗಾಯತ್ರೀ ಹಾಗೂ ಅಷ್ಟಾಕ್ಷರಮಂತ್ರಜಪದ ಬಳಿಕ ತೈತ್ತಿರೀಯಸಂಹಿತೆಯ ಆ ಎರಡು ಮಂತ್ರಗಳನ್ನು ಉಪಸ್ಥಾನಕ್ಕೆ ಬಳಸುವಂತೆ **ಛಂದೋಗಪರಿಶಿಷ್ಟ**ದಲ್ಲಿ ಹೇಳಲಾಗಿದೆ –

**ಉಚ್ಚಿತ್ರಮಿತ್ಯೃಗ್ದ್ವಯೇನ ಚೋಪತಿಷ್ಠೇದನಂತರಮ್**

**ಸಂಧ್ಯಾದ್ವಯೇಽಪ್ಯುಪಸ್ಥಾನಂ ಏತದಾಹುರ್ಮನೀಷಿಣಃ**

ಆ ಎರಡು ಮಂತ್ರಗಳ ಉಪಯೋಗದಿಂದ ಹಗಲು ರಾತ್ರಿಗಳಲ್ಲಿ ಮಾಡಿದ ಪಾಪಗಳ ನಿವೃತ್ತಿಯನ್ನು **ಗರುಡಪುರಾಣ** ತಿಳಿಸಿದೆ –

**ಉದುತ್ಯಂ ಚಿತ್ರಮಿತ್ಯಾಭ್ಯಾಂ ಉಪತಿಷ್ಠೇದ್ದಿವಾಕರಮ್**

**ದಿವಾರಾತ್ರೌ ಚ ಯತ್ಪಾಪಂ ಸರ್ವಂ ನಶ್ಯತಿ ತತ್ಕ್ಷಣಾತ್**

ಅಗ್ನಿಪುರಾಣ ಸೂಚಿಸಿದಂತೆ ದಿಗುಪಸ್ಥಾನದ ಮಂತ್ರಗಳ ಋಷ್ಯಾದಿಗಳನ್ನು **ಕಾತ್ಯಾಯನರು** ಹೀಗೆ ಸಂಗ್ರಹಿಸಿರುತ್ತಾರೆ –

**ಉದುತ್ಯಂ ಜಾತವೇದೇತಿ ಋಷಿಃ ಪ್ರಸ್ಕಣ್ವ ಉಚ್ಯತೇ**

**ಛಂದೋ ಗಾಯತ್ರಮೇವಾಸ್ಯ ಸೂರ್ಯೋ ದೈವತಮೇವ ಚ**

**ಅಗ್ನಿಷ್ಟೋಮ ಉಪಸ್ಥಾನೇ ವಿನಿಯೋಗಃ ಪ್ರಕೀರ್ತಿತಃ**

**ಚಿತ್ರಂ ದೇವೇತಿ ಮಂತ್ರಸ್ಯ ಋಷಿಃ ಕೌತ್ಸ ಉದಾಹೃತಃ**



**ತ್ರಿಷ್ಟುಪ್ ಛಂದೋ ದೈವತಂ ಚ ಸೂರ್ಯಸ್ತು ಪರಿಕೀರ್ತಿತಃ**

ಉಪಸ್ಥಾನದಲ್ಲಿ ಗಾಯತ್ರೀಮಂತ್ರವಾಚ್ಯನಾದ ಸೂರ್ಯನಾರಾಯಣ ನನ್ನು ಸೂರ್ಯಪ್ರತೀಕದಲ್ಲಿ ವೇದಮಂತ್ರದಿಂದ ಸ್ತುತಿಸಬೇಕು. ಸೂರ್ಯನಿಗೆ ಮುಖ ಹಾಕಿ ನಿಂತು ಪ್ರಾರ್ಥಿಸಬೇಕು–

**ಅಥೋಪತಿಷ್ಠೇದಾದಿತ್ಯಂ ಉದಯಂತಂ ಸಮೀಹಿತಃ**

**ಮೈತ್ರೀಭಿರ್ವಾರುಣೀನಾಸ್ತಂಗತಂ ಸೂಕ್ತೇನ ಬಹ್ವೃಚಃ** (ಆಶ್ವಲಾಯನಸ್ಮೃತಿ)

ಅನಂತರ ಸಂಧ್ಯಾದಿವಂದನೆಯನ್ನು ಪ್ರದಕ್ಷಿಣೆಗೈಯುತ್ತ ನಡೆಸಬೇಕು –

**ಸಂಧ್ಯಾ ಚ ಸಾ ಚ ಗಾಯತ್ರೀ ಸಾವಿತ್ರೀ ಚ ಸರಸ್ವತೀ**

**ಚತುರ್ಭ್ಯಶ್ಚ ನಮಸ್ಕುರ್ಯಾತ್ ಪ್ರಣವಾದಿನಮೋಽಂತಕೈಃ**

(ಅಗ್ನಿಪುರಾಣ)

**ಸಂಧ್ಯಾಂತೇ ತು ಪ್ರತಿದಿನಂ ಗುರುಭ್ಯೋ ನಮ ಇತ್ಯಪಿ**

**ಸಂಧ್ಯಾಯೈ ಚಾಪಿ ಸಾವಿತ್ರ್ಯೈ ಗಾಯತ್ರ್ಯೈ ನಮ ಇತ್ಯಪಿ**

**ನಮಸ್ಕಾರಂ ಪ್ರಕುರ್ವನ್ ವೈ ಪ್ರವದನ್ವಾ ವಿಶೇಷತಃ**

**ಪ್ರದಕ್ಷಿಣಂ ಪ್ರಕುರ್ವೀತ.....** (ಮಾರ್ಕಂಡೇಯಸ್ಮೃತಿ)

ಜಪದಲ್ಲಿ ಆದ ದೋಷಗಳ ನಿವಾರಣೆಗೆ ವ್ಯಾಹೃತಿಗಳನ್ನು ಹೇಳುತ್ತ ನಾಲ್ಕು ಪ್ರದಕ್ಷಿಣೆಗೈದು ಪಾಲಕರನ್ನು ವಂದಿಸಬೇಕು –

**ಚತುಃಪ್ರದಕ್ಷಿಣಂ ಕುರ್ಯಾತ್ ಜಪದೋಷಾಪನುತ್ತಯೇ**

**ತಸ್ಮಾದ್ಭೂರಿದಮಿತ್ಯುಕ್ತ್ವಾ ಕುರ್ಯಾತ್ಪೂರ್ವಂ ಪ್ರದಕ್ಷಿಣಮ್**

**ಭುವಃ ಸ್ವಃ ಭೂರ್ಭುವಃಸ್ವೇತಿ ಚತುರ್ವಾರಂ ಪೃಥಕ್ಪೃಥಕ್**

**ತತಃ ಶಕ್ರಾದಿಕಾನ್ನತ್ವಾ ಪೂರ್ವಂ ವಾಽಥ ಪ್ರದಕ್ಷಿಣಾತ್**

**ತತ್ತನ್ಮಂತ್ರೈರುಪಸ್ಥಾಯ ಸ್ಪೃಷ್ಟ್ವಾ ಭೂಮಿಂ ನಮೇದ್ಗುರೂನ್**

**ತತೋಽಭಿವಾದಯೇತ್ ಭೂಮೌ ಪಿತ್ರಾದಿಭ್ಯಃ ಸುಸಮ್ಮತಃ** (ಆಶ್ವಲಾಯನ)

ಸಂಕಲ್ಪದಲ್ಲಿ ಕಾಲದ ಕಲ್ಪನೆಯಂತೆ ಜಪದ ಕೊನೆಯಲ್ಲಿ ದಿಕ್ಕಿನ ದೇಶದ ವಂದನೆ ಎನ್ನುವ ಈ ಕ್ರಿಯೆ ಜಡವಾದ ಕಾಲದೇಶಗಳ ಪೂಜೆಯಾಗಿ



ಕಾಣುವುದು. ಸಂಕಲ್ಪದಲ್ಲಿ ಕಾಲಸ್ವರೂಪನಾದ ಮತ್ತು ಕಾಲನಿಯಾಮಕರಾದ ದೇವರ ಮತ್ತು ದೇವತೆಗಳ ಚಿಂತನೆಯಂತೆ ದಿಕ್ಕುದೆಸೆಗಳ ಅಭಿವಂದನೆಯಲ್ಲಿ ಅಲ್ಲಿನ ಪಾಲಕರೂ ವಾಸಿಗಳೂ ಸ್ಮರಣೆಗೆ ನಿಲುಕುವರು.

**ಉತ್ಥಾಯ ಚ ನಮಸ್ಕೃತ್ಯ ದಿಶೋ ದಿಗ್ದೇವತಾ ಅಪಿ** (ಮಹಾಭಾರತ)

ಜಡವಾದ ಅಯೋಗ್ಯವಾದ ಅವಾಸ್ತವವಾದ ಅಂದರೆ ಇಲ್ಲದ ಸಂಗತಿಗಳ ಉಪಾಸನೆ ಸರಿಯಿಲ್ಲದ್ದು, ಫಲವಿಲ್ಲದ್ದು. ಹಾಳು ತರಬಲ್ಲುದು ಎನ್ನುವುದಾಗಿ **ಛಂದೋಗಭಾಷ್ಯ**ದಲ್ಲಿನ ಮಾತು.

**ಅಚೇತನಮಯೋಗ್ಯಂ ಚ ತಥೈವಾತಾತ್ತ್ವಿಕಂ ಕ್ವಚಿತ್**

**ನೋಪಾಸೀತ ಪರೋಽನರ್ಥಃ ಸ್ಯಾತ್ತಥೋಪಾಸನಾಕೃತಃ**

ನಾಲ್ಕು ದಿಕ್ಕಿನ ಒಡೆಯರನ್ನು ಮಂತ್ರದಿಂದ ನಮಿಸಬೇಕು. ಆ ಒಡೆಯರನ್ನೂ ಇಂದ್ರಾದಿಗಳನ್ನೂ **ಮಹಾಭಾರತ** ತಿಳಿಸಿದೆ–

**ದೇವಾನಾಮೀಶ್ವರಂ ಚಕ್ರೇ ದೇವಂ ದಶಶತೇಕ್ಷಣಮ್**

**ಯಮಂ ವೈವಸ್ವತಂ ಚಾಪಿ ಪಿತೄಣಾಮಕರೋತ್ಪತಿಮ್**

**ಅಪಾಂ ರಾಜ್ಯೇ ಸುರಾಣಾಂ ಚ ವಿದಧೇ ವರುಣಂ ಪ್ರಭುಮ್**

**ಧನಾನಾಂ ರಾಕ್ಷಸಾನಾಂ ಚ ಕುಬೇರಮಪಿ ಚೇಶ್ವರಮ್**

**ಕರ್ಣಪರ್ವ**ದ ಗೆರೆಯಲ್ಲಿ ಉತ್ತರಕ್ಕೆ ಚಂದ್ರ ಬಂದಿದ್ದಾನೆ –

**ಪ್ರಾಚೀಂ ದಿಶಂ ಶ್ರಿತಾ ದೇವಾ ಜಾತವೇದಃಪುರೋಗಮಾಃ**

**ದಕ್ಷಿಣಾ ಪಿತೃಭಿರ್ಗುಪ್ತಾ ಯಮೇನ ಶುಭಕರ್ಮಣಾ**

**ಪ್ರತೀಚೀಂ ವರುಣಃ ಪಾತಿ ಪಾಲಯನ್ನಸುರಾನ್ ಬಹೂನ್**

**ಉದೀಚೀಂ ಭಗವಾನ್ ಸೋಮೋ ಬ್ರಹ್ಮಾ ಚ ಬ್ರಾಹ್ಮಣೈಃ ಸಹ**

**ರಕ್ಷಃಪಿಶಾಚಾನ್ ಹಿಮವಾನ್ ಗುಹ್ಯಕಾನ್ ಗಂಧಮಾದನಃ**

**ಧ್ರುವಂ ಸರ್ವಾಣಿ ಭೂತಾನಿ ವಿಷ್ಣುಃ ಪಾತಿ ಸುರೋತ್ತಮಃ**

ಮಡದಿಯರ ಜೊತೆಯಲ್ಲಿ 24 ದಿಕ್ಪಾಲರ ವಂದನೆ ಸಲ್ಲಿಸುವಂತೆ ಮಧ್ವಾಚಾರ್ಯರು ಬೃಹದಾರಣ್ಯಕಭಾಷ್ಯದಲ್ಲಿ ಪ್ರಮಾಣ ನೀಡಿರುತ್ತಾರೆ. ಇವರೆಲ್ಲರೂ



ನಮ್ಮ ನಿಯಾಮಕರಾಗಿ ಪ್ರಾಣಪದದಿಂದ ಕರೆಸಿಕೊಳ್ಳುವವರು. 24 ಅಕ್ಷರದ ಗಾಯತ್ರಿಜಪದ ಫಲವಾಗಿ ಧೀಪ್ರಚೋದಕರಾಗಿ ಇಂದ್ರಿಯನಿಯಾಮಕರಾಗಿ ಇರುವವರು. ಗಾಯತ್ರಿಗಿಂತ ಮೂರು ಪಾಲು ಅಧಿಕವಾಗಿ ಜಪಿಸಿದ ಅಷ್ಟಾಕ್ಷರ ಜಪಕ್ಕೂ ಇದು ಅನ್ವಿತ. ಇವರನ್ನು ಸಂಧ್ಯಾವಂದನೆಯ ಕೊನೆಯಲ್ಲಿ ವಂದನೆಗೈದು ಧನ್ಯವಾದಗಳೊಂದಿಗೆ ಕರೆದಂತೆ ಕಳುಹಿಸುವ ಪ್ರಕ್ರಿಯೆ ಇದು ಉಪಸ್ಥಾನ –

ತಸ್ಯ ಪೂರ್ವದಿಶೀಂದ್ರಾಗ್ನೀ ಸಭಾರ್ಯೌ ಸಂಪ್ರತಿಷ್ಠಿತೌ
ಯಮರಾಕ್ಷಸೌ ದಕ್ಷಿಣಸ್ಯಾಂ ವರುಣೋ ವಾಯುರೇವ ಚ
ಪಶ್ಚಿಮಸ್ಯಾಮುತ್ತರಸ್ಯಾಂ ಸೋಮೇಶಾನೌ ಪ್ರತಿಷ್ಠಿತೌ
ಬ್ರಹ್ಮಾ ಪ್ರಧಾನವಾಯುಶ್ಚ ತಥೋರ್ಧ್ವಾಯಾಂ ದಿಶಿ ಸ್ಥಿತೌ
ಅಧರಾಯಾಂ ಶೇಷಕಾಮೌ ಸಭಾರ್ಯಾಃ ಸರ್ವ ಏವ ಚ
ಏಕೈಕಸ್ಯಾಂ ಹಿ ಚತ್ವಾರೋ ನೇತೃತ್ವಾತ್ ಪ್ರಾಣನಾಮಕಾಃ
ಇಂದ್ರಿಯಾಭಿಮತೇಶ್ಚೈವ ಪ್ರಾಣಾ ಇತ್ಯೇವ ಶಬ್ದಿತಾಃ

ಷಟ್ಪ್ರಶ್ನಭಾಷ್ಯದಲ್ಲಿಯೂ ಸೂರ್ಯನೊಳಗಿರುವ ಪ್ರಾಣನ ನಿಯಮನದಲ್ಲಿರುವ ಈ ಎಲ್ಲರ ಸುದ್ದಿ ಹೀಗಿದೆ –

ಆದಿತ್ಯಸ್ಥಃ ಸವಾಯುಸ್ತು ಪ್ರಾಣಾನಾತ್ಮನಿ ಸನ್ನಯೇತ್
ಪ್ರಾಚ್ಯಾಃ ಪ್ರಾಣಾಸ್ತಥೇಂದ್ರಾದ್ಯಾ ದಕ್ಷಿಣಾಶ್ಚ ಯಮಾದಯಃ
ಪ್ರತೀಚ್ಯಾ ವರುಣಾದ್ಯಾಸ್ತು ಸೋಮಾದ್ಯಾ ಉತ್ತರಾಃ ಸ್ಮೃತಾಃ
ಶೇಷಮಿತ್ರಾವವಾಚೀನೌ ವೀಂದ್ರಕಾಮಾವುದಕ್ತನೌ
ಸಭಾರ್ಯಾಃ ಕೋಣಪೈಃ ಸಾರ್ಧಂ ಚತ್ವಾರೋ ದಿಶಿದಿಶ್ಯಪಿ

ಮಹಾಭಾರತದಲ್ಲಿ ಸ್ವಸ್ತಿಚಿಂತನೆಯಲ್ಲಿ ನಾಲ್ಕು ದಿಕ್ಕಿನ ಒಡೆಯರ ಮಡದಿಯರ ಹೆಸರು ಬಂದಿದೆ –

ಶಕ್ರಃ ಶಚೀಪತಿರ್ದೇವೋ ಯಮೋ ಧೂಮೋರ್ಣ್ಣಯಾ ಸಹ
ವರುಣಃ ಸಹ ಗೌರ್ಯಾ ಚ ಸಹ ಋದ್ಧ್ಯಾ ಧನೇಶ್ವರಃ

ಅನುಶಾಸನಪರ್ವದಲ್ಲಿ ಇಂದ್ರಾದಿಗಳ ದಿಕ್ಪಾಲರ ಜೊತೆಯಲ್ಲಿರುವ



ಏಳೇಳು ಗುರುಗಳ ಚಿಂತನೆಯನ್ನೂ ಉಪಾಸನೆಯಾಗಿ ತಿಳಿಸಲಾಗಿದೆ –

ಯವಕ್ರೀತಶ್ಚ ರೈಭ್ಯಶ್ಚ ಅರ್ವಾವಸುಪರಾವಸೂ
ಔಶಿಜಶ್ಚೈವ ಕಕ್ಷೀವಾನ್ ಬಲಶ್ಚಾಂಗಿರಸಃ ಸುತಃ
ಋಷಿರ್ಮೇಧಾತಿಥೇಃ ಪುತ್ರಃ ಕಣ್ವೋ ಬರ್ಹಿಷದಸ್ತಥಾ
ಮಹೇಂದ್ರಗುರವಸ್ಸಪ್ತ ಪ್ರಾಚೀಂ ವೈ ದಿಶಮಾಶ್ರಿತಾಃ
ಪ್ರಯತಃ ಕೀರ್ತಯೇದೇತಾನ್ ಶಕ್ರಲೋಕೇ ಮಹೀಯತೇ

ಉನ್ಮುಚುಃ ಪ್ರಮುಚುಶ್ಚೈವ ಸ್ವಸ್ತ್ಯಾತ್ರೇಯಶ್ಚ ವೀರ್ಯವಾನ್
ದೃಢವ್ಯಶ್ಚೋರ್ಧ್ವಬಾಹುಶ್ಚ ತೃಣರೋಮಾಂಗಿರಾಸ್ತಥಾ
ಮಿತ್ರಾವರುಣಯೋಃ ಪುತ್ರಃ ತಥಾಽಗಸ್ತ್ಯಃ ಪ್ರತಾಪವಾನ್
ಧರ್ಮರಾಜರ್ತ್ವಿಜಃ ಸಪ್ತ ದಕ್ಷಿಣಾಂ ದಿಶಮಾಶ್ರಿತಾಃ

ದೃಢೇಯುಶ್ಚ ಋತೇಯುಶ್ಚ ಪರಿವ್ಯಾಧಶ್ಚ ಕೀರ್ತಿಮಾನ್
ಏಕತಶ್ಚ ದ್ವಿತಶ್ಚೈವ ತ್ರಿತಶ್ಚಾದಿತ್ಯಸನ್ನಿಭಾಃ
ಅತ್ರೇಃ ಪುತ್ರಶ್ಚ ಧರ್ಮಾತ್ಮಾ ಋಷಿಃ ಸಾರಸ್ವತಸ್ತಥಾ
ವರುಣಸ್ಯರ್ತ್ವಿಜಃ ಸಪ್ತ ಪಶ್ಚಿಮಾಂ ದಿಶಮಾಶ್ರಿತಾಃ

ಅತ್ರಿರ್ವಸಿಷ್ಠೋ ಭಗವಾನ್ ಕಶ್ಯಪಶ್ಚ ಮಹಾನ್ ಋಷಿಃ
ಗೌತಮಶ್ಚ ಭರದ್ವಾಜೋ ವಿಶ್ವಾಮಿತ್ರೋಽಥ ಕೌಶಿಕಃ
ಋಚೀಕತನಯಶ್ಚೋಗ್ರೋ ಜಮದಗ್ನಿಃ ಪ್ರತಾಪವಾನ್
ಧನೇಶ್ವರಸ್ಯ ಗುರವಃ ಸಪ್ತೈತೇ ಉತ್ತರಾಂ ಶ್ರಿತಾಃ

ಧರ್ಮಃ ಕಾಮಶ್ಚ ಕಾಲಶ್ಚ ವಸುರ್ವಾಸುಕಿರೇವಚ
ಅನಂತಃ ಕಪಿಲಶ್ಚೈವ ಸಪ್ತೈತೇ ಧರಣೀಧರಾಃ
ರಾಮೋ ವ್ಯಾಸಸ್ತಥಾ ದ್ರೌಣಿಃ ಅಶ್ವತ್ಥಾಮಾ ಚ ಲೋಮಶಃ
ಇತ್ಯೇತೇ ಮುನಯೋ ದಿವ್ಯಾ ಏಕೈಕಃ ಸಪ್ತಸಪ್ತಧಾ
ಶಾಂತಿಸ್ವಸ್ತಿಕರಾ ಲೋಕೇ ದಿಶಾಂ ಪಾಲಾಃ ಪ್ರಕೀರ್ತಿತಾಃ

ಆಯಾ ದಿಕ್ಕಿನ ಒಡೆಯರನ್ನು ಆಯಾ ದಿಕ್ಕಿಗೆ ಮುಖ ಹಾಕಿ



ನಮಿಸಬೇಕೆಂದು ಮಹಾಭಾರತವು ಇಲ್ಲಿ ಹೇಳಿದೆ. ಹಾಗಾಗಿ ಉಪಸ್ಥಾನದಲ್ಲಿ ಪ್ರದಕ್ಷಿಣೆ ಬರುತ್ತಲೇ ಇರುವುದು ತಪ್ಪು –

**ಯಸ್ಯಾಂಯಸ್ಯಾಂ ದಿಶಿ ಹ್ಯೇತೇ ತನ್ಮುಖಃ ಶರಣಂ ವ್ರಜೇತ್**

ಮೇಲ್ಗಡೆ ಚತುರ್ಮುಖನ ಚಿಂತನೆಯಂತೆ ಕೆಳಗೆ ನಾಗರಾಜನ ಶೇಷನ ರಕ್ಷಣೆಯನ್ನು ಹರಿವಂಶದ ಭವಿಷ್ಯಪರ್ವ ಹೇಳಿದೆ.

**ಭಗವಾನಪಿ ರಾಜ್ಯಾನಾಂ ಪ್ರವಿಭಾಗಾಂಶ್ಚಕಾರ ಹ**
**ದದೌ ಪೂರ್ವಾಂ ದಿಶಂ ಚೈಂದ್ರೀಂ ಶಕ್ರಾಯಾಮಿತತೇಜಸೇ**
**ಯಾಮ್ಯಾಂ ಯಮಾಯ ದೇವಾಯ ಪಿತೃರಾಜ್ಞೇ ಮಹಾತ್ಮನೇ**
**ಪಶ್ಚಿಮಾಂ ತು ದಿಶಂ ಪ್ರಾದಾತ್ ವರುಣಾಯ ಮಹಾತ್ಮನೇ**
**ಉತ್ತರಾಂ ತು ಕುಬೇರಾಯ ಯಕ್ಷಾಧಿಪತಯೇ ದಿಶಮ್**
**ಅಧಸ್ಥಾಂ ನಾಗರಾಜಾಯ ಸೋಮಾಯೋರ್ಧ್ವಾಂ ದಿಶಂ ದದೌ**

ದಿಕ್ಕುಗಳ ದೇವತೆಗಳನ್ನೆಲ್ಲ ಕೊನೆಗೆ ನಮಸ್ಕರಿಸಬೇಕು.

**ದಿಶಶ್ಚತಸ್ರಃ ಪ್ರಾಚ್ಯಾದ್ಯಾಃ ಪ್ರಣವಾದಿನಮೋಽಂತಕೈಃ**
**ಚತುರ್ಥ್ಯಂತೈಃ ನಮಸ್ಕುರ್ಯಾತ್ ಊರ್ಧ್ವಾಧಃ ಸಂಗ್ರಹೇದ್ದಿಶೌ** (ಅಗ್ನಿಪುರಾಣ)

ವಾಯುಪುರಾಣದಲ್ಲಿ ಸುಮಾರಾಗಿ ವನಪರ್ವದಲ್ಲಿರುವಂತೆ ದಿಗ್ದೇವತೆಗಳ ಪಟ್ಟಣಗಳನ್ನು ಸೂಚಿಸಿದ್ದಾರೆ –

ಮೇರೋಃ ಪ್ರಾಚ್ಯಾಂ ದಿಶಿ ತಥಾ ಮಾನಸಸ್ಯೈವ ಮೂರ್ಧನಿ
ವಸ್ವೋಕಸಾರಾ ಮಾಹೇಂದ್ರೀ ಪುಣ್ಯಾ ಹೇಮಪರಿಷ್ಕೃತಾ
ದಕ್ಷಿಣೇನ ಪುನರ್ಮೇರೋಃ ಮಾನಸಸ್ಯೈವ ಮೂರ್ಧನಿ
ವೈವಸ್ವತೋ ನಿವಸತಿ ಯಮಃ ಸಂಯಮನೇ ಪುರೇ
ಪ್ರತೀಚ್ಯಾಂ ತು ಪುನರ್ಮೇರೋಃ ಮಾನಸಸ್ಯೈವ ಮೂರ್ಧನಿ
ಸುಖಾ ನಾಮ ಪುರೀ ರಮ್ಯಾ ವರುಣಸ್ಯಾಥ ಧೀಮತಃ
ದಿಶ್ಯುತ್ತರಸ್ಯಾಂ ಮೇರೋಸ್ತು ಮಾನಸಸ್ಯೈವ ಮೂರ್ಧನಿ
ತುಲ್ಯಾ ಮಾಹೇಂದ್ರಪುರ್ಯಾಸ್ತು ಸೋಮಸ್ಯಾಪಿ ವಿಭಾವರೀ



ಇವರೆಲ್ಲರ ಅರಮನೆಯಲ್ಲಿ ಭಗವಂತನ ಅವತಾರರೂಪಗಳು ಪ್ರತಿಷ್ಠೆಗೊಂಡಿವೆ ಎನ್ನುವುದಾಗಿ **ಮಹಾಭಾರತ** ಮತ್ತು **ಭಾಗವತ**ದಲ್ಲಿ ಸೂಚಿಸಲಾಗಿದೆ. ಆಚಾರ್ಯಮಧ್ವರು ದಿಗೀಶರಲ್ಲಿನ ರೂಪಗಳನ್ನು ತಿಳಿಸಿದ್ದಾರೆ. ಹೀಗೆಯೇ ಅಗ್ನಿಲೋಕದಲ್ಲಿ ಪರಶುರಾಮ, ಶಿವಲೋಕದಲ್ಲಿ ನರಸಿಂಹ, ಶೇಷನಲ್ಲಿ ಕೃಷ್ಣ, ವಾಯೂಪಾಸ್ಯನಾಗಿ ಕೂರ್ಮ, ನಿರ್‌ಋತಿಗೆ ಬುದ್ಧ, ಬ್ರಹ್ಮನಿಗೆ ವರಾಹ ಆರಾಧನೀಯರು.

**ಉಪಾಸ್ಯಮಾನೋ ಭಗವಾನ್ ರಾಮೋ ಯಮಸಭಾತಳೇ**
**ಉಕ್ತ ಇಂದ್ರೇಣ ಚೋಪಾಸ್ಯೋ ವಾಮನಾತ್ಮಾ ಜನಾರ್ದನಃ**
**ವರುಣಸ್ಯಾನುಗಾಃ ನಾಗಾಃ ತತ್ರ ಮತ್ಸ್ಯಾಕೃತಿರ್ಹರಿಃ**
**ಗಂಧರ್ವಾ ಧನದಸ್ಯಾಪಿ ತತ್ರ ಕಲ್ಕೀ ಹರಿಃ ಪ್ರಭುಃ**

ದಿಕ್ಕುಗಳು ಹೆಸರು ಪಡೆದ ವಿಶೇಷ ಮಾಹಿತಿಯನ್ನು ಗರುಡನು ಗಾಲವರಿಗೆ ನೀಡಿದ್ದು **ಮಹಾಭಾರತ**ದಲ್ಲಿ ತುಂಬಾ ಇದೆ –

**ಯಸ್ಮಾದುದಯತೇ ಪೂರ್ವಂ ಸರ್ವಲೋಕಪ್ರಭಾವನಃ**
**ಏತಸ್ಮಾತ್ಕಾರಣಾದ್ಬ್ರಹ್ಮನ್ ಪೂರ್ವೇತ್ಯೇಷಾ ದಿಗುಚ್ಯತೇ**
**ಇಯಂ ವಿವಸ್ವತಾ ಪೂರ್ವಂ ಶ್ರೌತೇನ ವಿಧಿನಾ ಕಿಲ**
**ಗುರವೇ ದಕ್ಷಿಣಾ ದತ್ತಾ ದಕ್ಷಿಣೇತ್ಯುಚ್ಯತೇ ಚ ದಿಕ್**
**ಅತ್ರ ಪಶ್ಚಾದಹಃ ಸೂರ್ಯೋ ವಿಸರ್ಜ್ಜಯತಿ ಗಾಃ ಸ್ವಯಮ್**
**ಪಶ್ಚಿಮೇತ್ಯಭಿವಿಖ್ಯಾತಾ ದಿಗಿಯಂ ದ್ವಿಜಸತ್ತಮ**
**ಯಸ್ಮಾದುತ್ತಾರ್ಯತೇ ಪಾಪಾತ್ ಯಸ್ಮಾನ್ನಿಶ್ರೇಯಸೋಽಶ್ನುತೇ**
**ಅಸ್ಮಾದುತ್ತಾರಣಬಲಾತ್ ಉತ್ತರೇತ್ಯುಚ್ಯತೇ ದ್ವಿಜ**

ಹತ್ತು ದಿಕ್ಕಿನ ಒಡೆಯರನ್ನು ಅವರ ಆರಾಧ್ಯರನ್ನು **ಅಶ್ವಮೇಧ**ದಲ್ಲಿ ಸೂಚಿಸಲಾಗಿದೆ –

**ಉತ್ಥಾನಾಯಾಂ ದಶ ಯುಕ್ತಾ ವಹಂತಿ**

ವಾಜಸನೇಯಸಂಹಿತೆಯು ಐದು ದಿಕ್ಕುಗಳ ಪ್ರಾರ್ಥನೆಯನ್ನು



ಮಾಡಿದೆ. ಐದನೆಯ ದಿಕ್ಕು ಮೇಲಿನದ್ದು. ಸುತ್ತಲಿನ ದಿಗ್ದೇವತೆಗಳ ಒಡನೆ ಅವರ ಮಡದಿಯರೂ ಮತ್ತು ಮೇಲಿನೊಡೆಯರು ಸರಸ್ವತಿ ಬ್ರಹ್ಮರು ಇಲ್ಲಿರುವರು–

ಪಂಚ ದಿಶೋ ದೈವೀಃ ಯಜ್ಞಮವಂತು

ಸಚ್ಚರಿತ್ರಸುಧಾನಿಧಿಯಲ್ಲಿ ಏಳು ದಿಕ್ಕುಗಳನ್ನು ಉಲ್ಲೇಖಿಸಿರುವರು–

ಪ್ರಾಚೀ ದಿಕ್ ದಕ್ಷಿಣಾ ದಿಕ್ಚ ಪ್ರತೀಚೀ ದಿಕ್ತಥೋತ್ತರಾ

ಊರ್ಧ್ವಾಧರಾಂತರಿಕ್ಷಂ ಚ ದಿಶಃ ಸಪ್ತ ಪ್ರಕೀರ್ತಿತಾಃ

ಪ್ರಾಚೀಂ ಚ ದಕ್ಷಿಣಾಂ ಚಾಽಥ ಪ್ರತೀಚೀಂ ಚೋತ್ತರೋರ್ಧ್ವಕಮ್

ಅಧರಾಂ ಚಾಂತರಿಕ್ಷಂ ಚ ಏತಾಃ ಸಪ್ತ ದಿಶಃ ಸ್ಮೃತಾಃ (ಭಾರದ್ವಾಜಸ್ಮೃತಿ)

ನಮಃ ಪ್ರಾಚ್ಯೈ ದಿಶೇ ಯಾಶ್ಚ ದೇವತಾಃ ..... ನಮಃ ಪ್ರತೀಚ್ಯೈ ..... ಮುಂತಾದ ಮಂತ್ರಗಳು ತೈತ್ತಿರೀಯಾರಣ್ಯಕದಲ್ಲಿವೆ.

ಕಾಠಕಸಂಹಿತೆಯಲ್ಲಿ ನಮಸ್ಕಾರವಚನ –

ಅಗ್ನಯೇ ನಮೋ ಗಾಯತ್ರ್ಯೈ ನಮಃ ತ್ರಿವೃತೇ ನಮೋ ರಥಂತರಾಯ ನಮೋ ವಸಂತಾಯ ನಮಃ ಪ್ರಾಚ್ಯೈ ದಿಶೇ ನಮಃ ಪ್ರಾಣಾಯ ನಮೋ ವಸುಭ್ಯೋ ನಮಃ

ಇಂದ್ರಾಯ ನಮಃ ತ್ರಿಷ್ಟುಭೇ ನಮಃ ಪಂಚದಶಾಯ ನಮೋ
ಬೃಹತೇ ನಮೋ ಗ್ರೀಷ್ಮಾಯ ನಮೋ ದಕ್ಷಿಣಾಯೈ ದಿಶೇ ನಮೋ
ವ್ಯಾನಾಯ ನಮೋ ರುದ್ರೇಭ್ಯೋ ನಮಃ
ಮರುದ್ಭ್ಯೋ ನಮೋ ಜಗತ್ಯೈ ನಮಃ ಸಪ್ತದಶಾಯ ನಮೋ
ವೈರೂಪಾಯ ನಮೋ ವರ್ಷಾಭ್ಯೋ ನಮಃ ಪ್ರತೀಚ್ಯೈ ದಿಶೇ ನಮ
ಅಪಾನಾಯ ನಮೋ ಆದಿತ್ಯೇಭ್ಯೋ ನಮಃ
ವಿಶ್ವೇಭ್ಯೋ ದೇವೇಭ್ಯೋ ನಮೋಽನುಷ್ಟುಭೇ ನಮ ಏಕವಿಂಶಾಯ ನಮೋ
ವೈರಾಜಾಯ ನಮೋ ಶರದೇ ನಮ ಉದೀಚ್ಯೈ ದಿಶೇ ನಮಃ
ಸಮಾನಾಯ ನಮೋ ಚಂದ್ರಮಸೇ ನಮಃ

ಮಿತ್ರಾವರುಣಾಭ್ಯಾಂ ನಮಃ ಪಂಕ್ತ್ಯೈ ನಮಃ ತ್ರಿಣವಸತ್ರಯತ್ರಿಂಶಾಭ್ಯೋ ನಮೋ ಶಾಕ್ವರರೈವತಾಭ್ಯಾಂ ನಮೋ ಹೇಮಂತಶಿಶಿರಾಭ್ಯಾಂ ನಮ



**ಊರ್ಧ್ವಾಯೈ ದಿಶೇ ನಮ ಉದಾನಾಯ ನಮೋ ವಿಷ್ಣವೇ ನಮಃ**

**ಪೃಥಿವ್ಯೈ ನಮೋಽಗ್ನಯೇ ನಮೋ ಭೂತಾಯ ನಮಶ್ಚಕ್ಷುಷೇ ನಮಃ**

**ಅಂತರಿಕ್ಷಾಯ ನಮೋ ವಾಯವೇ ನಮೋ ಭವ್ಯಾಯ ನಮಃ ಶ್ರೋತ್ರಾಯ ನಮಃ**

**ದಿವೇ ನಮಃ ಸೂರ್ಯಾಯ ನಮೋ ಭವಿಷ್ಯತೇ ನಮೋ ಮನಸೇ ನಮಃ**

ವಿದಿಕ್ಕುಗಳಲ್ಲಿ ಗಣದೇವತೆಗಳ ಮತ್ತೆ ಮೇಲೆ ಕೆಳಗೆ ಸಾಧ್ಯರ ಪಿತೃಗಳ ಸನ್ನಿಧಾನವನ್ನು **ಷಡ್ವಿಂಶಬ್ರಾಹ್ಮಣ** ಹೇಳಿದೆ –

**ಅಗ್ನಿಃ ಪೂರ್ವಾಯಾಂ ಯಮೋ ದಕ್ಷಿಣಾಯಾಂ**

**ವರುಣಃ ಪಶ್ಚಿಮಾಯಾಂ ಸೋಮ ಉತ್ತರಾಯಾಮ್**

**ಯಾ ವಿದಿಶಸ್ತಾಸು ಆದಿತ್ಯರುದ್ರಮರುದ್ವಸವಃ**

**ಅಪರಾಜಿತಾಃ ಪಿತರಶ್ಚಾಧರಾಯಾಂ ಸಾಧ್ಯಾಶ್ಚೋರ್ಧ್ವಾಯಾಮ್**

ಲೋಕಪಾಲಕರು ತಮ್ಮೆಲ್ಲರ ಜೊತೆ ಜಪಮಾಡುವ ಭಕ್ತರ ವಿಘ್ನಗಳನ್ನು ಓಡಿಸಿ, ಬಲವಿತ್ತು ಬೆಂಬಲಿಸುವರೆಂದು **ಈಶ್ವರಸಂಹಿತೆ** –

**ಲೋಕದಿಕ್ಪಾಲಕಾಸ್ತ್ವೇತೇ ಸ್ವಸೇನಾಭಿಃ ಸಮಾವೃತಾಃ**

**ಪಾಲಯಂತಿ ಚ ಭಕ್ತಾನಾಂ ಬಲಮೋಜೋ ದದಂತಿ ಚ**

**ಧ್ವಂಸಯಂತಿ ಚ ವಿಘ್ನೌಘಂ ಅನಿಶಂ ಮಂತ್ರಯಾಜಿನಾಮ್**

**ಮೈತ್ರಾಯಣೀಯಸಂಹಿತೆಯಲ್ಲಿ** ದಿಗಧಿಪತಿಗಳ ಮತ್ತು ರಕ್ಷಿಸುವವರನ್ನು ಒಬ್ಬೊಬ್ಬರನ್ನೂ ನಮಿಸುತ್ತಾ, ಅವರಿಂದ ರಕ್ಷಣೆಯನ್ನು ಪ್ರಾರ್ಥಿಸುವ ಮಂತ್ರಗಳಿವೆ. ಇಲ್ಲಿ ಬೇರೆ ರೀತಿಯಿಂದ ದಿಕ್ ದೇವತೆಗಳ ಚಿಂತನೆಗಳು ಬಂದಿವೆ. ಸಾಮಾನ್ಯವಾಗಿ ಎಲ್ಲ ದೇವತೆಗಳೂ ಎಲ್ಲ ದಿಕ್ಕಿನ ಒಡೆತನವನ್ನು ಯೋಗ್ಯತೆಯ ತಾರತಮ್ಯದಲ್ಲಿ ಪಡೆದಿರುತ್ತಾರೆ. ಕೆಳಗಡೆ ಅಧಿಪತಿಯಾಗಿ ವಿಷ್ಣುವಿನ ನಾಮವಿದ್ದರೂ, ಅದು ಜಯಂತನ ಚಿಂತನೆಯಲ್ಲಿ ಸಾರ್ಥಕವೆನಿಸುವುದು –

**ಸಮೀಚೀ ನಾಮಾಸಿ ಪ್ರಾಚೀ ದಿಕ್ ತಸ್ಯಾಸ್ತೇ ಅಗ್ನಿರಧಿಪತಿಃ ಅಸಿತೋ ರಕ್ಷಿತಾ**

**ಓಜಸ್ವಾ ನಾಮಾಸಿ ದಕ್ಷಿಣಾ ದಿಕ್ ತಸ್ಯಾಸ್ತೇ ಇಂದ್ರೋಽಧಿಪತಿಃ**

**ತಿರಶ್ಚೀನರಾಜೀ ರಕ್ಷಿತಾ**



**ಪ್ರಾಚೀ ನಾಮಾಸಿ ಪ್ರತೀಚೀ ದಿಕ್ ತಸ್ಯಾಸ್ತೇ ಸೋಮೋಽಧಿಪತಿಃ ಸ್ವಜೋ ರಕ್ಷಿತಾ**

**ಸುಷದಾ ನಾಮಾಸಿ ಉದೀಚೀ ದಿಕ್ ತಸ್ಯಾಸ್ತೇ ವರುಣೋಽಧಿಪತಿಃ**

**ಪೃದಾಗೂ ರಕ್ಷಿತಾ**

**ಅವಸ್ಥಾ ನಾಮಾಸಿ ಅವಾಚೀ ದಿಕ್ ತಸ್ಯಾಸ್ತೇ ವಿಷ್ಣುರಧಿಪತಿಃ ಕಲ್ಮಾಷಗ್ರೀವೋ ರಕ್ಷಿತಾ**

**ಅಧಿಪತ್ನೀ ನಾಮಾಸಿ ಊರ್ಧ್ವಾ ದಿಕ್ ತಸ್ಯಾಸ್ತೇ ಬೃಹಸ್ಪತಿರಧಿಪತಿಃ ಚಿತ್ರೋ ರಕ್ಷಿತಾ**

**ಯಶ್ಚ ತೇಽಧಿಪತಿಃ ಯಶ್ಚ ರಕ್ಷಿತಾ ತಾಭ್ಯಾಂ ನಮೋ ಅಸ್ತು**

**ತೌ ನೋ ಮೃಡತಾಂ ತೇ ಯಂ ದ್ವಿಷ್ಮೋ ಯಶ್ಚ ನೋ ದ್ವೇಷ್ಟಿ**

**ತಮೇನಯೋಃ ಜಂಭೇ ದಧ್ಮಃ**

ಭರದ್ವಾಜರು **ಓಂ ಸರ್ವಾಭ್ಯೋ ದೇವತಾಭ್ಯೋ ನಮೋನಮಃ ಓಂ** ಎಂಬ ಮಂತ್ರವನ್ನಾದರೂ ಹೇಳಿ ಉಪಸ್ಥಾನವನ್ನು ನಡೆಸಿರೆಂದು ತಿಳಿಸಿರುವರು–

**ಸರ್ವಾಭ್ಯೋ ದೇವತಾಭ್ಯಶ್ಚೇತ್ಯೇತತ್ಪ್ರಣವಸಂಪುಟಮ್**

**ಉಕ್ತ್ವಾ ನಮೋನಮ ಇತಿ ಪ್ರಣಮೇತ್ಸರ್ವದೇವತಾಃ**

**ಉಪತಿಷ್ಠೇತ್ತತೋ ರುದ್ರಂ** ಎಂದೂ ಹೇಳಿರುವಂತೆ ಉತ್ತರದಲ್ಲಿ ರುದ್ರನನ್ನೂ **ಋತಂ ಸತ್ಯಂ** ಮಂತ್ರದಿಂದ ಚಿಂತನೆ ಮಾಡಬೇಕು. ಈ ಮಂತ್ರಕ್ಕೆ ಕಾಲಾಗ್ನಿಋಷಿಃ ಎಂದು ವೀರಮಿತ್ರೋದಯ ಹೇಳಿದೆ. ಇದು **ಶೇಷಸಂಹಿತೆ**ಯಲ್ಲಿ ಕೊನೆಗೆ ಮಂತ್ರಾಧ್ಯಾಯಗಳಲ್ಲಿ ಬಂದಿದೆ.

ದಕ್ಷಿಣದಲ್ಲಿ ಉಪಸ್ಥಾನ ಸಂದರ್ಭದಲ್ಲಿ ಹೇಳಲ್ಪಡುವ **ಯಮಾಯ ಧರ್ಮರಾಜಾಯ** ಮಂತ್ರವು ಹದಿನಾಲ್ಕು ಯಮರನ್ನು ಹೇಳಿದೆ ಎನ್ನುವುದಾಗಿ **ಸ್ಕಾಂದಪುರಾಣ**ದ ಹೇಳಿಕೆ –

**ಚತುರ್ದಶ ಯಮಾನ್ ಪಶ್ಚಾತ್ ತರ್ಪಯೇನ್ನಾಮ ಉಚ್ಚರನ್**

ನಮ್ಮ ನಿತ್ಯದ ಭೋಜನದ ಸಂದರ್ಭದಲ್ಲಿ ನಾವು ನೀಡಲ್ಪಡುವ ಚಿತ್ರಾಹುತಿಯಲ್ಲಿ ಯಮನ ಆದ್ಯಂತನಾಮಗಳೆರಡೆರಡು ಬಂದದ್ದನ್ನು ಗುರುತಿಸಬಹುದು.

ಮತ್ತೊಮ್ಮೆ **ಸ್ಕಾಂದಪುರಾಣ**ವು ಯಮನ ನಾಮಗಳನ್ನು ಬಣ್ಣಿಸುವಲ್ಲಿ



ಸರ್ವಭೂತಕ್ಷಯ, ಔದುಂಬರ ಈ ಎರಡು ನಾಮಗಳ ಸ್ಥಾನದಲ್ಲಿ ವೃಕ, ದಕ್ಷಿಣೇಶ ಮತ್ತು ವೈಚಿತ್ರನಾಮಗಳನ್ನು ಹೇಳಿದೆ –

**ಯಮಾಯ ಧರ್ಮರಾಜಾಯ ಮೃತ್ಯವೇ ಚಾಂತಕಾಯ ಚ**

**ವೈವಸ್ವತಾಯ ಕಾಲಾಯ ದಧ್ನಾಯ ಪರಮೇಷ್ಠಿನೇ**

**ವೃಕೋದರಾಯ ವೃಕಾಯ ದಕ್ಷಿಣೇಶಾಯ ತೇ ನಮಃ**

**ನೀಲಾಯ ಚಿತ್ರಗುಪ್ತಾಯ ಚಿತ್ರ ವೈಚಿತ್ರ ತೇ ನಮಃ**

ಪದ್ಮಪುರಾಣದಲ್ಲಿ ದ್ವಾದಶನಾಮಗಳಿಗೆ ಮನ್ನಣೆ ನೀಡುತ್ತಾ ಔದುಂಬರ ಮತ್ತು ಪರಮೇಷ್ಠಿ ನಾಮಗಳನ್ನು ಕೈಬಿಡಲಾಗಿದೆ. ಮುಖ್ಯವಾಗಿ ಹದಿನಾಲ್ಕು ನಾಮಗಳಿಗೇನೇ ಪ್ರಾಶಸ್ತ್ಯವಿರುವುದು.

ಪ್ರದಕ್ಷಿಣೆಯಲ್ಲಿ ಕೊನೆಗೆ ಹೇಳುವ

**ನಮೋಽಸ್ತ್ವನಂತಾಯ ಸಹಸ್ರಮೂರ್ತಯೇ**

**ಸಹಸ್ರಪಾದಾಕ್ಷಿಶಿರೋರುಬಾಹವೇ**

**ಸಹಸ್ರನಾಮ್ನೇ ಪುರುಷಾಯ ಶಾಶ್ವತೇ**

**ಸಹಸ್ರಕೋಟಿಯುಗಧಾರಿಣೇ ನಮಃ**

ಈ ಶ್ಲೋಕವು ಮಹಾಭಾರತದಲ್ಲಿದೆ. ಸಾವಿರ ನಾಮದಿಂದ ಬಣ್ಣಿಸಲು ಇಚ್ಛಿಸುವವನು ಈ ಮಂತ್ರವೊಂದನ್ನು ಜಪಿಸಿದರೆ ನನ್ನನ್ನು ಸ್ತುತಿಸಿದಂತೆಯೇ ಎನ್ನುವುದಾಗಿ ಅಲ್ಲಿನ ಫಲಕಥನ –

**ಯೋ ಮಾಂ ನಾಮಸಹಸ್ರೇಣ ಸ್ತೋತುಮಿಚ್ಛತಿ ಪಾಂಡವ**

**ಸೋಽಹಮೇಕೇನ ಶ್ಲೋಕೇನ ಸ್ತುತ ಏವ ನ ಸಂಶಯಃ**

ಗೋವರ್ಧನೋದ್ಧಾರದ ಬಳಿಕ ನಂದನು ಕೃಷ್ಣನನ್ನು

**ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ**

**ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋನಮಃ**

ಎಂದು ಸ್ತುತಿಸಿದ್ದಾನೆಂದು ಬ್ರಹ್ಮವೈವರ್ತದಲ್ಲಿ ತಿಳಿಸಲಾಗಿದೆ. ಮಹಾಭಾರತದಲ್ಲಿ ಈ ಶ್ಲೋಕಕ್ಕೆ ಅಲ್ಲಲ್ಲಿ ಅನೇಕ ರೀತಿಯ ವಿನಿಯೋಗವನ್ನು



ಕೃಷ್ಣನೇ ಹೇಳಿದ್ದಾನೆ. ವಿಶೇಷವಾಗಿ ಜಪಕ್ಕೆ ಸಂಬಂಧಿಸಿದಂತೆ ಸೂರ್ಯನೊಳಗಿನ ಉಪಾಸನೆಯಲ್ಲಿ ಮತ್ತೆ ಕೊನೆಗೆ ನಮನಪೂರ್ವಕ ಉಪಸ್ಥಾನದಲ್ಲಿ ಈ ಮಂತ್ರದ ಉಪಯೋಗವನ್ನು ಇಲ್ಲಿ ಸ್ಪಷ್ಟಪಡಿಸಲಾಗಿದೆ. ಮೋಕ್ಷಫಲವನ್ನೂ ಹೇಳಲಾಗಿದೆ –

**ನಮೋ ಬ್ರಹ್ಮಣ್ಯದೇವೇತಿ ಯೋ ಮಾಂ ದೃಷ್ಟ್ವಾಽಭಿವಾದಯೇತ್**
**ವ್ರತೀವ ಪ್ರಯತೋ ನಿತ್ಯಂ ಸ ಸುಖಂ ತತ್ಪದಂ ವ್ರಜೇತ್**
**ನಮೋ ಬ್ರಹ್ಮಣ್ಯದೇವಾಯೇತ್ಯೇತನ್ಮಂತ್ರಂ ಜಪೇತ್ಸದಾ**
**ನಮೋ ಬ್ರಹ್ಮಣ್ಯದೇವಾಯೇತ್ಯರ್ಚಯಿತ್ವಾ ದಿವಾಕರಮ್**
**ನಮೋ ಬ್ರಹ್ಮಣ್ಯದೇವಾಯೇತ್ಯುಚ್ಚರನ್ಮಾಂ ಸಮಾಹಿತಃ**
**ನಮೋ ಬ್ರಹ್ಮಣ್ಯದೇವಾಯೇತ್ಯುಕ್ತ್ವಾ ಮಾಮರ್ಚಯೇತ್ತದಾ**
**ನಮೋ ಬ್ರಹ್ಮಣ್ಯದೇವಾಯೇತ್ಯುಕ್ತ್ವಾಸ್ಯ ಚರಣೌ ಸ್ಪೃಶೇತ್**
**ನಮೋ ಬ್ರಹ್ಮಣ್ಯದೇವಾಯೇತ್ಯಸಕೃನ್ಮಾಂ ಪ್ರಣಮ್ಯ ಚ**

ನಮೋ ಬ್ರಹ್ಮಣ್ಯದೇವಾಯ ಶ್ಲೋಕವು ಪದ್ಮಪುರಾಣದಲ್ಲೂ ಬಂದಿದೆ. ನಿತ್ಯವೂ ನಡೆಸಿದ ಇದರ ಚಿಂತನೆಗೆ ವಿಷ್ಣುಸಾಯುಜ್ಯದ ಫಲವನ್ನು ಅಲ್ಲಿ ಹೇಳಲಾಗಿದೆ.

**ಮಂತ್ರೇಣೈವಂ ಹರಿಂ ಯಸ್ತು ಪೂಜಯೇತ್ ಸತತಂ ನರಃ**
**ಪ್ರಸಾದೀ ಚ ಹರಿಸ್ತಸ್ಯ ವಿಷ್ಣುಸಾಯುಜ್ಯತಾಂ ವ್ರಜೇತ್**

ಪ್ರಾಯೋಪವೇಶಕ್ಕೆ ಮತ್ತು ಸಲ್ಲೇಖನಕ್ಕೆ ಈ ಮಂತ್ರದ ಬಳಕೆಯನ್ನು ಮಹಾಭಾರತವು ತಿಳಿಸಿದೆ. ಫಲವನ್ನೂ ಬಣ್ಣಿಸಿದೆ –

**ಕರ್ಷಣಂ ಸಾಧಯನ್ ಯಸ್ತು ಮಾಂ ಪ್ರಪನ್ನಃ ಶುಚಿವ್ರತಃ**
**ನಮೋ ಬ್ರಹ್ಮಣ್ಯದೇವಾಯೇತ್ಯೇತನ್ಮಂತ್ರಮುದಾಹರನ್**
**ಬಾಲಸೂರ್ಯಪ್ರಕಾಶೇನ ವಿಮಾನೇನ ವಿರಾಜತಾ**
**ಮಮ ಲೋಕಂ ಸಮಾಸಾದ್ಯ ವರ್ಷಕೋಟಿಂ ಪ್ರಮೋದತೇ**
**ಮಮ ಲೋಕಾವತೀರ್ಣ್ಣಶ್ಚ ಸೋಽಸ್ಮಿನ್ ಲೋಕೇ ನೃಪೋ ಭವೇತ್**
**ಪ್ರಾಯೋಪವೇಶಂ ಯಶ್ಚಾಪಿ ಕುರುತೇ ಮದ್ಗತಾತ್ಮನಾ**



**ನಮೋ ಬ್ರಹ್ಮಣ್ಯದೇವಾಯೇತ್ಯುಕ್ತ್ವಾ ಮಂತ್ರಂ ಸಮಾಹಿತಃ**

**ಅಂತಃಸ್ವಸ್ಥೋ ಜಿತಕ್ರೋಧಃ ತಸ್ಯ ಪುಣ್ಯಫಲಂ ಶೃಣು**

**ಕಾಮಗಃ ಕಾಮರೂಪೀ ಚ ಬಾಲಸೂರ್ಯಸಮಪ್ರಭಃ**

**ಸ ವಿಮಾನೇನ ದಿವ್ಯೇನ ಯಾತಿ ಲೋಕಾನನಾಮಯಾನ್**

**ಸ್ವರ್ಗಾತ್ಸ್ವರ್ಗಂ ಮಹಾತೇಜಾ ಗತ್ವಾ ಚೈವ ಯಥಾಸುಖಮ್**

**ಮಮ ಲೋಕೇಷು ರಮತೇ ಯಾವದಾಭೂತಸಂಪ್ಲವಮ್**

ಪುರಾಣಗಳಲ್ಲಿ ಅಲ್ಲಲ್ಲಿ ಪಠಿತವಾದ **ಆಕಾಶಾತ್ ಪತಿತಂ, ಅಪವಿತ್ರಃ ಪವಿತ್ರೋ ವಾ, ಕಾಯೇನ ವಾಚಾ, ಇಷ್ಟಂ ದತ್ತಂ, ಶ್ರದ್ಧಾಂ ಮೇಧಾಂ, ಆಯುರ್ಬಲಂ,** ಮುಂತಾದ ಶ್ಲೋಕಗಳು ಅಲ್ಲಲ್ಲಿನ ಅನೇಕ ಬಗೆಯ ಕರ್ಮತಂತ್ರಗಳಲ್ಲಿ ವಿನಿಯೋಗಿಸುವಂತೆ ಆದೇಶಿಸಲಾಗಿದೆ. ಅವುಗಳನ್ನು ತಿರುಚಿ ಉದ್ದಿಷ್ಟನಾಮವನ್ನು ಬದಲಿಸಿ ಹೇಳುವ ಸೇರಿಸುವ ಅಧಿಕಾರ ನಮಗಿಲ್ಲ. ಪುರಾಣಕಾರ ವೇದವ್ಯಾಸ ಯಾವ ಅಭಿಪ್ರಾಯದಲ್ಲಿ ಅದನ್ನು ಬಳಸುವಂತೆ ಆದೇಶಿಸಿರುವನೋ, ಅದರಂತೆ ವಿನಿಯೋಗಿಸಿಕೊಳ್ಳಬೇಕು. ಅವು ಪುರಾಣಮಂತ್ರಗಳು, ಸಾಧನೆಯ ಸಂಪತ್ತುಗಳು. ಅಕ್ಷರವ್ಯತ್ಯಾಸದಿಂದಲೂ ಅನರ್ಥವಾಗಲಿವೆ.

ಹೀಗೆ **ಗೋಬ್ರಾಹ್ಮಣಹಿತಾಯ** ಅನ್ನುವಲ್ಲಿ ನಮಗೆ ಅನುಕೂಲವಾಗಲೆಂದು ಗೋಮಾನವಹಿತಾಯ ಎಂದು ಬದಲಿಸುವಂತಿಲ್ಲ. **ಕೇಶವಂ ಪ್ರತಿಗಚ್ಛತಿ** ಎನ್ನುವುದನ್ನು ಶಂಕರಂ ಪ್ರತಿಗಚ್ಛತಿ ಮಾಡುವಂತಿಲ್ಲ. **ದೇಹಿ ಮೇ ಹವ್ಯವಾಹನ** ಎನ್ನುವುದು ದೇಹಿ ಮೇ ಜನನಾಯಕ ಎಂದು ಹೇಗೆ ಆಗದೋ ಹಾಗೆ.

ಯಾವ ಉದ್ದೇಶದಲ್ಲಿ ಋಷಿ ಪದಪ್ರಯೋಗ ಮಾಡಿದ್ದಾನೋ ಅದು ಪರಿತ್ಯಕ್ತವಾಗುವುದು ಎನ್ನುವುದು ಮುಖ್ಯ ವಿರೋಧ. ಅನೇಕ ಕಡೆ ಪ್ರಸ್ತುತವಾದಾಗ ಅದರ ಅನೇಕ ಆಯಾಮಗಳಿಗೆ ಚ್ಯುತಿ ಬರುವುದು ಇನ್ನೊಂದು ವಿರೋಧ. ಗೋಬ್ರಾಹ್ಮಣನೆನ್ನುವುದು ಒಬ್ಬನ ಹೆಸರಾಗಿಯೂ ಇತಿಹಾಸದಲ್ಲಿ ಬಂದಿದೆ. ಇದನ್ನೆಲ್ಲಾ ವ್ಯಾಪಕವಾಗಿ ಗಮನಿಸಿದಾಗ ಸತ್ಯ ತುಂಬ ಎತ್ತರದಲ್ಲಿ ಇದೆ. ನಮ್ಮನ್ನು ಪ್ರಾಮಾಣಿಕರಾಗಲು ಕರೆಕೊಟ್ಟಿದೆ ಎಂದು ತಿಳಿಯುವುದು.



# ಗೋತ್ರಾಭಿವಾದನ

ಜಪ ಮಾಡಿದ ಮೇಲೆ ಗುರುಗಳನ್ನು ಮತ್ತು ತನಗಿಂತ ಕನಿಷ್ಠ ಪಕ್ಷ ಮೂರು ವರ್ಷ ಮೇಲಿನ ಹಿರಿಯರನ್ನು ನಮಿಸಲು ಸ್ಮೃತಿರತ್ನಾಕರ ತಿಳಿಸಿದೆ–

**ಏವಂ ಸಂಧ್ಯಾಮುಪಾಸ್ಥಾಯ ಪಿತರಾವಗ್ರಜಾನ್ ಗುರೂನ್**

**ತ್ರಿವರ್ಷಪೂರ್ವಾನ್ ಶಿಷ್ಟಾಂಶ್ಚ ಪಾರ್ಶ್ವಸ್ಥಾನಭಿವಾದಯೇತ್**

ಆಚಾರ್ಯಮಧ್ವರು ಸದಾಚಾರಸ್ಮೃತಿಯಲ್ಲಿ ಇದನ್ನು ಸಂಗ್ರಹಿಸಿ ಹೇಳಿರುವರು–

**ಪ್ರಣಮ್ಯ ದೇವಾನ್ ವಿಪ್ರಾಂಶ್ಚ ಗುರೂಂಶ್ಚ ಹರಿಪಾರ್ಷದಾನ್**

ಕೆಲವೆಡೆ ಕೆಲವು ನಮಸ್ಕಾರಮಂತ್ರಗಳೂ ಹೇಳಲ್ಪಟ್ಟಿವೆ –

**ಗುರುಭ್ಯೋ ನಮಃ ಋಷಿಭ್ಯೋ ನಮಃ ಮುನಿಭ್ಯೋ ನಮಃ**

**ಮಾತೃಭ್ಯೋ ನಮಃ ಪಿತೃಭ್ಯೋ ನಮಃ ಆಚಾರ್ಯೇಭ್ಯೋ ನಮಃ**

ಏನಾದರೂ ತಪ್ಪಿದ್ದರೆ ನನ್ನದಲ್ಲ. ನನ್ನೊಳಗಿನ ಕಾಮಕ್ರೋಧಗಳದ್ದೆನ್ನುವ ಆತ್ಮವಿಮರ್ಶೆಯ ಮಾತೂ ಇಲ್ಲಿ ಸೇರಿದೆ–

**ಕಾಮೋಽಕಾರ್ಷೀನ್ಮನ್ಯುರಕಾರ್ಷೀನ್ನಮೋ ನಮಃ**

ಇನ್ನಿತರ ಶ್ಲೋಕಗಳ ಪಠನವನ್ನೂ ಇಲ್ಲಿ ಸೇರಿಸಲಾಗಿದೆ. ಹೆಚ್ಚಿನ ಸಂಧ್ಯಾವಂದನೆಯ ಹೊತ್ತಗೆಗಳಲ್ಲಿ ಅದು ಸೇರಿರದು. ಆದರೆ ಭಗವಂತನ ಚಿಂತನೆಯನ್ನು ಮತ್ತೂ ಮಾಡುವುದು ಕ್ಷೇಮವೇ ಆಗಿದೆ.

**ಮಾರ್ಕಂಡೇಯರು** ಕಿವಿಯಲ್ಲಿ ವೇದಗಳ ಇರವನ್ನೂ ಸ್ಪಷ್ಟಪಡಿಸಿದ್ದಾರೆ. ಗುರುಗಳಿಂದ ತಾನು ಶಾಸ್ತ್ರಾಧ್ಯಯನ ಮಾಡಿದ್ದೇನೆ ಎನ್ನುವ ಅನುಸಂಧಾನದಲ್ಲಿ ಅಭಿವಾದನ ಸಂದರ್ಭದಲ್ಲಿ ಕಿವಿ ಮುಟ್ಟುವ ತಂತ್ರ ಮೂಡಿದೆ.

**ಅಗ್ನಿರಾಪಶ್ಚ ವೇದಾಶ್ಚ ಸೋಮಃ ಸೂರ್ಯೋಽನಿಲಸ್ತಥಾ**

**ಸರ್ವ ಏವ ತು ವಿಪ್ರಸ್ಯ ಕರ್ಣೇ ತಿಷ್ಠಂತಿ ದಕ್ಷಿಣೇ**

ಕಿವಿ ಮುಟ್ಟಿ ಗೋತ್ರ ಹೇಳಿ ಅಭಿವಾದನ ಮಾಡುವ ಮುದ್ರೆಯ ಲಕ್ಷಣವನ್ನು ಶ್ರೀಪ್ರಶ್ನಸಂಹಿತೆ ಹೇಳಿದೆ –

**ಶ್ರೋತ್ರೇ ಪಿಧಾಯ ಪಾಣಿಭ್ಯಾಂ ನಾಮಗೋತ್ರೇ ಚ ವೈ ಬ್ರುವನ್**



**ವ್ಯುತ್ಕ್ರಮೇಣ ಚ ತತ್ಪಾದೌ ಗೃಹ್ಣೀಯಾದ್ಯದಿ ವಲ್ಲಭೇ**

**ಅಭಿವಾದನಮುದ್ರೈಷಾ ಗುರ್ವಾದಿಷು ನಿಯೋಜಯೇತ್**

**ಭರದ್ವಾಜಸ್ಮೃತಿಯಲ್ಲಿ** ಜಪದ ಕೊನೆಯಲ್ಲಿ ಸೂರ್ಯನೊಳಗಿನ ಶಕ್ತಿಯನ್ನು ಅಭಿವಾದನ ಮಾಡುವಂತೆ ತಿಳಿಸಲಾಗಿದೆ –

**ಅಭಿವಾದನಮಂತ್ರೇಣ ಸದ್ಭಕ್ತ್ಯಾ ಲೋಕಸಾಕ್ಷಿಣಮ್**

**ಸಗೋತ್ರನಾಮಶರ್ಮ್ಮಾಹಂ ಭೋಃಪದೈರಭಿವಾದಯೇತ್**

**ಮನು** ಇದನ್ನು ಸ್ಪಷ್ಟಪಡಿಸಿರುವನು –

**ಅಸೌ ನಾಮಾಹಮಸ್ಮೀತಿ ಸ್ವಂ ನಾಮ ಪರಿಕೀರ್ತ್ತಯೇತ್**

**ಭೋಃ ಶಬ್ದಂ ಕೀರ್ತ್ತಯೇದಂತೇ ಸ್ವಸ್ವನಾಮ್ನಾಽಭಿವಾದನೇ**

**ವ್ಯತ್ಯಸ್ತಪಾಣಿನಾ ಕಾರ್ಯಂ ಉಪಸಂಗ್ರಹಣಂ ಗುರೋಃ**

**ಸವ್ಯೇನ ಸವ್ಯಃ ಸ್ಪ್ರಷ್ಟವ್ಯೋ ದಕ್ಷಿಣೇನ ತು ದಕ್ಷಿಣಃ**

**ಭವಿಷ್ಯಪುರಾಣವು** ಅಭಿವಾದನಶೀಲಸ್ಯ ಎಂಬ ಮಾತನ್ನು ಹೇಳುತ್ತಾ ಅಧ್ಯಯನದ ಆರಂಭದಲ್ಲಿ ಕೈಮುಗಿದೆ ಬ್ರಹ್ಮಾಂಜಲಿಯಲ್ಲಿ ಶಿಷ್ಯನಿರಬೇಕೆಂದು ಹೇಳಿ ಮುಗಿತಾಯದಲ್ಲಿ ವ್ಯತ್ಯಾಸಗೊಂಡ ಕೈಗಳಿಂದ ಗುರುಪಾದಗಳನ್ನು ಹಿಡಿಯುವಂತೆ ಹೇಳಿದೆ –

**ಸಂಹತ್ಯ ಹಸ್ತೌ ಅಧ್ಯೇಯಂ ಸ ಹಿ ಬ್ರಹ್ಮಾಂಜಲಿಃ ಸ್ಮೃತಃ**

**ವ್ಯತ್ಯಸ್ತಪಾಣಿನಾ ಕಾರ್ಯಂ ಉಪಸಂಗ್ರಹಣಂ ಗುರೋಃ**

**ವಾಮೇನ ವಾಮಃ ಸ್ಪ್ರಷ್ಟವ್ಯೋ ದಕ್ಷಿಣೇನ ತು ದಕ್ಷಿಣಃ**

**ಭವಿಷ್ಯಪುರಾಣದಲ್ಲಿ** ಅಭಿ–ವಾದನದ ರಹಸ್ಯ –

**ಅಭೀತಿ ಭಗವಾನ್ ವಿಷ್ಣುಃ ವಾದಯಾಮಿತಿ ಶಂಕರಃ**

**ದ್ವಾವೇವ ಪೂಜಿತೌ ತೇನ ಯಃ ಕರೋತ್ಯಭಿವಾದನಮ್**

ನಮಸ್ಕರಿಸುವವನು ತನ್ನ ಬಲಕೈಯಿಂದ ತನ್ನ ಬಲಕಿವಿಯನ್ನು, ಎಡಕೈಯಿಂದ ಎಡಕಿವಿಯನ್ನು ಮುಟ್ಟಿಕೊಂಡು ತನ್ನ ನಾಮಗೋತ್ರಗಳನ್ನು ಹೇಳಿ ಎದುರಿರುವ ಹಿರಿಯರ ಬಲಪಾದವನ್ನು ತನ್ನ ಬಲಕೈಯಿಂದ ಎಡಪಾದವನ್ನು



ತನ್ನ ಎಡಕೈಯಿಂದ ಮುಟ್ಟಿ ನಮಸ್ಕರಿಸಬೇಕು. ಈಗ ಆತನ ಕೈಗಳು ವ್ಯತ್ಯಾಸವಾಗಿ (X ಆಕಾರದಲ್ಲಿ) ಗುರುಪಾದಗಳನ್ನು ಮುಟ್ಟುವವು. ನಾನು ಗುರುಗಳಿಂದ ಜ್ಞಾನೋಪದೇಶವನ್ನು ಕೇಳಿದ್ದೇನೆ ಎನ್ನುವ ಸಂಕೇತವಾಗಿ ಕಿವಿಮುಟ್ಟಿಕೊಳ್ಳುವುದು. ಇಂದು ಬಹಳ ಮಂದಿ ಇದರ ಯಥಾರ್ಥ ಅರಿವಿಲ್ಲದೆ ತಮ್ಮ ಕಿವಿಗಳನ್ನೆ ವ್ಯತ್ಯಾಸವಾಗಿ ಹಿಡಿದುಕೊಂಡು (ಸ್ವಶಿಕ್ಷೆಯೆನ್ನುವಂತೆ) ಕುಳಿತು ಎದ್ದು ಕಿವಿಗಳನ್ನೆಳೆದು ಏನೇನೋ ನಡೆಸುವರು. ಆಚಮನದಂತೆ ಅಭಿವಾದನದಲ್ಲೂ ವಿಪರೀತ ಕ್ರಮಗಳೆ ಹೆಚ್ಚು ಬಳಕೆಯಲ್ಲಿವೆ.

**ಉತ್ತಾನಾಭ್ಯಾಂ ಚ ಪಾಣಿಭ್ಯಾಂ ಪಾದಾವಸ್ಯ ಮೃದು ಸ್ಪೃಶೇತ್**

**ದಕ್ಷಿಣಂ ದಕ್ಷಿಣೇ ಚೈವ ಸವ್ಯಂ ಸವ್ಯೇನ ಪೀಡಯೇತ್**

ಗುರುಗಳ ಪಾದಗಳನ್ನು ಮೃದುವಾಗಿ ಕೈಗಳಿಂದ ಒತ್ತಿ ನಮಿಸುವಂತೆ **ಶಾಂತಿಪರ್ವ**ದ ಸಂದೇಶ. ಗುರುಪತ್ನಿಯರ ಪಾದಗಳನ್ನು ಮುಟ್ಟಿ ನಮಿಸುವಂತಿಲ್ಲ ಎಂದು **ಸ್ಕಾಂದಪುರಾಣ** ಎಚ್ಚರಿಸಿದೆ –

**ನಾಭಿವಾದ್ಯಾ ಗುರೋಃ ಪತ್ನೀ ಸ್ಪೃಷ್ಟ್ವಾಂಘ್ರೀ ಯುವತೀ ಸತೀ**

ಈ ಅಭಿವಾದನವು ವಾಚಿಕವಷ್ಟೇ ಅಲ್ಲದೇ, ಶಾರೀರಿಕವಾಗಿಯೂ, ಮಾನಸಿಕವಾಗಿಯೂ ಇರಬೇಕೆಂದು **ಕೂರ್ಮಪುರಾಣ**ವು ತಿಳಿಸಿದೆ. ಈ ನಮನವು ಆಯುರಾರೋಗ್ಯಗಳನ್ನು ಸಿದ್ಧಿಸಲಿದೆ ಎನ್ನುವುದಾಗಿ ಇಲ್ಲಿ ಫಲಕಥನವಿದೆ. **ಭೋ** ಎಂದು ಕರೆಯುವ ಮೂಲಕ ಇಷ್ಟರವರೆಗೆ ಮುಖ್ಯವಾಗಿ ಸೂರ್ಯತೇಜಸ್ಸನ್ನು ಜಪಗೈದರ ನೆನಪಲ್ಲಿ ಗುರುಪಾದದಲ್ಲಿ ಅದರ ಸಮರ್ಪಣೆಯು ಅರ್ಥವಾಗುವುದು. **ಭೋ** ಅಂದರೆ ಬೆಳಗುವವನೇ ಎಂದು ಕರೆ. ಇದು ಭರ್ಗ ಶಬ್ದದ ಸಂಕ್ಷೇಪವು ಭರ್ಗ ಎಂದರೆ ಭರಗನು, ಸಚ್ಚಿದಾನಂದಸ್ವರೂಪನು.

**ಅಸಾವಹಂ ಭೋ ನಾಮೇತಿ ಸಮ್ಯಕ್ ಪ್ರಣತಿಪೂರ್ವಕಮ್**

**ಆಯುರಾರೋಗ್ಯಸಿದ್ಧ್ಯರ್ಥಂ ತಂದ್ರಾದಿಪರಿವರ್ಜಿತಃ**

**ಲೌಕಿಕಂ ವೈದಿಕಂ ಚಾಪಿ ತಥಾಧ್ಯಾತ್ಮಿಕಮೇವ ವಾ**

**ಆದದೀತ ಯತೋ ಜ್ಞಾನಂ ತಂ ಪೂರ್ವಮಭಿವಾದಯೇತ್**



ಲೌಕಿಕ ವಿದ್ಯೆಯನ್ನಾಗಲೀ, ವೇದ–ವೇದಾಂಗಗಳ ಪಾಠವನ್ನಾಗಲೀ, ವೇದಾಂತಚಿಂತನೆಯನ್ನು ಉಪದೇಶಗೈದವನಾಗಲೀ ಇದ್ದರೆ ಅವನನ್ನು ಮೊದಲು ಜಪದ ಕೊನೆಯಲ್ಲಿ ಗೋತ್ರಾಭಿವಾದನದಲ್ಲಿ ನಮಿಸುವಂತೆ ಈ ಪುರಾಣ ಕರೆಕೊಟ್ಟಿದೆ. ಇದು ಮಹಾಭಾರತದ ನುಡಿಯೂ ಆಗಿದೆ.

ತಂದೆತಾಯಿಗಳಲ್ಲಿ ತಂದೆಗೆ ಮೊದಲು ನಮನ. ಇಲ್ಲದಿರೆ ತಾಯಿಗೆ, ಅವರಿಬ್ಬರೂ ಇಲ್ಲವಾದರೆ ಅಣ್ಣ –

**ತಯೋರಪಿ ಪಿತಾ ಶ್ರೇಯಾನ್ ಬೀಜಪ್ರಾಧಾನ್ಯದರ್ಶನಾತ್**
**ಅಭಾವೇ ಬೀಜಿನೋ ಮಾತಾ ತದಭಾವೇ ತು ಪೂರ್ವಜಃ**

ಆಯಾ ವರ್ಣದವರು ತಮ್ಮ ಹೆಸರಿನ ಕಡೆಯಲ್ಲಿ **ಶರ್ಮಾ ವರ್ಮಾ ಗುಪ್ತ** ದಾಸ ಪದಗಳನ್ನು ಸೇರಿಸಿ ಅಭಿವಾದನ ನಡೆಸಬೇಕು–

**ತಪಸಾ ಬ್ರಹ್ಮಚರ್ಯೇಣ ಹೋಮೇನ ಚ ಶಮೇನ ಚ**
**ಜಗತಾಂ ಶರ್ಮ್ಮದಾನೇನ ಶರ್ಮ್ಮಾಂತೋ ಬ್ರಾಹ್ಮಣೋ ಭವೇತ್**
**ತಾಪತ್ರಯಾದತಿಬಲಾತ್ ಜಗತ್ಸಂವಹತೀತಿ ಯತ್**
**ತಸ್ಮಾತ್ಸರ್ವಸಮೇ ಧೀರೇ ವರ್ಮ್ಮಾಂತಂ ಕ್ಷತ್ರಿಯೇ ಭವೇತ್**
**ಕಾಲೇಕಾಲೇ ಧನಂ ದತ್ವಾ ಸರ್ವಂ ಗೋಪಯತೀತಿ ಯತ್**
**ತಸ್ಮಾದ್ವೈಶ್ಯಸ್ಯ ನಾಮ್ನೈತತ್ ಗುಪ್ತಾಂತಮಭಿಧೀಯತೇ**
**ಶರ್ಮ್ಮಾಂತಂ ಬ್ರಾಹ್ಮಣಸ್ಯೋಕ್ತಂ ವರ್ಮ್ಮಾಂತಂ ಕ್ಷತ್ರಿಯಸ್ಯ ತು**
**ಗುಪ್ತಾಂತಂ ಚೈವ ವೈಶ್ಯಸ್ಯ ದಾಸಾಂತಂ ಶೂದ್ರಜನ್ಮನಃ**

ಮಹಾಭಾರತ ನಾಲ್ವರನ್ನು ಗೋತ್ರಪವರ್ತಕರನ್ನಾಗಿ ತಿಳಿಸಿದೆ –

**ಮೂಲಗೋತ್ರಾಣಿ ಚತ್ವಾರಿ ಸಮುತ್ಪನ್ನಾನಿ ಪಾರ್ಥಿವ**
**ಅಂಗಿರಾಃ ಕಶ್ಯಪಶ್ಚೈವ ವಸಿಷ್ಠೋ ಭೃಗುರೇವ ಚ**

ಈ ಮನ್ವಂತರದ ಸಪ್ತರ್ಷಿಗಳೆಲ್ಲರ ಗೋತ್ರವನ್ನೂ ಧರ್ಮಶಾಸ್ತ್ರಗಳಲ್ಲಿ ಉಲ್ಲೇಖಿಸಲಾಗಿದೆ –

**ಕಶ್ಯಪೋಽತ್ರಿರ್ಭರದ್ವಾಜೋ ವಿಶ್ವಾಮಿತ್ರೋಽಥ ಗೌತಮಃ**



**ಜಮದಗ್ನಿರ್ವಸಿಷ್ಠಶ್ಚ ಸಪ್ತೈತೇ ಋಷಯಃ ಸ್ಮೃತಾಃ**

ಇವರ ಜತೆ ಅಗಸ್ತ್ಯರನ್ನು ಗೋತ್ರಪ್ರವರ್ತಕರನ್ನಾಗಿ ಸೇರಿಸಲಾಗಿದೆ. **ಬೋಧಾಯನರು** 49 ಗೋತ್ರಪ್ರವರಗಳನ್ನು ಪ್ರಧಾನವನ್ನಾಗಿ ಹೇಳಿರುತ್ತಾರೆ-

**ಗೋತ್ರಾಣಾಂ ತು ಸಹಸ್ರಾಣಿ ಪ್ರಯುತಾನ್ಯರ್ಬ್ಬುದಾನಿ ಚ**

**ಊನಪಂಚಾಶದೇವೈಷಾಂ ಪ್ರವರಾ ಋಷಿದರ್ಶನಾತ್**

ಗೋತ್ರ ತಿಳಿಯದಿದ್ದರೆ ಕಶ್ಯಪ ಗೋತ್ರ ಎನ್ನಬೇಕು. ಮೂಲತಃ ಎಲ್ಲರೂ ಕಶ್ಯಪನ ವಂಶದವರೆ ಆಗಿರುವುದರಿಂದ -

**ಗೋತ್ರಸ್ಯ ತ್ವಪರಿಜ್ಞಾನೇ ಕಾಶ್ಯಪಂ ಗೋತ್ರಮುಚ್ಯತೇ**

**ಯಸ್ಮಾದಾಹ ಶ್ರುತಿಃ ಸರ್ವಾಃ ಪ್ರಜಾಃ ಕಶ್ಯಪಸಂಭವಾಃ**

**ಅಂಗಿರಾಶ್ಚ ಮಹಾತೇಜಾ ದೇವಾಚಾರ್ಯೋ ಬೃಹಸ್ಪತಿಃ**

**ಭರದ್ವಾಜಸ್ತಥಾ ಗಾರ್ಗ್ಯ ಸೈತ್ಯಶ್ಚ ಭಗವಾನ್ನೃಷಿಃ**

**ಅಂಗಿರಾಃ ಸಂಕೃತಿಶ್ಚೈವ ಗೌರವೀತಿಸ್ತಥೈವ ಚ**

**ಬೃಹದುಕ್ಥೋ ವಾಮದೇವಃ ತಥಾ ತ್ರಿಪ್ರವರಾ ಮತಾಃ**

**ರಥೀತರಾಣಾಂ ಪ್ರವರಾಃ ತ್ರ್ಯಾರ್ಷೇಯಾಃ ಪರಿಕೀರ್ತ್ತಿತಾಃ**

**ಅಂಗಿರಾಶ್ಚ ವಿರೂಪಶ್ಚ ವೃಷಪರ್ವಸ್ತಥೈವ ಚ**

**ಅಂಗಿರಾಸ್ತಿತ್ತಿರಿಶ್ಚೈವ ಕಪಿಭೂಶ್ಚ ಮಹಾನ್ನೃಷಿಃ**

**ಶ್ಯಾವಾಶ್ವಶ್ಚ ತಥಾತ್ರಿಶ್ಚ ಆರ್ಚನಾನಸ ಏವ ಚ**

**ವಿಶ್ವಾಮಿತ್ರೋ ದೇವರಾತ ಉದ್ದಾಲಶ್ಚ ಮಹಾಯಶಾಃ**

**ವಿಶ್ವಾಮಿತ್ರೋ ಮಧುಚ್ಛಂದಾಃ ತಥಾ ಚೈವಾಘಮರ್ಷಣಃ**

**ವಿಶ್ವಾಮಿತ್ರೋ ರೋಹಿತಶ್ಚ ಅಷ್ಟಕಃ ಪೂರಣಸ್ತಥಾ**

**ವತ್ಸಲಃ ಕಶ್ಯಪಶ್ಚೈವ ನಿಧ್ರುವಶ್ಚ ಮಹಾತಪಾಃ**

**ಅಸಿತೋ ದೇವಲಶ್ಚೈವ ಕಶ್ಯಪಶ್ಚ ಮಹಾತಪಾಃ**

**ವಸಿಷ್ಠಮಿತ್ರಾವರುಣೌ ಕುಂಡಿನಶ್ಚ ಮಹಾತಪಾಃ**

**ಜಾತುಕರ್ಣ್ಯೋ ವಸಿಷ್ಠಶ್ಚ ತಥೈವಾತ್ರಿಶ್ಚ ಪಾರ್ಥಿವ**



**ಪರಾಶರಾಣಾಂ ಸರ್ವೇಷಾಂ ತ್ರ್ಯಾರ್ಷೇಯಃ ಪ್ರವರೋ ಮತಃ**

ಹೀಗೆಯೆ ಕೆಲವೊಂದು ಮಾತುಗಳು **ಸ್ಕಾಂದಪುರಾಣ**ದಲ್ಲಿ ಎರಡು ಕಡೆ ಕಂಡುಬರುವವು –

7 ಭೃಗುಗೋತ್ರಗಳು, 10 ಗೌತಮದವರು ಮತ್ತು ವಿಶ್ವಾಮಿತ್ರದವರು,

4 ಭಾರದ್ವಾಜರು, ಅಗಸ್ತ್ಯರು ಮತ್ತು ಅತ್ರಿಗಳು, 6 ಕೇವಲಾಂಗಿರಸರು,

5 ವಸಿಷ್ಠರು ಮತ್ತು ಕಶ್ಯಪರು.

**ಬ್ರಹ್ಮಾಂಡಪುರಾಣ**ದಲ್ಲಿ ಹೀಗಿದೆ –

**6 ಕಾಶ್ಯಪರು** – ಕಶ್ಯಪ, ವತ್ಸಾರ, ನೈಧ್ರುವ, ರೈಭ್ಯ, ಅಸಿತ, ದೇವಲ

**6 ಆತ್ರೇಯರು** – ಅತ್ರಿ, ಅರ್ಚನಾನಾ, ಶ್ಯಾವಾಶ್ವ, ಗವಿಷ್ಠಿರ, ಆಪಿಹೋತ್ರ, ಪೂರ್ವಾತಿಥಿ

**8 ವಾಸಿಷ್ಠರು** – ವಸಿಷ್ಠ, ಶಕ್ತಿ, ಪರಾಶರ, ಇಂದ್ರಪ್ರಮತಿ, ಭರದ್ವಸು, ಮೈತ್ರಾವರುಣಿ, ಕುಂಡಿನ

**13 ಕೌಶಿಕರು** – ವಿಶ್ವಾಮಿತ್ರ, ದೇವರಾತ, ಉದ್ಬಲ, ಮಧುಚ್ಛಂದ, ಅಘಮರ್ಷಣ, ಅಷ್ಟಕ, ಲೋಹಿತ, ಕತ, ಕೀಲ, ದೇವಶ್ರವಸ್, ರೇಣು, ಪೂರಣ, ಧನಂಜಯ

**3 ಅಗಸ್ತ್ಯರು** – ಅಗಸ್ತ್ಯ, ದೃಢಾಯು, ಇಂದ್ರ(ವಿಧ್ಯ)ಬಾಹು

**ನಿರ್ಣಯಸಿಂಧು**ವಿನಲ್ಲಿ ಇದನ್ನೆಲ್ಲಾ ಸಂಗ್ರಹಿಸಿರುವರು –

**ತತ್ರ ಸಪ್ತ ಭೃಗವಃ** – ವತ್ಸಾಃ ಬಿದಾಃ ಆರ್ಷ್ಟಿಷೇಣಾಃ ಯಸ್ಕಾಃ ಮಿತ್ರಯುವಾಃ ವೈನ್ಯಾಃ ಶುನಕಾಃ ಇತಿ । **ಅತ್ರ ಗೌತಮಾಃ ದಶ** – ಅಯಾಸ್ಯಾಃ ಶರದ್ವಂತಾಃ ಕೌಮಂಡಾಃ ದೀರ್ಘತಮಸಃ ಔಶನಸಃ ಕರೇಣುಪಾಲೇಯಾಃ ರಾಹೂಗಣಾಃ ಸೋಮರಾಜಕಾಃ ವಾಮದೇವಾಃ ಬೃಹದುಕ್ಥಾಃ ಇತಿ । **ಅಥ ಭಾರದ್ವಾಜಾಃ ತೇ ಚತ್ವಾರಃ** – ಭಾರದ್ವಾಜಾಃ ಗರ್ಗಾಃ ಋಕ್ಷಾಃ ಕಪಯಃ ಇತಿ **ಅಥ ಕೇವಾಲಾಂಗಿರಸಃ ತೇ ಷಟ್** – ಹಾರಿತಾಃ ಕುತ್ಸಾಃ ಕಣ್ವಾಃ ರಥೀತರಾಃ ಮುದ್ಗಲಾಃ ವಿಷ್ಣುವೃದ್ಧಾಃ ಇತಿ । **ಅಥಾತ್ರೇಯಾಃ ತೇ ಚತ್ವಾರಃ** – ಆತ್ರೇಯಾಃ ವಾದ್ಭುತಕಾಃ ಗವಿಷ್ಠಿರಾಃ ಮುದ್ಗಲಾಃ ಇತಿ । **ಅಥ ವಿಶ್ವಾಮಿತ್ರಾಃ ತೇ ದಶ** –



ಕುಶಿಕಾಃ ಲೋಹಿತಾಃ ರೌಕ್ಷಕಾಃ ಕಾಮಾಯನಾಃ ಅಜಾಃ ಕತಾಃ ಧನಂಜಯಾಃ ಅಘಮರ್ಷಣಾಃ ಪೂರಣಾಃ ಇಂದ್ರಕೌಶಿಕಾಃ ಇತಿ । **ಅಥ ಕಶ್ಯಪಾಃ ತೇ ಪಂಚ** – ನಿಧ್ರುವಾಃ ಕಶ್ಯಪಾಃ ಶಂಡಿಲಾಃ ರೈಭಾಃ ಲೌಗಾಕ್ಷಯಶ್ಚ । **ಅಥ ವಶಿಷ್ಠಾಃ ತೇ ಪಂಚ** – ವಸಿಷ್ಠಾಃ ಕುಂಡಿನಾಃ ಉಪಮನ್ಯವಃ ಪರಾಶರಾಃ ಜಾತೂಕರ್ಣ್ಯಾಶ್ಚೇತಿ **ಅಥಾಗಸ್ತ್ಯಾಃ ತೇ ಚತ್ವಾರಃ** – ಇಧ್ಮವಾಹಾಃ ಸಾಂಭವಾಹಾಃ ಸೋಮವಾಹಾಃ ಯಜ್ಞವಾಹಾಶ್ಚೇತಿ । **ಅಥ ದ್ವಿಗೋತ್ರಾಃ**

ಋಷಿ ಶಬ್ದ ಚಿಂತನೆಯೊಡನೆ ಋಷಿಗಳ ವಿಭಾಗಗಳನ್ನು ತಿಳಿಸುತ್ತಾ ಅನೇಕ ಋಷಿರಾಶಿಗಳನ್ನು **ವಾಯುಪುರಾಣ** ಉಲ್ಲೇಖಿಸಿದೆ.

**ಮತ್ಸ್ಯಪುರಾಣ**ದಲ್ಲಿ ಗೋತ್ರಪ್ರವರ ಚಿಂತನೆಯಲ್ಲಿ ಬಂದ ಕೆಲವನ್ನಿಲ್ಲಿ ಸಂಗ್ರಹಿಸಲಾಗಿದೆ – **ಭೃಗುಶ್ಚ ಚ್ಯವನಶ್ಚೈವ ಆಪ್ನುವಾನಸ್ತಥೈವ ಚ**

**ಔರ್ವಶ್ಚ ಜಮದಗ್ನಿಶ್ಚ ಪಂಚೈತೇ ಪ್ರವರಾ ಮತಾಃ**
**ಭೃಗುಶ್ಚ ಚ್ಯವನಶ್ಚೈವ ಆಪ್ನುವಾನಸ್ತಥೈವ ಚ**
**ಆರ್ಷ್ಟಿಷೇಣಸ್ತಥಾನೂಪಾಃ ಪ್ರವರಾಃ ಪಂಚ ಕೀರ್ತಿತಾಃ**
**ಭೃಗುಶ್ಚೈವಾಥ ವಧ್ರ್ಯಶ್ವೋ ದಿವೋದಾಸಸ್ತಥೈವ ಚ**
**ಬೃಹಸ್ಪತಿಂ ಗೌತಮಂ ಚ ಸಂವರ್ತ್ತಮೃಷಿಮುತ್ತಮಮ್**
**ಉತಥ್ಯಂ ವಾಮದೇವಂ ಚ ಅಗಸ್ತ್ಯಮುಷಿಜಂ ತಥಾ**
**ಇತ್ಯೇತೇ ಋಷಯಃ ಸರ್ವೇ ಗೋತ್ರಕಾರಾಃ ಪ್ರಕೀರ್ತ್ತಿತಾಃ**

ಆಪಸ್ತಂಬರು ಕೆಲವರನ್ನು ನಮಸ್ಕರಿಸಬಾರದೆಂದು ತಿಳಿಸಿದ್ದಾರೆ –

**ಸಮಿತ್ಪುಷ್ಪಕುಶಾಗ್ನ್ಯಂಬುಮೃದನ್ನಾಕ್ಷತಪಾಣಿಕಃ**
**ಜಪಂ ಹೋಮಂ ಚ ಕುರ್ವಾಣಃ ನಾಭಿವಾದ್ಯಸ್ತಥಾ ದ್ವಿಜಃ**
**ಧಾವಂತಂ ಚ ಪ್ರಮತ್ತಂ ಚ ಮೂತ್ರೋಚ್ಚಾರಕೃತಂ ತಥಾ**
**ಭುಂಜಾನಮಾತುರಂ ನಾರ್ಹಂ ನಾಭಿವಾದೇದ್ದ್ವಿಜೋತ್ತಮಃ**
**ವಮಂತಂ ಜೃಂಭಮಾಣಂ ಚ ಕುರ್ವಂತಂ ದಂತಧಾವನಮ್**
**ಅಭ್ಯಕ್ತಶಿರಸಂ ಚೈವ ಸ್ನಾಸ್ಯಂತಂ ನಾಭಿವಾದಯೇತ್**



**ಪಾಖಂಡಂ ಪತಿತಂ ವ್ರಾತ್ಯಂ ಮಹಾಪಾತಕಿನಂ ಶಠಮ್**

**ನಾಸ್ತಿಕಂ ಚ ಕೃತಘ್ನಂ ಚ ನಾಭಿವಾದೇತ್ಕಥಂಚನ**

**ಸ್ರಕ್‌ಪಾಣಿಕಮನಾಜ್ಞಾತಂ ಅಶಕ್ತಂ ರಿಪುಮಾತುರಮ್**

**ಯೋಗಿನಂ ಚ ತಪಃಸಕ್ತಂ ಕನಿಷ್ಠಂ ನಾಭಿವಾದಯೇತ್**

ನಿತ್ಯ ಹಿರಿಯರನ್ನು ನಮಸ್ಕರಿಸಿದಾಗ ಆಯುಷ್ಯ ವಿದ್ಯೆ ಕೀರ್ತಿ ಬಲಗಳು ಹೆಚ್ಚುವುದೆಂದು ಮನು ಭವಿಷ್ಯಪುರಾಣದ ಮಾತನ್ನು ತಿಳಿಸಿದ್ದಾನೆ –

**ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ**

**ಚತ್ವಾರಿ ತಸ್ಯ ವರ್ಧಂತೇ ಆಯುರ್ವಿದ್ಯಾ ಯಶೋ ಬಲಮ್**

ಪ್ರತಿನಿತ್ಯವೂ ಬುದ್ಧಿಯ ಹೆಚ್ಚಳವನ್ನು ನಮನದ ಮಾತಿನಲ್ಲಿ ಬದಲಿಯಾಗಿ ಸ್ಕಾಂದಪುರಾಣವು ಹೇಳಿದೆ – **ಅಭಿವಾದನಶೀಲಸ್ಯ ವೃದ್ಧಸೇವಾರತಸ್ಯ ಚ**

**ಆಯುರ್ಯಶೋಬಲಂ ಬುದ್ಧಿಃ ವರ್ಧತೇಽಹರಹೋಽಧಿಕಮ್**

ಪುರುಷರು ಅಷ್ಟಾಂಗ ಪ್ರಣಾಮವನ್ನು ನಡೆಸಬೇಕು.

**ಉರಸಾ ಶಿರಸಾ ಚೈವ ಮನಸಾ ವಚಸಾ ದೃಶಾ**

**ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಮೋಽಷ್ಟಾಂಗ ಉಚ್ಯತೇ**

ಶ್ರೀಪ್ರಶ್ನಸಂಹಿತೆ ಹೇಳಿದ ಸಾಷ್ಟಾಂಗಪ್ರಮಾಣದಲ್ಲಿ ತನ್ನತನದ ಸಮರ್ಪಣೆಯಿದೆ – **ಹಸ್ತಾಭ್ಯಾಂ ಶಿರಸಾ ಪದ್ಭ್ಯಾಂ ಮನಸಾ ಚ ಧಿಯಾ ತಥಾ**

**ಅಹಂಕಾರೇಣ ಚಾತ್ಮಾನಂ ನಿಪಾತ್ಯ ಧರಣೀತಳೇ**

**ಸಾಷ್ಟಾಂಗೇನ ಸ್ಪೃಶೇದ್ಭೂಮಿಂ ಸಾ ನಮಸ್ಕೃತಿಮುದ್ರಿಕಾ**

ಕಾಳಿಕಾಪುರಾಣದಲ್ಲಿ ನೆತ್ತಿಯ ಸ್ಪರ್ಶದೊಂದಿಗಿನ ಪ್ರಣಾಮ ಹೀಗಿದೆ –

**ಪೂರ್ವವತ್ ದಂಡವತ್ ಭೂಮೌ ನಿಪತ್ಯ ಹೃದಯೇನ ತು**

**ಚಿಬುಕೇನ ಮುಖೇನಾಥ ನಾಸಯಾ ತ್ವಲಿಕೇನ ಚ**

**ಬ್ರಹ್ಮರಂಧ್ರೇಣ ಕರ್ಣಾಭ್ಯಾಂ ಯದ್ಭೂಮಿಸ್ಪರ್ಶನಂ ಕ್ರಮಾತ್**

**ತದಷ್ಟಾಂಗ ಇತಿ ಪ್ರೋಕ್ತೋ ನಮಸ್ಕಾರೋ ಮನೀಷಿಭಿಃ**

ಅಷ್ಟಾಂಗಪ್ರಣಾಮದಂತೆ ಪಂಚಾಂಗನಮನವೂ ಜಪತಪಾನುಷ್ಠಾನಗಳಲ್ಲಿ



ಯೋಗ್ಯವೆ – **ಬಾಹುಭ್ಯಾಂ ಚೈವ ಮನಸಾ ಶಿರಸಾ ವಚಸಾ ದೃಶಾ**

**ಪಂಚಾಂಗೋऽಯಂ ಪ್ರಣಾಮಃ ಸ್ಯಾತ್ ಪೂಜಾಸು ಪ್ರವರಾವಿಮೌ**

**ಕಾಳಿಕಾಪುರಾಣವು** ಪಂಚಾಂಗ ಪ್ರಣಾಮವನ್ನು ಕಾಯಿಕನಮನದಲ್ಲಿ ಮಧ್ಯಮವೆಂದೂ ತನ್ನ ತಲೆಯ ಮೇಲೆ ಕೈಗಳ ಜೋಡಿಸಿದಾಗ ಅಧಮ ಪ್ರಣಾಮವೆಂದೂ ಹೇಳಿದೆ –

**ಜಾನುಭ್ಯಾಂ ಚ ಕ್ಷಿತಿಂ ಸೃಷ್ಟ್ವಾ ಶಿರಸಾ ಸ್ಪೃಶ್ಯ ಮೇದಿನೀಮ್**

**ಕ್ರಿಯತೇ ಯೋ ನಮಸ್ಕಾರೋ ಮಧ್ಯಮಃ ಕಾಯಿಕಸ್ತು ಸಃ**

**ಪುಟೀಕೃತ್ಯ ಕರೌ ಮೂರ್ಧ್ನಿ ದೀಯತೇ ಯದ್ಯಥಾ ತಥಾ**

**ಅಸ್ಪೃಷ್ಟ್ವಾ ಜಾನುಶೀರ್ಷಾಭ್ಯಾಂ ಕ್ಷಿತಿಂ ಸೋऽಧಮ ಉಚ್ಯತೇ**

ಸ್ತ್ರೀಯರು ಪಂಚಾಂಗ ಪ್ರಣಾಮವನ್ನು ನಡೆಸಬೇಕು –

**ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಮೂರ್ಧ್ನಾ ಚ ಮನಸಾ ಸಹ**

**ಪಂಚಾಂಗೈಃ ಕಥಿತಃ ಸ್ತ್ರೀಣಾಂ ಪ್ರಣಾಮಃ ಪಾಪಹಿಂಸಕಃ**

**ಬಾಹುಭ್ಯಾಮಥ ಜಾನುಭ್ಯಾಂ ಶಿರಸಾ ಮನಸಾ ಧಿಯಾ**

**ಪಂಚಾಂಗಕಃ ಪ್ರಣಾಮಃ ಸ್ಯಾತ್ ಸ್ತ್ರೀಣಾಂ ನಮನಲಕ್ಷಣಮ್**

**ಲಿಂಗಪುರಾಣವು** ಮೂರು ಪ್ರದಕ್ಷಿಣೆಯನ್ನು ಮತ್ತೆ ಮೂರು ನಮಸ್ಕಾರವನ್ನು ತಿಳಿಸಿದೆ – **ಅಷ್ಟಾಂಗಪ್ರಣಿಪಾತೇನ ತ್ರಿಧಾ ನ್ಯಸ್ತೇನ ಸುವ್ರತಾಃ**

**ತ್ರಿಃಪ್ರದಕ್ಷಿಣಯೋಗೇನ ವಂದ್ಯೋ ವೈ ಬ್ರಾಹ್ಮಣೋ ಗುರುಃ**

ಒಂದೇ ಕೈಯಿಂದ ಕಾಲ್ಮುಟ್ಟಿ ನಮಿಸುವುದನ್ನು **ಮಹಾಭಾರತವು** ನಿಷೇಧಿಸಿದೆ – **ಸವ್ಯೇನ ಸವ್ಯಂ ಸಂಗೃಹ್ಯ ದಕ್ಷಿಣೇನ ತು ದಕ್ಷಿಣಮ್**

**ನ ಕುರ್ಯಾದೇಕಹಸ್ತೇನ ಗುರೋಃ ಪಾದಾಭಿವಂದನಮ್**

ಒಂದು ಕೈಯಿಂದ ನಮಿಸಿದರೆ ಹುಟ್ಟಿನಿಂದ ಅಂದಿನವರೆಗೆ ಮಾಡಿದ ಎಲ್ಲ ಪುಣ್ಯವೂ ಖಾಲಿಯಾಗಲಿದೆಯೆಂದು ವ್ಯಾಘ್ರಪಾದರ ನುಡಿ –

**ಜನ್ಮಪ್ರಭೃತಿ ಯತ್ಕಿಂಚಿತ್ ಸುಕೃತಂ ಸುಮುಪಾರ್ಜ್ಜಿತಮ್**

**ತತ್ಸರ್ವಂ ನಿಷ್ಫಲಂ ಯಾತಿ ಏಕಹಸ್ತಾಭಿವಾದನಾತ್**



# ಗೋತ್ರ ಪ್ರವರ ಸಂಗ್ರಹ

[ಅಭಿವಾದನದ ಸಂದರ್ಭದಲ್ಲಿ ಗೋತ್ರ ಹೇಳುವ ಕ್ರಮ – **ಆಂಗಿರಸ ಬಾರ್ಹಸ್ಪತ್ಯ–ಭಾರದ್ವಾಜ–ತ್ರ್ಯಾರ್ಷೇಯ–ಪ್ರವರಾನ್ವಿತ–ಭಾರದ್ವಾಜಗೋತ್ರೋತ್ಪನ್ನಃ ಯಜುಶ್ಶಾಖಾಧ್ಯಾಯೀ ರಾಮನಾಥ–ಶರ್ಮಾಽಹಂ ಭೋ ಅಭಿವಾದಯೇ.** ಅವರವರು ತಮ್ಮ ತಮ್ಮ ಪ್ರವರ ಗೋತ್ರ ಶಾಖೆ ನಾಮಗಳನ್ನು ಹೇಳಬೇಕು.]

| **ಗೋತ್ರ** | | **ಪ್ರವರ** |
|---|---|---|
| ಭಾರದ್ವಾಜ | – | ಆಂಗಿರಸ ಬಾರ್ಹಸ್ಪತ್ಯ ಭಾರದ್ವಾಜ ತ್ರ್ಯಾರ್ಷೇಯ |
| ಗರ್ಗ | – | ಆಂಗಿರಸ ಬಾರ್ಹಸ್ಪತ್ಯ ಭಾರದ್ವಾಜ ಶೈನ್ಯ ಗಾರ್ಗ್ಯ ಪಂಚಾರ್ಷೇಯ |
| ಗರ್ಗ | – | ಆಂಗಿರಸ ಶೈನ್ಯ ಗಾರ್ಗ್ಯ ತ್ರ್ಯಾರ್ಷೇಯ |
| ಗರ್ಗ | – | ಭಾರದ್ವಾಜ ಗಾರ್ಗ್ಯ ಶೈನ್ಯ ತ್ರ್ಯಾರ್ಷೇಯ |
| ತಿತ್ತಿರಿ | – | ಆಂಗಿರಸ ತೈತ್ತಿರಿ ಕಾಪಿಭುವ ತ್ರ್ಯಾರ್ಷೇಯ |
| ಕಪಿಭೂ | – | ಆಂಗಿರಸ ತೈತ್ತಿರಿ ಕಾಪಿಭುವ ತ್ರ್ಯಾರ್ಷೇಯ |
| ಖಂಡಿತ | – | ಆಂಗಿರಸ ತೈತ್ತಿರಿ ಕಾಪಿಭುವ ತ್ರ್ಯಾರ್ಷೇಯ |
| ಋಕ್ಷ | – | ಆಂಗಿರಸ ಬಾರ್ಹಸ್ಪತ್ಯ ಭಾರದ್ವಾಜ ವಾಂದನ ಮಾತವಚಸ ಪಂಚಾರ್ಷೇಯ |
| ಋಕ್ಷ | – | ಆಂಗಿರಸ ವಾಂದನ ಮಾತವಚಸ ತ್ರ್ಯಾರ್ಷೇಯ |
| ಕಪಿ | – | ಆಂಗಿರಸ ಆಮಹೀಯವ ಔರುಕ್ಷಯಸ ತ್ರ್ಯಾರ್ಷೇಯ |
| ಆತ್ಮಭೂ | – | ಆಂಗಿರಸ ಭಾರದ್ವಾಜ ಬಾರ್ಹಸ್ಪತ್ಯ ಮಂತ್ರವರ ಆತ್ಮಭುವ ಪಂಚಾರ್ಷೇಯ |
| ಹರಿತ | – | ಆಂಗಿರಸ ಆಂಬರೀಷ ಯೌವನಾಶ್ವ ತ್ರ್ಯಾರ್ಷೇಯ |
| ಹರಿತ | – | ಮಾಂಧಾತೃ ಆಂಬರೀಷ ಯೌವನಾಶ್ವ ತ್ರ್ಯಾರ್ಷೇಯ |
| ಕುತ್ಸ | – | ಆಂಗಿರಸ ಮಾಂಧಾತ್ರ ಕೌತ್ಸ ತ್ರ್ಯಾರ್ಷೇಯ |
| ಕಣ್ವ | – | ಆಂಗಿರಸ ಆಜಮೀಢ ಕಾಣ್ವ ತ್ರ್ಯಾರ್ಷೇಯ |



| ಗೋತ್ರ | | ಪ್ರವರ |
|---|---|---|
| ಕಣ್ವ | – | ಆಂಗಿರಸ ಘೌರ ಕಾಣ್ವ ತ್ರ್ಯಾರ್ಷೇಯ |
| ರಥೀತರ | – | ಆಂಗಿರಸ ವೈರೂಪ ರಾಥೀತರ ತ್ರ್ಯಾರ್ಷೇಯ |
| ರಥೀತರ | – | ಆಂಗಿರಸ ವೈರೂಪ ಪಾರ್ಷದಶ್ವ ತ್ರ್ಯಾರ್ಷೇಯ |
| ರಥೀತರ | – | ಅಷ್ಟಾದಂಷ್ಟ್ರ ಪಾರ್ಷದಶ್ವ ವೈರೂಪ ತ್ರ್ಯಾರ್ಷೇಯ |
| ಮುದ್ಗಲ | – | ಆಂಗಿರಸ ಭಾರ್ಮ್ಯಾಶ್ವ ಮೌದ್ಗಲ್ಯ ತ್ರ್ಯಾರ್ಷೇಯ |
| ಮುದ್ಗಲ | – | ತಾರ್ಕ್ಷ್ಯ ಭಾರ್ಮ್ಯಾಶ್ವ ಮೌದ್ಗಲ್ಯ ತ್ರ್ಯಾರ್ಷೇಯ |
| ಮುದ್ಗಲ | – | ಆಂಗಿರಸ ತಾರ್ಕ್ಷ್ಯ ಮೌದ್ಗಲ್ಯ ತ್ರ್ಯಾರ್ಷೇಯ |
| ವಿಷ್ಣುವೃದ್ಧ | – | ಆಂಗಿರಸ ಪೌರುಕುತ್ಸ್ಯ ತ್ರಾಸದಸ್ಯವ ತ್ರ್ಯಾರ್ಷೇಯ |
| ಅತ್ರಿ | – | ಆತ್ರೇಯ ಆರ್ಚನಾನಸ ಶ್ಯಾವಾಶ್ವ ತ್ರ್ಯಾರ್ಷೇಯ |
| ವಾದ್ಭುತಕ | – | ಆತ್ರೇಯ ಆರ್ಚನಾನಸ ವಾದ್ಭುತಕ ತ್ರ್ಯಾರ್ಷೇಯ |
| ಧನಂಜಯ | – | ಆತ್ರೇಯ ಆರ್ಚನಾನಸ ಧಾನಂಜಯ ತ್ರ್ಯಾರ್ಷೇಯ |
| ಗವಿಷ್ಠಿರ | – | ಆತ್ರೇಯ ಆರ್ಚನಾನಸ ಗಾವಿಷ್ಠಿರ ತ್ರ್ಯಾರ್ಷೇಯ |
| ಗವಿಷ್ಠಿರ | – | ಆತ್ರೇಯ ಗಾವಿಷ್ಠಿರ ಪೌರ್ವಾತಿಥ ತ್ರ್ಯಾರ್ಷೇಯ |
| ಮುದ್ಗಲ | – | ಆತ್ರೇಯ ಆರ್ಚನಾನಸ ಪೌರ್ವಾತಿಥ ತ್ರ್ಯಾರ್ಷೇಯ |
| ಅತಿಥಿ | – | ಆತ್ರೇಯ ಆರ್ಚನಾನಸ ಆತಿಥ ತ್ರ್ಯಾರ್ಷೇಯ |
| ಅತಿಥಿ | – | ಆತ್ರೇಯ ಆರ್ಚನಾನಸ ಗಾವಿಷ್ಠಿರ ತ್ರ್ಯಾರ್ಷೇಯ |
| ವಾಮರಥ್ಯ | – | ಆತ್ರೇಯ ಆರ್ಚನಾನಸ ಆತಿಥ ತ್ರ್ಯಾಷೇಯ |
| ವಾಮರಥ್ಯ | – | ಆತ್ರೇಯ ಆರ್ಚನಾನಸ ಗಾವಿಷ್ಠಿರ ತ್ರ್ಯಾರ್ಷೇಯ |
| ಬೀಜವಾಪ | – | ಆತ್ರೇಯ ಆರ್ಚನಾನಸ ಗಾವಿಷ್ಠಿರ ತ್ರ್ಯಾರ್ಷೇಯ |
| ಬೀಜವಾಪ | – | ಆತ್ರೇಯ ಆರ್ಚನಾನಸ ಆತಿಥ ತ್ರ್ಯಾರ್ಷೇಯ |
| ಸುಮಂಗಲ | – | ಆತ್ರೇಯ ಆರ್ಚನಾನಸ ಆತಿಥ ತ್ರ್ಯಾರ್ಷೇಯ |
| ಸುಮಂಗಲ | – | ಆತ್ರೇಯ ಆರ್ಚನಾನಸ ಗಾವಿಷ್ಠಿರ ತ್ರ್ಯಾರ್ಷೇಯ |
| ಸುಮಂಗಲ | – | ಅತ್ರಿ ಸುಮಂಗಲ ಶ್ಯಾವಾಶ್ವ ತ್ರ್ಯಾರ್ಷೇಯ |
| ವಾಲೇಯ | – | ಆತ್ರೇಯ ವಾಮರಥ್ಯ ಪೌತ್ರಿಕ ತ್ರ್ಯಾರ್ಷೇಯ |



| ಗೋತ್ರ | | ಪ್ರವರ |
|---|---|---|
| ಯಸ್ಕ | – | ಭಾರ್ಗವ ವೈತಹವ್ಯ ಸಾವೇತಸ ತ್ರ್ಯಾರ್ಷೇಯ |
| ಮಿತ್ರಯು | – | ಭಾರ್ಗವ ವಾಧ್ರ್ಯಶ್ವ ದೈವೋದಾಸ ತ್ರ್ಯಾರ್ಷೇಯ |
| ಮಿತ್ರಯು | – | ಭಾರ್ಗವ ಚ್ಯಾವನ ದೈವೋದಾಸ ತ್ರ್ಯಾರ್ಷೇಯ |
| ಮಿತ್ರಯು | – | ವಾಧ್ರ್ಯಶ್ವ ಏಕಾರ್ಷೇಯ |
| ವೈನ್ಯ | – | ಭಾರ್ಗವ ವೈನ್ಯ ಪಾರ್ಥ ತ್ರ್ಯಾರ್ಷೇಯ |
| ಶುನಕ | – | ಶೌನಕ ಏಕಾರ್ಷೇಯ |
| ಶುನಕ | – | ಗಾರ್ತ್ಸಮದ ಏಕಾರ್ಷೇಯ |
| ಶುನಕ | – | ಭಾರ್ಗವ ಗಾರ್ತ್ಸಮದ ದ್ವ್ಯಾರ್ಷೇಯ |
| ಶುನಕ | – | ಭಾರ್ಗವ ಶೌನಹೋತ್ರ ಗಾರ್ತ್ಸಮದ ತ್ರ್ಯಾರ್ಷೇಯ |
| ವೇದ(ವಿಶ್ವಜ್ಯೋತಿಷ) | – | ಭಾರ್ಗವ ವೇದ ವೈಶ್ವಜ್ಯೋತಿಷ ತ್ರ್ಯಾರ್ಷೇಯ |
| ಶಾಠರ(ಮಾಠರ) | – | ಭಾರ್ಗವ ಶಾಠರ ಮಾಠರ ತ್ರ್ಯಾರ್ಷೇಯ |
| ಆಯಾಸ್ಯ | – | ಆಂಗಿರಸ ಆಯಾಸ್ಯ ಗೌತಮ ತ್ರ್ಯಾರ್ಷೇಯ |
| ಶರದ್ವತ | – | ಆಂಗಿರಸ ಗೌತಮ ಶಾರದ್ವತ ತ್ರ್ಯಾರ್ಷೇಯ |
| ಕೌಮಂಡ | – | ಆಂಗಿರಸ ಔತಥ್ಯ ಕಾಕ್ಷೀವತ ಗೌತಮ ಕೌಮಂಡ ಪಂಚಾರ್ಷೇಯ |
| ಕೌಮಂಡ | – | ಆಂಗೀರಸ ಆಯಾಸ್ಯ ಔಶಿಜ ಗೌತಮ ಕಾಕ್ಷೀವತ ಪಂಚಾರ್ಷೇಯ |
| ಕೌಮಂಡ | – | ಆಂಗೀರಸ ಔತಥ್ಯ ಗೌತಮ ಔಶಿಜ ಕಾಕ್ಷೀವತ ಪಂಚಾರ್ಷೇಯ |
| ಕೌಮಂಡ | – | ಆಂಗೀರಸ ಔಶಿಜ ಕಾಕ್ಷೀವತ ತ್ರ್ಯಾರ್ಷೇಯ |
| ಕೌಮಂಡ | – | ಆಂಗೀರಸ ಔತಥ್ಯ ಕಾಕ್ಷೀವತ ತ್ರ್ಯಾರ್ಷೇಯ |
| ಕೌಮಂಡ | – | ಔತಥ್ಯ ಗೌತಮ ಕೌಮಂಡ ತ್ರ್ಯಾರ್ಷೇಯ |
| ದೀರ್ಘತಮ | – | ಆಂಗಿರಸ ಔತಥ್ಯ ಕಾಕ್ಷೀವತ ಗೌತಮ ದೈರ್ಘತಮಸ ಪಂಚಾರ್ಷೇಯ |



| ಗೋತ್ರ | | ಪ್ರವರ |
|---|---|---|
| ದೀರ್ಘತಮ | – | ಆಂಗಿರಸ ಔತಥ್ಯ ದೈರ್ಘತಮಸ ತ್ರ್ಯಾರ್ಷೇಯ |
| ಔಶನಸ | – | ಆಂಗೀರಸ ಔತಥ್ಯ ಔಶನಸ ತ್ರ್ಯಾರ್ಷೇಯ |
| ಕರೇಣುಪಾಲಿ | – | ಆಂಗಿರಸ ಗೌತಮ ಕಾರೇಣುಪಾಲ ತ್ರ್ಯಾರ್ಷೇಯ |
| ರಾಹೂಗಣ | – | ಆಂಗೀರಸ ರಾಹೂಗಣ ಗೌತಮ ತ್ರ್ಯಾರ್ಷೇಯ |
| ಸೋಮರಾಜಕ | – | ಆಂಗಿರಸ ಸೋಮರಾಜಕ ಗೌತಮ ತ್ರ್ಯಾರ್ಷೇಯ |
| ವಾಮದೇವ | – | ಆಂಗಿರಸ ವಾಮದೇವ್ಯ ಗೌತಮ ತ್ರ್ಯಾರ್ಷೇಯ |
| ವಾಮದೇವ | – | ಆಂಗಿರಸ ವಾಮದೇವ್ಯ ಬಾರ್ಹದುಕ್ಥ ತ್ರ್ಯಾರ್ಷೇಯ |
| ಬೃಹದುಕ್ಥ | – | ಆಂಗಿರಸ ಬಾರ್ಹದುಕ್ಥ ಗೌತಮ ತ್ರ್ಯಾರ್ಷೇಯ |
| ಬೃಹದುಕ್ಥ | – | ಆಂಗಿರಸ ವಾಮದೇವ ಬಾರ್ಹದುಕ್ಥ ತ್ರ್ಯಾರ್ಷೇಯ |
| ಉತಥ್ಯ | – | ಆಂಗಿರಸ ಔತಥ್ಯ ಗೌತಮ ತ್ರ್ಯಾರ್ಷೇಯ |
| ಔಶಿಜ | – | ಆಂಗಿರಸ ಔಶಿಜ ಕಾಕ್ಷೀವತ ತ್ರ್ಯಾರ್ಷೇಯ |
| ಔಶಿಜ | – | ಆಂಗಿರಸ ಆಯಾಸ್ಯ ಔಶಿಜ ಗೌತಮ ಕಾಕ್ಷೀವತ ಪಂಚಾರ್ಷೇಯ |
| ರಾಘವ | – | ಆಂಗಿರಸ ರಾಘವ ಗೌತಮ ತ್ರ್ಯಾರ್ಷೇಯ |
| ವತ್ಸ | – | ಭಾರ್ಗವ ಚ್ಯಾವನ ಆಪ್ನವಾನ ಔರ್ವ ಜಾಮದಗ್ನ್ಯ ಪಂಚಾರ್ಷೇಯ |
| ವತ್ಸ | – | ಭಾರ್ಗವ ಔರ್ವ ಜಾಮದಗ್ನ್ಯ ತ್ರ್ಯಾರ್ಷೇಯ |
| ವತ್ಸ | – | ಭಾರ್ಗವ ಚ್ಯವನ ಆಪ್ನವಾನ ತ್ರ್ಯಾರ್ಷೇಯ |
| ಬಿದ | – | ಭಾರ್ಗವ ಚ್ಯಾವನ ಆಪ್ನವಾನ ಔರ್ವ ಬೈದ ಪಂಚಾರ್ಷೇಯ |
| ಬಿದ | – | ಭಾರ್ಗವ ಔರ್ವ ಜಾಮದಗ್ನ್ಯ ತ್ರ್ಯಾರ್ಷೇಯ |
| ಆರ್ಷ್ಟಿಷೇಣ | – | ಭಾರ್ಗವ ಚ್ಯಾವನ ಆಪ್ನವಾನ ಆರ್ಷ್ಟಿಷೇಣ ಅನೂಪ ಪಂಚಾರ್ಷೇಯ |
| ಆರ್ಷ್ಟಿಷೇಣ | – | ಭಾರ್ಗವ ಆರ್ಷ್ಟಿಷೇಣ ಅನೂಪ ತ್ರ್ಯಾರ್ಷೇಯ |



| ಗೋತ್ರ | | ಪ್ರವರ |
|---|---|---|
| ವಾತ್ಸ್ಯ | – | ಭಾರ್ಗವ ಚ್ಯಾವನ ಆಪ್ನವಾನ ತ್ರ್ಯಾರ್ಷೇಯ |
| ವತ್ಸ(ಪುರೋಧಸ) | – | ಭಾರ್ಗವ ಚ್ಯಾವನ ಆಪ್ನವಾನ ವಾತ್ಸ ಪೌರೋಧಸ ಪಂಚಾರ್ಷೇಯ |
| ಬೈಜ(ಮಥಿತ) | – | ಭಾರ್ಗವ ಚ್ಯಾವನ ಆಪ್ನವಾನ ಬೈಜ ಮಥಿತ ಪಂಚಾರ್ಷೇಯ |
| ಕಶ್ಯಪ | – | ಕಾಶ್ಯಪ ಅವತ್ಸಾರ ಅಸಿತ ತ್ರ್ಯಾರ್ಷೇಯ |
| ಕಶ್ಯಪ | – | ಕಾಶ್ಯಪ ಅವತ್ಸಾರ ನೈಧ್ರುವ ಶಾಂಡಿಲ್ಯ ಶಾಂಡಿಲ ರೆಪ ರೈಪ ಸಪ್ತಾರ್ಷೇಯ |
| ನಿಧ್ರುವ | – | ಕಾಶ್ಯಪ ಅವತ್ಸಾರ ನೈಧ್ರುವ ತ್ರ್ಯಾರ್ಷೇಯ |
| ರೇಭ | – | ಕಾಶ್ಯಪ ಅವತ್ಸಾರ ರೈಭ್ಯ ತ್ರ್ಯಾರ್ಷೇಯ |
| ಶಂಡಿಲ | – | ಕಾಶ್ಯಪ ಅವತ್ಸಾರ ಶಾಂಡಿಲ್ಯ ತ್ರ್ಯಾರ್ಷೇಯ |
| ಶಂಡಿಲ | – | ಕಾಶ್ಯಪ ಅವತ್ಸಾರ ದೇವಲ ತ್ರ್ಯಾರ್ಷೇಯ |
| ಶಂಡಿಲ | – | ಕಾಶ್ಯಪ ಅವತ್ಸಾರ ಅಸಿತ ತ್ರ್ಯಾರ್ಷೇಯ |
| ಶಂಡಿಲ | – | ಕಾಶ್ಯಪ ಅಸಿತ ದೇವಲ ತ್ರ್ಯಾರ್ಷೇಯ |
| ಶಂಡಿಲ | – | ದೇವಲ ಅಸಿತ ದ್ವ್ಯಾರ್ಷೇಯ |
| ಕುಶಿಕ | – | ವೈಶ್ವಾಮಿತ್ರ ದೇವರಾತ ಔದಲ ತ್ರ್ಯಾರ್ಷೇಯ |
| ಲೋಹಿತ | – | ವೈಶ್ವಾಮಿತ್ರ ಆಷ್ಟಕ ಲೌಹಿತ ತ್ರ್ಯಾರ್ಷೇಯ |
| ಲೋಹಿತ | – | ವೈಶ್ವಾಮಿತ್ರ ಮಾಧುಚ್ಛಂದಸ ಆಷ್ಟಕ ತ್ರ್ಯಾರ್ಷೇಯ |
| ಲೋಹಿತ | – | ವಿಶ್ವಾಮಿತ್ರ ಆಷ್ಟಕ ದ್ವ್ಯಾರ್ಷೇಯ |
| ರೌಕ್ಷಕ | – | ವೈಶ್ವಾಮಿತ್ರ ಗಾಥಿನ ರೈವಣ ತ್ರ್ಯಾರ್ಷೇಯ |
| ರೌಕ್ಷಕ | – | ವೈಶ್ವಾಮಿತ್ರ ರೌಕ್ಷಕ ರೈವಣ ತ್ರ್ಯಾರ್ಷೇಯ |
| ಕಾಮಕಾಯನ | – | ವೈಶ್ವಾಮಿತ್ರ ದೇವಶ್ರವಸ ದೈವತರಸ ತ್ರ್ಯಾರ್ಷೇಯ |
| ಅಜ | – | ವೈಶ್ವಾಮಿತ್ರ ಮಧುಚ್ಛಂದಸ ಆಜ ತ್ರ್ಯಾರ್ಷೇಯ |
| ಅಜ | – | ವೈಶ್ವಾಮಿತ್ರ ಆಶ್ಮರಥ ವಾಧೂಲ ತ್ರ್ಯಾರ್ಷೇಯ |

| | | |
|---|---|---|
| ಕತ | – | ವೈಶ್ವಾಮಿತ್ರ ಕಾತ್ಯ ಆತ್ಕೀಲ ತ್ರ್ಯಾರ್ಷೇಯ |
| ಧನಂಜಯ | – | ವೈಶ್ವಾಮಿತ್ರ ಮಾಧುಚ್ಛಂದಸ ಧಾನಂಜಯ ತ್ರ್ಯಾರ್ಷೇಯ |
| ಧನಂಜಯ | – | ವೈಶ್ವಾಮಿತ್ರ ಮಧುಚ್ಛಂದಸ ಆಘಮರ್ಷಣ ತ್ರ್ಯಾರ್ಷೇಯ |
| ಆಘಮರ್ಷಣ | – | ವೈಶ್ವಾಮಿತ್ರ ಅಘಮರ್ಷಣ ಕೌಶಿಕ ತ್ರ್ಯಾರ್ಷೇಯ |
| ಪೂರಣ | – | ವೈಶ್ವಾಮಿತ್ರ ಪೌರಣ ದ್ವ್ಯಾರ್ಷೇಯ |
| ಪೂರಣ | – | ವೈಶ್ವಾಮಿತ್ರ ದೇವರಾತ ಪೌರಣ ತ್ರ್ಯಾರ್ಷೇಯ |
| ಇಂದ್ರಕೌಶಿಕ | – | ವೈಶ್ವಾಮಿತ್ರ ಇಂದ್ರಕೌಶಿಕ ದ್ವ್ಯಾರ್ಷೇಯ |
| ಆಶ್ಮರಥ್ಯ | – | ವೈಶ್ವಾಮಿತ್ರ ಆಶ್ಮರಥ್ಯ ವಾಧೂಲ ತ್ರ್ಯಾರ್ಷೇಯ |
| ಸಾಹುಲ | – | ವೈಶ್ವಾಮಿತ್ರ ಸಾಹುಲ ಮಾಹುಲ ತ್ರ್ಯಾರ್ಷೇಯ |
| ಗಾಥಿನ | – | ವೈಶ್ವಾಮಿತ್ರ ಗಾಥಿನ ರೈಣವ ತ್ರ್ಯಾರ್ಷೇಯ |
| ವೈಣವ | – | ವೈಶ್ವಾಮಿತ್ರ ಗಾಥಿನ ವೈಣವ ತ್ರ್ಯಾರ್ಷೇಯ |
| ಹಿರಣ್ಯರೇತಸ | – | ವೈಶ್ವಾಮಿತ್ರ ಹೈರಣ್ಯರೇತಸ ದ್ವ್ಯಾರ್ಷೇಯ |
| ಸುವರ್ಣರೇತಸ | – | ವೈಶ್ವಾಮಿತ್ರ ಸೌವರ್ಣರೇತಸ ದ್ವ್ಯಾರ್ಷೇಯ |
| ಕಪೋತರೇತಸ | – | ವೈಶ್ವಾಮಿತ್ರ ಕಾಪೋತರೇತಸ ದ್ವ್ಯಾರ್ಷೇಯ |
| ಶಾಲಂಕಾಯನ | – | ವೈಶ್ವಾಮಿತ್ರ ಶಾಲಂಕಾಯನ ಕೌಶಿಕ ತ್ರ್ಯಾರ್ಷೇಯ |
| ಕಥಕ | – | ವೈಶ್ವಾಮಿತ್ರ ಕಾಥಕ ದ್ವ್ಯಾರ್ಷೇಯ |
| ರೌಹಿಣ | – | ವೈಶ್ವಾಮಿತ್ರ ಮಾಧುಚ್ಛಂದಸ ರೌಹಿಣ ತ್ರ್ಯಾರ್ಷೇಯ |
| ವಸಿಷ್ಠ | – | ವಾಸಿಷ್ಠ ಇಂದ್ರಪ್ರಮದ ಆಭರದ್ವಸು ತ್ರ್ಯಾರ್ಷೇಯ |
| ವಸಿಷ್ಠ | – | ವಾಸಿಷ್ಠ ಏಕಾರ್ಷೇಯ |
| ಕುಂಡಿನ | – | ವಾಸಿಷ್ಠ ಮೈತ್ರಾವರುಣ ಕೌಂಡಿನ್ಯ ತ್ರ್ಯಾರ್ಷೇಯ |
| ಉಪಮನ್ಯವ | – | ವಾಸಿಷ್ಠ ಇಂದ್ರಪ್ರಮದ ಆಭರದ್ವಸು ತ್ರ್ಯಾರ್ಷೇಯ |
| ಪರಾಶರ | – | ವಾಸಿಷ್ಠ ಶಾಕ್ತ್ಯ ಪಾರಾಶರ್ಯ ತ್ರ್ಯಾರ್ಷೇಯ |
| ಇಧ್ಮವಾಹ | – | ಆಗಸ್ತ್ಯ ದಾರ್ಢಚ್ಯುತ ಐಧ್ಮವಾಹ ತ್ರ್ಯಾರ್ಷೇಯ |
| ಇಧ್ಮವಾಹ | – | ಆಗಸ್ತ್ಯ ಏಕಾರ್ಷೇಯ |

| ಗೋತ್ರ | | ಪ್ರವರ |
|---|---|---|
| ಸಾಂಭವಾಹ | – | ಆಗಸ್ತ್ಯ ದಾರ್ಢಚ್ಯುತ ಸಾಂಭವಾಹ ತ್ರ್ಯಾರ್ಷೇಯ |
| ಸೋಮವಾಹ | – | ಆಗಸ್ತ್ಯ ದಾರ್ಢಚ್ಯುತ ಸೋಮವಾಹ ತ್ರ್ಯಾರ್ಷೇಯ |
| ಯಜ್ಞವಾಹ | – | ಆಗಸ್ತ್ಯ ದಾರ್ಢಚ್ಯುತ ಯಜ್ಞವಾಹ ತ್ರ್ಯಾರ್ಷೇಯ |
| ದರ್ಭವಾಹ | – | ಆಗಸ್ತ್ಯ ದಾರ್ಢಚ್ಯುತ ದರ್ಭವಾಹ ತ್ರ್ಯಾರ್ಷೇಯ |
| ಸಾರವಾಹ | – | ಆಗಸ್ತ್ಯ ದಾರ್ಢಚ್ಯುತ ಸಾರವಾಹ ತ್ರ್ಯಾರ್ಷೇಯ |
| ಅಗಸ್ತ್ಯ | – | ಆಗಸ್ತ್ಯ ಮಾಹೇಂದ್ರ ಮಾಯೋಭುವ ತ್ರ್ಯಾರ್ಷೇಯ |
| ಪೂರ್ಣಮಾಸ | – | ಆಗಸ್ತ್ಯ ಪೌರ್ಣಮಾಸ ಪಾರಣ ತ್ರ್ಯಾರ್ಷೇಯ |
| ಹಿಮೋದಕ | – | ಆಗಸ್ತ್ಯ ಹೈಮವರ್ಚಿ ಹೈಮೋದಕ ತ್ರ್ಯಾರ್ಷೇಯ |
| ಪಾಣಿಕ | – | ಆಗಸ್ತ್ಯ ಪೈನಾಯಕ ಪಾಣಿಕ ತ್ರ್ಯಾರ್ಷೇಯ |
| ಶೌಂಗ(ಶೈಶಿರ) | – | ಆಂಗಿರಸ ಬಾರ್ಹಸ್ಪತ್ಯ ಭಾರದ್ವಾಜ ಶೌಂಗ ಶೈಶಿರ ಪಂಚಾರ್ಷೇಯ |
| ಶೌಂಗ(ಶೈಶಿರ) | – | ಆಂಗಿರಸ ಬಾರ್ಹಸ್ಪತ್ಯ ಭಾರದ್ವಾಜ ಕಾತ್ಯ ಆತ್ಕೀಲ ಪಂಚಾರ್ಷೇಯ |
| ಶೌಂಗ(ಶೈಶಿರ) | – | ಆಂಗಿರಸ ಕಾತ್ಯ ಆತ್ಕೀಲ ತ್ರ್ಯಾರ್ಷೇಯ |
| ಶೌಂಗ(ಶೈಶಿರ) | – | ಭಾರದ್ವಾಜ ಕಾತ್ಯ ಆತ್ಕೀಲ ತ್ರ್ಯಾರ್ಷೇಯ |
| ಸಂಕೃತಿ | – | ಆಂಗೀರಸ ಗೌರವೀತಿ ಸಾಂಕೃತ್ಯ ತ್ರ್ಯಾರ್ಷೇಯ |
| ಸಂಕೃತಿ | – | ಶಾಕ್ತ್ಯ ಗೌರವೀತಿ ಸಾಂಕೃತ್ಯ ತ್ರ್ಯಾರ್ಷೇಯ |
| ಲೌಗಾಕ್ಷಿ | – | ಕಾಶ್ಯಪ ಅವತ್ಸಾರ ವಾಸಿಷ್ಠ ತ್ರ್ಯಾರ್ಷೇಯ |
| ಲೌಗಾಕ್ಷಿ | – | ಕಾಶ್ಯಪ ಅವತ್ಸಾರ ಆಸಿತ ತ್ರ್ಯಾರ್ಷೇಯ |
| ದೇವರಾತ | – | ವೈಶ್ವಾಮಿತ್ರ ದೇವರಾತ ಔದಲ ತ್ರ್ಯಾರ್ಷೇಯ |
| ಧನಂಜಯ | – | ವಿಶ್ವಾಮಿತ್ರ ಮಾಧುಚ್ಛಂದಸ ಧನಂಜಯ ತ್ರ್ಯಾರ್ಷೇಯ |
| ಜಾತೂಕರ್ಣ್ಯ | – | ವಾಸಿಷ್ಠ ಆತ್ರೇಯ ಜಾತೂಕರ್ಣ್ಯ ತ್ರ್ಯಾರ್ಷೇಯ |

**ನಮಃ ಪರಮಋಷಿಭ್ಯೋ ನಮಃ ಪರಮಋಷಿಭ್ಯಃ** (ಪ್ರಶ್ನೋಪನಿಷತ್)

# ಕೃಷ್ಣಾರ್ಪಣ

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಸಿ ದದಾಸಿ ಯತ್**

**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್**

ಇದು ಮಹಾಭಾರತದ **ಗೀತೆ**ಯಲ್ಲಿನ ಕೃಷ್ಣನ ಮಾತು. ಏನು ಕರ್ಮ ನಡೆಸಿದರೂ ಅದನ್ನು ತನಗೆ ಒಪ್ಪಿಸುವಂತೆ ಕೃಷ್ಣ ಆದೇಶಿಸಿದ್ದಾನೆ. ಬೇರೆ ಯಾರ ಹೆಸರಿನಲ್ಲಿಯೂ ಕರ್ಮಾರ್ಪಣ ನಡೆಸುವಂತಿಲ್ಲ. ಹೀಗೆ ಕೃಷ್ಣಾರ್ಪಣದ ಹಿರಿಮೆ. ಇನ್ನೊಬ್ಬರಿಗೆ ಒಪ್ಪಿಸಿದರೆ ಹಾಳು. ಕೃಷ್ಣನಿಗೆ ಅರ್ಪಿಸಿದರೆ ಒಳಿತೆಂದು **ಪಾದ್ಮ**ದ ನುಡಿ -

**ಕೃಷ್ಣಾರ್ಪಿತಂ ಕುಶಲದಂ ಅನ್ಯಾರ್ಪಿತಮಸೌಖ್ಯದಮ್**

**ಕಣ್ವಸ್ಮೃತಿ**ಯು ಕರ್ಮ ಸಫಲವಾಗುವುದು ವಿಷ್ಣುವಿಗೆ ಅರ್ಪಿಸಿದಾಗ ಎಂದು ತಿಳಿಸಿದೆ -

**ವಿಷ್ಣ್ವರ್ಪಿತಾನಿ ಕರ್ಮ್ಮಾಣಿ ಸಫಲಾನಿ ಭವಂತಿ ಹಿ**

**ಅನರ್ಪಿತಾನಿ ಕರ್ಮ್ಮಾಣಿ ಭಸ್ಮನಿ ನ್ಯಸ್ತಹವ್ಯವತ್**

ಆಚಾರ್ಯಮಧ್ವರು ಕರ್ಮವನ್ನು ವಿಷ್ಣುವಿಗೆ ಅರ್ಪಿಸದಲ್ಲಿ ಜ್ಞಾನ ದೊರಕದೆಂದು ಹೇಳಿದ್ದಾರೆ. ಜ್ಞಾನ ಇಲ್ಲದಲ್ಲಿ ಕರ್ಮಬಂಧ ಸಂಸಾರ ನಿವೃತ್ತಿ ಆಗದು ಎಂದು ಶಾಸ್ತ್ರಗಳ ಅಭಿಪ್ರಾಯವನ್ನು ನೀಡಿದ್ದಾರೆ.

**ಕರ್ಮ್ಮಣಾ ನಿರಪೇಕ್ಷಣ ಶ್ರೀವಿಷ್ಣೋಶ್ಚಾರ್ಪಿತೇನ ಚ**

**ಸಮ್ಯಕ್ ಜ್ಞಾನಂ ಭವೇತ್ಪುಂಸಾಂ ದೇವತಾತೃಪ್ತಿಪೂರ್ವಕಮ್**

**ವಿನಾ ಯದರ್ಪಣಂ ಸಮ್ಯಕ್ ಜ್ಞಾನಂ ನಾಪ್ನೋತ್ಯನುತ್ತಮಮ್**

**ದೇಹಿನಾಂ ಯಾಃ ಪ್ರವರ್ತ್ತಂತೇ ಪ್ರಾತರಾರಭ್ಯ ಸತ್ಕ್ರಿಯಾಃ**

**ತಾಶ್ಚ ವಿಷ್ಣ್ವರ್ಪಣಂ ಕುರ್ಯಾತ್ ಕರ್ಮ್ಮಪಾಶಾದ್ವಿಮುಚ್ಯತೇ**

ಕಲಿಯುಗದಲ್ಲಿ ಕೃಷ್ಣನನ್ನೇ ಜಪಿಸುವಂತೆ ಆರಾಧಿಸುವಂತೆ **ಭಾಗವತ** ಕರೆಕೊಟ್ಟಿದೆ. ಅದಕ್ಕಾಗಿ ಕೃಷ್ಣನಿಗೇನೇ ಎಲ್ಲದರ ಸಮರ್ಪಣೆ-

**ಕೃಷ್ಣವರ್ಣ್ಣಂ ಕಲೌ ಕೃಷ್ಣಂ ಸಾಂಗೋಪಾಂಗಂ ಸಪಾರ್ಷದಮ್**



**ಯಜ್ಞೈಃ ಸಂಕೀರ್ತನಪ್ರಾಯೈಃ ಯಜಂತಿ ಹಿ ಸುಮೇಧಸಃ**

ಇಲ್ಲಿ ಹೇಳಲ್ಪಟ್ಟ ಸಂಕೀರ್ತನ ಯಜ್ಞವು ಅರ್ಥಾನುಸಂಧಾನಪೂರ್ವಕ ನಡೆಸಲ್ಪಡುವ ನಾಮೋಚ್ಚಾರಣೆ ಅಂದರೆ ಜಪ. ಅದಕೆಂದೇ ಸುಮೇಧಸರೆಂದು ಧೀ ಪ್ರಚೋದನೆ ಪಡೆದವರನ್ನು ಪುರಾಣ ಗುರುತಿಸಿದೆ.

ನಮ್ಮ ನಿತ್ಯದ ಜಪವು ಸೂರ್ಯನ ಪ್ರತೀಕದಲ್ಲಿ ನಡೆಸಲ್ಪಡುವುದು. ಅಲ್ಲಿನ ನಾರಾಯಣನು ನಮ್ಮ ಇಷ್ಟದೈವನು. ಹೀಗಿರುವಾಗ ಕೃಷ್ಣನಿಗೇನು ಸಂಬಂಧ ಎಂದರೆ ಕೃಷ್ಣನೇ ಸೂರ್ಯನೊಳಗಿದ್ದು ನಮಗೆ ಫಲಪ್ರದನೆನಿಸಿದ್ದಾನೆ ಎನ್ನುವುದು ಅವನದ್ದೇ ಸಂದೇಶ –

**ಯದಾದಿತ್ಯಗತಂ ತೇಜಃ ಜಗದ್ಭಾಸಯತೇಽಖಿಲಮ್**

**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್**

ಕೃಷ್ಣನ ಎದುರೇ ಭೀಷ್ಮನು ಪರಮಧರ್ಮವನ್ನಾಗಿ ತಿಳಿಸಿಕೊಡುತ್ತಾ ಕೃಷ್ಣನ ಈ ಪರಿಯನ್ನು ಬಹಳವಾಗಿ ಹೇಳಿದ್ದಾನೆ. ಬಾನಲ್ಲಿ ಬೆಳಗುವ ಸೂರ್ಯನು ಭಗವಂತನ ತೇಜಸ್ಸನ್ನು ಉಪಯೋಗಿಸಿ ಬೆಳಗುವನೆಂಬ ಅಂಶವನ್ನಿಲ್ಲಿ ಪ್ರಕಟಗೊಳಿಸಿರುವನು –

**ಸ ರಶ್ಮಿವಾನ್ ಸವಿತಾ ಚಾದಿದೇವಃ**

**ಸ ಏವ ಕಾಲಂ ವಿಭಜನ್ನುದೇತಿ**

**ತಸ್ಯೋತ್ತರಂ ದಕ್ಷಿಣಂ ಚಾಯನೇ ದ್ವೇ**

**ತಸ್ಯೈವೋರ್ಧ್ವಂ ತಿರ್ಯಗಧಶ್ಚರಂತಿ**

**ಗಭಸ್ತಯೋ ಮೇದಿನೀಂ ಭಾಸಯಂತಃ**

**ತಂ ಬ್ರಾಹ್ಮಣಾ ವೇದವಿದೋ ಜುಷಂತಿ**

**ತಸ್ಯಾದಿತ್ಯೋ ಗಾಮುಪಯುಜ್ಯ ಭಾತಿ**

ಆ ಭಗವಂತನನ್ನು ಎಲ್ಲ ದೇವತೆಗಳೂ ತಿಳಿದು ಆರಾಧನೆಗೈಯುತ್ತಿರುವುದನ್ನು ಭೀಷ್ಮರು ಇಲ್ಲಿ ದಾಖಲೆಗೊಳಿಸಿದ್ದಾರೆ. ಮನುಷ್ಯಲೋಕದ ಜ್ಞಾನಿಗಳು ವೇದಸಾರಮಂತ್ರವೆನಿಸಿದ ಗಾಯತ್ರಿಯಿಂದ ಆ

ಕೃಷ್ಣನನ್ನೇ ಜಪಿಸುವರು –

**ತಂ ಕರ್ಮಭಿರ್ವಿದಿತಂ ವೈ ಸ್ತುವಂತಿ**

**ತಂ ಗಂಧರ್ವಾಣಾಂ ಅಪ್ಸರಸಾಂ ಚ ನಿತ್ಯಂ**

**ಉಪತಿಷ್ಠಂತೇ ವಿಬುಧಾನಾಂ ಶತಾನಿ**

**ತಂ ರಾಕ್ಷಸಾಶ್ಚ ಪರಿಸಂವದಂತಿ**

**ರಾಜನ್ಯಾನಾಂ ಸ ವಿಜಿಗೀಷುರೇಕಃ**

**ತಮಧ್ವರೇ ಶಂಸಿತಾರಃ ಸ್ತುವಂತಿ**

**ರಥಂತರೇ ಸಾಮಗಾಶ್ಚ ಸ್ತುವಂತಿ**

**ತಂ ಬ್ರಾಹ್ಮಣಾಃ ಬ್ರಹ್ಮಮಂತ್ರೈಃ ಸ್ತುವಂತಿ**

**ತಸ್ಮೈ ಹವಿರಧ್ವರ್ಯವಃ ಕಲ್ಪಯಂತಿ**

ಕಾಲಚಕ್ರನಿವನು ಮೂರು ಬಗೆಯ ಋತುಗಳಿಗೆ ಕಾರಣನು. ಏಳು ವಾರದ ಒಡೆಯ. ಮೂರು ಹೊತ್ತಿನ ಕರ್ಮಫಲದಾತೃ. ಸ್ವತಂತ್ರನಾಗಿಯೇ ಎಲ್ಲಾ ಜೀವರನ್ನು ಹೊತ್ತವನು –

**ಸ ಏವೋಕ್ತಶ್ಚಕ್ರಮಿದಂ ತ್ರಿನಾಭಿ**

**ಸಪ್ತಾಶ್ವಯುಕ್ತಂ ವಹತೇ ವೈ ತ್ರಿಧಾಮಾ**

**ಹಿರಣ್ಮಯಃ ಸಪ್ತಗೂಢಃ ಸಸಂವಿತ್**

**ಚತುರ್ಬಾಹುಃ ಪನ್ನಗಃ ಪದ್ಮನಾಭಃ**

**ಮಹಾತೇಜಾಃ ಸರ್ವಗಃ ಸರ್ವಸಿಂಹಃ**

**ಕೃಷ್ಣೋ ಲೋಕಾನ್ ಧಾರಯತೇ ಯಥೈಕಃ**

ರಾತ್ರಿ ಹಗಲು ನಡೆಸುವ ಎಲ್ಲ ಬಗೆಯ ಕಾಲಗಳ ಅವಯವ ಸ್ವರೂಪನು ಎಲ್ಲೆಡೆಯ ಒಳ ಹೊರಗಿನ ಕತ್ತಲೆಯ ತೆಗೆವ ಸರ್ವಕರ್ತೃ ಕೃಷ್ಣನೇ. ಆತನಲ್ಲಿಯೇ ಎಲ್ಲ ದೇವತೆಗಳು ಆಶ್ರಯವನ್ನು ಪಡೆದಿದ್ದಾರೆ. ಎಲ್ಲರೂ ಅವನ ಸದಾ ಸೇವಕರು. ಎಲ್ಲದರ ಅಭಿಮಾನಿದೇವತೆಗಳೂ ಅವನಿಂದಲೇ ಹುಟ್ಟಿಬಂದವರು –

**ಹಂಸಂ ತಮೋಘ್ನಂ ಚ ತಮೇವ ವೀರ**

**ಕೃಷ್ಣಂ ಸದಾ ಪಾರ್ಥ ಕರ್ತಾರಮೇಹಿ**

**ಸರ್ವೇ ದೇವಾ ದೇವಕೀಪುತ್ರ ಏವ**

**ಸ ವತ್ಸರಃ ಸ ಋತುಃ ಸೋಽರ್ಧಮಾಸಃ**

**ಸೋಽಹೋರಾತ್ರಃ ಸ ಕಲಾ ವೈ ಸ ಕಾಷ್ಠಾಃ**

**ಮಾತ್ರಾ ಮುಹೂರ್ತಾಶ್ಚ ಲವಾಃ ಕ್ಷಣಾಶ್ಚ**

**ವಿಷ್ವಕ್ಸೇನಃ ಸರ್ವಮೇತತ್ ಪ್ರತೀಹಿ**

**ಚಂದ್ರಾದಿತ್ಯೌ ಗ್ರಹನಕ್ಷತ್ರತಾರಾಃ**

**ಸರ್ವಾಣಿ ದರ್ಶಾನ್ಯಥ ಪೌರ್ಣ್ಣಮಾಸಮ್**

**ನಕ್ಷತ್ರಯೋಗಾ ಋತವಶ್ಚ ಪಾರ್ಥ**

**ವಿಷ್ವಕ್ಸೇನಾತ್ ಸರ್ವಮೇತತ್ ಪ್ರಸೂತಮ್**

ಕೃಷ್ಣನ ಬಗೆಗೆ ಇದಕ್ಕಿಂತ ಬೇರೆಯಾದ ಚಿಂತನೆಯು ತಪ್ಪೆನಿಸಿದೆ. ಇಲ್ಲಿ ಹೇಳಿದ್ದಕ್ಕಿಂತಲೂ ಹೆಚ್ಚಿನವ ಕೃಷ್ಣ ಇದ್ದಾನೆ. ಆತನೇ **ನಾರಾಯಣನು** –

**ಯತ್ಪ್ರಶಸ್ತಂ ಚ ಲೋಕೇಷು ಪುಣ್ಯಂ ಯಚ್ಚ ಶುಭಾಶುಭಮ್**

**ತತ್ಸರ್ವಂ ಕೇಶವೋಽಚಿಂತ್ಯೋ ವಿಪರೀತಮತಃಪರಮ್**

**ಏತಾದೃಶಃ ಕೇಶವೋಽತಶ್ಚ ಭೂಯೋ**

**ನಾರಾಯಣಃ ಪರಮಶ್ಚಾವ್ಯಯಶ್ಚ**

ಎಲ್ಲ ಯಜ್ಞಗಳಲ್ಲಿ ಶ್ರೇಷ್ಠವಾದ ಜಪಯಜ್ಞದಲ್ಲಿ ತನ್ನ ವಿಶೇಷ ಒಲವನ್ನು ವಿಭೂತಿಯನ್ನು ಶ್ರೀಕೃಷ್ಣನು ಹೇಳಿಕೊಂಡಿದ್ದಾನೆ –

**ಯಜ್ಞಾನಾಂ ಜಪಯಜ್ಞೋಽಸ್ಮಿ** (ಭಗವದ್ಗೀತೆ)

ಯಾವ್ಯಾವುದೋ ಮಂತ್ರಗಳ ಚಿಂತನೆಯನ್ನಿಲ್ಲಿ ಕೃಷ್ಣ ಹೇಳಿದ್ದಲ್ಲ. ನಿತ್ಯಕರ್ಮಗಳಲ್ಲಿ ಮುಖ್ಯವಾದ ಸಂಧ್ಯಾವಂದನೆಯೇ ಭಗವಂತನ ಪ್ರಿಯಕರವಾದ ಆರಾಧನೆಯಾಗಿ **ಧ್ರುವನು** ತಿಳಿಸಿಕೊಟ್ಟಿದ್ದಾನೆ –

**ಸಂಧ್ಯೋಪಾಸ್ತಿಃ ಭವಾನ್ ದೇವ ಸರ್ವನಿತ್ಯೇಷು ಕರ್ಮ್ಮಸು**

(ಸ್ಕಾಂದಪುರಾಣ)



ಎಲ್ಲ ಬೇಕಿದ್ದರೂ ಮೋಕ್ಷವನ್ನೇ ಬಯಸಿದ್ದರೂ ಏನೇನೂ ಬೇಡವಾದರೂ ಕೃಷ್ಣನ ಸರ್ವೋತ್ತಮನ ನಮ್ಮೊಳಗೆ ನಿಂತವನ ಚಿಂತನೆಯನ್ನು ಬಿಡಬಾರದು –

**ಅಕಾಮೋ ಧರ್ಮಕಾಮೋ ವಾ ಮೋಕ್ಷಕಾಮೋಽಥ ಯೋ ಭವೇತ್**

**ಅಥವಾ ಸರ್ವಕಾಮೋ ಯಃ ಸ ವಿಷ್ಣುಂ ಪುರುಷಂ ಯಜೇತ್**

**ಅಥರ್ವವೇದ** ಕೃಷ್ಣಾರ್ಪಣಮಂತ್ರವನ್ನು ಹೇಳಿದೆ –

**ಯಸ್ಮಾತ್ಕೋಶಾದುದಭರಾಮ ವೇದಂ** (ಯಾವ ದೇವನಿಂದ ಅರಿವನ್ನು ಪಡೆದೆವೋ)

**ತಸ್ಮಿನ್ನಂತವದಧ್ಮ ಏನಮ್** (ಅವನಲ್ಲಿ ಈ ಅರಿವನ್ನು ಒಪ್ಪಿಸುವ)

**ಕೃತಮಿಷ್ಟಂ ಬ್ರಹ್ಮಣೋ ವೀರ್ಯೇಣ**

(ವೇದದ / ದೇವರ ಬಲದಿಂದ ಇದು ಹಿತವಾಯಿತು)

**ತೇನ ಮಾ ದೇವಾಸ್ತಪಸಾಽವತೇಹ**

(ಆ ತಪಸ್ಸಿನಿಂದ ಮಾಡಿಸಿದ ದೇವತೆಗಳು ನನ್ನನ್ನಿಲ್ಲಿ ಕಾಪಾಡಲಿ)

**ಕಾಯೇನ ವಾಚಾ ಮನಸೇಂದ್ರಿಯೈರ್ವಾ**

**ಬುದ್ಧ್ಯಾತ್ಮನಾ ವಾಽನುಸೃತಸ್ವಭಾವಃ**

**ಕರೋತಿ ಯದ್ಯತ್ ಸಕಲಂ ಪರಸ್ಮೈ**

**ನಾರಾಯಣಾಯೇತಿ ಸಮರ್ಪಯೇತ್ತತ್**

ಕೃಷ್ಣನ ತಂದೆ ವಸುದೇವನಿಗೆ ಋಷಭಪುತ್ರ ಆದೇಶಗೈದ ಮಾತಿದು.

ನಾವೂ ಈ ಮಾತಿನಿಂದಲೇ ನಮ್ಮದೆಲ್ಲವನ್ನೂ ಪ್ರತಿನಿತ್ಯ ಶ್ರೀಕೃಷ್ಣನಿಗೆ ಸಮರ್ಪಿಸಬೇಕು –

ಕಾಯೇನ ವಾಚಾ ಮನಸೇಂದ್ರಿಯೈರ್ವಾ

ಬುದ್ಧ್ಯಾತ್ಮನಾ ವಾಽನುಸೃತಸ್ವಭಾವಃ

**ಕರೋಮಿ** ಯದ್ಯತ್ ಸಕಲಂ ಪರಸ್ಮೈ

ನಾರಾಯಣಾಯೇತಿ **ಸಮರ್ಪಯಾಮಿ**



# ಅಚ್ಯುತ-ಅನಂತ-ಗೋವಿಂದ

**ಮಂತ್ರತಸ್ತಂತ್ರತಶ್ಛಿದ್ರಂ ದೇಶಕಾಲಾರ್ಹವಸ್ತುತಃ**

**ಸರ್ವಂ ಕರೋತಿ ನಿಶ್ಛಿದ್ರಂ ಅನುಸಂಕೀರ್ತನಂ ತವ**

ಕರ್ಮದ ಕೊನೆಗೆ ಮಂತ್ರ-ತಂತ್ರ-ಯಂತ್ರಗಳ ಮತ್ತು ದೇಶ-ಕಾಲ-ದ್ರವ್ಯಗಳ ಹೆಚ್ಚು ಕಡಿಮೆಗೆ ಅನುಗುಣವಾಗಿಯೇ ದೇವರ ಚಿಂತನೆ ನಡೆಸಲು ಭಾಗವತ ಹೇಳಿದೆ - **ನ್ಯೂನಾತಿರಿಕ್ತತಾಸಿದ್ಧ್ಯೈ ಕಲೌ ವೇದೋಕ್ತಕರ್ಮಣಾಮ್**

**ಹರಿಸ್ಮರಣಮೇವಾಂತೇ ಸಂಪೂರ್ಣಫಲದಾಯಕಮ್**

ಸಂಧ್ಯಾವಂದನೆಯಲ್ಲಿ ಆಗಿರುವ ಲೋಪದೋಷಗಳ ನಿವೃತ್ತಿಗೆ, ಜಪದ ಕೊನೆಗೆ ಹರಿಸ್ಮರಣೆ ನಡೆಸಿದರೆ ಕರ್ಮವು ಪೂರ್ಣಫಲವನ್ನು ಕೊಡಲಿದೆ ಎಂದು **ನಾರದೀಯಪುರಾಣ** -

**ಪ್ರಮಾದಾತ್ಕುರ್ವತಾಂ ಕರ್ಮ ಪ್ರಚ್ಯವೇತಾಧ್ವರೇಷು ಯತ್**

**ಸ್ಮರಣಾದೇವ ತದ್ವಿಷ್ಣೋಃ ಸಂಪೂರ್ಣಂ ಸ್ಯಾದಿತಿ ಶ್ರುತಿಃ**

ಎಂದಂತೆ ಕೃಷ್ಣಾರ್ಪಣದ ಬಳಿಕ ಕರ್ಮಚ್ಯುತಿಯ ಪ್ರಾಯಶ್ಚಿತ್ತವಾಗಿ ಕರ್ಮದ ಆನಂತ್ಯಕ್ಕಾಗಿ, ದೇವರ ದಯೆಗಾಗಿ, ವಿಷ್ಣುವಿನ ನಾಮಸ್ಮರಣೆಯನ್ನು ಚೆನ್ನಾಗಿ ನಡೆಸಬೇಕು -

**ಯಸ್ಯಾಂತಃ ಸರ್ವಮೇವೇದಂ ಅಚ್ಯುತಸ್ಯಾವ್ಯಯಾತ್ಮನಃ**

**ತಮಾರಾಧಯ ಗೋವಿಂದಂ ಸ್ಥಾನಮಗ್ರ್ಯಂ ಯದಿಚ್ಛಸಿ**

**ಗೋವಿಂದಸ್ಮರಣಂ ಪುಂಸಾಂ ಪಾಪರಾಶಿಮಹಾಚಲಮ್**

**ಅಸಂಶಯಂ ದಹತ್ಯಾಶು ತೂಲರಾಶಿಮಿವಾನಲಃ**

**ಕೃಷ್ಣಾಮೃತಮಹಾರ್ಣವದಲ್ಲಿ** ತಪ್ಪು ಪರಿಮಾರ್ಜನೆಗೆ ಅಚ್ಯುತನ ಅವ್ಯಯನ ಗೋವಿಂದನ ಸ್ಮರಣೆಯನ್ನು ಹೇಳಲಾಗಿದೆ.

**ಅಚ್ಯುತೇತಿ ಮನಃ ಪೂತಂ ಅನಂತೇತಿ ಚ ವಾಕ್ಪುನಃ**

**ಗೋವಿಂದೇತಿ ತನುಃಪೂತಾ ತ್ವಜ್ಞಾತಜ್ಞಾತಪಾತಕೈಃ**

ಕರ್ಮ ನಡೆಸುವಾಗ ತ್ರಿಕರಣದಿಂದಾದ ದೋಷ ಪರಿಹಾರಕ್ಕೆ



ನಾಮತ್ರಯದ ಜಪ. ಇದರ ಅರ್ಥ ವಿಸ್ತಾರಗಳು ಫಲಚಿಂತನೆಗಳು ಶಾಸ್ತ್ರಗಳಲ್ಲಿ ಬಂದಿವೆ – ನಷ್ಟಾಂ ವೈ ಧರಣೀಂ ಪೂರ್ವಂ ಅವಿಂದಂ ವೈ ಗುಹಾಗತಾಮ್

ಗೋವಿಂದ ಇತಿ ತೇನಾಹಂ ದೇವೈರ್ವಾಗ್ಭಿರಭಿಷ್ಟುತಃ

ಆಶ್ರಿತಾನಾಂ ಚ್ಯುತಿರ್ನಾಸ್ತಿ ಯಸ್ಮಾತ್ತೋಽಚ್ಯುತ ಈರಿತಃ

ಯಸ್ಮಾನ್ನ ಚ್ಯುತಪೂರ್ವೋಽಹಂ ಅಚ್ಯುತಸ್ತೇನ ಕರ್ಮಣಾ (ಮಹಾಭಾರತ)

ಅಚ್ಯುತಾನಂತಗೋವಿಂದ ಪ್ರಣತಾರ್ತಿಪ್ರಣಾಶನ

ದೇಹಿ ಮೇಽದ್ಯ ಮನಃಶುದ್ಧಿಂ ತ್ವನ್ನಾಮಸ್ಮರಣಾದ್ಧರೇ (ವಾಯುಪುರಾಣ)

ಭಗವನ್ನಕ್ಷಯೋಽಸಿ ತ್ವಂ ಅಚ್ಯುತೋಽಸಿ ಗುಣೈಸ್ಸದಾ

ಪ್ರಾಣಾಚ್ಚ ಸುಖತೋ ನಿತ್ಯಂ ಅಧಿಕಶ್ಚೇತಿ ಚಿಂತಯೇತ್ (ಸತ್ತತ್ವ)

ಚ್ಯವನೋತ್ಪತ್ತಿಯುಕ್ತೇಷು ಬ್ರಹ್ಮೇಂದ್ರವರುಣಾದಿಷು

ಯಸ್ಮಾನ್ನ ಚ್ಯವತೇ ಸ್ಥಾನಾತ್ ತಸ್ಮಾತ್ಸಂಕೀರ್ತ್ಯತೇಽಚ್ಯುತಃ

ಸಾಧರ್ಮ್ಯೇಣಾವತಾರೇಽಪಿ ಬ್ರಹ್ಮೇಂದ್ರವರುಣಾದಿಭಿಃ

ನ ಸ್ವೈಶ್ವರ್ಯಾತ್ಪ್ರಚ್ಯುತೋ ಯಃ ಸೋಽಚ್ಯುತಃ ಪರಿಕೀರ್ತಿತಃ

ಅಚ್ಯುತಾನಂತ ಗೋವಿಂದ ಇತಿ ನಾಮತ್ರಯಂ ಹರೇಃ

ಯೋ ಜಪೇತ್ ಪ್ರಯತೋ ಭಕ್ತ್ಯಾ ಪ್ರಣವಾದ್ಯಂ ನಮೋಽಂತಕಮ್

ತಸ್ಯ ಮೃತ್ಯುಭಯಂ ನಾಸ್ತಿ ವಿಷರೋಗಾಗ್ನಿಜಂ ಭಯಮ್

ನಾಮತ್ರಯಂ ಮಹಾಮಂತ್ರಂ ಜಪೇದ್ಯಃ ಪ್ರಯತಾತ್ಮವಾನ್

ಕಾಲಮೃತ್ಯುಭಯಂ ಚಾಪಿ ತಸ್ಯ ನಾಸ್ತಿ ಕಿಮನ್ಯತಃ

ಇತಿ ನಾಮತ್ರಯೇಣೈವ ಪೀತಂ ದೇವಿ ಮಯಾ ವಿಷಮ್ (ಪದ್ಮಪುರಾಣ)

ಚಿಂತ್ಯಮಾನಃ ಸಮಸ್ತಾನಾಂ ಕ್ಲೇಶಾನಾಂ ಹಾನಿದೋ ಹಿ ಯಃ

ಸಮುತ್ಸೃಜ್ಯಾಖಿಲಂ ಚಿಂತ್ಯಂ ಸೋಽಚ್ಯುತಃ ಕಿಂ ನ ಚಿಂತ್ಯತೇ

ಅತಿಪಾತಕಯುಕ್ತೋಽಪಿ ಧ್ಯಾಯನ್ನಿಮಿಷಮಚ್ಯುತಮ್

ಭೂಯಸ್ತಪಸ್ವೀ ಭವತಿ ಪಂಕ್ತಿಪಾವನಪಾವನಃ

ಯಸ್ಮಿನ್ನ್ಯಸ್ತಮತಿರ್ನ್ನಯಾತಿ ನರಕಂ ಸ್ವರ್ಗೋಽಪಿ ಯಚ್ಚಿಂತನೇ



ವಿಘ್ನೋ ಯತ್ರ ನಿವೇಶಿತಾತ್ಮಮನಸೋ ಬ್ರಾಹ್ಮೋಽಪಿ ಲೋಕೋಽಲ್ಪಕಃ

ಮುಕ್ತಿಂ ಚೇತಸಿ ಯಃ ಸ್ಥಿತೋಽಮಲಧಿಯಾಂ ಪುಂಸಾಂ ದದಾತ್ಯವ್ಯಯಃ

ಕಿಂ ಚಿತ್ರಂ ತದಘಂ ಪ್ರಯಾತಿ ವಿಲಯಂ ತತ್ರಾಚ್ಯುತೇ ಕೀರ್ತ್ತಿತೇ (ವಿಷ್ಣುಪುರಾಣ)

ಅನನಾದದನಾಚ್ಚಾಪಿ ಹ್ಯನಂತಃ ಪರಿಪಠ್ಯತೇ

ಅವಿಕಾರ್ಯಸ್ವಭಾವತ್ವಾತ್ ಅವ್ಯಾಪ್ಯತ್ವಾತ್ತಥಾಚ್ಯುತಃ (ಅಹಿರ್ಬುಧ್ನ್ಯಸಂಹಿತಾ)

ಅನಿತ್ಯತ್ವಂ ದೇಹಹಾನಿಃ ದುಃಖಪ್ರಾಪ್ತಿರಪೂರ್ಣ್ಣತಾ

ನಾಶಶ್ಚತುರ್ವಿಧಃ ಪ್ರೋಕ್ತಃ ತದಭಾವೋ ಹರೇಸ್ಸದಾ (ಮಹಾವರಾಹ)

ನಿತ್ಯಂ ಸಂಚಿಂತಯೇದ್ದೇವಂ ಯೋಗಯುಕ್ತೋ ಜನಾರ್ದನಮ್

ಸಾಽಸ್ಯ ಮನ್ಯೇ ಪರಾ ರಕ್ಷಾ ಕೋ ಹಿನಸ್ತ್ಯಚ್ಯುತಾಶ್ರಯಮ್

ಸಕೃತ್ ಸ್ಮೃತೋಽಪಿ ಗೋವಿಂದೋ ನೃಣಾಂ ಜನ್ಮಶತೈಃ ಕೃತಮ್

ಪಾಪರಾಶಿಂ ದಹತ್ಯಾಶು ತೂಲರಾಶಿಮಿವಾನಲಃ

ಕಲಾವತ್ರಾಪಿ ದೋಷಾಢ್ಯೇ ವಿಷಯಾಸಕ್ತಮಾನಸಃ

ಕೃತ್ವಾಽಪಿ ಸಕಲಂ ಪಾಪಂ ಗೋವಿಂದಂ ಸಂಸ್ಮರನ್ ಶುಚಿಃ

ಅತಸೀಪುಷ್ಪಸಂಕಾಶಂ ಪೀತವಾಸಸಮಚ್ಯುತಮ್

ಯೇ ನಮಸ್ಯಂತಿ ಗೋವಿಂದಂ ನ ತೇಷಾಂ ವಿದ್ಯತೇ ಭಯಮ್ (ಗರುಡಪುರಾಣ)

ಸೇಯಂ ವದನವಲ್ಮೀಕವಾಸಿನೀ ರಸನೋರಗೀ

ಯಾ ನ ಗೋವಿಂದ ಗೋವಿಂದ ಗೋವಿಂದೇತಿ ಪ್ರಭಾಷತೇ

ಪಾಪವಲ್ಲೀ ಮುಖೇ ತಸ್ಯ ಜಿಹ್ವಾರೂಪೇಣ ತಿಷ್ಠತಿ

ಯಾ ನ ವಕ್ತಿ ದಿವಾರಾತ್ರೌ ಗುಣಾನ್ ಗೋವಿಂದಸಂಭವಾನ್

ಗೀತಾ ಗಂಗಾ ಚ ಗಾಯತ್ರೀ ಗೋವಿಂದೇತಿ ಹೃದಿ ಸ್ಥಿತೇ

ಚತುರ್ಗ್ಗಕಾರಸಂಯುಕ್ತೇ ಪುನರ್ಜ್ಜನ್ಮ ನ ವಿದ್ಯತೇ (ಭೀಷ್ಮಪರ್ವ)

ನಾಮತ್ರಯಮಹಾವಿದ್ಯಾ ತತಃ ಸರ್ವಫಲಪ್ರದಾ (ಋಷ್ಯಶೃಂಗಸಂಹಿತಾ)

ನಾಮತ್ರಯವಿಹೀನಾ ಯೇ ತೇ ವೈ ನಿರಯಗಾಮಿನಃ (ಶೇಷಧರ್ಮ)

ತನ್ನಾಮ್ನೋಚ್ಚಾರಣಾದೇವ ಸರ್ವಂ ಪೂರ್ಣ್ಣಂ ಭವೇತ್ ಶ್ರುತಿಃ (ಬ್ರಹ್ಮವೈವರ್ತ)



ಆಚಾರ್ಯಮಧ್ವರು ಕೃಷ್ಣಾಮೃತಮಹಾರ್ಣವದಲ್ಲಿ ಸಂಗ್ರಹಿಸಿದ ಮಾತುಗಳು – **ಗೋವಿಂದಸ್ಮರಣಂ ಪುಂಸಾಂ ಪಾಪರಾಶಿಮಹಾಚಲಮ್**

**ಅಸಂಶಯಂ ದಹತ್ಯಾಶು ತೂಲರಾಶಿಮಿವಾನಲಃ**

**ಕಲೌ ಪಾಪಂ ಕಿಯನ್ಮಾತ್ರಂ ಹತ್ಯಾಸ್ತೇಯಾದಿಸಂಭವಮ್**

**ಸ್ಮೃತೇ ಮನಸಿ ಗೋವಿಂದೇ ದಹ್ಯತೇ ತೂಲರಾಶಿವತ್**

**ಕಲಿಕಲ್ಮಷಮತ್ಯುಗ್ರಂ ನರಕಾರ್ತಿಪ್ರದಂ ನೃಣಾಮ್**

**ಪ್ರಯಾತಿ ವಿಲಯಂ ಸದ್ಯಃ ಸಕೃತ್ಸಂಕೀರ್ತಿತೇಽಚ್ಯುತೇ**

**ತ್ರಾಹಿ ತ್ರಾಹಿ ಜಗನ್ನಾಥ ವಾಸುದೇವಾಚ್ಯುತಾವ್ಯಯ**

**ಮಾಂ ಸಮುದ್ಧರ ಗೋವಿಂದ ದುಃಖಸಂಸಾರಸಾಗರಾತ್**

**ಅಚ್ಯುತಾನಂತಗೋವಿಂದನಾಮೋಚ್ಚಾರಣಭೀಷಿತಾಃ**

**ನಶ್ಯಂತಿ ಸಕಲಾ ರೋಗಾಃ ಸತ್ಯಂ ಸತ್ಯಂ ವದಾಮ್ಯಹಮ್** (ಅಗ್ನಿಪುರಾಣ)

ಬದುಕು ಒಂದು ಯಜ್ಞ ಇದರ ಕೊನೆ ಮರಣ – ಅವಭೃಥ ಎನ್ನುವುದಾಗಿ ಛಂದೋಗದ ಮಾತು – **ಮರಣಮೇವಾವಭೃಥಃ.** ಈ ಸಮಯದಲ್ಲಿ ನಾಮತ್ರಯವನ್ನು ಜಪಿಸುತ್ತಿರಬೇಕು –

**ಸೋಽಂತವೇಲಾಯಾಮೇತತ್ತ್ರಯಂ ಪ್ರತಿಪದ್ಯೇತ**

**ಅಕ್ಷಿತಮಸ್ಯಚ್ಯುತಮಸಿ ಪ್ರಾಣಸಂಶಿತಮಸೀತಿ**

ತ್ರಿರೂಪನ ಸ್ವರೂಪದ ಮಾಹಿತಿಯೊಡನೆ ಅವಭೃಥದ ಬಗ್ಗೆ ಆಚಾರ್ಯ ಮಧ್ವರ ಭಾಷ್ಯದಲ್ಲಿ ಸತ್ತತ್ತ್ವವಚನ –

**ಯಜ್ಞಸ್ನಾನಂ ತು ಮರಣಂ ಸದಾ ಧ್ಯಾಯೇತ್ತ್ರಯಂ ಪುಮಾನ್**

ಅನೇಕ ಬಗೆಯ ಸಾಳಗ್ರಾಮಗಳ ಲಕ್ಷಣಗಳನ್ನು ಪುರಾಣಗಳಲ್ಲಿ ಅಲ್ಲಲ್ಲಿ ಹೇಳಿದ್ದನ್ನು ಕಾಣಬಹುದು. ಮುಖ್ಯವಾಗಿ ಚಕ್ರಗಳ ಲೆಕ್ಕದಲ್ಲಿ ಸಾಳಗ್ರಾಮಗಳ ವೈವಿಧ್ಯವನ್ನು ಗುರುತಿಸುತ್ತಾರೆ. ನಾಮತ್ರಯಸಾಳಗ್ರಾಮಗಳು ಭಾರೀ ಅಪೂರ್ವವಾದವುಗಳು. ಅಚ್ಯುತ ಸಾಳಗ್ರಾಮದಲ್ಲಿ ಒಂಭತ್ತು ಚಕ್ರಗಳಿವೆ. ಗೋವಿಂದ ಸಾಳಗ್ರಾಮದಲ್ಲಿ ಹತ್ತು ಚಕ್ರಗಳಿವೆ. ಅನಂತ ಸಾಳಗ್ರಾಮದಲ್ಲಿ



ಹದಿನಾಲ್ಕು ಚಕ್ರಗಳಿವೆ. ಹದಿನಾಲ್ಕರ ಬಳಿಕ ಹತ್ತೊಂಬತ್ತು ಚಕ್ರದವರೆಗೆ ಅನಂತ. ಏಳು ಚಕ್ರದ ಅನಂತ ಸಾಳಗ್ರಾಮವನ್ನೂ ಮೂರರ ಅಚ್ಯುತನನ್ನೂ ಪರಿಚಯಿಸಿದ್ದಾರೆ –

1. ಚತುರ್ಬ್ಬಿಲಃ ಸ್ಪಷ್ಟಚಕ್ರೋ ವಾಮದಕ್ಷಿಣಪಾರ್ಶ್ವಯೋಃ
ಅಧಿಷ್ಠಿತೋ ಮುಖೇಪ್ಯೇಕಂ ಕುಂಡಲದ್ವಯಶೋಭಿತಃ
**ಸೋಚ್ಯುತಃ** ಕಥಿತೋ ನಾಮ್ನಾ ದುರ್ಲಭಸ್ತಪಸಾ ವಿನಾ
ಬಹಿಶ್ಚಕ್ರಸಮಾಯುಕ್ತೋ ಚಾಂತಶ್ಚಕ್ರದ್ವಯಾನ್ವಿತಃ
ಮೂರ್ತ್ತಿಃ ಸಾ **ಹ್ಯಚ್ಯುತಾ** ಜ್ಞೇಯಾ ಸೂಕ್ಷ್ಮರಂಧ್ರಾ ಸುಶೀತಲಾ

2. ಚತುರ್ದ್ದಶಾದ್ಯೈರೇಕೋನವಿಂಶಚ್ಚಕ್ರೈಶ್ಚ ಸಂಯುತಃ
**ಅನಂತ** ಇತಿ ವಿಖ್ಯಾತಃ ಸರ್ವಾಭೀಷ್ಟಫಲಪ್ರದಃ
ಶೇಷಾಕಾರೋ ಮಹಾಸ್ಥೂಲಃ ಸಪ್ತಚಕ್ರಸಮನ್ವಿತಃ
**ಅನಂತ** ಇತಿ ವಿಖ್ಯಾತಃ ಸರ್ವಸಂಪತ್ಪ್ರದಾಯಕಃ

3. ನಾತಿಸ್ಥೂಲಃ ಪಂಚವಕ್ತ್ರೋ **ಗೋವಿಂದಃ** ದಶಚಕ್ರಕಃ
ಕೃಷ್ಣವರ್ಣ್ಣಸಮಾಯುಕ್ತಃ ಸರ್ವಕಾಮಫಲಪ್ರದಃ

**ಅಗ್ನಿಪುರಾಣ** ಹೇಳಿದ ಚಾಲ್ತಿಯಲ್ಲಿಲ್ಲದ ಮೂರು ನಾಮ ಇಲ್ಲಿದೆ. ನಮ್ಮ ಇಂದ್ರಿಯಗಳನ್ನೆಲ್ಲ ಜಪಕರ್ಮಗಳಲ್ಲಿ ತೊಡಗಿಸುವ **ಹೃಷೀಕೇಶ,** ಮುಖ್ಯವಾಗಿ ಒಳಗಿನ ಇಂದ್ರಿಯವಾದ ಮನಸ್ಸು ಮಾಡಿದ ತಪ್ಪನ್ನು ಮನ್ನಿಸುತ್ತಾನೆ. ನಡುಗುಡಿಯಲ್ಲಿ ನೆಲೆನಿಂತು ದೇಹವನ್ನು ಮಡಿ ಮಾಡುವ **ಪುಂಡರೀಕಾಕ್ಷ,** ಶಾರೀರಿಕದೋಷವನ್ನು ಮನ್ನಿಸುವನು. ತಪ್ಪಿಲ್ಲದೇ ಮಂತ್ರಗಳನ್ನು ನುಡಿಸುವ **ಮಾಧವ** ವಾಚಿಕ ನ್ಯೂನತೆಯನ್ನು ಸರಿಗೊಳಿಸುವನು –

**ಕಾಯೇನ ಮನಸಾ ವಾಚಾ ಕೃತಂ ಪಾಪಮಜಾನತಾ**
**ಜಾನತಾ ಚ ಹೃಷೀಕೇಶ ಪುಂಡರೀಕಾಕ್ಷ ಮಾಧವ**
**ನಾಮತ್ರಯೋಚ್ಚಾರಣತಃ ಸ್ವಪ್ನೇ ಯಾತು ಮಮ ಕ್ಷಯಮ್**

**ಹೃಷೀಕೇಶಾಯ ನಮಃ ಪುಂಡರೀಕಾಕ್ಷಾಯ ನಮಃ ಮಾಧವಾಯ ನಮಃ**



# ಇತರ ಮಂತ್ರಜಪ

**ದೈವಾಧೀನಂ ಜಗತ್ಸರ್ವಂ ಮಂತ್ರಾಧೀನಾಶ್ಚ ದೇವತಾಃ**

**ತೇ ಮಂತ್ರಾ ಬ್ರಾಹ್ಮಣಾಧೀನಾಃ ತಸ್ಮಾನ್ಮಂತ್ರಾನ್ ಸಮಭ್ಯಸೇತ್**

ವಿಶ್ವದ ಮೇಲಿನ ಪೂರ್ಣ ಜಯಕ್ಕೆ ವಿಶೇಷವಾಗಿ ದೇವತೆಗಳೊಡೆಯನ ಅನುಗ್ರಹಕ್ಕೆ ಮಂತ್ರಗಳ ಚಿಂತನೆ ಮುಖ್ಯ. ಒಬ್ಬನೇ ಭಗವಂತ ಎಲ್ಲರೊಳಗಿದ್ದು ಎಲ್ಲವನ್ನು ನೀಡುವುದಾದರೂ ಬಗೆಬಗೆಯ ಬಯಕೆಗಳಿಗೆ ಬೇರೆಬೇರೆ ಮಂತ್ರಗಳು–

**ಏಕಸ್ಯೈವಾದ್ವಿತೀಯಸ್ಯ ಬ್ರಹ್ಮಣೋ ದ್ವಿಜಸತ್ತಮ**

**ನಾಮ್ನಾಂ ಬಹುತ್ವಂ ಲೋಕಾನಾಂ ಉಪಕಾರಾಯ ಹಿ ಸ್ಥಿತಮ್**

**ನಿಮಿತ್ತಶಕ್ತಯೋ ನಾಮ್ನಾಂ ಭೇದಿನ್ಯಸ್ತದುದೀರಣಾತ್**

**ವಿಭಿನ್ನಾನ್ಯೇವ ಸಾಧ್ಯಂತೇ ಫಲಾನಿ ವಿವಿಧಾನಿ ಚ**

ನಿತ್ಯದ ಗಾಯತ್ರೀ ಹಾಗೂ ಅಷ್ಟಾಕ್ಷರಮಂತ್ರಜಪ ಆದ ಬಳಿಕ ದಿಗುಪಸ್ಥಾನದ ಮೊದಲೋ ಮತ್ತೆಯೊ ಕೃಷ್ಣಾರ್ಪಣದ ಮೊದಲೊ ಮತ್ತೆಯೊ ಇತರ ಮಂತ್ರಗಳನ್ನು ಜಪಿಸಬೇಕು. ಮುಖ್ಯವಾಗಿ ವೇದಮಂತ್ರಗಳೆಲ್ಲವೂ ಎಲ್ಲರ ಅನುಗ್ರಹವನ್ನು ನೀಡುವವು. ಪುರುಷಾರ್ಥಗಳನ್ನೆಲ್ಲಾ ಕರುಣಿಸುವವು.

**ಸರ್ವಾನುಗ್ರಾಹಕಾಃ ಮಂತ್ರಾಃ ಚತುರ್ವರ್ಗ್ಗಪ್ರಸಾಧಕಾಃ** (ಅಗ್ನಿಪುರಾಣ)

ವೇದಮಂತ್ರಗಳಷ್ಟೇ ಅಲ್ಲದೆ ಮುಖ್ಯವಾಗಿ ಅಷ್ಟಮಹಾಮಂತ್ರಗಳು ಸದ್ಗೃಹಸ್ಥರು ಉಪದೇಶ ಪಡೆದು ಜಪಿಸಬೇಕಾದ್ದು –

**ಸರ್ವಮಂತ್ರೇಷು ಗಾಯತ್ರೀ ವರಿಷ್ಠಾ ಪ್ರೋಚ್ಯತೇ ಬುಧೈಃ**

**ತತೋಽಪಿ ಪ್ರವರಾ ಪ್ರೋಕ್ತಾ ಅಷ್ಟೌ ಮಂತ್ರಾ ಮಯಾ ಧರೇ**

**ಪ್ರಣವೋ ಮಾತೃಕಾಷ್ಟಾರ್ಣೋ ವ್ಯಾಹೃತಿರ್ದ್ವಾದಶಾಕ್ಷರಃ**

**ಗಾಯತ್ರೀ ಪೌರುಷಂ ವಿಷ್ಣುಃ ಮಹಾಮಂತ್ರಾಃ ಪ್ರಕೀರ್ತ್ತಿತಾಃ**

**ಅನ್ಯೇಽಪಿ ಬಹವೋ ಮಂತ್ರಾ ಪಂಚರಾತ್ರೇ ಮಯೋದಿತಾಃ**

**ತೇಽಪಿ ಜಪ್ಯಾ ಯಥಾಶಕ್ತ್ಯಾ ಗುರುಣಾ ಚೋಪದೇಶಿತಾಃ** (ವರಾಹಪುರಾಣ)



ಅನಂತರ ಇತರ ವೈಷ್ಣವಮಂತ್ರಗಳು, ಲಕ್ಷ್ಮೀಮಂತ್ರಗಳು, ಪ್ರಾಣಾದಿ ಮಂತ್ರಗಳು ಜಪಿಸಲು ಯೋಗ್ಯಗಳಾಗಿವೆ. ಈ ಎಲ್ಲ ಮಂತ್ರಗಳ ಆದ್ಯಂತದಲ್ಲಿ ಪ್ರಣವ ಇರಲೇಬೇಕು –

**ಬ್ರಹ್ಮಣಃ ಪ್ರಣವಂ ಕುರ್ಯಾತ್ ಆದಾವಂತೇ ಚ ಸರ್ವದಾ**

**ಸ್ರವತ್ಯನೋಂಕೃತಂ ಪೂರ್ವಂ ಪರಸ್ತಾಚ್ಚ ವಿಶೀರ್ಯತೇ** (ಭವಿಷ್ಯಪುರಾಣ)

ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ ಎನ್ನುವುದಾಗಿ ಕೆಲವು ಶಿಕ್ಷಾಗ್ರಂಥಗಳಲ್ಲಿನ ಪಾಠ.

**ಬ್ರಹ್ಮಾಪರಂ ಯುಜ್ಯತಾಂ ಬ್ರಹ್ಮಪೂರ್ವಂ**

**ಬ್ರಹ್ಮಾಂತತೋ ಮಧ್ಯತೋ ಬ್ರಹ್ಮ ಸರ್ವತಃ**

**ಅನಾವ್ಯಾಧಾಂ ದೇವಪುರಾಂ ಪ್ರಪದ್ಯ**

**ಶಿವಾ ಸ್ಯೋನಾ ಪತಿಲೋಕೇ ವಿರಾಜ** (ಅಥರ್ವವೇದ)

**ವೇದಸ್ಯೋಪಕ್ರಮೇ ವಿದ್ವಾನ್ ಅವಸಾನೇಽಪ್ಯತಂದ್ರಿತಃ**

**ಉಚ್ಚರೇತ್ಪ್ರಣವಂ ಬ್ರಹ್ಮ ರಕ್ಷಾಯೈ ಛಂದಸಾಂ ಸ್ಫುಟಮ್**

**ಆದಾವನುಕ್ತೇ ಸ್ರವತಿ ಪರಸ್ತಾಚ್ಚ ವಿಶೀರ್ಯತೇ** (ಸರ್ವಸಮ್ಮತಶಿಕ್ಷಾ)

**ಪೂರ್ತ್ಯೈ ಸರ್ವತ್ರ ಮಂತ್ರಾಣಾಂ ಯೋಜಯೇತ್ಪ್ರಣವಂ ಶುಭಮ್**

**ಓಂಕಾರಃ ಪ್ರಣವೋ ಬ್ರಹ್ಮ ಸರ್ವಮಂತ್ರೇಷು ನಾಯಕಃ** (ಪದ್ಮಪುರಾಣ)

**ವೇದಾರಂಭೇ ವಿಸರ್ಗೇ ಚ ವಿದಧ್ಯಾತ್ಪ್ರಣವಂ ಸದಾ**

**ಅಫಲೋಽನೋಂಕೃತೋ ಯಸ್ಮಾತ್ ಪಠಿತೋಽಪಿ ನ ಸಿದ್ಧಯೇ** (ಸ್ಕಂದಪುರಾಣ)

**ಮಂತ್ರಾಂತರೇಷ್ವಪಿ ಬುಧಾ ದೇವತಾಂತರಭಾಗಿಷು**

**ಪ್ರಯುಂಜತೇ ತದೋಂಕಾರಂ ಮಂತ್ರಾಣಾಂ ಪ್ರಾಣಸಿದ್ಧಯೇ** (ಶಾಂಡಿಲ್ಯಸ್ಮೃತಿ)

**ಪ್ರಣವಾದ್ಯಾಸ್ತಥಾ ವೇದಾಃ ಪ್ರಣವೇ ಪರ್ಯವಸ್ಥಿತಾಃ**

**ವಾಙ್ಮಯಂ ಪ್ರಣವಂ ಸರ್ವಂ ತಸ್ಮಾತ್ಪ್ರಣವಮಭ್ಯಸೇತ್** (ಬೋಧಾಯನಸೂತ್ರ)

**ಅನೋಂಕೃತ್ಯ ಕೃತಂ ಸರ್ವಂ ನ ಭವೇತ್ಸಿದ್ಧಿಕಾರಕಮ್** (ದಾಲ್ಭ್ಯಪರಿಶಿಷ್ಟ)

ಪ್ರಣವವು ಪರಮಾತ್ಮನಲ್ಲಿ ಸಾಧಕನ ಪ್ರಣಾಮವನ್ನು ತಿಳಿಸಿದೆ ಎಂದು **ಅಥರ್ವಶಿಖೋಪನಿಷತ್** ಅಭಿಪ್ರಾಯಪಟ್ಟಿದೆ –



ಪ್ರಾಣಾನ್ ಸರ್ವಾನ್ ಪರಮಾತ್ಮನಿ ಪ್ರಣಾಯಯತೀತ್ಯೇತಸ್ಮಾತ್ಪ್ರಣವಃ

ಓಂಕಾರ ಭಗವಂತ; ಸರ್ವಮಂತ್ರಗಳೂ ಓಂಕಾರದಿಂದ ಎಂದು ಪುರಾಣಶ್ರುತಿಸಂಹಿತಾಗಳು ತಿಳಿಸಿವೆ –

ಓಂಕಾರಪ್ರಭವಾ ವೇದಾ ಓಂಕಾರಪ್ರಭವಾಃ ಸ್ವರಾಃ (ಸ್ಕಾಂದ)

ಓಮಿತ್ಯೇಕಾಕ್ಷರಂ ಸಾಕ್ಷಾತ್ ವಾಸುದೇವಸ್ಯ ವಾಚಕಃ (ಶಾಂಡಿಲ್ಯಸ್ಮೃತಿ)

ವಾಚ್ಯಂ ತತ್ಪರಮಂ ಬ್ರಹ್ಮ ವಾಚಕಃ ಪ್ರಣವಃ ಸ್ಮೃತಃ (ನಾರದೀಯ)

ಸರ್ವೇ ವೇದಾ ಯತ್ಪದಮಾಮನಂತಿ
ತಪಾಂಸಿ ಸರ್ವಾಣಿ ಚ ಯದ್ವದಂತಿ
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ
ತತ್ತೇ ಪದಂ ಸಂಗ್ರಹೇಣ ಬ್ರವೀಮಿ ಓಮಿತ್ಯೇತತ್ (ಕಠೋಪನಿಷತ್)

ತಿಸ್ರೋ ಮಾತ್ರಾ ಮೃತ್ಯುಮತ್ಯಃ ಪ್ರಯುಕ್ತಾ
ಅನ್ಯೋನ್ಯಸಕ್ತಾ ಅನವಿಪ್ರಮುಕ್ತಾಃ
ಕ್ರಿಯಾಸು ಬಾಹ್ಯಾಂತರಮಧ್ಯಮಾಸು
ಸಮ್ಯಕ್ ಪ್ರಯಕ್ತಾಸು ನ ಕಂಪತೇ ಜ್ಞಃ (ಪ್ರಶ್ನೋಪನಿಷತ್)

ಓಮಿತ್ಯೇತದಕ್ಷರಮಿದಂ ಸರ್ವಮ್ (ಮಾಂಡೂಕೋಪನಿಷತ್)

ಓಮಿತಿ ಬ್ರಹ್ಮ ಓಮಿತೀದಂ ಸರ್ವಮ್ (ತೈತ್ತಿರೀಯೋಪನಿಷತ್)

ಓಮಿತ್ಯೇತದಕ್ಷರಮುದ್ಗೀಥಮುಪಾಸೀತ (ಛಂದೋಗೋಪನಿಷತ್)

ಓಂಕಾರೇಣೈವ ಸರ್ವಾ ವಾಕ್ ಸಂತೃಣ್ಣಾ (ಛಂದೋಗೋಪನಿಷತ್)

ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ (ಮುಂಡಕ)

ಓಂ ಖಂ ಬ್ರಹ್ಮಂ ಕಂ ಬ್ರಹ್ಮ (ಯಜುರ್ವೇದ)

ಅಕಾರಸ್ಯ ವಿಕಾರೋಽಯಂ ಓಂಕಾರ ಇತಿ ಕಥ್ಯತೇ (ಬ್ರಹ್ಮಸಾರ)

ತ್ರಿಮಾತ್ರಃ ಪ್ರಣವೋ ವಾಚ್ಯಃ ಕರ್ಮ್ಮಾರಂಭೇ ಮನೀಷಿಭಿಃ

ಓಂಕಾರದ ಅಷ್ಟನಾಮಗಳನ್ನು ತತ್ವಕಣಿಕಾ ಸಂಗ್ರಹಿಸಿದೆ –

ಉದ್ಗೀಥಚ್ಛಂದಸಾಮಾದಿಃ ಪ್ರಣವಸ್ತಾರಕಸ್ತಥಾ



**ಬ್ರಹ್ಮ ಚ ಬ್ರಹ್ಮಕೋಶಶ್ಚ ವ್ಯಾಪೀ ಚೋಂಕಾರ ಇತ್ಯಪಿ**

ಸಾಮಾನ್ಯವಾಗಿ ನಮಃ ಶಬ್ದ ಕೊನೆಯಲ್ಲಿ ಯಾ ಮೊದಲಲ್ಲಿ ಇರುವ ಮಂತ್ರಗಳನ್ನು ಜಪಿಸಬೇಕು. ನಮಃ ಶಬ್ದವಿರುವ ಮಂತ್ರಗಳು ಸರ್ವಸಿದ್ಧಿಪ್ರದಗಳು.

**ತಸ್ಮಾತ್ತು ನಮಸಾ ಯುಕ್ತಾಃ ಸರ್ವೇ ಮಂತ್ರಾಶ್ಚ ಪಾರ್ಥಿವ**

**ಸರ್ವಸಿದ್ಧಿಪ್ರದಾ ನೃಣಾಂ ಭವಂತ್ಯತ್ರ ನ ಸಂಶಯಃ**

**ನಮಸಾ ರಹಿತಾ ಯೇ ಹಿ ನತು ಮುಕ್ತಿಪ್ರದಾ ನೃಣಾಮ್** (ಹಾರೀತಸ್ಮೃತಿ)

ಮಂತ್ರಗಳನ್ನು ವ್ಯಾಸರು ರಚಿಸಿದ ಕೃತಿಗಳಿಂದ ವೇದಗಳಿಂದ ಆಚಾರ್ಯ ಮಧ್ವರ ತಂತ್ರಗ್ರಂಥದಿಂದ ತಿಳಿದು ಉಪದೇಶ ಪಡೆದು ಜಪಿಸಬೇಕು.

**ವೇದಾಃ ಶ್ರುತಯ ಇತ್ಯುಕ್ತಾಃ ತಂತ್ರಾಣಿ ಸ್ಮೃತಯಸ್ತ್ವಿತಿ**

**ಅನುಷ್ಠಾನಂ ತಥಾ ಕುರ್ಯಾತ್ ಉಭಯೋಕ್ತಂ ವಿಶೇಷತಃ** (ವಿಷ್ಣುರಹಸ್ಯ)

ಸಾಮಾನ್ಯವಾಗಿ ಎಲ್ಲ ಮಂತ್ರಗಳೂ ಆಯಾ ದೇವತಾನಾಮದಿಂದಲೆ ಓಂಕಾರ – ನಮನದೊಂದಿಗೆ ಹೇಳಲ್ಪಟ್ಟಿರುತ್ತವೆ.

**ಓಂಕಾರಾದ್ಯಾಶ್ಚತುರ್ಥ್ಯಂತಾಃ ನಮೋಂತಾಃ ಸರ್ವಮಂತ್ರಕಾಃ** (ಅಗ್ನಿಪುರಾಣ)

**ತತ್ತನ್ನಾಮ ಚತುರ್ಥ್ಯಂತಂ ನಮೋಽಂತಂ ಪ್ರಣವಾದಿಕಮ್**

**ಇತಿ ಸಾಮಾನ್ಯತೋ ಮಂತ್ರಃ ತತ್ತದ್ದೇವಸ್ಯ ಕೀರ್ತಿತಃ**

ಕೆಲವು ಮಂತ್ರಗಳು ಆದಿಯಲ್ಲಿ ಆಯಾ ಮಂತ್ರದ ಆದ್ಯಕ್ಷರವನ್ನೆ ಬೀಜವಾಗಿ ಪಡೆದಿರುತ್ತವೆ. ಕಡೆಯಲ್ಲಿ ನಮಃ ಶಬ್ದವಿರುವುದು. ದೇವತಾವಾಚಿಪದ ಚತುರ್ಥೀವಿಭಕ್ತಿಯಲ್ಲಿ ಇರುವುದು–

**ಯಸ್ತು ಮಂತ್ರಾದಿಮೋ ವರ್ಣ್ಣ ಅನುಸ್ವಾರಸಮನ್ವಿತಃ**

**ಭವೇತ್ಸಾಮಾನ್ಯತೋ ಬೀಜಂ ನಾಮಮಂತ್ರೇಷು ಸರ್ವಶಃ** (ವಿಷ್ಣುರಹಸ್ಯ)

**ಓಂಕಾರಮಾದಾವುಚ್ಚಾರ್ಯ ಮಂತ್ರಬೀಜಮನಂತರಮ್**

**ನಾಮ ಗ್ರಾಹ್ಯಂ ನಮೋಽಂತಂ ಚ ಜಪನ್ಯಾಸಃ ಪ್ರಕೀರ್ತಿತಃ**

ಓಂಕಾರ ಆದ್ಯಂತದಲ್ಲಿ ಹೇಳಲ್ಪಟ್ಟದ್ದರಿಂದ ಎಲ್ಲ ಮಂತ್ರಗಳೂ ಮುಖ್ಯವಾಗಿ ಭಗವಂತನನ್ನೇ ಹೇಳುವವೆಂದು ಸ್ಪಷ್ಟವಾಗುವುದು. ಇದನ್ನು

ಅರಿಯದವ ನಾಸ್ತಿಕನೆ –

**ಸಮಸ್ತಯಜ್ಞಭೋಕ್ತಾರಂ ಅಜ್ಞಾತ್ವಾ ವಿಷ್ಣುಮವ್ಯಯಮ್**

**ವೇದೋದಿತಂ ಯಃ ಕುರುತೇ ಸ ಲೋಕಾಯತಿಕಃ ಸ್ಮೃತಃ** (ಹಾರೀತಸ್ಮೃತಿ)

ಅಗ್ನ್ಯಾದಿಪದಗಳೂ ದೇವನನ್ನೆ ತಿಳಿಸಿವೆ–

**ಅಕಾರೇ ರೂಢ ಇತ್ಯಗ್ನಿಃ ಇಂದ್ರತ್ವಂ ಪರಮೇಶ್ವರೇ**

**ಆತ್ಮನಾಂ ಪ್ರಸವೇ ಸೂರ್ಯಃ ಸಮತ್ವಾತ್ಸಾಮ ಇತ್ಯತಃ**

**ವಾಯುಃ ಸ್ಯಾಜ್ಜಗತಃ ಪ್ರಾಣಾತ್ ವರುಣಃ ಸರ್ವಜೀವನಃ**

**ಮಿತ್ರಃ ಸ್ಯಾತ್ಸರ್ವಮಿತ್ರತ್ವಾತ್ ಆತ್ಮೈಕತ್ವಾದ್ಬೃಹಸ್ಪತಿಃ**

**ರೋಗನಾಶಾದ್ಭವೇದ್ರುದ್ರೋ ಯಮಃ ಸ್ಯಾತ್ತು ನಿಯಾಮಕಃ**

**ನಿತ್ಯಸತ್ವಾದ್ಧಿರಣ್ಯಃ ಸ್ಯಾತ್ ತದ್ಗರ್ಭತ್ವಾದ್ಧಿರಣ್ಮಯಃ**

**ಹಿರಣ್ಯಗರ್ಭ ಇತ್ಯುಕ್ತೋ ಸತ್ಯಗರ್ಭೋ ಜನಾರ್ದನಃ**

**ಸರ್ವಾನ್ ಸ ತ್ರಾತಿ ಸವಿತಾ ಪಿತಾ ಚ ಪಿತೃವತ್ಪಿತಾ**

**ಯಸ್ಮಾಜ್ಜಾತಾಸ್ತ್ರಯೋ ವೇದಾಃ ಜಾತವೇದಾ ಸ ಉಚ್ಯತೇ**

**ಪಾವಮಾನಃ ಪಾವಯಿತ್ವಾ ಶಿವಃ ಸ್ಯಾತ್ಸರ್ವದಾ ಶುಭಾತ್**

**ಪರಸ್ಯ ವೈದಿಕಾಃ ಶಬ್ದಾ ಸಮಾಕೃಷ್ಯೇತರೇಷ್ವಪಿ**

**ವ್ಯವಹ್ರಿಯಂತೇ ಸತತಂ ಲೋಕವೇದಾನುಸಾರತಃ** (ವೃದ್ಧಹಾರೀತಸ್ಮೃತಿ)

ದೇವತೆಗಳಿಗೆ ಆಯಾ ನಾಮಗಳು ಔಪಚಾರಿಕವಾಗಿ ಅಷ್ಟೆ. ಮುಖ್ಯಾರ್ಥ ದಲ್ಲಿ ಇಲ್ಲ –

**ಸರ್ವಚ್ಛಂದೋಭಿಧೋ ಹ್ಯೇಷಃ ಸರ್ವದೇವಾಭಿಧೋಽಪ್ಯಸೌ**

**ಸರ್ವಲೋಕಾಭಿಧೋಽಪ್ಯೇಷಃ ತೇಷಾಂ ತದುಪಚಾರತಃ** (ವಾಮನ)

**ತತ್ತದ್ಗತಸ್ಯೈವ ಹರೇಃ ತತ್ತನ್ನಾಮಾನಿ ಚಾಂಜಸಾ**

**ಔಪಚಾರಿಕನಾಮಾನಿ ತದನ್ಯೇಷಾಮಿತಿ ಸ್ಥಿತಿಃ** (ಶಬ್ದನಿರ್ಣಯ)

ಎಲ್ಲ ದೇವತೆಗಳೊಳಗೂ ನೆಲೆನಿಂತು ಕೆಲಸ ಮಾಡಿಸುವವನೊಬ್ಬನೇ ದೇವನು ವಿಷ್ಣು –



**ತತ್ರತತ್ರ ಸ್ಥಿತೋ ವಿಷ್ಣುಃ ತತಚ್ಛಕ್ತೀಃ ಪ್ರಬೋಧಯನ್**

**ಏಕ ಏವ ಮಹಾಶಕ್ತಿಃ ಕುರುತೇ ಸರ್ವಮಂಜಸಾ** (ತಂತ್ರಸಾರಸಂಗ್ರಹ)

**ಸರ್ವದೇವೇಷ್ವಪಿ ಹರಿಃ ಸರ್ವದೇವನಿಯಾಮಕಃ**

**ನಾಮವಾನ್ ಸರ್ವದೇವಾನಾಂ ಸರ್ವಪೂಜಾಂ ತಥಾತ್ತ್ಯಸೌ** (ಅಧ್ಯಾತ್ಮ)

**ಯಚ್ಚ ಕಿಂಚಿಜ್ಜಗತ್ಯಸ್ಮಿನ್ ದೃಶ್ಯತೇ ಶ್ರೂಯತೇಽಪಿವಾ**

**ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ** (ನಾರಾಯಣಸಂಹಿತಾ)

ಎತ್ತರವನ್ನು ಬಯಸುವವನು ಉತ್ತಮನನ್ನೇ ಆಶ್ರಯಿಸಬೇಕು. ಇಂದ್ರಾದಿ ಎಲ್ಲ ದೇವತೆಗಳು ರುದ್ರನನ್ನು ಆಶ್ರಯಿಸಿದ್ದಾರೆ. ರುದ್ರನು ತನಗಿಂತ ಉತ್ತಮನಾದ ಬ್ರಹ್ಮನನ್ನು ಆಶ್ರಯಿಸಿದ್ದಾನೆ. ಬ್ರಹ್ಮನು ನನ್ನನ್ನು ಆಶ್ರಯಿಸಿಕೊಂಡಿದ್ದಾನೆ. ನಾನು ಯಾರನ್ನೂ ಆಶ್ರಯಿಸಿಲ್ಲ. ನನಗೆ ಯಾರೊಬ್ಬನೂ ಆಸರೆಯಾಗಿಲ್ಲ. ಎಲ್ಲರಿಗೂ ಸ್ವತಂತ್ರನಾಗಿ ನಾನೇ ಆಸರೆಯಾಗಿದ್ದೇನೆ. ನರಪ್ರಪಂಚಕ್ಕೆಲ್ಲಾ ಅಯನ(ಆಶ್ರಯ)ನಾದ್ದರಿಂದಲೇ ನಾನು ನಾರಾಯಣ ಎಂಬಂತೆ ಶ್ರೀಕೃಷ್ಣನು ಧರ್ಮರಾಜನಿಗೆ ತನ್ನ ಪರಮಸ್ವಾತಂತ್ರ್ಯವನ್ನು ಎಳೆಎಳೆಯಾಗಿ ತಿಳಿಸಿದ್ದಾನೆ –

**ಅನಾಶ್ರಿತ್ಯೋಚ್ಛ್ರಯಂ ನಾಸ್ತಿ ಮುಖ್ಯಮಾಶ್ರಯಮಾಶ್ರಯೇತ್**

**ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ**

**ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಽಹಂ ಕಂಚಿದುಪಾಶ್ರಿತಃ**

**ಮಮಾಶ್ರಯೋ ನ ಕಶ್ಚಿತ್ತು ಸರ್ವೇಷಾಮಾಶ್ರಯೋ ಹ್ಯಹಮ್**

ಇತರ ದೇವತೆಗಳನ್ನು ಸ್ವತಂತ್ರರು ಎನ್ನುವುದಾಗಿ ವಿಷ್ಣುವಿಗೆ ಸಂಬಂಧಪಡದವರು ಎನ್ನುವ ನೆಲೆಯಲ್ಲಿ ಉಪಾಸನೆಗೈಯುವಂತಿಲ್ಲ ಎಂದು **ಹರಿಸಂಹಿತೆ** –

**ಪ್ರಾಧಾನ್ಯೇನ ಹರಿರ್ಧ್ಯೇಯಃ ತತ್ಸಂಬಂಧಾತ್ ಸುರಾದಯಃ**

**ಧ್ಯೇಯಾ ನಾನ್ಯತ್ಕ್ವಚಿದ್ಧ್ಯಾಯೇತ್ ಹರಾವನುಪಯೋಗಿ ಯತ್**

ನನ್ನ ಭಕ್ತನಲ್ಲದವನು ಮಾಡಿದ ಎಲ್ಲ ಬಗೆಯ ಧರ್ಮಕರ್ಮಗಳೂ ವ್ಯರ್ಥವೆನ್ನುವುದಾಗಿ ಧರ್ಮರಾಜನಿಗೆ ಶ್ರೀಕೃಷ್ಣನೇ ಹೇಳಿರುತ್ತಾನೆ. ಅಭಕ್ತರು



ನಡೆಸಿದ ಆ ಎಲ್ಲ ಧರ್ಮಕರ್ಮಗಳನ್ನು ರಾಕ್ಷಸರು ಕಬಳಿಸುತ್ತಾರೆ ಎನ್ನುವುದಾಗಿ **ಮಹಾಭಾರತ** ಸಾರಿದೆ –

**ವೃಥಾ ದಾನಂ ವೃಥಾ ತಪ್ತಂ ವೃಥಾ ಚೇಷ್ಟಂ ವೃಥಾ ಹುತಮ್**
**ವೃಥಾऽऽತಿಥ್ಯಂ ಚ ತತ್ತಸ್ಯ ಯೋ ನ ಭಕ್ತೋ ಮಮ ದ್ವಿಜಃ**
**ಯತ್ಕೃತಂ ಚ ಹುತಂ ಚಾಪಿ ಯದಿಷ್ಟಂ ದತ್ತಮೇವ ಚ**
**ಅಭಕ್ತಿಮತ್ಕೃತಂ ಸರ್ವಂ ರಾಕ್ಷಸಾ ಏವ ಭುಂಜತೇ**

ಮಂತ್ರ ಎಂದರೆ ಸಂಸಾರದಿಂದ ಬಿಡುಗಡೆ ನೀಡುವ ಚಿಂತನೆ ಎಂದೇ ಅರ್ಥವಾಗಿದ್ದರಿಂದ ಎಲ್ಲ ಶಬ್ದವೂ ವಿಷ್ಣುವನ್ನು ಹೇಳಿದಾಗಲೆ ಮಂತ್ರವಾದೀತೆಂದು **ಕುಲಾರ್ಣವದ** ಮಾತು –

**ಮನನಾತ್ತತ್ತ್ವರೂಪಸ್ಯ ವೇದಸ್ಯಾಮಿತತೇಜಸಃ**
**ತ್ರಾಯತೇ ಸರ್ವಭಯತಃ ತಸ್ಮಾನ್ಮಂತ್ರ ಇತೀರಿತಃ**
**ಶ್ರೀಪ್ರಶ್ನಸಂಹಿತಾವೂ** ಈ ಅರ್ಥವನ್ನೆ ಸಾರಿದೆ–
**ಮನನಂ ಸರ್ವಸತ್ತ್ವಾನಾಂ ತ್ರಾಣಂ ಸಂಸಾರಸಾಗರಾತ್**
**ಮನನತ್ರಾಣಸಂಯೋಗಾತ್ ಮಂತ್ರ ಇತ್ಯುಚ್ಯತೇ ಬುಧೈಃ**

ಪ್ರತಿಯೊಂದು ಮಂತ್ರವನ್ನು ಜಪಿಸುವಾಗಲೂ ಪ್ರಪ್ರತ್ಯೇಕವಾಗಿ ಆಯಾ ಮಂತ್ರದಿಂದ ಪ್ರಾಣಾಯಾಮ ಮಾಡಿ ಋಷ್ಯಾದಿಗಳನ್ನು ಹೇಳಿ ಧ್ಯಾನಾನಂತರದಲ್ಲಿ ಸಂಕಲ್ಪವನ್ನು ನಡೆಸಲೇಬೇಕು –

**ಪವನಸಂಯಮನಂ ತ್ವಮುನಾ ಚರೇತ್**
**ಯಮಿಹ ಜಪ್ತುಮಸೌ ಮನುಮಿಚ್ಛತಿ** (ತಂತ್ರಸಾರ)
**ಕರ್ಮಮಾತ್ರಸ್ಯ ಸರ್ವಸ್ಯ ಪ್ರಾಣಾನಾಯಮ್ಯ ಮಂತ್ರತಃ**
**ಕರಿಷ್ಯ ಇತಿ ವಾಗುಕ್ತಿರೂಪಂ ಸಂಕಲ್ಪಮಾಚರೇತ್** (ಆಂಗಿರಸಸ್ಮೃತಿ)

ಮೂರು, ಆರು, ಒಂಭತ್ತು ಅಥವಾ ಹನ್ನೆರಡು ಬಾರಿ ಮಂತ್ರ ಹೇಳಿ ಪ್ರಾಣಾಯಾಮ ನಡೆಸಬೇಕು. ಸಣ್ಣಮಂತ್ರವಾದರೆ ಹೆಚ್ಚು ಬಾರಿ ಹೇಳಬಹುದು. ಮಂತ್ರಾಕ್ಷರಗಳು ಹೆಚ್ಚಿದ್ದರೆ ಕಡಿಮೆ ಬಾರಿ ಹೇಳುವ ವ್ಯವಸ್ಥೆ –



**ಮಂತ್ರಮಾವರ್ತ್ತಯೇಚ್ಚಿತ್ತೇ ತ್ರಿಷಡ್ವಾರಮಥಾಪಿ ವಾ**

**ನವದ್ವಾದಶವಾರಂ ವಾ ಪ್ರಾಣಾಯಾಮೋऽಯಮೀರಿತಃ** (ಸ್ಮೃತ್ಯರ್ಥಸಾಗರ)

28 ಬಾರಿ ಉತ್ತಮ, 12 ಬಾರಿ ಮಧ್ಯಮ, 6 ಬಾರಿ ಮಂತ್ರಚಿಂತನೆ ಅಧಮ – **ಪೂರಕೇ ಕುಂಭಕೇ ಚೈವ ರೇಚಕೇ ಚ ವಿಶೇಷತಃ**

**ಅಷ್ಟಾವಿಂಶತಿವಾರಂ ತು ಜಪೇನ್ಮಂತ್ರಂ ಸಮಾಹಿತಃ**

**ಉತ್ತಮಂ ಮುನಿಭಿಃ ಪ್ರೋಕ್ತಂ ಪ್ರಾಣಾಯಾಮೇ ನೃಪೋತ್ತಮ**

**ಜಪನ್ ದ್ವಾದಶವಾರಂ ತು ಮಧ್ಯಮಂ ತತ್ ಪ್ರಕೀರ್ತ್ತಿತಮ್**

**ಷಡ್ವಾರಂ ತು ಕನೀಯಃ ಸ್ಯಾತ್ ತ್ರಿವಾರಮಧಮಂ ಸ್ಮೃತಮ್** (ವೃದ್ಧಹಾರೀತಸ್ಮೃತಿ)

ಮಂತ್ರಜಪ ಮಾಡುವಾಗ ಪವಿತ್ರ ಕೈಯಲ್ಲಿರಲೇಬೇಕು. ಕುಶ (ದರ್ಭೆ) ಪವಿತ್ರ ಸಕಲಸಿದ್ಧಿಕರ ಎನಿಸಿದೆ. ಕು ಎಂದರೆ ಕುತ್ಸಿತವಾದ ಪಾಪ. ಶ ಎಂದರೆ ಶಮನ ಪಾಪಶಮನಗೊಳಿಸುವ ಹುಲ್ಲು ಕುಶ –

**ಪಾಪಾಹ್ವಯಃ ಕುಶಬ್ದಃ ಸ್ಯಾತ್ ಶಶಬ್ದಃ ಶಮನಾಹ್ವಯಃ**

**ತೃಣೇನ ಪಾಪಶಮನಂ ಯೇನೈತತ್ಕುಶ ಉಚ್ಯತೇ**

**ಕುಶಹಸ್ತಶ್ಚರೇತ್ ಸ್ನಾನಂ ಕುಶಹಸ್ತಃ ಸದಾ ಜಪೇತ್**

**ಜುಹುಯಾತ್ಕುಶಹಸ್ತಶ್ಚ ಫಲಾವಾಪ್ತ್ಯಭಿಲಾಷುಕಃ**

**ಕುಶಸ್ಯ ಮೂಲೇ ಮಧ್ಯೇऽಗ್ರೇ ಬ್ರಹ್ಮವಿಷ್ಣುಮಹೇಶ್ವರಾಃ**

**ಸದಾ ವಸಂತ್ಯತ ಶ್ರೇಷ್ಠಃ ಕುಶಃ ಸಕಲಕರ್ಮ್ಮಸು** (ಭರದ್ವಾಜಸ್ಮೃತಿ)

ಎಲ್ಲ ವೈಷ್ಣವಮಂತ್ರಗಳಿಗೂ ಸಾಮಾನ್ಯವಾಗಿ ಹೇಳಿದ ಷಡಂಗನ್ಯಾಸವನ್ನು ಆಚಾರ್ಯಮಧ್ವರು ನೀಡಿದ್ದಾರೆ –

**ಜ್ಞಾನೈಶ್ವರ್ಯಪ್ರಭಾನಂದತೇಜಃಶಕ್ತಿಭಿರೇವ ವಾ**

**ಪೂರ್ಣ್ಣಾತ್ಮಮಧ್ಯಗೈಃ ಸರ್ವವೈಷ್ಣವಾಂಗಾನ್ಯಥೋ ವಿದುಃ**

ಶ್ರೀವೈಷ್ಣವಾಹ್ನಿಕದಲ್ಲಿಯೂ ಷಡಂಗನ್ಯಾಸವಾಗಿ ಜ್ಞಾನೈಶ್ವರ್ಯಶಕ್ತಿಬಲ ತೇಜೋವೀರ್ಯಗಳನ್ನು ಪಠಿಸಲಾಗಿದೆ.

ಇತರ ಯಾವುದೇ ಮಂತ್ರಕ್ಕೂ ತಂತ್ರಗ್ರಂಥಗಳು ತಿಳಿಸುವಂತೆ



ನಾರಾಯಣಾಷ್ಟಾಕ್ಷರದ ಕೃದ್ಧೋಲ್ಕಾದಿ ಪಂಚಾಂಗನ್ಯಾಸವು ಸಾಮಾನ್ಯವಾಗಿದೆ.

ಇತರ ಎಲ್ಲ ಮಂತ್ರಜಪವನ್ನೂ ಅಕ್ಷಮಾಲೆಯಲ್ಲಿಯೆ ಮಾಡುವುದರಿಂದ ಹೆಚ್ಚು ಫಲ ಪಡೆಯಬಹುದು.

**ಜಪಸ್ಯ ಗಣಾನಾಂ ಪ್ರಾಹುಃ ಪದ್ಮಾಕ್ಷೈರ್ಭಕ್ತಿವರ್ಧಿನೀಮ್**

**ಜಪೇತ್ತು ತುಳಸೀಕಾಷ್ಠೈಃ ಫಲಮಕ್ಷಯಮುಚ್ಯತೇ** (ನಾರದ)

ಅಕ್ಷಮಾಲೆಯಲ್ಲಿ ಜಪಿಸುವಾಗಲೂ ಬಲಕೈಯಲ್ಲಿ ದರ್ಭೆ ಯಾ ತುಳಸೀ ಇರಲೇಬೇಕೆಂದು **ವಹ್ನಿಪುರಾಣ** ತಿಳಿಸಿದೆ. ಪೂರ್ವಕ್ಕೆ ಮುಖ ಹಾಕಿರಬೇಕು. ಸಾವಿರ ಅಥವಾ ನೂರು ಬಾರಿ ಜಪಿಸಬೇಕು –

**ದರ್ಭಹಸ್ತಸ್ತಥಾಽಽಸೀನೋ ದರ್ಭೇಷೂದಕಪಾಣಿನಾ**

**ಪ್ರಾಙ್ಮುಖೋ ವರ್ತಯೇನ್ಮಾಲಾಂ ಸಹಸ್ರಂ ಶತಮೇವ ವಾ**

ಹತ್ತಾರು ಮಂತ್ರಗಳ ಜಪ ನಡೆಸುವಾಗ ಗಡಿಬಿಡಿಯಲ್ಲಿ ಅಂಗನ್ಯಾಸಾದಿಗಳನ್ನು ಮಾಡದೆ ಹೋದರೆ ಆತ ತೊಂದರೆಗೆ ಒಳಗಾಗುವನೆಂದು **ತಂತ್ರಸಾರ** ಸೂಚಿಸಿದೆ –

**ಅಕೃತ್ವಾ ನ್ಯಾಸಜಾಲಂ ಯೋ ಮೂಢತ್ವಾತ್ಪ್ರಜಪೇನ್ಮನುಮ್**

**ಸರ್ವವಿಘ್ನೈಃ ಸ ಬಾಧ್ಯಃ ಸ್ಯಾತ್ ವ್ಯಾಘ್ರೈರ್ಮೃಗಶಿಶುರ್ಯಥಾ**

ಆರಂಭದಲ್ಲಿ ಯಾರು ಮಂತ್ರವನ್ನು ಕಂಡು ಪ್ರಯೋಗಿಸಿದರೋ ಅಲ್ಲಿಂದಲೇ ಮಂತ್ರದ ಪ್ರವರ್ತನೆ ಎಂದು ತಿಳಿದು ಅವನನ್ನೇ ಋಷಿಯನ್ನಾಗಿ ಗುರುತಿಸಬೇಕು. ಎಲ್ಲ ಮಂತ್ರಗಳಿಗೂ ಮುಖ್ಯವಾಗಿ ನಾರಾಯಣನೇ ಋಷಿಯಾಗಿದ್ದಾನೆಂದು ಆತನೇ ಲಕ್ಷ್ಮಿಗೆ ಹೇಳಿರುವನು. ಮಂತ್ರಗಳೆಲ್ಲವೂ ವೇದದಲ್ಲಿರಲಾಗಿ ವೇದವು ಆತನ ಉಸಿರಿನಂತೆ ಸೃಷ್ಟಿಯನ್ನು ಪಡೆದಿವೆ ಎನ್ನುವುದು ಆತ ಋಷಿಯಾಗಲು ನೀಡಿದ ಕಾರಣ. ಮುಂದೆ ಆ ಮಂತ್ರಗಳನ್ನು ನಾರದಾದಿಗಳು ಕಂಡರೂ ಅವರೆಲ್ಲರಲ್ಲಿ ಅಂತರ್ಯಾಮಿಯಾಗಿ ನಾರಾಯಣನೇ ಇರುವುದರಿಂದ ಭಗವಂತನೇ ಮಂತ್ರಗಳ ಪ್ರವರ್ತಕನಾಗಿರುವನು ಎನ್ನುವುದು ಭಗವಂತನ ಉಪದೇಶ. ಸರಿಯಾಗಿ ಒಂದು ಬಾರಿ ಹೇಳಿದರೂ ಸಾಧಕನಿಗೆ



ಫಲ ಸಿಗಲಿದೆ. ಆದರೂ ಪ್ರತಿನಿತ್ಯ ಅರ್ಥ ಚಿಂತನೆಯಲ್ಲಿ ಹತ್ತುಬಾರಿಯಾದರೂ ಜಪಿಸಲೇಬೇಕೆಂದು ಭಗವಂತನ ಆಜ್ಞೆ ಎನ್ನುವುದಾಗಿ ಬೃಹತ್‌ಬ್ರಹ್ಮಸಂಹಿತೆ –

**ಪ್ರವರ್ತನಾಯ ಯೋಽಯಂ ತು ಸರ್ಗಾದೌ ಚ ಪ್ರಯೋಜಯೇತ್**
**ತತ್ರ ತಸ್ಯ ಋಷಿಃ ಪ್ರೋಕ್ತಃ ಸರ್ವಾಗಮವಿಶಾರದೈಃ**
**ಸರ್ವೇಷಾಂ ದೇವಿ ಮಂತ್ರಾಣಾಂ ಬೀಜಾನಾಂ ಚ ವಿಶೇಷತಃ**
**ಅಹಮೇವ ಋಷಿರ್ಮುಖ್ಯೋ ವೇದಾ ಮಚ್ಛ್ವಾಸಸಂಭವಾಃ**
**ನಾರದಾದಿಋಷೀಣಾಂ ಚ ಹ್ಯಂತರ್ಯಾಮಿತಯಾ ಹ್ಯಹಮ್**
**ತತ್ರತತ್ರಾಽಸ್ಮಿ ದಯಿತೇ ವಾಸುದೇವಃ ಪರಾತ್ಪರಃ**
**ತ್ವಂ ದೇವಿ ನಾದರೂಪೇಣ ಬೀಜರೂಪೇಣ ಚಾಸ್ಮ್ಯಹಮ್**
**ಆವಯೋರೇವ ಯೋಗೇನ ಸರ್ವೇ ಮಂತ್ರಾಃ ಪ್ರಕೀರ್ತಿತಾಃ**
**ಸಕೃದುಚ್ಚಾರಣಾದಸ್ಯ ಕೃತಕೃತ್ಯೋ ನ ಸಂಶಯಃ**
**ತಥಾಽಪಿ ದಶಧಾ ನಿತ್ಯಂ ಜಪ್ಯಾದರ್ಥಂ ವಿಭಾವಯನ್**

ಮಂತ್ರಾಕ್ಷರನ್ಯಾಸವನ್ನು ಸಾಮಾನ್ಯವಾಗಿ ಜ್ಞಾನಮುದ್ರೆಯಿಂದ ನಡೆಸಬೇಕು. ಮಧ್ಯಾಹ್ನ ಸ್ನಾನಾನಂತರ ಮಾಧ್ಯಾಹ್ನಿಕ ಸಂಧ್ಯಾವಂದನೆಯ ಬಳಿಕ ಇತರ ಮಂತ್ರಗಳ ಜಪ ವಿಹಿತ. ಈಗ ಮಧ್ಯಾಹ್ನ ಸಂಧ್ಯಾವಂದನೆಯನ್ನು ಕಾರಣಾಂತರಗಳಿಂದ ಬೆಳಿಗ್ಗೆಯೆ ಮುಗಿಸುವರು. ಶಾರೀರಿಕ ಸ್ವಾಸ್ಥ್ಯಕ್ಕಾಗಿ ಆಹಾರ ಸೇವನೆಯನ್ನು ಮಧ್ಯಾಹ್ನದೊಳಗೆ ಮಾಡುವುದರಿಂದ ಬೆಳಿಗ್ಗೆಯೇ ಜಪಿಸುವುದು ಸೂಕ್ತ. ಮಂತ್ರಗಳ ಜಪಕ್ಕೆ ಗುರೂಪದೇಶ ಮುಖ್ಯ –

**ಸರ್ವೇ ಮಂತ್ರಾಃ ಸರ್ವಫಲಾ ಗುರುವಕ್ತ್ರಾದ್ಯದಿ ಶ್ರುತಾಃ**
**ಯದೃಚ್ಛಯಾ ಶ್ರುತೋ ಮಂತ್ರಃ ಛನ್ನೇನಾಥ ಛಲೇನ ವಾ**
**ಪತ್ರೇಕ್ಷಿತೋ ವಾ ವ್ಯರ್ಥಃ ಸ್ಯಾತ್ ಪ್ರತ್ಯುತಾನರ್ಥದಾಯಕಃ**
**ತಸ್ಮಾತ್ಸರ್ವಪ್ರಯತ್ನೇನ ಮಂತ್ರಮೇತಚ್ಚತುರ್ಮುಖ**
**ಆಚಾರ್ಯಸನ್ನಿಧಾವೇವ ಸಂಗ್ರಹೇನ್ನಾನ್ಯವರ್ತ್ಮನಾ** (ನಾರಾಯಣಸಂಹಿತೆ)
**ಗುರುಂ ವಿನಾ ತು ಯೋ ದೀಕ್ಷಾಂ ಸ್ವಬುದ್ಧ್ಯಾ ಲಭತೇ ನರಃ**



ನ ಸ ಸಿದ್ಧಿಮವಾಪ್ನೋತಿ ನರಕಂ ಚಾಭಿಪದ್ಯತೇ

ಮೋಕ್ಷಕಾಮಸ್ತು ಗೃಹ್ಣೀಯಾತ್ ದೀಕ್ಷಾಂ ಮಂತ್ರಾಂಶ್ಚ ವೈಷ್ಣವಾನ್

ದೀಕ್ಷಾಂ ಪ್ರಾಪ್ಯೈವ ಮಂತ್ರಾಂಶ್ಚ ನ್ಯಾಸಧ್ಯಾನಾದಿಕಂ ತಥಾ

ಅವಗಮ್ಯ ತತಃ ಸಮ್ಯಕ್ ಜಪಂ ಕುರ್ಯಾದ್ವಿಮುಕ್ತಯೇ

ಜ್ಞಾನತೋ ವಾಽಧಿಕಾ ಯೇ ಸ್ಯುಃ ಕುಲಸ್ಯ ಗುರವೋಽಪಿ ಯೇ

ಅದತ್ವಾ ವಿಧಿವನ್ಮುದ್ರಾಂ ಯೋ ಮಂತ್ರಾನ್ವೈಷ್ಣವಾನ್ ವದೇತ್

ಸ ಯಾತಿ ನರಕಂ ಘೋರಂ ಶಿಷ್ಯೇಣಾಪಿ ಸಹೈವ ತು (ವರಾಹಪುರಾಣ)

ಗುರುಂ ವಿನಾ ವೃಥಾ ಮಂತ್ರಃ ಶ್ರವಜಾಪ್ಯಸ್ತು ಶೂನ್ಯಕಃ (ಶಕ್ತಿಸಂಗಮತಂತ್ರ)

ತಸ್ಮಾದ್ದೀಕ್ಷಾವಿಧಾನೇನ ಮಂತ್ರಾ ಗ್ರಾಹ್ಯಾ ಗುರೋರ್ಮುಖಾತ್

(ಸಾಂಖ್ಯಾಯನತಂತ್ರ)

ಯೋಗ್ಯರಿಂದ ಮಂತ್ರ ಉಪದೇಶವಾಗಿರದಿದ್ದಲ್ಲಿ ಮತ್ತೊಮ್ಮೆ ವಿಷ್ಣುಭಕ್ತನಿಂದ ಅದೇ ಮಂತ್ರವನ್ನು ಉಪದೇಶ ಪಡೆಯಬೇಕು –

ಅವೈಷ್ಣವೋಪದಿಷ್ಟೇನ ಮಂತ್ರೇಣ ನ ಪರಾ ಗತಿಃ

ಪುನಶ್ಚ ವಿಧಿನಾ ಸಮ್ಯಕ್ ವೈಷ್ಣವಾದ್ಗ್ರಾಹಯೇನ್ಮನುಮ್

ಸಹಸ್ರಶಾಖಾಧ್ಯಾಯೀ ಚ ಸರ್ವಯಜ್ಞೇಷು ದೀಕ್ಷಿತಃ

ಕುಲೇ ಮಹತಿ ಜಾತೋಽಪಿ ನ ಗುರುಃ ಸ್ಯಾದವೈಷ್ಣವಃ (ಪದ್ಮಪುರಾಣ)

ಕಲಿಯುಗದಲ್ಲಿ ಉಪದೇಶ ಮಾತ್ರವೇ ದೀಕ್ಷೆಯೆನಿಸಿದೆ –

ಉದಙ್ಮುಖೋ ಗುರುಸ್ತಸ್ಯ ನ್ಯಸ್ಯ ಕೇ ದಕ್ಷಿಣಂ ಕರಮ್

ತ್ರಿವಾರಂ ದಕ್ಷಿಣೇ ಕರ್ಣೇ ಮೂಲಮಂತ್ರಂ ಸಮುಚ್ಚರೇತ್

ತತಃ ಶಿಷ್ಯೋ ಗುರೋರಗ್ರೇ ಮಂತ್ರಮಷ್ಟೋತ್ತರಂ ಶತಮ್

ಜಪೇಚ್ಚ ಪರಯಾ ಭಕ್ತ್ಯಾ ತದಂತೇ ಪ್ರಣಮೇದ್ಗುರುಮ್

ಅರಿಮಂತ್ರಗಳ ಜಪ ನಿಷಿದ್ಧ –

ವಿದ್ಯಾಂ ಮಂತ್ರಂ ಸ್ತವಂ ಸೂಕ್ತಂ ಅರಿಭೂತಂ ನ ವೈ ಜಪೇತ್ (ಮಂತ್ರಾಮೃತ)

ಪ್ರಸಿದ್ಧಮಂತ್ರಗಳನ್ನು ಅರಿಮಂತ್ರಗಳಾದರೂ ಬಿಡಬಾರದೆನ್ನುತ್ತ



ಕೆಲವನ್ನು ಮಂತ್ರಾಮೃತ ಸಂಗ್ರಹಿಸಿದೆ–

**ಗೋಪಾಲೋ ರಾಮಮಂತ್ರಾಶ್ಚ ಮಾತೃಕಾಮನವಸ್ತಥಾ**

**ನೃಸಿಂಹಾರ್ಕವರಾಹಾಶ್ಚ ವೈದಿಕಾ ವೈಷ್ಣವಾಶ್ಚ ಯೇ**

ಪರಾಶರಸ್ಮೃತಿ ಮತ್ತು ಬೃಹತ್ಪರಾಶರಸ್ಮೃತಿ ಹನ್ನೆರಡು ಹನ್ನೆರಡು ಅಧ್ಯಾಯಗಳಿಂದ ತುಂಬಿದೆ. ಇಲ್ಲಿ ಸ್ನಾನ ಸಂಧ್ಯಾದಿಗಳ ಬಗ್ಗೆ ವಿಸ್ತಾರವಾಗಿ ಹೇಳಲಾಗಿದೆ. ಕೊನೆಗೆ ಹರಿಯನ್ನೆ ಮತ್ತೆಮತ್ತೆ ಜಪಿಸುವಂತೆ ತಿಳಿಸಲಾಗಿದೆ–

**ಏಕಮೇವಾಭ್ಯಸೇತ್ತತ್ವಂ ಯೇನ ಚಿತ್ತೇ ವಸೇದ್ಧರಿಃ**

**ವಿಷ್ಣುಮುಖಾ ವೈ ದೇವಾಃ** ಎಂಬ ತೈತ್ತಿರೀಯಸಂಹಿತೆಯ ಮಾತಿನಂತೆ ಎಲ್ಲ ದೇವತೆಗಳೂ ಭಗವಂತನ ಅಣತಿಯಂತೆಯೇ ಪ್ರಸನ್ನರಾಗುವರು ಮತ್ತು ಸಾಧಕರಿಗೆ ಫಲವೀಯುವರು. **ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ** ಎನ್ನುವುದು ಕೃಷ್ಣನ ನುಡಿ; ಎಲ್ಲದರ ಸ್ವೀಕಾರ ಮತ್ತು ಫಲದೊಡೆಯ ನಾನೆಂದು.

ಏನನ್ನೂ ಬಯಸದೆ ಉಳಿದ ದೇವತೆಗಳ ಮಂತ್ರಗಳನ್ನು ಜಪಿಸಿದಲ್ಲಿ ಜ್ಞಾನಾನಂದಗಳು ಲಭಿಸುವವು –

**ಕಾಮ್ಯಕರ್ಮಪ್ರಸಕ್ತನಾಂ ತಾವನ್ಮಾತ್ರಂ ಫಲಂ ಭವೇತ್**

**ನಿಷ್ಕಾಮಂ ಭಜತಾಂ ಪುಂಸಾಂ ಅಖಿಲಾಭೀಷ್ಟಸಂಪದಃ**

**ವೇದೋದಿತಂ ಕರ್ಮ ಕುರ್ವನ್ ಉಪಾಸೀತ ಚ ದೇವತಾಃ**

**ಶುದ್ಧಾಂತಃಕರಣಸ್ತೇನ ಲಭತೇ ಜ್ಞಾನಮುತ್ತಮಮ್** (ಮಂತ್ರಮಹೋದಧಿ)

ಮಂತ್ರಗಳೆಲ್ಲ ದೇವತಾ ವಿಷಯಗಳಾದ್ದರಿಂದ ಜಪಾಂತ್ಯದಲ್ಲಿ ತರ್ಪಣವನ್ನು ಅಂಗೈ(ಬೆರಳ) ತುದಿಯಿಂದಲೇ ನೀಡಬೇಕು. ಬಲಕೈಯ ಗತ್ತು ಹೀಗಿದೆ – **ಅಂಗುಷ್ಠಮೂಲಂ ಬ್ರಾಹ್ಮಂ ಸ್ಯಾತ್ ಪ್ರಾಜಾಪತ್ಯಂ ಕನಿಷ್ಠಿಕಮ್**

**ಪೈತೃಕಂ ತರ್ಜನೀಮೂಲಂ ಕರಾಗ್ರಂ ದೈವತಂ ಸ್ಮೃತಮ್**

**ಆಗ್ನೇಯಂ ಕರಮಧ್ಯಂ ಸ್ಯಾತ್ ತೀರ್ಥಾನ್ಯೇವಂ ದ್ವಿಜಸ್ಯ ಹಿ**

**ದಕ್ಷಿಣೇ ತು ಕರೇ ಸಂತಿ ಜ್ಞಾತ್ವಾ ಕರ್ಮ ಸಮಾಚರೇತ್** (ಭಾರದ್ವಾಜಸ್ಮೃತಿ)



# ಮೂರು ಹೊತ್ತಿನಲ್ಲಿ ಜಪ

**ತ್ರಿಸಂಧ್ಯಾಕೃತ್ ಭವೇದ್ವಿಪ್ರೋ ವೇದವೇದಾಂತಪಾರಗಃ**

**ಅಗ್ನಿಪುರಾಣದಲ್ಲಿ** ವ್ಯಾಸರು ವೇದವೇದಾಂತಗಳ ಪರಿಪೂರ್ಣ ಅರಿವು ಉಳ್ಳವನೂ ನಿತ್ಯಕರ್ಮವನ್ನು ಮೂರು ಹೊತ್ತಿನ ಜಪವನ್ನು ನಡೆಸ ಬೇಕೆನ್ನುವುದನ್ನು ಹೇಳಿದ್ದಾರೆ. ಜ್ಞಾನಿಗೆ ಕರ್ಮವು ವಿಹಿತವೇ ಆಗಿದೆ. ತಿಳಿದವನು ಕರ್ಮ ಮಾಡಬೇಕಿಲ್ಲವೆಂದಾದರೆ, ಕರ್ಮ ಮಾಡುವವನು ತಿಳಿದಿರಬೇಕಾಗಿಲ್ಲವೆಂದಾಗುವುದು. ಇದರಿಂದ ಕರ್ಮವೆಂದೂ ಪೂರ್ಣತೆಯನ್ನು ಪಡೆಯದು. **ಯದೇವ ವಿದ್ಯಯಾ ಕರೋತಿ ವೀರ್ಯವತ್ತರಂ ಭವತಿ** ಎಂಬ ಶ್ರುತಿ ತಿಳಿದು ಮಾಡಿದವಗೆ ಹೆಚ್ಚು ಫಲವನ್ನು ಹೇಳಿದ್ದು ತಪ್ಪಾದೀತು. ಉದಾಹರಣೆಗೆ- ಅಡುಗೆ ಕರ್ಮವು ತಿಳಿಯದವ ನಡೆಸಿದರೆ ಉಣ್ಣುವವರು ಯಾರು? ಅಡುಗೆ ತಿಳಿದವನು ಅಡುಗೆ ಕರ್ಮ ಮಾಡುವುದಿಲ್ಲವಾದರೆ ಉಣ್ಣುವುದು ಹೇಗೆ? ಹೀಗೆಯೇ ಜಪ ತಿಳಿಯದಿದ್ದರೆ ಮಾಡಿದ್ದು ಏನನ್ನು? ಜಪ ತಿಳಿದ ಬಳಿಕ ತಿಳಿದವಗೆ ಕರ್ಮ ಬೇಡವೆಂದಿದ್ದರೆ ಜಪ ಯಾರಿಗೆ? ಆದ್ದರಿಂದ ಚೆನ್ನಾಗಿ ತಿಳಿಯಿರಿ, ಚೆನ್ನಾಗಿ ನಿತ್ಯಕರ್ಮ ನಡೆಸಿರಿ.

**ಸತ್ಯಾರ್ಥಪ್ರಕಾಶ** ಮೂರು ಸಂಧ್ಯೆಗೆ ಪ್ರಮಾಣವಿರದೆಂದು ಸಾರುತ್ತಾ ಮಾಧ್ಯಾಹ್ನಿಕವನ್ನು ಅಪಲಾಪಗೈದಿದೆ. ಇಲ್ಲಿ ಚಿಂತಕರಿಗಾಗಿ ಕೆಲವು ಮಾತುಗಳನ್ನು ನೀಡಲಾಗಿದೆ –

**ಮಮತ್ವಾ ಸೂರ ಉದಿತೇ ಮಮ ಮಧ್ಯಂದಿನೇ ದಿವಃ**
**ಮಮ ಪ್ರಪಿತ್ವೇ ಅಪಿ ಶರ್ವರೇ ವಸವಾ ಸ್ತೋಮಾಸೋ ಅವೃತ್ಸತ** (ಋಗ್ವೇದ)

**ಉತಾ ಯಾತಂ ಸಂಗವೇ ಪ್ರಾತರಹ್ನೋ ಮಧ್ಯಂದಿನ ಉದಿತಾ ಸೂರ್ಯಸ್ಯ**
**ದಿವಾ ನಕ್ತಮವಸಾ ಶಂತಮೇನ ನೇದಾನೀಂ ಪೀತಿರಶ್ವಿನಾ ತತಾನ** (ಋಗ್ವೇದ)

**ಯದದ್ಯ ಸೂರ ಉದ್ಯತಿ ಪ್ರಿಯಕ್ಷತ್ರಾ ಋತಂ ದಧ**
**ಯನ್ನಿಮ್ರುಚಿ ಪ್ರಬುಧಿ ವಿಶ್ವವೇದಸೋ ಯದ್ವಾ ಮಧ್ಯಂದಿನೇ ದಿವಃ** (ಋಗ್ವೇದ)

**ಮೇಧಾಂ ಸಾಯಂ ಮೇಧಾಂ ಪ್ರಾತಃ ಮೇಧಾಂ ಮಧ್ಯಂದಿನಂ ಪರಿ**



ಮೇಧಾಂ ಸೂರ್ಯಸ್ಯ ರಶ್ಮಿಭಿಃ ವಚಸಾ ವೇಶಯಾಮಹೇ (ಅಥರ್ವವೇದ)

ದುಹೇ ಸಾಯಂ ದುಹೇ ಪ್ರಾತರ್ದುಹೇ ಮಧ್ಯಂ ದಿನಂ ಪರಿ (ಅಥರ್ವವೇದ)

ಋಚಃ ಪೂರ್ವಾಹ್ನೇ ದಿವಿ ದೇವ ಈಷತೇ

ಯಜುರ್ವೇದೇ ತಿಷ್ಠತಿ ಮಧ್ಯೇ ಅಹ್ನಃ

ಸಾಮವೇದೇ ವಾಸ್ತಮಯೇ ಮಹೀಯತೇ (ಶ್ರುತಿ)

ತಸ್ಮಾದ್ಬ್ರಾಹ್ಮಣೋ ಅಹೋರಾತ್ರಸ್ಯ ಯೋಗೇ ಸಂಧ್ಯಾಮುಪಾಸೀತ

(ಷಡ್ವಿಂಶಬ್ರಾಹ್ಮಣ)

ಜಪೋಪಸ್ಥಾನಕಂ ಕೃತ್ವಾ ಬ್ರಹ್ಮಯಜ್ಞಮನುತ್ತಮಮ್

ಉಪಾದನಂ ತತಃ ಸ್ನಾನಂ ಕುರ್ಯಾನ್ಮಾಧ್ಯಾಹ್ನಿಕಂ ಕ್ರಮಾತ್

ಹೋಮಾರ್ಚ್ಚನವಿಧಾನಂ ತು ವೈಶ್ವದೇವಮತಃಪರಮ್ (ಶೇಷಸಂಹಿತೆ)

ಯಸ್ತ್ರಿಸಂಧ್ಯಾಮುಪಾಸೀತ ಬ್ರಾಹ್ಮಣಃ ಶ್ರದ್ಧಯಾನ್ವಿತಃ

ತತ್ತೇಜೋ ವರ್ಧತೇಽತ್ಯಂತಂ ಘೃತೇನೈವ ಹುತಾಶನಃ (ಬೃಹನ್ನಾರದೀಯ)

ಯಸ್ತ್ರಿಸಂಧ್ಯಾವಿಹೀನಶ್ಚ ಸ ಗೋಹತ್ಯಾಂ ಲಭೇತ್ ಧ್ರುವಮ್ (ಬ್ರಹ್ಮವೈವರ್ತ್ತ)

ಪ್ರಾತಸ್ಸಂಧ್ಯಾ ಮಧ್ಯಸಂಧ್ಯಾ ಸಾಯಂಸಂಧ್ಯೇತ್ಯನುಕ್ರಮಾತ್

ತಿಸ್ರಃ ಸಂಧ್ಯಾ ಭವಂತ್ಯೇವಂ ಜನ್ಮಸ್ಥಿತಿಲಯಾತ್ಮಿಕಾಃ (ಭಾರದ್ವಾಜಸ್ಮೃತಿ)

ಋಗ್ಯಜುಃಸಾಮವೇದಾನಾಂ ರೂಪತ್ರಯಮಿದಂ ಮತಮ್

ತಸ್ಮಾದ್ದ್ವಿಜಃ ಸದಾ ಸಂಧ್ಯಾತ್ರಿತಯಂ ಸರ್ವದಾ ಚರೇತ್ (ಭಾರದ್ವಾಜಸ್ಮೃತಿ)

ಸಂಧ್ಯಾತ್ರಯೇ ಚ ಪ್ರಜಪೇತ್ ತಾದೃಶೇನ ಜಪೇನ ವೈ

ಗಾಯತ್ರೀ ಸಿದ್ಧಿದಾ ಯತ್ನಾತ್ ಶನೈರ್ಭವತಿ ನಾನ್ಯಥಾ (ಕಣ್ವಸ್ಮೃತಿ)

ತ್ರಿವರ್ಣ್ಣಮಯಮೋಂಕಾರಂ ಭೂರ್ಭುವಃಸ್ವರಿತಿ ತ್ರಯಮ್

ಪಾದತ್ರಯಂ ಚ ಸಾವಿತ್ರ್ಯಾಃ ತ್ರಯೋ ವೇದಾ ಅದೂದುಹನ್

ಏತದಕ್ಷರಮೇನಾಂ ಚ ಜಪೇದ್ವ್ಯಾಹೃತಿಪೂರ್ವಿಕಾಮ್

ಸಂಧ್ಯಾಸು ವೇದವಿದ್ವಿಪ್ರೋ ವೇದಪುಣ್ಯೇನ ಯುಜ್ಯತೇ

ದೇವ್ಯಾಃ ತ್ರಿಕಾಲಮಭ್ಯಾಸಾತ್ ಬ್ರಾಹ್ಮಣಃ ಸ್ಯಾದ್ಧಿ ನಾನ್ಯಥಾ



ಪ್ರಾತರ್ಮಧ್ಯಾಹ್ನಕಾಲೇ ಚ ಸಾಯಂ ಸಂಧ್ಯಾ ವಿಶಿಷ್ಯತೇ (ಸ್ಕಾಂದಪುರಾಣ)

ಸಂಧ್ಯಾ ಮಾಧ್ಯಾಹ್ನಿಕೀ ಕುರ್ಯಾತ್ ಯಥಾ ಶ್ರುತ್ಯನುಕೂಲತಃ (ಶೇಷಧರ್ಮ)

ದಿವಾ ವಾ ಯದಿ ವಾ ರಾತ್ರೌ ಯದಜ್ಞಾನಕೃತಂ ಭವೇತ್

ತ್ರಿಕಾಲಸಂಧ್ಯಾಕರಣಾತ್ ತತ್ಸರ್ವಂ ವಿಪ್ರಣಶ್ಯತಿ (ಯಾಜ್ಞವಲ್ಕ್ಯ)

ಚತುರ್ಥಮರ್ಘ್ಯಂ ಗಾಯತ್ರ್ಯಾ ದದ್ಯಾದ್ವ್ಯಾಹೃತಿಸಂಪುಟಮ್

ಕಾಲಾತ್ಯಯವಿಶುದ್ಧ್ಯರ್ಥಂ ತ್ರಿಸಂಧ್ಯಾಸು ಸಮಾಚರೇತ್ (ಸಂಗ್ರಹ)

ಸಮ್ಯಗೇವ ಜಪೇದ್ವಿದ್ವಾನ್ ತ್ರಿಸಂಧ್ಯಾಸು ಯಥೋಕ್ತಿತಃ (ಕಣ್ವಸ್ಮೃತಿ)

ಸಂಧ್ಯಾತ್ರಯಂ ತು ಕರ್ತವ್ಯಂ ದ್ವಿಜೇನಾಽಽತ್ಮವಿದಾ ಸದಾ (ಅತ್ರಿ)

ತ್ರಯಾಣಾಂ ಚೈವ ದೇವಾನಾಂ ಸಂಗಮಸ್ತೂಭಯೋರ್ಭವೇತ್

ಮಧ್ಯಮಾಯಾಂ ತು ಸಂಧ್ಯಾಯಾಂ ಸರ್ವದೇವಸಮಾಗಮಃ

(ಬೃಹದ್ಯೋಗಿ ಯಾಜ್ಞವಲ್ಕ್ಯ)

ಅಥ ಧೃತವಸನೋ ವಾರ್ಯುಪಸ್ಪೃಶ್ಯ ಪುಂಡ್ರಮ್

ಚಕ್ರಾದೀನ್ ಧಾರಯಿತ್ವಾ ಶ್ರುತಿವಿಹಿತಪಥೈಃ ಪೂರ್ವಸಂಧ್ಯಾಮುಪಾಸ್ಯ

ಸ್ಮೃತ್ವಾಽರ್ಕಸ್ಥಂ ಮುಕುಂದಂ ಜಪಮಥ ವಿರಚಯ್ಯ

ಸ್ನಾತ್ವಾ ಮಧ್ಯಾಹ್ನಕಾಲೇ ಶ್ರುತಿಪಥವಿದುಪಾಸ್ಯಾಥ

ಸಂಧ್ಯಾಂ ಗುರೂಕ್ತಾನ್‌ಮಂತ್ರಾನ್ ಜಪ್ತ್ವಾ

ಪ್ರತಿದಿವಸಮುಪಾಸೀತ ಸಾಯಂ ಚ ಸಂಧ್ಯಾಮ್ (ಶ್ರೀ ವಾದಿರಾಜರು)

ಉಭೇ ಸಂಧ್ಯೇ ತು ಸ್ನಾತವ್ಯಂ ಬ್ರಾಹ್ಮಣೈಶ್ಚ ಗೃಹಾಶ್ರಿತೈಃ

ತಿಸೃಷ್ವಪಿ ಚ ಸಂಧ್ಯಾಸು ಸ್ನಾತವ್ಯಂ ಚ ತಪಸ್ವಿನಾ (ಯೋಗಿಯಾಜ್ಞವಲ್ಕ್ಯ)

ಗಾಯತ್ರೀ ತ್ವನಿರುದ್ಧೋಽಸೌ ತ್ರಿಕಾಲೇ ಗೀಯತೇ ಯತಃ (ಸತ್ತತ್ವ)

ಸಾಯಂ ಪ್ರಾತಶ್ಚ ಮಧ್ಯಾಹ್ನೇ ಸಾವಿತ್ರೀಂ ವಾಗ್ಯತೋ ಜಪೇತ್

ಸಹಸ್ರಪರಮಾಂ ದೇವೀಂ ಶತಮಧ್ಯಾಂ ದಶಾವರಾಮ್

ಗಾಯತ್ರೀಂ ಸಂಸ್ಮರೇದ್ಧೀಮಾನ್ ಹೃದಿ ವಾ ಸೂರ್ಯಮಂಡಲೇ (ದೀಪಿಕಾಟೀಕೆ)

ಮಧ್ಯಾಹ್ನಕಾಲೇ ಸಂಪ್ರಾಪ್ತೇ ಸ್ನಾತ್ವಾಚಮ್ಯ ತತಃ ಪರಮ್



**ಸಂಧ್ಯಾಂ ಮಾಧ್ಯಾಹ್ನಿಕೀಂ ಕುರ್ಯಾತ್ ಆದಿತ್ಯಾಭಿಮುಖಃ ಶುಚಿಃ**

(ಋಷ್ಯಶೃಂಗಸಂಹಿತಾ)

**ಪ್ರಾತಃಸಂಧ್ಯಾಂ ಸನಕ್ಷತ್ರಾಂ ಉಪಾಸೀತೈವ ಯತ್ನತಃ**

**ಮಧ್ಯಾಹ್ನೇ ಚ ತಥಾ ರೌದ್ರೀಂ ಸಾಯಂ ಚೈವ ತು ವೈಷ್ಣವೀಮ್** (ಬೃಹದ್ಯಮಸ್ಮೃತಿ)

ನಾರದಪುರಾಣದಲ್ಲಿಯೂ ತ್ರಿಮೂರ್ತಿಗಳ ರಾಣಿಯರನ್ನು ಮೂರು ಸಂಧ್ಯೆಯಲ್ಲಿ ಲಕ್ಷಣಪೂರ್ವಕವಾಗಿ ಚಿಂತನೆಗೈಯಲಾಗಿದೆ.

**ಗಾಯತ್ರೀ ನಾಮ ಪೂರ್ವಾಹ್ನೇ ಸಾವಿತ್ರೀ ಮಧ್ಯಮೇ ದಿನೇ**

**ಸರಸ್ವತೀ ಚ ಸಾಯಾಹ್ನೇ ಸೈವ ಸಂಧ್ಯಾ ತ್ರಿಷು ಸ್ಮೃತಾ** (ಮಾಧವೀಯ)

ಗಾಯತ್ರೀ ಸಾವಿತ್ರೀ ಸರಸ್ವತೀ ಎಂಬ ದೇವಿಯರ ಉಪಾಸನೆ ಎಂದರ್ಥವಲ್ಲ ಎಂದು ಭಗವಚ್ಚಿಂತಕರಾದ ಧರ್ಮಶಾಸ್ತ್ರಜ್ಞರು ಆ ಪದಗಳ ಅರ್ಥ ಚಿಂತನೆಯನ್ನು ನೀಡಿದ್ದಾರೆ–

**ಪ್ರತಿಗ್ರಹಾನ್ನದೋಷಾತ್ತು ಪಾತಕಾದುಪಪಾತಕಾತ್**

**ಗಾಯತ್ರೀ ಪ್ರೋಚ್ಯತೇ ತಸ್ಮಾತ್ ಗಾಯಂತಂ ತ್ರಾಯತೇ ಯತಃ**

**ಸವಿತೃದ್ಯೋತನಾತ್ಸೈವ ಸಾವಿತ್ರೀ ಪರಿಕೀರ್ತಿತಾ**

**ಜಗತಃ ಪ್ರಸವಿತ್ರೀ ವಾ ವಾಗ್ರೂಪತ್ವಾತ್ಸರಸ್ವತೀ**

**ಅಗ್ನಿಪುರಾಣ** ತೋರಿಸಿದ ಅರ್ಥವ್ಯಾಪ್ತಿ ದೊಡ್ಡದಿದೆ –

**ಗಾಯನ್ ಶಿಷ್ಯಾನ್ ಯತಸ್ತ್ರಾಯೇತ್ ಭಾರ್ಯಾಂ ಪ್ರಾಣಾನ್ ತಥೈವ ಚ**

**ತತಃ ಸ್ಮೃತೇಯಂ ಗಾಯತ್ರೀ ಸಾವಿತ್ರೀಯಂ ತತೋ ಯತಃ**

**ಪ್ರಕಾಶನಾತ್ ಸಾ ಸವಿತುಃ ವಾಗ್ರೂಪತ್ವಾತ್ಸರಸ್ವತೀ**

ಭಗವಂತನ ಸೃಷ್ಟ್ಯಾದಿ ಲೀಲೆಗಳ ಬಣ್ಣವನ್ನಿಲ್ಲಿ ವೇದವ್ಯಾಸರು ಸಂಗ್ರಹಿಸಿದ್ದಾರೆ –

**ರಕ್ತಾ ಭವತಿ ಗಾಯತ್ರೀ ಸಾವಿತ್ರೀ ಶುಕ್ಲವರ್ಣ್ಣಿಕಾ**

**ಕೃಷ್ಣಾ ಸರಸ್ವತೀ ಜ್ಞೇಯಾ ಸಂಧ್ಯಾತ್ರಯಮುದಾಹೃತಮ್** (ಗರುಡಪುರಾಣ)

**ಗಾಯತ್ರೀ ತು ಭವೇದ್ರಕ್ತಾ ಸಾವಿತ್ರೀ ಶುಕ್ಲವರ್ಣ್ಣಿಕಾ**



**ಸರಸ್ವತೀ ತಥಾ ಕೃಷ್ಣಾ ಉಪಾಸ್ಯಾ ವರ್ಣಭೇದತಃ**

**ಮಧ್ಯಸಂಧ್ಯಾ ಚ ಕರ್ತವ್ಯಾ ಮಧ್ಯಾಹ್ನೇ ತದ್ವದೇವ ಹಿ**

**ತ್ರಿವಾರಮನ್ವಹಂ ಪ್ರೋಕ್ತಂ ಸಂಧ್ಯಾಕರ್ಮ ದ್ವಿಜನ್ಮನಃ** (ಕಣ್ವಸ್ಮೃತಿ)

ಸ್ಕಾಂದಪುರಾಣವು ಸೂರ್ಯನ ಎಪ್ಪತ್ತು ನಾಮಗಳ ಚಿಂತನೆಯೊಂದಿಗೆ ಉಪಾಸನೆಯನ್ನು ಹೇಳುವಲ್ಲಿ ಮೂರು ಹೊತ್ತಿನ ಜಪದಲ್ಲಿ ತ್ರಿಮೂರ್ತಿಗಳನ್ನು ಹೇಳಿದೆ. ಮೂರು ಛಂದಸ್ಸುಗಳನ್ನು ಬಿತ್ತರಿಸಿದೆ. ಹೀಗೆ ಸೂರ್ಯನು ಮೂವರ ಪ್ರತೀಕವಾಗಿ ಇಲ್ಲಿ ಬಣ್ಣಿಸಲ್ಪಟ್ಟಿದ್ದಾನೆ –

**ಗಾಯತ್ರ್ಯೇವ ಪರಂ ವಿಷ್ಣುಃ ಗಾಯತ್ರ್ಯೇವ ಪರಃ ಶಿವಃ**

**ಗಾಯತ್ರ್ಯೇವ ಪರೋ ಬ್ರಹ್ಮಾ ಗಾಯತ್ರ್ಯೇವ ತ್ರಯೀ ತತಃ**

**ದೇವತ್ರಯಂ ಸ ಭಗವಾನ್ ಅಂಶುಮಾಲೀ ದಿವಾಕರಃ**

ಉಪನಯನದ ದಿನವೇ ಮಧ್ಯಾಹ್ನ ಸಂಧ್ಯಾ, ಸಾಯಂಸಂಧ್ಯಾ ಮಾಡಲಿದೆ ಎಂದು ಜೈಮಿನಿ ತಿಳಿಸಿದ್ದಾರೆ. ಮಧ್ಯಾಹ್ನದವರೆಗೆ ಉಪನಯನದ ಕ್ರಿಯೆಗಳು ಸಾಗುವುದರಿಂದ ಪ್ರಾತಃಸಂಧ್ಯಾ ಅಂದು ಇಲ್ಲ.

**ಯಾವದ್ಬ್ರಹ್ಮೋಪದೇಶಸ್ತು ತಾವತ್ಸಂಧ್ಯಾದಿಕಂ ಚ ನ**

**ತತೋ ಮಧ್ಯಾಹ್ನಸಂಧ್ಯಾದಿ ಸರ್ವಂ ಕರ್ಮ ಸಮಾಚರೇತ್**

ಬ್ರಹ್ಮವೈವರ್ತಪುರಾಣದಲ್ಲಿ ಮೂರುಹೊತ್ತು ಜಪ ಮಾಡದವ ಮಹಾ ಪಾಪಿಯೆನಿಸುವನೆಂದು ಎಚ್ಚರಿಸಲಾಗಿದೆ –

**ಪೂರ್ವಾಂ ಸಂಧ್ಯಾಂ ಪರಿತ್ಯಜ್ಯ ಮಧ್ಯಮಾಂ ಪಶ್ಚಿಮಾಂ ತಥಾ**

**ಬ್ರಹ್ಮಹತ್ಯಾಮಾತ್ಮಹತ್ಯಾಂ ಪ್ರತ್ಯಹಂ ಲಭತೇ ದ್ವಿಜಃ**

**ಏವಂ ತ್ರಿಸಂಧ್ಯಂ ಸಂಧ್ಯಾಂ ಚ ಕುರುತೇ ಕುಲಜೋ ದ್ವಿಜಃ**

**ಸ ಸ್ನಾತಃ ಸರ್ವತೀರ್ಥೇಷು ತ್ರಿಸಂಧ್ಯಾಂ ಯಃ ಸಮಾಚರೇತ್**

ಸಂಧ್ಯಾವಂದನೆಗಳನ್ನು ನಡೆಸದವನು ಇತರ ಕರ್ಮಗಳಿಗೆ ಅಯೋಗ್ಯನು –

**ನ ತಿಷ್ಠತಿ ತು ಯಃ ಪೂರ್ವಾಂ ನೋಪಾಸ್ತೇ ಯಶ್ಚ ಪಶ್ಚಿಮಾಮ್**

**ಸ ಶೂದ್ರವತ್ ಬಹಿಷ್ಕಾರ್ಯಃ ಸರ್ವಸ್ಮಾತ್ ದ್ವಿಜಕರ್ಮಣಃ** (ಮನು)



ಸೃಷ್ಟಿಕರ್ತನಿಂದ ಜಪದ ಸೃಷ್ಟಿಯಾದದ್ದೇ ಎಲ್ಲ ತಪ್ಪುಗಳ ಪರಿಮಾರ್ಜನೆಗೆ.

**ಯಾವಂತೋಽಸ್ಯಾಂ ಪೃಥಿವ್ಯಾಂ ಹಿ ವಿಕರ್ಮಸ್ಥಾಸ್ತು ವೈ ದ್ವಿಜಾಃ**
**ತೇಷಾಂ ವೈ ಪಾವನಾರ್ಥಾಯ ಸಂಧ್ಯಾ ಸೃಷ್ಟಾ ಸ್ವಯಂಭುವಾ**
**ನಿಶಾಯಾಂ ವಾ ದಿವಾ ವಾಪಿ ಯದಜ್ಞಾನಕೃತಂ ಭವೇತ್**
**ತ್ರಿಕಾಲಸಂಧ್ಯಾಕರಣಾತ್ ತತ್ಸರ್ವಂ ಹಿ ಪ್ರಣಶ್ಯತಿ** (ಯಾಜ್ಞವಲ್ಕ್ಯ)

ಧರ್ಮ ಮೋಕ್ಷ ಮತ್ತು ಅರ್ಥ ಪುರುಷಾರ್ಥಗಳ ಮೂರರ ಪ್ರಾಪ್ತಿಗೆ ಮೂರು ಹೊತ್ತಿನ ಸಂಧ್ಯಾವಂದನೆ ಎನ್ನುವುದು **ಶೇಷಸಂಹಿತೆಯ** ಮಾತು. ಕಾಮಪುರುಷಾರ್ಥಕ್ಕೆ ಸಂಧ್ಯಾವಂದನೆ ಹೇಳಿಸಿದ್ದಲ್ಲ –

**ಓಂ ಭೂರ್ಭುವಃಸ್ವರಿತ್ಯಾದೌ ಯೋಜ್ಯಂ ಸ್ಯಾನ್ಮೂಲವಿದ್ಯಯಾ**
**ತದಂಗಂ ಮಂತ್ರಸಂಯುಕ್ತಂ ಗಾಯತ್ರೀಂ ಚ ಜಪೇದ್ದ್ವಿಜಃ**
**ತ್ರಿಸಂಧ್ಯಾಯಾಂ ಹರಿಂ ಧ್ಯಾಯನ್ ಧರ್ಮಮೋಕ್ಷಾರ್ಥಸಿದ್ಧಯೇ**
**ಅಷ್ಟೋತ್ತರಂ ಸಹಸ್ರಂ ವಾ ಅಥವಾಽಷ್ಟಶತಂ ಜಪೇತ್**
**ತ್ರಿಸಂಧ್ಯಂ ಬ್ರಹ್ಮಲೋಕೀ ಸ್ಯಾತ್** ಎನ್ನುತ್ತದೆ ಗರುಡಪುರಾಣ.

ಮಧ್ಯಾಹ್ನ ಸ್ನಾನದ ಬಳಿಕ ಮಾಧ್ಯಾಹ್ನಿಕ ಸಂಧ್ಯೆಯನ್ನು ನಡೆಸಿದರೆ ಉತ್ತಮ –

**ಮಧ್ಯಾಹ್ನಸ್ನಾನಾದೂರ್ಧ್ವಂ ಯಃ ಕಾಲಸ್ತ್ವವ್ಯವಧಾನತಃ**
**ತತ್ರ ಮಧ್ಯಾಹ್ನಸಂಧ್ಯಾ ಸ್ಯಾತ್ ಊರ್ಧ್ವಂ ಗೌಣಃ ಸ್ಮೃತೋ ಬುಧೈಃ** (ಸ್ಮೃತಿಸಂಗ್ರಹ)

**ಪ್ರಾತಃಸಂಧ್ಯಾ ಸನಕ್ಷತ್ರಾ ಮಧ್ಯಾಹ್ನಾ ಮಧ್ಯಗೇ ರವೌ**
**ಪಶ್ಚಿಮಾ ತು ಸಮಾಖ್ಯಾತಾ ರವಿನಕ್ಷತ್ರವರ್ಜಿತಾ** (ಶಾತಾತಪ)
**ಉತ್ತಮಾ ತಾರಕೋಪೇತಾ ಮಧ್ಯಮಾ ಲುಪ್ತತಾರಕಾ**
**ಅಧಮಾ ಸೂರ್ಯಸಹಿತಾ ಪ್ರಾತಃಸಂಧ್ಯಾ ತ್ರಿಧಾ ಮತಾ** (ಧರ್ಮಸಾರ)
**ಉತ್ತಮಾ ಸೂರ್ಯಸಹಿತಾ ಮಧ್ಯಮಾ ಲುಪ್ತತಾರಕಾ**
**ಅಧಮಾ ತಾರಕೋಪೇತಾ ಸಾಯಂಸಂಧ್ಯಾ ತ್ರಿಧಾ ಮತಾ** (ಛಂದೋಗಪರಿಶಿಷ್ಟ)
**ಉತ್ತಮಾ ಪೂರ್ವಸೂರ್ಯಾ ಚ ಮಧ್ಯಮಾ ಮಧ್ಯಸೂರ್ಯಕಾ**



**ಅಧಮಾ ಪಶ್ಚಿಮಾದಿತ್ಯಾ ಮಧ್ಯಸಂಧ್ಯಾ ತ್ರಿಧಾ ಮತಾ** (ವಿಶ್ವಾಮಿತ್ರಸ್ಮೃತಿ)

**ಪ್ರಾತಸ್ಸಂಧ್ಯಾಂ ಸನಕ್ಷತ್ರಾಂ ಮಧ್ಯಮಾಂ ಸ್ನಾನಕರ್ಮಣಿ**

**ಸಾದಿತ್ಯಾಂ ಪಶ್ಚಿಮಾಂ ಸಂಧ್ಯಾಂ ಉಪಾಸೀತ ಯಥಾವಿಧಿ** (ಶಂಖಸ್ಮೃತಿ)

ಮಧ್ಯಾಹ್ನದ ಸಂಧ್ಯಾವಂದನೆ ಸೂರ್ಯೋದಯವಾಗಿ 5 ಗಂಟೆ 36 ನಿಮಿಷದ ಬಳಿಕ ಆಗಬೇಕೆಂದು **ಆಚಾರಕಾಂಡ**ದ ಅಭಿಪ್ರಾಯ –

**ಪೂರ್ವಾಪರೇ ತಥಾ ಸಂಧ್ಯೇ ಸನಕ್ಷತ್ರೇ ಪ್ರಕೀರ್ತಿತೇ**

**ಸಮಸೂರ್ಯೇ ತು ಮಧ್ಯಾಹ್ನೇ ಮುಹೂರ್ತಸಪ್ತಕೋಪರಿ**

ಮಧ್ಯಾಹ್ನ ಸಂಧ್ಯೆಯ ಉಪಸ್ಥಾನದಲ್ಲಿ ಎರಡೂ ಕೈಗಳನ್ನೂ ತಲೆಯಿಂದಲೂ ಮೇಲಕ್ಕೆತ್ತಿ ಸೂರ್ಯನೊಳಗಿನ ಭಗವಂತನಿಗೆ ನಮನವನ್ನು ಸಮರ್ಪಿಸಬೇಕೆಂದು **ಹಾರೀತ**ರು ಹೇಳಿರುವರು –

**ಸಾಯಂ ಪ್ರಾತರುಪಸ್ಥಾನಂ ಕುರ್ಯಾತ್ಪ್ರಾಂಜಲಿರಾನತಃ**

**ಊರ್ಧ್ವಬಾಹುಸ್ತು ಮಧ್ಯಾಹ್ನೇ ಯಥಾ ಸೂರ್ಯಸ್ಯ ದರ್ಶನಾತ್**

ಹೋರಾಟದ ಗಾಬರಿಯಲ್ಲಿ ಕರ್ಣನಲ್ಲಿಗೆ ಧಾವಿಸಿದ ಕುಂತಿಯು ಬಿಸಿಲ ಬೇಗೆಗೆ ಬಸವಳಿದು ಮಗನ ಉತ್ತರೀಯದ ನೆರಳಿನಲ್ಲಿ ಆಸರೆ ಪಡೆದಳು ಎನ್ನುವುದಾಗಿ **ಮಹಾಭಾರತ** ಕಥೆಯನ್ನು ಹೇಳುವಾಗ ಕರ್ಣನು ಮಾಡುತ್ತಿದ್ದ ಮಧ್ಯಾಹ್ನದ ಹೊತ್ತಿನ ಜಪವನ್ನು ಸ್ಪಷ್ಟಪಡಿಸಿದೆ. ಆತ ಪೂರ್ವಕ್ಕೆ ಮುಖ ಹಾಕಿದ್ದ. ತೋಳುಗಳನ್ನು ತಲೆಯ ಮೇಲಕ್ಕೆ ಎತ್ತಿಹಿಡಿದು ನಿಂತಿದ್ದ. ಆತನ ಬೆನ್ನ ಹಿಂದೆ ಕುಂತಿ ಕಾದಿದ್ದಳು. ಆಕೆಗೆ ಕರ್ಣನ ನೆರಳು ಬಿದ್ದಿತ್ತು. ಮತ್ತೆ ಕರ್ಣ ತನ್ನ ಬೆನ್ನಿಗೆ ಬಿಸಿಲು ಬೀಳುವವರೆಗೆ ಜಪಿಸಿ ಹಿಂತಿರುಗಿ ಕುಂತಿಯನ್ನು ನೋಡಿದ ಎನ್ನುವುದಾಗಿ ಇಲ್ಲಿ ಕಥೆಯಿದೆ. ಅಂದರೆ ಮಧ್ಯಾಹ್ನ ಸಂಧ್ಯಾವಂದನೆಯನ್ನು ಸೂರ್ಯ ಮೇಲ್ಗಡೆ ಪೂರ್ವದಲ್ಲಿದ್ದಾಗ ಆರಂಭಿಸಿ, ಸೂರ್ಯ ಪಶ್ಚಿಮಕ್ಕೆ ವಾಲುವವರೆಗೂ ಮಾಡುತ್ತಿರಬೇಕು ಎನ್ನುವುದು ಅರ್ಥವಾಗಬೇಕು.

**ಆತ್ಮಜಸ್ಯ ತತಸ್ತಸ್ಯ ಘೃಣಿನಃ ಸತ್ಯಸಂಗಿನಃ**

**ಗಂಗಾತೀರೇ ಪೃಥಾಽಪಶ್ಯತ್ ಜಪಸ್ಥಾನಮನುತ್ತಮಮ್**



**ಪ್ರಾಙ್ಮುಖಸ್ಯೋರ್ಧ್ವಬಾಹೋಃ ಸಾ ಪರ್ಯತಿಷ್ಠತ ಪೃಷ್ಠತಃ**

**ಅತಿಷ್ಠತ್ ಸೂರ್ಯತಾಪಾರ್ತ್ತಾ ಕರ್ಣ್ಣಸ್ಯೋತ್ತರವಾಸಸಿ**

**ಅಪೃಷ್ಠತಾಪಾಜ್ಜಪ್ತ್ವಾ ಸ ಪರಿವೃತ್ಯ ಯತವ್ರತಃ**

ತೋಳೆತ್ತಿ ಜಪಿಸುವ ಈ ಬಗೆ ಮನುಷ್ಯನನ್ನು ಯಜ್ಞಕಂಬವನ್ನಾಗಿ ಯೂಪವನ್ನಾಗಿ ಮೈತ್ರಾಯಣೀಯಸಂಹಿತೆ ಗುರುತಿಸಿದೆ. **ಯಾವಾನ್ ಪುರುಷ ಊರ್ಧ್ವಬಾಹುಃ ತಾವಾನ್ ಕಾರ್ಯಃ** – ದೇಹವೇ ಪಶುಬಂಧದ ಕಂಬ. ಆತನೇ ಭಗವಂತನಿಗೆ ಸಮರ್ಪಣೆಯಾಗುವ ಪಶು – ಆತ್ಮನಿವೇದನೆ.

ವೃದ್ಧಹಾರೀತಸ್ಮೃತಿಯಲ್ಲಿ ಮಂತ್ರೋಲ್ಲೇಖವಿದೆ –

**ಕೃತ್ವಾ ಮಾಧ್ಯಾಹ್ನಿಕಂ ಸ್ನಾನಂ ಊರ್ಧ್ವಪುಂಡ್ರಧರಸ್ತತಃ**

**ನಿತ್ಯಾಂ ಸಂಧ್ಯಾಮುಪಾಸ್ಯಾಥ ರವಿಮಂಡಲಮಧ್ಯಗಮ್**

**ಹರಿಂ ಧ್ಯಾಯನ್ನುದುತ್ಯೋರ್ಧ್ವಂ ಹಂಸಃ ಶುಚಿಷದಿತ್ಯೃಚಾ**

**ಸಾವಿತ್ರೀಂ ಚ ಜಪೇತ್.....**

ಮೂರು ಸಂಧ್ಯಾವಂದನೆಯಲ್ಲಿಯೂ ಮಂತ್ರವ್ಯತ್ಯಾಸವಿದೆ ಹೊರತು ಕ್ರಮವ್ಯತ್ಯಾಸ ಹೆಚ್ಚಿಗೆ ಇರದೆಂದು **ಲೌಗಾಕ್ಷಿಸ್ಮೃತಿ** ತಿಳಿಸಿದೆ–

**ಪ್ರಾತಃಸಂಧ್ಯಾ ಯಥೈವ ಸಾ**

**ಸಾಯಂಸಂಧ್ಯಾ ಮಧ್ಯಮಾ ಚ**

ಮಂತ್ರಾಚಮನಕ್ಕೆ ಮೂರು ಹೊತ್ತು ಮಂತ್ರ ಬೇರೆ ಬೇರೆ –

**ಸೂರ್ಯಶ್ಚೇತ್ಯನುವಾಕೇನ ಪ್ರಾತಃಕಾಲೇ ಪಿಬೇದಪಃ**

**ಅಗ್ನಿಶ್ಚೇತ್ಯನುವಾಕೇನ ಸಾಯಂಕಾಲೇ ಪಿಬೇದಪಃ**

**ಆಪಃ ಪುನಂತು ಮಧ್ಯಾಹ್ನೇ ಮಂತ್ರಾಚಮನಮಾಚರೇತ್**

ಮೂರು ಹೊತ್ತೂ ಪೂರ್ವಮುಖವಾಗಿಯೇ ಸಂಧ್ಯೆ ನಡೆಸಬೇಕೆಂದು ವಿಶ್ವಾಮಿತ್ರನ ಮಾತು – **ಸಂಧ್ಯಾತ್ರಯೇ ಪೂರ್ವಮುಖೋ ದ್ವಿಜನ್ಮಾ.**

**ತಥಾ ಮಧ್ಯಮಸಂಧ್ಯಾಯಾಂ ಆಸೀನಃ ಪ್ರಾಙ್ಮುಖೋ ಜಪೇತ್**

**ಪ್ರಾತಸ್ತಿಷ್ಠನ್ ಜಪೇದ್ದೇವೀಂ ಸಾಯಂ ಚೈವೋಪವಿಶ್ಯ ಚ**



**ಉಪವಿಶ್ಯ ತು ಮಧ್ಯಾಹ್ನೇ ಪ್ರಾಙ್ಮುಖೋ ಜಪಮಾಚರೇತ್**

**ಅಷ್ಟೋತ್ತರಶತಂ ನಿತ್ಯಂ ಅಷ್ಟಾವಿಂಶತಿಮೇವ ಚ**

**ವಿಧಾನಾದ್ದಶಕಂ ವಾಽಪಿ ತ್ರಿಕಾಲೇಷು ಜಪೇದ್ದ್ವಿಜಃ** (ಶೌನಕ)

**ಪ್ರಾತಃಸಂಧ್ಯಾಮುಪಾಸೀತ ವಸ್ತ್ರಸಂಶೋಧಪೂರ್ವಕಮ್**

**ಉಪಾಸ್ಯ ಮಧ್ಯಮಾಂ ಸಂಧ್ಯಾಂ ವಸ್ತ್ರಸಂಶೋಧನಂ ಪರಮ್** (ಸಂಗ್ರಹ)

ದ್ವಾದಶಿಯಂದು ಹೇಗೆ ಬೆಳಿಗ್ಗೆಯೆ ಮಾಧ್ಯಾಹ್ನಿಕವನ್ನು ನಡೆಸುವುದೋ ಹಾಗೆಯೆ ಇತರ ದಿನಗಳಲ್ಲೂ ಮಾಧ್ಯಾಹ್ನಿಕವನ್ನು (ಅಶಕ್ತನಾದವನು) ಬೆಳಿಗ್ಗೆಯೆ ನಡೆಸಬಹುದು. ಮಾಧ್ಯಾಹ್ನಿಕ ಸಂಧ್ಯಾವಂದನೆಯನ್ನು ಮಾಡದಿರಬಾರದು –

**ಶಕ್ತಿಮಾನುದಿತೇ ಕಾಲೇ ಸ್ನಾನಂ ಸಂಧ್ಯಾಂ ನ ಹಾಪಯೇತ್**

**ಕಾಲಲೋಪೋ ಯದಿ ಭವೇತ್ ಕರ್ಮ್ಮಲೋಪಂ ನ ಕಾರಯೇತ್**

**ಯದಾ ಭವತಿ ಅಲ್ಪಾಪಿ ದ್ವಾದಶೀ ಪಾರಣಾದಿನೇ**

**ಉಷಃಕಾಲೇ ದ್ವಯಂ ಕುರ್ಯಾತ್ ಪ್ರಾತರ್ಮ್ಮಾಧ್ಯಾಹ್ನಿಕಂ ತಥಾ** (ಮತ್ಸ್ಯಪುರಾಣ)

ಎಲ್ಲರೂ ಮೂರು ಹೊತ್ತು ಜಪಿಸಲೇಬೇಕು. ತೀರಾ ಆಶಕ್ತನು ಮಾಧ್ಯಾಹ್ನಿಕವನ್ನಾದರೂ ನಡೆಸಬೇಕು.

**ಅರ್ಘ್ಯಂ ದದ್ಯಾತ್ತು ಸೂರ್ಯಾಯ ತ್ರಿಕಾಲೇಷು ಯಥಾಕ್ರಮಾತ್**

**ಅಶಕ್ತ ಏಕಕಾಲೇ ತು ಮಧ್ಯಾಹ್ನೇ ತು ವಿಶೇಷತಃ** (ನೃಸಿಂಹಪುರಾಣ)

ಮೂರೂ ಹೊತ್ತಿನಲ್ಲಿ ಕಾಲಕ್ಕನುಗುಣವಾಗಿ ಅರ್ಘ್ಯೆಯನ್ನು ನೀಡಲು ಚೆನ್ನಾಗಿ ಪ್ರಯತ್ನಿಸಿ –

**ಸಂಧ್ಯಾಂ ಸಮ್ಯಗುಪಾಸಯೇತ್**

**ಪ್ರಾತರ್ಮಧ್ಯಾಹ್ನಸಾಯಾಹ್ನೇ ಅರ್ಘ್ಯಂ ಚೈವ ನಿವೇದಯೇತ್** (ಲಿಂಗಪುರಾಣ)

ಮಧ್ಯಾಹ್ನದ ಊಟದ ಬಳಿಕ ಉಳಿದ ಹಗಲನ್ನು ಒಳ್ಳೆಯ ಶಾಸ್ತ್ರಗಳ ಓದಿನಲ್ಲಿ ಕಳೆಯಬೇಕು. ಮತ್ತೆ ಸಂಜೆ ಜಪ –

**ಸಚ್ಛಾಸ್ತ್ರಾದಿವಿನೋದೇನ ..... ದಿನಂ ನಯೇತ್**

**ತತಃ ಸಂಧ್ಯಾಮುಪತಿಷ್ಠೇತ್ಸಮಾಹಿತಃ** (ವಿಷ್ಣುಪುರಾಣ)



ಸಂಜೆಯ ಜಪದಲ್ಲಿ ಸೂರ್ಯಮಂಡಲ ನೋಡಿ, ಅರ್ಘ್ಯ ನೀಡಿ ನಕ್ಷತ್ರ ಕಾಣುವವರೆಗೆ ಜಪಿಸಬೇಕು –

**ಬಿಂಬಂ ದೃಷ್ಟ್ವಾ ತ್ಯಜೇದರ್ಘ್ಯಂ ಜಪೇದಾತಾರಕೋದಯಮ್**

ಮಂತ್ರ ಜಪಿಸುವಾಗ ಮೂರು ಹೊತ್ತಿನಲ್ಲಿ ಕೈಗಳೆಲ್ಲಿರಬೇಕೆಂದು **ಸಂಧ್ಯಾಕಲ್ಪ** ಹೇಳಿದೆ–

**ಪ್ರಾತರ್ನಾಭೌ ಕರೌ ಕೃತ್ವಾ ಮಧ್ಯಾಹ್ನೇ ಹೃದಿ ಸಂಸ್ಥಿತೌ**

**ಸಾಯಂ ಜಪಸ್ತು ನಾಸಾಗ್ರೇ ತ್ರಿಸಂಧ್ಯಜಪಲಕ್ಷಣಮ್**

ಹಗಲು 10.30ರಿಂದ (ಉದಯ 6 ಗಂಟೆ ಆದಾಗ) ಸಾಯಂಕಾಲದ (4.30)ವರೆಗೂ ಮಾಧ್ಯಾಹ್ನಿಕದ ಸಮಯವನ್ನು ದಕ್ಷನು ತಿಳಿಸಿರುವುದರಿಂದ ಬಿಟ್ಟುಹೋದ ಮಾಧ್ಯಾಹ್ನಿಕವನ್ನು ಸಂಜೆಯ ಜಪದ ಬಳಿಕ ನಡೆಸಬೇಕು

**ಅಧ್ಯರ್ಧಯಾಮಾದಾಸಾಯಂ ಸಂಧ್ಯಾ ಮಾಧ್ಯಾಹ್ನಿಕೇಷ್ಯತೇ**

**ಮಧ್ಯಾಹ್ನೇ ಸಮತಿಕ್ರಾಂತೇ ಸಾಯಂಕಾಲೋ ಭವೇದ್ಯದಿ**

**ಸಾಯಂಸಂಧ್ಯಾಮುಪಾಸ್ಯಾದೌ ಸಂಧ್ಯಾಂ ಮಾಧ್ಯಾಹ್ನಿಕೀಂ ಚರೇತ್**

ಮೂರುಹೊತ್ತು ಜಪದಲ್ಲಿ ಮಾಧ್ಯಾಹ್ನಿಕದಲ್ಲಿ ಸ್ವಲ್ಪ ಹೆಚ್ಚು ವ್ಯತ್ಯಾಸವಿದೆಯೆಂದು **ವಿಶ್ವಾಮಿತ್ರಕಲ್ಪ** ಹೇಳಿದೆ–

**ಸಾಯಂ ಪ್ರಾತಸ್ಸಮಾನಂ ಸ್ಯಾತ್ ಮಧ್ಯಾಹ್ನೇ ಚ ಪೃಥಗ್ವಿಧಿಃ**

**ಕಾಲತ್ರಯಂ ತ್ರಿಧಾ ಜಾಪ್ಯಂ ತ್ರಿಕಾಲಂ ತ್ರಿವಿಧಂ ಸ್ಮೃತಮ್**

ಮೂರು ಹೊತ್ತೂ ನಿಂತು ಅರ್ಘ್ಯಪ್ರದಾನ ಋಗ್ವೇದಿಗಳಿಗೆ ಹೇಳಿದ್ದೆಂದು **ಆಶ್ವಲಾಯನಸ್ಮೃತಿ** –

**ಜಲಮಂಜಲಿಮಾದಾಯ ಗಾಯತ್ರ್ಯಾ ಚಾಭಿಮಂತ್ರಯೇತ್**

**ದದ್ಯಾದರ್ಘ್ಯತ್ರಯಂ ತಿಷ್ಠನ್ ತ್ರಿಷು ಕಾಲೇಷು ಬಹ್ವೃಚಃ**

ಗಾಯತ್ರಿಜಪ ಮೂರೂ ಹೊತ್ತೂ ವಿಹಿತ–

**ತ್ರಿಸಂಧ್ಯಾಸು ಜಪೇದ್ದೇವೀಮ್** (ಲೌಗಾಕ್ಷಿಸ್ಮೃತಿ)

ಮೂರು ಹೊತ್ತೂ ಜಪಿಸುವಾಗಲೂ ಊರ್ಧ್ವಪುಂಡ್ರಧಾರಣೆ



ಮಾಡಿದಲ್ಲಿ ಎಲ್ಲ ಪಾಪಗಳೂ ಕಳೆಯಲಿವೆ ಮತ್ತು ಪುಣ್ಯವೃದ್ಧಿಯಾಗಲಿದೆ –

**ಧಾರಯೇದೂರ್ಧ್ವಪುಂಡ್ರಂ ತು ತ್ರಿಸಂಧ್ಯಾಸು ದ್ವಿಜೋತ್ತಮಃ**

**ಸರ್ವಪಾಪವಿಶುದ್ಧ್ಯರ್ಥಂ ಇಷ್ಟಾಪೂರ್ತಫಲಾಪ್ತಯೇ** (ಪದ್ಮಪುರಾಣ)

ಮಧ್ಯಾಹ್ನ ನಿಂತೂ ಅಥವಾ ಕುಳಿತೂ ಜಪಿಸಬಹುದು–

**ಮಧ್ಯಾಹ್ನೇ ತು ಜಪದ್ದೇವೀಂ ಆಸೀನಸ್ತಿಷ್ಠತೋಽಪಿ ವಾ** (ಲೌಗಾಕ್ಷಿಸ್ಮೃತಿ)

ಬೆಳಿಗ್ಗೆ ಪೂರ್ವಕ್ಕೆ, ಮಧ್ಯಾಹ್ನ ಈಶಾನ್ಯಕ್ಕೆ, ಸಾಯಂಕಾಲ ಪಶ್ಚಿಮಕ್ಕೆ ಮುಖಮಾಡಿ ಜಪ ನಡೆಸಬೇಕು–

**ತಥಾ ಮಧ್ಯಮಸಂಧ್ಯಾಯಾಂ ಆಸೀನಃ ಪ್ರಾಙ್ಮುಖೋ ಜಪೇತ್**

**ಪ್ರಾಙ್ಮುಖಸ್ತು ಜಪೇತ್ ಪ್ರಾತಃ ಮಧ್ಯಾಹ್ನೇ ಪ್ರಾಗುದಙ್ಮುಖಃ**

**ಪ್ರತ್ಯಙ್ಮುಖಸ್ತು ಸಾಯಾಹ್ನೇ ದೈವೇ ವಾ ಗುರುಸನ್ನಿಧೌ**

**ಏತತ್ಸಂಧ್ಯಾತ್ರಯಂ ಪ್ರೋಕ್ತಂ ಬ್ರಾಹ್ಮಣ್ಯಂ ಯದಧಿಷ್ಠಿತಮ್**

**ಯಸ್ಯ ನಾಸ್ತ್ಯಾದರಸ್ತತ್ರ ನ ಸ ಬ್ರಾಹ್ಮಣ ಉಚ್ಯತೇ** (ಕಾತ್ಯಾಯನ)

**ಅರ್ಘ್ಯಮೇಕಂ ಪ್ರದಾತವ್ಯಂ ಮಧ್ಯಾಹ್ನೇ ಭಾಸ್ಕರಂ ಪ್ರತಿ**

**ಅಥ ಮಧ್ಯಮಸಂಧ್ಯಾಯಾಂ ಆಸೀನಃ ಪ್ರಾಙ್ಮುಖೋ ಜಪೇತ್** (ಕೂರ್ಮಪುರಾಣ)

**ತ್ರಿಃ ಕುರು ಸ್ನಾನಸಂಧ್ಯಾರ್ಚ್ಯಾಃ** (ವಾದಿರಾಜರ ಕುರುಸ್ತುತಿ)

ಬ್ರಹ್ಮವೈವರ್ತಪುರಾಣವು ಮೂರು ಹೊತ್ತಿನ ಸಂಧ್ಯಾವಂದನೆಯಿಲ್ಲದವನ ಯಾವ ಒಂದು ಆಚರಣೆಗಳನ್ನೂ ದೇವತೆಗಳು ಸ್ವೀಕರಿಸುವುದಿಲ್ಲ ಎನ್ನುವ ಕಡು ಮಾತನ್ನು ಹೇಳಿದೆ. ಇದರಿಂದ ತ್ರಿಸಂಧ್ಯೆ ಸಿಗುವುದು –

**ಯಾವಜ್ಜೀವನಪರ್ಯಂತಂ ಯಸ್ತ್ರಿಸಂಧ್ಯಂ ಕರೋತಿ ಚ**

**ಸ ಹಿ ಸೂರ್ಯಸಮೋ ವಿಪ್ರಃ ತೇಜಸಾ ತಪಸಾ ಸದಾ**

**ನ ಗೃಹ್ಣಂತಿ ಸುರಾಃ ಪೂಜಾಂ ಪಿತರಃ ಪಿಂಡತರ್ಪಣಮ್**

**ಸ್ವೇಚ್ಛಯಾಚರತಶ್ಚೈವ ತ್ರಿಸಂಧ್ಯರಹಿತಸ್ಯ ಚ**

**ವಿಷ್ಣುಮಂತ್ರವಿಹೀನಶ್ಚ ತ್ರಿಸಂಧ್ಯರಹಿತೋ ದ್ವಿಜಃ**

**ಏಕಾದಶೀವಿಹೀನಶ್ಚ ವಿಷಹೀನೋ ಯಥೋರಗಃ**



**ಸ್ಕಾಂದಪುರಾಣವು** ಗಾಯತ್ರೀ ಮಹಿಮೆಯನ್ನು ಬಹಳವಾಗಿಯೇ ಹೇಳಿದೆ. ಒಂದು ವಾರ ಮೂರು ಹೊತ್ತಿನ ಜಪ ಬಿಟ್ಟವನು ಧರ್ಮ-ಕರ್ಮಗಳಿಗೆಲ್ಲಾ ಅಯೋಗ್ಯನೆನಿಸುತ್ತಾನೆ. ಸೂರ್ಯನೊಳಗಿನ ನಾರಾಯಣನ ಉಪಾಸನೆಯೇ ಇಲ್ಲಿ ವಿಹಿತವಾಗಿದೆ. ತಪ್ಪಾದ ಜಪವು ಅಂಧತಮಸ್ಸಿಗೆ ಕಳಿಸುತ್ತದೆ ಎಂದು ಇಲ್ಲಿ ಎಚ್ಚರಿಸಲಾಗಿದೆ –

**ನಿಯಂತಾ ಸರ್ವಭೂತಾನಾಂ ಯ ಏಕಃ ಕಾರಣಂ ಪರಮ್**
**ಅನಾಮಾ ಗೋತ್ರರಹಿತೋ ರೂಪಾದಿಪರಿವರ್ಜ್ಜಿತಃ**
**ಆವಿರ್ಭಾವತಿರೋಭಾವೌ ಯದ್ಭ್ರೂವರ್ತ್ತನವರ್ತ್ತಿನೌ**
**ಸ ಏವಂ ವಕ್ತಿ ಸತತಂ ಸರ್ವಾತ್ಮಾ ವೇದಪೂರುಷಃ**
**ಯೋऽಸಾವಾದಿತ್ಯಪುರುಷಃ ಸೋऽಸಾವಹಮಿತಿ ಸ್ಫುಟಮ್**
**ಅಂಧಂತಮಃ ಪ್ರವಿಶಂತಿ ಯೇ ಚೈವಾನ್ಯಮುಪಾಸತೇ**
**ನಿಶ್ಚಿತಾರ್ಥಾಂ ಶ್ರುತಿಮಿಮಾಂ ಬ್ರಾಹ್ಮಣಾಸೋ ದ್ವಿಜೋತ್ತಮ**
**ತಮೇಕಮುಪತಿಷ್ಠಂತೇ ನಿಶ್ಚಿತ್ಯೇತಿ ಪುನಃಪುನಃ**
**ಉಪಲಭ್ಯ ಚ ಸಾವಿತ್ರೀಂ ನೋಪತಿಷ್ಠೇತ ಯಃ ಪರಾಮ್**
**ಕಾಲೇ ತ್ರಿಕಾಲಂ ಸಪ್ತಾಹಾತ್ ಸ ಪತೇನ್ನಾತ್ರ ಸಂಶಯಃ**
**ತಾವತ್ಪ್ರಾತರ್ಜ್ಜಪಂಸ್ತಿಷ್ಠೇತ್ ಯಾವದರ್ಧೋದಯೋ ರವೇಃ**
**ಆಸನಸ್ಥೋ ಜಪೇನ್ಮೌನೀ ಪ್ರತ್ಯಗಾತಾರಕೋದಯಾತ್**
**ಸಾದಿತ್ಯಾಂ ಮಧ್ಯಮಾಂ ಸಂಧ್ಯಾಂ ಜಪೇದಾದಿತ್ಯಸಮ್ಮುಖಃ**
**ಕಾಲಲೋಪೋ ನ ಕರ್ತ್ತವ್ಯಃ ತತಃ ಕಾಲಂ ಪ್ರತೀಕ್ಷಯೇತ್**

ಮಂಗಳಾಶಂಸನೆಯು ಮೂರೂ ಹೊತ್ತಿನ ಜಪ ಮಾಡುವವರಿಗೆ ಮಾತ್ರ ಮೀಸಲಲ್ಲವೇ? –

**ಸಂಧ್ಯಾನಾಂ ತ್ರಿತಯಂ ದ್ವಿಜೈರಪಿ ಯುತಂ ಕುರ್ವಂತು ನೋ ಮಂಗಳಮ್**

ಮೂರೂ ಹೊತ್ತು ಪೂಜೆ ನಡೆಸುವಂತೆ **ಈಶ್ವರಸಂಹಿತೆ** ವಿಧಿಸಿದೆ. ಇದು ಜಪಕ್ಕೂ ಅನ್ವಯಿಸುವುದು. ಇನ್ನೂ ಹೆಚ್ಚು ಬಾರಿ ಜಪ ಪುಜೆ ನಡೆಸುವುದು



ಸಾಧಕನ ಇಚ್ಛೆಗೆ ಬಿಟ್ಟದ್ದು. ಮೂರು ಹೊತ್ತಿನಲ್ಲಿ ಬೆಳಿಗ್ಗೆ ಮುಖ್ಯ –

**ನ ಚ ಕಾಲತ್ರಯಾನ್ನ್ಯೂನಂ ಪೂಜನಂ ವಿಹಿತಂ ಸದಾ**

**ಕಾಲತ್ರಯಂ ಪ್ರಧಾನಂ ಸ್ಯಾತ್ ತದೂರ್ಧ್ವಂ ಕರ್ತುರಿಚ್ಛಯಾ**

**ಶ್ರೇಷ್ಠಂ ಪ್ರಭಾತಕಾಲಂ ಸ್ಯಾತ್ ತ್ರಿಷು ಕಾಲೇಷು ವೈ ಪುನಃ**

ಮಧ್ವಾಚಾರ್ಯರು **ಸದಾಚಾರಸ್ಮೃತಿ**ಯಲ್ಲಿ ನಡುರಾತ್ರಿಯಲ್ಲಿ ದೇವರ ಸ್ಮರಣೆಯನ್ನು ಹೇಳಿದ್ದಾರೆ. ಇದು ದಿನದ 4ನೆಯ ಸಂಧಿಕಾಲ. ಇದನ್ನು ಉಪಯೋಗಿಸುವಂತೆ ಮಧ್ವರ ಆದೇಶ –

**ಅಂತರಾಳೇ ತಥೋದ್ಬುದ್ಧಃ ಸ್ಮರೇತ ಬಹುಶೋ ಹರಿಮ್**

ಇದು ನಡುರಾತ್ರಿಯ ವಾಮದೇವಯಜ್ಞದ ಬಣ್ಣನೆಯನ್ನು ಸೂಚಿಸಿದ್ದಲ್ಲ. ಹಾಗೆಂದು ಕೆಲವು ವ್ಯಾಖ್ಯಾನಕಾರರು ತಿಳಿಸಿದ್ದಾರೆ. ಮಧ್ವಾಚಾರ್ಯರು **ಏಷ ನಿತ್ಯಸಮಾಚಾರಃ** ಎಂದು ಇಲ್ಲಿ ಪ್ರತಿದಿನದ ಆಚರಣೆಯನ್ನು ಹೇಳಹೊರಟಿದ್ದಾರೆ. ಎಲ್ಲರಿಗೂ ಅನ್ವಯಿಸುವಂತೆಯೂ ತಿಳಿಸಿದ್ದಾರೆ – **ಗೃಹಿಣೋ ವನಿನಸ್ತಥಾ**. ವಾನಪ್ರಸ್ಥರಿಗಂತೂ ಗೃಹವಾಳ್ತೆ ಹೇಳಿಸಿದ್ದಲ್ಲ. ಸಂಬಂಧಪಡದ ಸಮಾಚಾರವನ್ನು ಸಂಬಂಧಪಡದವರಿಗೆ ಬಿಡಲು ಇಲ್ಲಿ ತಿಳಿಸಿದ್ದಾರೆ. ಹಾಗಾಗಿ ಈ ನಡುರಾತ್ರಿಯ ಸಂಗತಿಯನ್ನು ಎಲ್ಲರಿಗೂ ಒಪ್ಪುವಂತೆ ಹೇಳಿದ್ದಾರೆ.

ಆಚಾರ್ಯರ ಈ ಕ್ರಿಯಾದೇಶವು ಜ್ಞಾನಿಗಳ ಪಾಲಿಗೆ ಸಿಕ್ಕಿದೆ ಎಂದು **ಅಗ್ನಿಪುರಾಣ**ದ ಮಾತು – **ಚತುರ್ಥೀ ಜ್ಞಾನಿನಃ ಸಂಧ್ಯಾ ನಿಶೀಥಾದೌ ವಿಭಾವ್ಯತೇ**

**ಈಶ್ವರಸಂಹಿತೆ** ಯೋಗಧ್ಯಾನವನ್ನೇ ಆ ಕಾಲದಲ್ಲಿ ವಿಧಿಸಿದೆ –

**ಸಮುತ್ಥಾಯಾರ್ಧರಾತ್ರೇಽಥ ಜಿತನಿದ್ರೋ ಜಿತಶ್ರಮಃ**

**ಕಮಂಡಲುಸ್ಥಿತೇನೈವ ಸಮಾಚಮ್ಯ ತು ವಾರಿಣಾ**

**ಗುರುಂ ದೇವಂ ನಮಸ್ಕೃತ್ಯ ಉಪವಿಶ್ಯಾಜಿನಾಸನೇ**

**ಯೋಗಾಭ್ಯಾಸಂ ತತಃ ಕುರ್ಯಾತ್ ಯಥಾವಿಧಿ ಮುನೀಶ್ವರಾಃ**

ರಾತ್ರಿ ನಿದ್ದೆ ಬರುವವರೆಗೆ ದೇವರ ಸ್ಮರಣೆಗೈಯುತ್ತಿರಬೇಕು. ನಿದ್ದೆಯ ನಡುವೆ ಎಚ್ಚರಗೊಂಡು ದೇವರ ಗುಣಗಳನ್ನು ಚಿಂತನೆಗೈಯಬೇಕೆಂದು

**ವಿಷ್ಣುಪುರಾಣ** ಆದೇಶಿಸಿದೆ –

**ಯಾವನ್ನಿದ್ರಾ ಸಮಭ್ಯೇತಿ ತಾವದ್ದೇವಂ ಚ ಸಂಸ್ಮರೇತ್**

**ನಿದ್ರಾಂತರೇ ಪ್ರಬುದ್ಧಃ ಸನ್ ಕೀರ್ತ್ತಯೇದ್ಭಗವದ್ಗುಣಾನ್**

**ಮಧ್ವಾಚಾರ್ಯ**ರು ಉಪಾಸನೆಯು ಎರಡು ವಿಧವೆಂದು ತಿಳಿಸಿದ್ದಾರೆ –

**ಸೋಪಾಸನಾ ಚ ದ್ವಿವಿಧಾ ಶಾಸ್ತ್ರಾಭ್ಯಾಸಸ್ವರೂಪಿಣೀ**

**ಧ್ಯಾನರೂಪಾऽಪರಾ ಚೈವ ತದಂಗಂ ಧಾರಣಾದಿಕಮ್**

ಪುರಾಣ ಹೇಳಿದ್ದು ಮೊದಲ ಉಪಾಸನೆಯನ್ನು–ಜ್ಞಾನಕರ್ಮವನ್ನು. **ಸ್ಮರೇತ** ಎಂಬ ಆಚಾರ್ಯರ ಆದೇಶದ ಶಬ್ದವು ಶ್ರವಣ, ಕೀರ್ತನ, ಸ್ಮರಣೆಗಳನ್ನು ಒಳಗೊಂಡಿದೆ. **ಬಹುಶಃ** ಪದವು ಅನೇಕ ರೀತಿಯಲ್ಲಿ ಮತ್ತು ಹೆಚ್ಚಿನ ಸಮಯದಲ್ಲಿ ಹಾಗೆಯೇ ಮನೆಮಂದಿಯರ ಜೊತೆಗೆ ಓದನ್ನು ನಡೆಸುವಂತೆ ತಿಳಿಸಿದೆ.

ಸಂಹಿತೆ ಹೇಳಿದ್ದು ಎರಡನೇ ಉಪಾಸನೆಯನ್ನು–ಯೋಗಮಾರ್ಗವನ್ನು. ಆಚಾರ್ಯರ **ಬಹುಶಃ ಸ್ಮರೇತ** ಎಂಬ ಪದಪ್ರಯೋಗವು ಸಾಂದ್ರಸ್ಮರಣೆಯ ಧ್ಯಾನಧಾರಣೆಯ ಪ್ರಕ್ರಿಯೆಯನ್ನು ನೆನಪಿಸಿದೆ. ಹೀಗೆ ಅಂತರಾಳದ ಆರಾಧನೆಯನ್ನು ನಾಲ್ಕನೆಯ ಸಂಧ್ಯೆಯಾಗಿ ಮಧ್ವಾಚಾರ್ಯರು ಸೂಚಿಸಿರುತ್ತಾರೆ.

ಸೂರ್ಯಾಸ್ತದ ನಂತರ ಮೂರು ಗಂಟೆಯ ಒಳಗೆ ರಾತ್ರಿಯ ಮೊದಲ ಯಾಮದಲ್ಲಿ ನಿದ್ದೆ ಮಾಡಿದರೆ ಅಂದಿನ ಪುಣ್ಯವನ್ನು ಕಳಕೊಳ್ಳುವನು ಎನ್ನುವುದಾಗಿ **ಬ್ರಹ್ಮಾಂಡಪುರಾಣ** –

**ಯಾಮಾತ್ಪೂರ್ವಂ ತು ಯೋ ವಿಪ್ರಃ ಸ್ವಪೇನ್ನಿದ್ರಾವಶಃ ಪುಮಾನ್**

**ದಿವಾರಾತ್ರಿಕೃತಂ ಪುಣ್ಯಂ ಸರ್ವಂ ತಸ್ಯ ವಿನಶ್ಯತಿ**

ಮಧ್ವಾಚಾರ್ಯರು ಸದಾಚಾರಸ್ಮೃತಿಯಲ್ಲಿ **ಯಾಮಾತ್ಪರತ ಏವಾऽಥ ಸ್ವಪೇತ್** ಎನ್ನುವುದಾಗಿ ಸೂರ್ಯಾಸ್ತದ ಬಳಿಕ ಒಂದು ಯಾಮದ ಅನಂತರ ಮಲಗಬೇಕೆಂದು ತಿಳಿಸಿಕೊಟ್ಟಿದ್ದಾರೆ. ಅದರ ಮೊದಲು ರಾತ್ರಿ ಆಹಾರ ಸೇವನೆ ಮುಗಿದಿರಬೇಕು. ರಾತ್ರಿ ಆಹಾರ ಸೇವನೆಯ ಬಳಿಕ ಒಂದು ಘಳಿಗೆಯಾದರೂ ದೇವರ ಚಿಂತನೆ ಸಾಗಿರಲಿ.



# ಆಶೌಚದಲ್ಲಿ ಸಂಧ್ಯಾವಂದನೆ

ಆಶೌಚ ತಿಳಿಯುವ ಮೊದಲೆ ಜಪ, ಹೋಮ, ಮದುವೆ, ಶ್ರಾದ್ಧಾದಿಗಳು ಆರಂಭವಾಗಿದ್ದರೆ ಆ ದಿನದ ಆ ಕಾರ್ಯಕ್ಕೆ ಆಶೌಚದ ಅಡ್ಡಿಯಿಲ್ಲ ಎಂದು ಮತ್ಸ್ಯಪುರಾಣದ ಮಾತು –

ವ್ರತಯಜ್ಞವಿವಾಹೇಷು ಶ್ರಾದ್ಧೇ ಹೋಮೇಽರ್ಚನೇ ಜಪೇ
ಆರಬ್ಧೇ ಸೂತಕಂ ನ ಸ್ಯಾತ್ ಅನಾರಬ್ಧೇ ತು ಸೂತಕಮ್

ಜಾತಾಶೌಚ ಮೃತಾಶೌಚಗಳಲ್ಲಿ ಜಪಸಂಕೋಚವಿದೆ ಹೊರತು ಜಪತ್ಯಾಗ ಇಲ್ಲ ಎಂದೆ ಧರ್ಮಶಾಸ್ತ್ರಗಳ ಮಾತುಗಳು –

ಅಷ್ಟಾವಿಂಶತಿಕೃತ್ವೋಽತ್ರ ಗಾಯತ್ರೀಂ ಮನಸಾ ಜಪೇತ್ (ದೇವಜಾನೀಯ)
ಸೂತಕೇ ಮೃತಕೇ ಚೈವ ರೋಗೋತ್ಪತ್ತೌ ತಥಾಽಧ್ವನಿ
ಮಾನಸೀಂ ತು ಜಪೇತ್ಸಂಧ್ಯಾಂ ಕುಶವಾರಿವಿವರ್ಜ್ಜಿತಾಮ್
ಸೂತಕೇ ಮೃತಕೇ ವಾಽಪಿ ಸಂಧ್ಯಾಕರ್ಮ್ಮ ನ ಸಂತ್ಯಜೇತ್ (ವಾಧೂಲಸ್ಮೃತಿ)

ಅರ್ಘ್ಯಾಂತಾ ಮಾನಸೀ ಸಂಧ್ಯಾ ಜ್ಞೇಯಾ ಪ್ರಣವವರ್ಜ್ಜಿತಾ (ವಿಷ್ಣುಸ್ಮೃತಿ)
ಸೂತಕೇ ಮೃತಕೇ ಕುರ್ಯಾತ್ ಪ್ರಾಣಾಯಾಮಮಮಂತ್ರಕಮ್
ತಥಾ ಮಾರ್ಜ್ಜನಮಂತ್ರಾಂಶ್ಚ ಮನಸೋಚ್ಚಾರ್ಯ ಮಾರ್ಜ್ಜಯೇತ್
ಗಾಯತ್ರೀಂ ಸಮ್ಯಗುಚ್ಚಾರ್ಯ ಸೂರ್ಯಾಯಾರ್ಘ್ಯಂ ನಿವೇದಯೇತ್
ಮಾರ್ಜ್ಜನಂ ತು ನವಾ ಕಾರ್ಯಂ ಉಪಸ್ಥಾನಂ ನಚೈವ ಹಿ (ಭಾರದ್ವಾಜ)

ಆಪನ್ನಶ್ಚಾಶುಚೌ ಕಾಲೇ ತಿಷ್ಠನ್ನಪಿ ಜಪೇದ್ದಶ (ಆಶ್ವಲಾಯನ ಸ್ಮೃತಿ)
ಜಲಾಭಾವೇ ಮಹಾಮಾರ್ಗ್ಗೇ ಬಂಧನೇ ತ್ವಶುಚಾವಪಿ
ಉಭಯೋಃ ಸಂಧ್ಯಯೋಃ ಕಾಲೇ ರಜಸಾ ವಾರ್ಘ್ಯಮುತ್ಸೃಜೇತ್ (ಅಗ್ನಿಸ್ಮೃತಿ)

ಆಶಕ್ತೌ ನಿರ್ಜ್ಜಲೇ ದೇಶೇ ಮೃತೇ ಜಾತೇ ಚ ಸೂತಕೇ
ಜಪೇಚ್ಚ ಮಾನಸೀಂ ಸಂಧ್ಯಾಂ ಕುಶವಾರಿವಿವರ್ಜ್ಜಿತಾಮ್
ಸೂತಕೇ ಮೃತಕೇ ಚೈವ ಸಂಧ್ಯಾಕರ್ಮ್ಮ ಸಮಾಚರೇತ್
ಮನಸೋಚ್ಚಾರಯನ್ಮಂತ್ರಾನ್ ಪ್ರಾಣಾಯಾಮಮೃತೇ ದ್ವಿಜಃ (ಪುಲಸ್ತ್ಯ)



**ಸೂತಕೇ ಸಾವಿತ್ರ್ಯಾ ಚಾಂಜಲಿಂ ಪ್ರಕ್ಷಿಪ್ಯ ಪ್ರದಕ್ಷಿಣಂ ಕೃತ್ವಾ**

**ಸೂರ್ಯಂ ಧ್ಯಾಯನ್ ನಮಸ್ಕುರ್ಯಾದಿತಿ ಪೈಠೀನಸಿಸ್ಮರಣಾತ್**

(ಮಿತಾಕ್ಷರಾ)

ಆಶೌಚದಲ್ಲಿ ಜಪ ಮಾಡದಿದ್ದರೆ ಅನರ್ಥವಾಗಲಿದೆ ಎಂದು ಮಾಧವೀಯದಲ್ಲಿ ಪ್ರಮಾಣ ನೀಡಿದ್ದಾರೆ. ಯಾವ ಕರ್ಮ ಮಾಡಿದರೆ ಪುಣ್ಯ ಬರುವುದೋ, ಮಾಡದಿದ್ದರೆ ಪಾಪ ಬರುವುದೋ ಅದನ್ನು ನಿತ್ಯ ಮಾಡಲೇಬೇಕಾದ ಕರ್ಮವೆಂದು ಶಾಸ್ತ್ರಕಾರರು ತಿಳಿಸುವರು. ಈ ರಾಶಿಯಲ್ಲಿ ಜಪವೂ ಸೇರಿದೆ. ಹೀಗಾಗಿ ಆಶೌಚದಲ್ಲಿ ಜಪ ಬಿಡುವಂತಿಲ್ಲ, ಮಾಡಲೇಬೇಕು.

**ಸಂಧ್ಯಾಮಿಷ್ಟಿಂ ಚ ಹೋಮಂ ಚ ಯಾವಜ್ಜೀವಂ ಸಮಾಚರೇತ್**

**ನ ತ್ಯಜೇತ್ಸೂತಕೇ ವಾಽಪಿ ತ್ಯಜನ್ ಗಚ್ಛೇದಧೋಗತಿಮ್**

ಆಶೌಚದಲ್ಲಿ ನಿತ್ಯ ಮಾಡುವ ಜಪಕ್ರಮದಂತೆ ಗೋಪಿಯನ್ನು ಹಚ್ಚಿಕೊಂಡು ಮುದ್ರೆಗಳನ್ನು ಧರಿಸಿಕೊಂಡು ಆಚಮನ ಪ್ರಾಣಾಯಾಮ ಸಂಕಲ್ಪಗಳನ್ನೆಲ್ಲಾ ನಡೆಸಿ ಅರ್ಘ್ಯಪ್ರದಾನವನ್ನು ಮಾಡಿ ಎಲ್ಲ ಬಗೆಯ ನ್ಯಾಸ ಗಳೊಂದಿಗೆ ಗಾಯತ್ರೀ ಮತ್ತು ಅಷ್ಟಾಕ್ಷರ ಮಂತ್ರಜಪಗಳನ್ನು ನಡೆಸಲು ಅಡ್ಡಿಯಿಲ್ಲವೆಂದು ಧರ್ಮದೇವತೆಯಾದ ಯಮನೇ ತಿಳಿಸಿರುವನು –

**ತೈಲಾಭ್ಯಂಗೇ ವಿವಾಹೇ ಚ ಸೂತಕೇ ಮೃತಕೇಽಪಿ ಚ**

**ಗೋಪೀಮೃದಂ ಧಾರಯೇದ್ಯಃ ನೈವ ಯಾತಿ ಯಮಾಲಯಮ್**

ನಿರ್ಮಾಲ್ಯತೀರ್ಥವನ್ನು ಆಶೌಚದವನು ಮಾಡಿಕೊಳ್ಳುವಂತಿಲ್ಲ. ನದಿ–ಸರೋವರ ಮುಂತಾದ ಜಲಾಶಯಗಳಲ್ಲಿ ಇತರರಿಗೆ ತೊಂದರೆ ಯಾಗದಂತೆ ಮೀಯಲು ಆಶೌಚದವನಿಗೆ ಅವಕಾಶವಿದೆ. ಅಲ್ಲಿ ಬಂದವ ರಿಂದ ನಿರ್ಮಾಲ್ಯತೀರ್ಥ ವನ್ನು ಪಾತ್ರೆಯಲ್ಲಿ ಪಡೆದುಕೊಂಡು ತನ್ನ ನಿತ್ಯದ ಅನುಷ್ಠಾನವನ್ನು ನಡೆಸಬೇಕು. ಜಪಾಂತ್ಯದಲ್ಲಿ ನಡೆಸುವ ಅಭಿವಾದನಕರ್ಮದಲ್ಲಿ ಪ್ರತ್ಯಕ್ಷವಾಗಿ ಇತರರನ್ನು, ಗುರುಹಿರಿಯರನ್ನು ಆಶೌಚದವನು ನಮಿಸಬಾರದು. ಇತರರಿಂದ ನಮನವನ್ನು ತಿಳಿದು ಪಡೆಯುವಂತಿಲ್ಲ.



# ಸ್ತ್ರೀಯರ ಸಾಧನೋಪಾಯಗಳು

ಸಾಧನೆಯಲ್ಲಿ ಶಾಸ್ತ್ರಕಾರರು ಸ್ತ್ರೀಯರಿಗೂ ಅವಕಾಶವನ್ನು ನೀಡಿದ್ದಾರೆ. ಅವರ ಗುಣಲಕ್ಷಣಗಳಿಗನುಗುಣವಾಗಿ ಪುರುಷರಿಗಿಂತ ಭಿನ್ನವಾದ ಕೆಲವೊಂದು ಪದ್ಧತಿಗಳನ್ನು ತಿಳಿಸಿಕೊಟ್ಟಿದ್ದಾರೆ. ಇದು ಏಕೆ ಎನ್ನುವ ಕಾರಣ ಜಿಜ್ಞಾಸೆಯಲ್ಲಿ ಪರಿಪೂರ್ಣವಾದ ತೃಪ್ತಿದಾಯಕವಾದ ಉತ್ತರವನ್ನು ಪಡೆಯುವುದು ತುಂಬ ಕಷ್ಟವೇ. ಉದಾಹರಣೆಗೆ ಹಲ್ಲುಜ್ಜುವಿಕೆಯಲ್ಲಿ ಇತರರಿಗಿಂತ ಕಡಿಮೆ ಮಟ್ಟದ ಪ್ರಮಾಣದಲ್ಲಿ ಹಲ್ಲುಕಡ್ಡಿಯನ್ನು ಸ್ತ್ರೀಯರಿಗೆ ಹೇಳಲಾಗಿದೆ. ಬ್ರಾಹ್ಮಣನೋರ್ವನಿಗೆ ಹನ್ನೆರಡು ಇಂಚು ಉದ್ದದ ದಂತಕಾಷ್ಠವಾದರೆ, ಸ್ತ್ರೀಗೆ ನಾಲ್ಕು ಇಂಚು ಸಾಕು ಎನ್ನುವ ಮಾತು **ಬೃಹತ್‌ಬ್ರಹ್ಮಸಂಹಿತೆ**ಯಲ್ಲಿದೆ –

**ದ್ವಾದಶಾಂಗುಲಮಾನಂ ಸ್ಯಾತ್ ವಿಪ್ರಾಣಾಂ ದಂತಧಾವನಮ್**
**ಕ್ಷತ್ರವಿಡ್‌ಶೂದ್ರಜಾತೀನಾಂ ನವಷಟ್ಚತುರಂಗುಲಮ್**
**ಚತುರಂಗುಲಮಾನಂ ಸ್ಯಾತ್ ನಾರೀಣಾಂ ದಂತಧಾವನಮ್**
**ನೈಋತ್ಯಾಂ ನಿಕ್ಷಿಪೇತ್ ಕಾಷ್ಠಂ ದಂತೋಲ್ಲೇಖಂ ವಿಧಾಯ ಚ**
**ಪಾಲಾಶಮಾಸನಂ ಯಾನಂ ದಂತಕಾಷ್ಠಂ ಚ ಪಾದುಕೇ**
**ವರ್ಜ್ಜಯೇತ್ತು ಪ್ರಯತ್ನೇನ ಶಮೀಮಶ್ವತ್ಥಮೇವ ಚ**
**ಅಪಾಮಾರ್ಗ್ಗಃ ಪ್ರಶಸ್ತೋಽಯಂ ದಂತಧಾವನಕರ್ಮ್ಮಣಿ**

ಸ್ತ್ರೀಯರೂ ಮುಳುಗಿಯೇ ಸ್ನಾನಮಾಡಬೇಕು. ವೇದಾಧಿಕಾರದ ಸಂಸ್ಕಾರ ಆಗದಿರುವುದರಿಂದ ಅವರು ನಡೆಸುವ ಯಾವುದೇ ದೈವಿಕ–ಧಾರ್ಮಿಕ ಕರ್ಮಗಳಲ್ಲಿ ಅವರಿಗೆ ವೇದಮಂತ್ರಗಳನ್ನು ಹೇಳುವ ಅವಕಾಶವಿಲ್ಲ. ಆದರೆ ಇತಿಹಾಸ ಪುರಾಣಗಳು ಪಂಚಮವೇದವೆನಿಸಿದ್ದರಿಂದ ಅಲ್ಲಿನ ಮಂತ್ರಗಳಿಂದಲೇ ಅವರ ಎಲ್ಲಾ ಧಾರ್ಮಿಕ ಚಟುವಟಿಕೆಗಳನ್ನು ನಡೆಸಲು ಪೂರ್ಣ ಸ್ವಾತಂತ್ರ್ಯ ಅವರಿಗೆ ಇರುವುದು. ಇದರಿಂದ ಅವರು ವೇದವಂಚಿತರು, ವೇದಬಾಹ್ಯರು ಎನಿಸುವುದಿಲ್ಲ. ಮೂಲರಾಮಾಯಣ ಮತ್ತು ಪಂಚರಾತ್ರ ಸಂಹಿತೆಗಳು ಇತಿಹಾಸ ಪದದಿಂದಲೇ ಸೂಚಿತಗಳಾಗಿವೆ. ಹೀಗಾಗಿ ಇಲ್ಲಿನ ಮಾತುಗಳೂ ಅವರ



ಕ್ರಿಯಾಕಲಾಪಗಳಲ್ಲಿ ಉಪಯೋಗಕ್ಕೆ ಬರುವವು. ಸ್ತ್ರೀಶೂದ್ರಾದಿಬ್ರಹ್ಮಬಂಧುಗಳ ಸಾಧನೆಗಾಗಿಯೇ ಮುಖ್ಯವಾಗಿ ಇತಿಹಾಸಾದಿಗಳ ರಚನೆಯನ್ನು ವೇದವ್ಯಾಸರು ನಡೆಸಿದ್ದಾರೆ ಎನ್ನುವುದನ್ನು ವೇದವ್ಯಾಸರೇ ಹೇಳಿಕೊಂಡಿದ್ದಾರೆ.

**ವೇದಮಂತ್ರವಿಹೀನಾನಾಂ ಸ್ತ್ರೀಶೂದ್ರಾಣಾಂ ವಿಧೀಯತೇ**
**ಮಂತ್ರೈಃ ಪೌರಾಣಿಕೈರೇವ ವಾರುಣಂ ಸ್ನಾನಮುತ್ತಮಮ್**
**ಅನ್ಯಾಶ್ಚಾಪಿ ಕ್ರಿಯಾಸ್ತೇಷಾಂ ವೇದಮಂತ್ರವಿವರ್ಜಿತಾಃ**
**ಕಾರಯೇತ್ಸತತಂ ನೈವ ಮೂಲಮಂತ್ರಂ ಪ್ರಯೋಜಯೇತ್** (ವರಾಹಪುರಾಣ)

ಸ್ತ್ರೀಯರೆಲ್ಲರಿಗೂ ಊರ್ಧ್ವಪುಂಡ್ರಧಾರಣೆ ಸ್ನಾನದ ಬಳಿಕ ಕರ್ಮಸಾಫಲ್ಯಕ್ಕೆ ಕಡ್ಡಾಯವೆನಿಸಿದೆ. ಗಂಡಂದಿರು ಬದುಕಿರುವಾಗ ಹಣೆಯ ಪುಂಡ್ರದ ನಡುವೆ ಕುಂಕುಮವನ್ನು ಉದ್ದವಾಗಿ ಧರಿಸಬೇಕು –

**ಸ್ತ್ರಿಯೋ ವಾ ಪುರುಷಾ ವಾಽಪಿ ವಿನಾ ಪುಂಡ್ರಂ ಕದಾಚನ**
**ನ ಕುರ್ಯುಃ ಸುಕೃತಂ ಕರ್ಮ ಕ್ರಿಯಮಾಣಂ ವೃಥಾ ಭವೇತ್**
**ಸುವಾಸಿನ್ಯೋಽಪಿ ಬಿಭೃಯುಃ ತಿಲಕೋಪರಿ ಕುಂಕುಮಮ್**
**ಪಶ್ಚಾತ್ಕುರ್ಯುಃ ಶುಭಂ ಕರ್ಮ ಗೃಹಕರ್ಮಾಣಿ ಯಾನಿ ಚ** (ವರಾಹಪುರಾಣ)
**ತಸ್ಮಾಚ್ಛಿದ್ರಾನ್ವಿತಂ ಪುಂಡ್ರಂ ದಂಡಾಕಾರಂ ಸುಶೋಭನಮ್**
**ವಿಪ್ರಾಣಾಂ ಸತತಂ ಧಾರ್ಯಂ ಸ್ತ್ರೀಣಾಂ ಚ ಶುಭದರ್ಶನೇ** (ಪದ್ಮಪುರಾಣ)
**ಊರ್ಧ್ವಪುಂಡ್ರಂ ಲಲಾಟೇ ಚ ಮೃದಾ ಶುಭ್ರಂ ತು ಧಾರಯೇತ್**
**ಕಸ್ತೂರ್ಯಾ ಕುಂಕುಮೇನಾಪಿ ಚಂದನೇನಾಥವಾ ಸತೀ**
**ರಮ್ಯಂ ಮಂಜುಕರಂ ಸೌಮ್ಯಂ ಊರ್ಧ್ವಪುಂಡ್ರಂ ತು ಧಾರಯೇತ್**
**ಅಲಂಕೃತ್ಯ ತಥಾಽಽತ್ಮಾನಂ ಗೃಹಕೃತ್ಯಂ ತತಶ್ಚರೇತ್** (ಆತ್ರೇಯಸ್ಮೃತಿ)
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾ ಮ್ಲೇಂಛಾ ವಾಂತ್ಯಜಜಾತಯಃ**
**ಊರ್ಧ್ವಪುಂಡ್ರಧರಾಃ ಸರ್ವೇ ನಮಸ್ಯಾ ದೇವತಾ ಇವ** (ಬೃಹದ್ಬ್ರಹ್ಮಸಂಹಿತಾ)
**ಗೋಪೀಚಂದನಪುಂಡ್ರಂ ಚ ಸ್ತ್ರೀಣಾಂ ಧರ್ಮಃ ಸನಾತನಃ**
**ಪುಂಡ್ರಹೀನೇ ತು ನಾರೀಣಾಂ ಪತ್ಯುರಾಯುಕ್ಷಯೋ ಭವೇತ್** (ಸದಾ.ವ್ಯಾಖ್ಯಾ)



**ವಸಿಷ್ಠಸ್ಮೃತಿಯಲ್ಲಿ** ಸ್ತ್ರೀಯರಿಗೂ ಕೃಷ್ಣಮೆಚ್ಚಿದ ಗೋಪಿಯಿಂದ ಊರ್ಧ್ವ ಪುಂಡ್ರವನ್ನು ಹಾಕಲು ತಿಳಿಸಲಾಗಿದೆ. ನಡುವೆ ಕೃಷ್ಣನ ಆವಾಸಸ್ಥಳದಲ್ಲಿ ಕುಂಕುಮವನ್ನು ನೇರವಾಗಿ ಧರಿಸಲು ಹೇಳಲಾಗಿದೆ. ಅಲ್ಲಿ ಲಕ್ಷ್ಮಿಯ ಇರವಿನ ಅನುಸಂಧಾನ – **ಸಾಂತರಾಳೋರ್ಧ್ವಪುಂಡ್ರಸ್ಯ ಮಧ್ಯೇ ಕೃಷ್ಣಸ್ಯ ಧಾಮನಿ**

**ಹರಿದ್ರಾಸಾರಸಂಭೂತಂ ಸ್ತ್ರೀ ಚ ಚೂರ್ಣ್ಣಂ ಪ್ರಧಾರಯೇತ್**

**ತೇನೋರ್ಧ್ವರೇಖಾಂ ರಚಯೇತ್ ತಾಂ ಶ್ರಿಯಂ ಪರಿಚಿಂತಯೇತ್**

ಲಕ್ಷ್ಮಿಯನ್ನು ಕುಂಕುಮರೇಖೆಯಲ್ಲಿ ನೆಲೆಗೊಳ್ಳುವಂತೆ ನಾರಾಯಣನ ಆದೇಶ **ಬೃಹದ್ಬ್ರಹ್ಮಸಂಹಿತೆಯಲ್ಲಿದೆ** –

**ಪ್ರದೀಪಕಲಿಕಾಕಾರಾ ಯಾ ರೇಖಾ ಪುಂಡ್ರಮಧ್ಯಗಾ**

**ತಸ್ಯಾ ರೂಪೇಣ ಲಕ್ಷ್ಮೀಸ್ತ್ವಂ ಕಲಯಾ ಸನ್ನಿಧಿಂ ಕುರು**

ಆಳುವ ಯೋಗ್ಯತೆಯವರಿಗೆ ನಾಲ್ಕು, ವ್ಯಾಪಾರ ಧರ್ಮದವರಿಗೆ ಎರಡು, ಸ್ತ್ರೀಯರಿಗೆ ಮತ್ತು ಕರ್ಮಕರರಿಗೆ ಒಂದು ಪುಂಡ್ರಧಾರಣೆ –

**ಚತ್ವಾರಿ ಭೂಭೃತಾಂ ಪ್ರೋಕ್ತಂ ಪುಂಡ್ರಾಣಿ ದ್ವೇ ವಿಶಾಂ ಸ್ಮೃತೇ**

**ಏಕಂ ಪುಂಡ್ರಂ ತು ನಾರೀಣಾಂ ಶೂದ್ರಾಣಾಂ ಚ ವಿಧೀಯತೇ** (ಪದ್ಮಪುರಾಣ)

**ಕುರ್ಯಾದ್ದ್ವಾದಶಪುಂಡ್ರಾಣಿ ವಿಪ್ರಶ್ಚತ್ವಾರಿ ಬಾಹುಜಃ**

**ವೈಶ್ಯಃ ಪುಂಡ್ರಂ ದ್ವಯಂ ಕುರ್ಯಾತ್ ಶೂದ್ರಾದ್ಯಾ ಅಪರೇಽಖಿಲಾಃ**

**ವೇದಾನಧಿಕೃತಾ ಯೇ ತು ಸರ್ವೇಷಾಮಪಿ ಯೋಷಿತಃ**

**ಏಕಮೇವ ಪ್ರಕುರ್ವೀರನ್ ಲಲಾಟೇ ತೂರ್ಧ್ವಪುಂಡ್ರಕಮ್**

**ಲಲಾಟೆ ಹೃದಯೇ ವೈಶ್ಯೋ ಬಾಹ್ವೋರಪಿ ಚ ಬಾಹುಜಃ** (ವಿಷ್ಣುರಹಸ್ಯ)

ಹಣೆ, ಎದೆ ಮತ್ತೆರಡು ತೋಳುಗಳಲ್ಲಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ನಾಮಗಳಿಂದ ನಾಲ್ಕು ಪುಂಡ್ರಗಳನ್ನು ಧರಿಸಬೇಕು. ಹಣೆ ಮತ್ತು ಎದೆಯಲ್ಲಿ ಗೋವಿಂದ ಮತ್ತು ಕೃಷ್ಣ ಎನ್ನುತ್ತಾ ಪುಂಡ್ರಗಳನ್ನು ಹಾಕಿಕೊಳ್ಳಬೇಕು. ನಾರಾಯಣ ನಾಮವೊಂದರಿಂದ ಹಣೆಯ ಪುಂಡ್ರವನ್ನು ಧರಿಸಬೇಕು ಎಂದು **ಪದ್ಮಪುರಾಣ** –



ಲಲಾಟೇ ಹೃದಿ ಬಾಹ್ವೋಶ್ಚ ಚತುಷ್ಪುಂಡ್ರಾಣಿ ಧಾರಯೇತ್

ಲಲಾಟೇ ಹೃದಯೇ ದ್ವೇ ತು ಭಾಲೇ ತ್ವೇಕಂ ವಿಧೀಯತೇ

ಮೂರ್ತ್ತಯೋ ವಾಸುದೇವಾದ್ಯಾಃ ಚತುಷ್ಪುಂಡ್ರೇಷು ಧಾರಯೇತ್

ದ್ವಯೋರ್ಗ್ಗೋರ್ವಿಂದಕೃಷ್ಣೌ ತು ಏಕಂ ನಾರಾಯಣಂ ಧರೇತ್

ಸ್ಕಾಂದಪುರಾಣವು ಹೀಗೆಯೇ ಪುಂಡ್ರಧಾರಣೆಗಳ ಪ್ರಭೇದಗಳನ್ನು ಸ್ಥಾನಗಳನ್ನು ಹೇಳುತ್ತಾ ದೇವರ ನಾಮಗಳನ್ನು ಕೇಶವಾದಿಗಳಲ್ಲೇ ತಿಳಿಸಿದೆ. (ಇದರಿಂದ ಶುಕ್ಲ-ಕೃಷ್ಣ ಪಕ್ಷಭೇದದಲ್ಲಿ ನಾಮಭೇದದ ಪ್ರಾಮುಖ್ಯ ಪ್ರಶ್ನೆಯಾಗಲಿದೆ)

ಲಲಾಟೇ ಕೇಶವಂ ಧ್ಯಾಯೇತ್ ಹೃದಯೇ ಮಾಧವಂ ತಥಾ

ಬಾಹ್ವೋಶ್ಚೈವೋಭಯೋರ್ವತ್ಸ ಸ್ಮರೇದ್ವೈ ಮಧುಸೂದನಮ್

ಕ್ಷತ್ರಿಯಸ್ಯ ವಿಧಿಃ ಪ್ರೋಕ್ತೋ ವೈಶ್ಯಕೃತ್ಯಂ ನಿಶಾಮಯ

ಲಲಾಟೇ ಕೇಶವಂ ಧ್ಯಾಯೇತ್ ಹೃದಯೇ ಮಾಧವಂ ತಥಾ

ಯೋಷಿಚ್ಛೂದ್ರೌ ಸ್ಮರೇದ್ದೇವಂ ಕೇಶವಂ ಭಾಲದೇಶಕೇ

ಊರ್ಧ್ವಪುಂಡ್ರಧಾರಣೆಯಂತೆ ಪ್ರತಿನಿತ್ಯ ಗೋಪಿಯಲ್ಲಿ ಶಂಖಚಕ್ರ ಗಳನ್ನೂ ಧರಿಸಿಕೊಳ್ಳಬೇಕು. ವಾರ್ಷಿಕವಾಗಿ ತಪ್ತಮುದ್ರಾಧಾರಣೆಯೂ ಎಲ್ಲ ರಿಗೂ ವಿಹಿತ. ವೈಷ್ಣವ ಚಿಹ್ನೆ ಇರದ ದೀಕ್ಷೆ ಪಡೆಯದ ವ್ಯಕ್ತಿಗಳು ಮಾಡಿರುವ ಹೋಮ-ಹವನಗಳನ್ನು ಶ್ರಾದ್ಧಕರ್ಮಗಳನ್ನೆಲ್ಲಾ ದೇವತೆಗಳು ಪಿತೃಗಳು ಸ್ವೀಕರಿ ಸುವುದಿಲ್ಲ – ನಾರೀ ವಾ ಪುರುಷೋ ವಾಪಿ ತಪ್ತಚಕ್ರಾಂಕವರ್ಜ್ಜಿತಃ

ಸ್ಮಶಾನಕಾಷ್ಠವತ್ತಸ್ಯ ಸ್ಪರ್ಶೇ ಸ್ನಾನಂ ಸಮಾಚರೇತ್

ಕಂಚುಕಂ ಕಂಠಸೂತ್ರಂ ಚ ಲಲಾಟೇ ಚೋರ್ಧ್ವಪುಂಡ್ರಕಮ್

ತಪ್ತಚಕ್ರಂ ತಥಾ ಶಂಖಂ ಯಸ್ಯಾ ಗಾತ್ರೇ ನ ವಿದ್ಯತೇ

ಹವ್ಯಂ ಕವ್ಯಂ ತಯಾ ಸ್ಪೃಷ್ಟಂ ದೇವಾಶ್ಚ ಪಿತರೋಽಪಿ ಹಿ

ನೈವ ಗೃಹ್ಣಂತಿ ಕುಪಿತಾ ಶುನಾ ಸ್ಪೃಷ್ಟಂ ಯಥಾ ತಥಾ (ವಿಷ್ಣುರಹಸ್ಯ)

ಸ್ತ್ರೀಯರು ಪ್ರತಿನಿತ್ಯ ಗೋಪೀಚಂದನದಲ್ಲಿ ಶಂಖಚಕ್ರಗಳನ್ನು ಕೈಗಳ ಮೇಲಿನ ಭಾಗದಲ್ಲಿ ಅಂದರೆ ರಟ್ಟೆಗಳಲ್ಲಿ ಹಚ್ಚಿಕೊಳ್ಳುವಂತೆ ಅಗ್ನಿತಪ್ತಗಳಾದ



ಶಂಖಚಕ್ರಗಳನ್ನು ಅದೇ ಜಾಗದಲ್ಲಿ ಧರಿಸಿಕೊಳ್ಳಬೇಕು. ಮೊಣಕೈಗಳ ಸ್ಥಾನಗಳಲ್ಲಿ ಅಲ್ಲ. ಸಣ್ಣ ಮಕ್ಕಳು ಹೊಟ್ಟೆಯಲ್ಲಿ ಮುದ್ರೆಯನ್ನು ಹಾಕಿಕೊಳ್ಳಬಹುದು –

**ಬಾಲಾನಾಮುದರೇಷ್ವೇವ ಬಾಹ್ವೋರೇವ ಹಿ ಯೋಷಿತಾಮ್**
**ಶೂದ್ರಾದೀನಾಂ ತಥೈವ ಸ್ಯಾತ್ ಮುದ್ರಾದ್ವಿತಯಮೇವ ಹಿ** (ವಿಷ್ಣುರಹಸ್ಯ)

**ಸ್ಕಾಂದಪುರಾಣವು** ಆಚಮನೆಯನ್ನು ನಡೆಸಲು ಎಲ್ಲರಿಗೂ ಆದೇಶಿಸಿದೆ. ಎಲ್ಲರಿಗೂ ನೀರಿನ ಪ್ರಮಾಣ ಒಂದೇ ಬಗೆಯಲ್ಲ. ಮುಖ್ಯವಾಗಿ ಸ್ತ್ರೀಯರಿಗೆ ಆಚಮನದ ನೀರು ತುಟಿಗೆ ತಾಗಿದರೆ ಸಾಕು –

**ಅನುಷ್ಣಾಭಿರಫೇನಾಭಿ: ಅದ್ಭಿರ್ಹೃದ್ಗಾಭಿರತ್ವರಃ**
**ಬ್ರಾಹ್ಮಣೋ ಬ್ರಹ್ಮತೀರ್ಥೇನ ದೃಷ್ಟಿಪೂತಾಭಿರಾಚಮೇತ್**
**ಕಂಠಗಾಭಿರ್ನೃಪಃ ಶುಧ್ಯೇತ್ ತಾಲುಗಾಭಿಸ್ತಥೋರುಜಃ**
**ಸ್ತ್ರೀಶೂದ್ರಾವಾಸ್ಯಸಂಸ್ಪರ್ಶಮಾತ್ರೇಣಾಽಪಿ ವಿಶುದ್ಧ್ಯತಃ**

ದೇವರ ನಾಮಜಪಾಧಿಕಾರಿಗಳೆಲ್ಲರೂ ತುಳಸಿಮಣಿಯ ಮಾಲೆಯನ್ನು ಕುತ್ತಿಗೆಯಲ್ಲಿ ಧರಿಸಬೇಕೆಂದು **ಗೌರೀತಂತ್ರ** –

**ಸ್ತ್ರಿಯಃ ಶೂದ್ರಾದಯಃ ಪಾಪಾ ಅಂತ್ಯಜಾ ಪತಿತಾದಯಃ**
**ಬಧ್ನೀಯುಸ್ತುಳಸೀಂ ಕಂಠೇ ದೀಕ್ಷಿತಾಶ್ಚೇದ್ಭವಂತಿ ಹಿ**

ಸ್ತ್ರೀಶೂದ್ರಾದಿಗಳಿಗೆ ನಾಮಮಂತ್ರಗಳನ್ನು ಹೇಳುವಲ್ಲಿ ಓಂಕಾರದ ಸೇರ್ಪಡೆ ಇಲ್ಲ. ಅವರೂ ಆಚಮನಾದಿಗಳನ್ನು ನಡೆಸಲಿದೆ. ಕರ್ಮಾರಂಭಗಳಲ್ಲಿ ದರ್ಭೆಯ ಪವಿತ್ರವನ್ನು, ತುಳಸೀಮಾಲೆ, ಪದ್ಮಾಕ್ಷಮಾಲೆಯನ್ನೂ ಧರಿಸಿಕೊಳ್ಳಬೇಕು. ಕೌಪೀನವನ್ನೂ ಧರಿಸಲಿದೆ.

**ಸ್ತ್ರೀಶೂದ್ರಾಣಾಂ ವಿಧಿಂ ವಕ್ಷ್ಯೇ ಸಮ್ಯಕ್ ಪ್ರಣವವರ್ಜಿತಮ್**
**ಕೇಶವಾಯೇತಿ ಮಂತ್ರಾದ್ಯೈಃ ಜಲಂ ಪೀತ್ವಾ ತ್ರಿಧಾ ತ್ರಿಧಾ**
**ತಥಾನ್ಯನಾಮಭಿರ್ಮೂರ್ಧ್ನಿ ಪ್ರೋಕ್ಷಯೇದ್ಭಕ್ತಿಪೂರ್ವಕಮ್**
**ಕೌಪೀನಕಟಿಸೂತ್ರಾಣಿ ಶುದ್ಧವಸ್ತ್ರಾಣಿ ಧಾರಯೇತ್**
**ಸಚ್ಛಿದ್ರಮೂರ್ಧ್ವಪುಂಡ್ರಾಣಿ ಪವಿತ್ರಾಣಿ ಚ ಧಾರಯೇತ್**



**ತುಳಸೀಪದ್ಮಮಾಲಾದೀನ್ ಧಾರಯೇದ್ಯಜ್ಞಸೂತ್ರವತ್** (ಶೇಷಸಂಹಿತಾ)

ಓಂಕಾರದ ಬದಲಿಗೆ ಶ್ರೀಕಾರವನ್ನು ಹಾಕಿಕೊಳ್ಳುವಲ್ಲಿ ಅವಕಾಶವಿದೆ –

**ಸ್ತ್ರೀಶೂದ್ರಾಣಾಂ ಪ್ರಯತ್ನೇನ ಪಂಚರಾತ್ರೇಣ ಕಲ್ಪಯೇತ್**

**ಧರ್ಮಕಾಮಾರ್ಥಮೋಕ್ಷಾರ್ಥಂ ಜ್ಞಾನಧರ್ಮಾರ್ಥಸಿದ್ಧಯೇ**

**ಪಂಚರಾತ್ರೇಣ ತಂತ್ರೇಣ ವೇದಮಂತ್ರಾದಿಕಂ ವಿನಾ**

**ತದ್ವತ್ತತ್ಪ್ರಣವಂ ತ್ಯಕ್ತ್ವಾ ಶ್ರೀಬೀಜಾದ್ಯೈಃ ಪ್ರಕಲ್ಪಯೇತ್**

**ಜಪಹೋಮಾದಿಸರ್ವೇಷು ಪ್ರತಿಷ್ಠಾದ್ಯುತ್ಸವೇಷು ಚ**

**ವಿಪ್ರಾಣಾಂ ಪ್ರಣವಾದ್ಯಾಶ್ಚ ವೇದಮಂತ್ರಾಃ ಪ್ರಕೀರ್ತಿತಾಃ**

**ಸ್ಮೃತ್ಯಾಗಮಾದಿಮಂತ್ರಾಶ್ಚ ಸರ್ವೇಷಾಂ ಚ ಶ್ರಿಯಾದಿಕಮ್** (ಶೇಷಸಂಹಿತಾ)

ನಾರಾಯಣಾಷ್ಟಾಕ್ಷರವನ್ನು **ಅಂ ನಮೋ ನಾರಾಯಣಾಯ** ಎನ್ನುವುದಾಗಿ ಜಪಿಸುವಂತೆ ಸ್ತ್ರೀಯರಿಗೆ ಆದೇಶವಿದೆ –

**ನಮೋ ನಾರಾಯಣಾಯೇತಿ ನಿತ್ಯಮೋಂಕಾರಪೂರ್ವಕಮ್**

**ಭವೇದಷ್ಟಾಕ್ಷರಂ ಮಂತ್ರಂ ವಿಪ್ರಾಣಾಂ ಮುಕ್ತಿದಾಯಕಮ್**

**ಅಕಾರಂ ಬಿಂದುಸಂಯುಕ್ತಂ ನಮೋ ನಾರಾಯಣಾಯ ಚ**

**ಲಕ್ಷ್ಮೀನಾರಾಯಣಂ ಮಂತ್ರಂ ಭವೇದಷ್ಟಾಕ್ಷರಂ ಶುಭಮ್**

**ಅಧ್ಯಾಪ್ಯಂ ವಿಧಿವತ್ ಶೂದ್ರಾನ್ ಸಂಕರೇಷ್ವನುಲೋಮಜಾನ್**

**ಚಂಡಾಲೇಷು ತುರುಷ್ಕೇಷು ಮನುರಿಷ್ಟಾರ್ಥಸಾಧಕಃ**

**ಸರ್ವಸಿದ್ಧಿಕರಂ ಶ್ರೇಷ್ಠಂ ಸದ್ಯೋ ಮೋಕ್ಷಪ್ರದಾಯಕಮ್** (ಶೇಷಸಂಹಿತೆ)

ಮಧ್ವಾಚಾರ್ಯರು **ಭಾಗವತತಾತ್ಪರ್ಯ**ದಲ್ಲಿ ಇತರರ ವೈಷ್ಣವದೀಕ್ಷೆಯ ಬಗ್ಗೆ ತಿಳಿಸಿಕೊಟ್ಟಿದ್ದಾರೆ. ಉಡುಪಿಯಲ್ಲಿ ಕೃಷ್ಣಪ್ರಸಾದವನ್ನು ಎಲ್ಲರಿಗೂ ನೀಡುವಂತೆ ಕರೆಕೊಟ್ಟವರು. ಎಲ್ಲರಿಗೂ ಕೃಷ್ಣಮಂತ್ರೋಪದೇಶವನ್ನು ನೀಡಿದ್ದಾರೆ. ನೀಡುವಲ್ಲಿ ಪ್ರಮಾಣವನ್ನು ತೋರಿಸಿಕೊಟ್ಟಿದ್ದಾರೆ.

**ವಿಷ್ಣುರಹಸ್ಯ**ದಲ್ಲಿ ಸಾಧಕರ ಯೋಗ್ಯತೆಯನ್ನು ಅವಲಂಬಿಸಿ ಮಂತ್ರಪ್ರಕಾರವನ್ನು ದೀಕ್ಷೆಯನ್ನು ಸ್ಪಷ್ಟವಾಗಿ ತಿಳಿಸಲಾಗಿದೆ.



ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ತ್ರಯೋ ವರ್ಣಾ ದ್ವಿಜಾತಯಃ
ದ್ವಿಜೈರೇತೇಷು ಸೋಂಕಾರಾ ಉಪಾಸ್ಯಾ ವಿಷ್ಣುವಲ್ಲಭಾಃ
ತತ್ತದ್ಧ್ಯಾನಾನುಸಾರೇಣ ತತ್ತದ್ಬೀಜಾನುಸಾರತಃ
ಏತ ಏವ ನಿರೋಂಕಾರಾಃ ಸಬೀಜಾಃ ಶುಚಿಭಿಃ ಸದಾ
ದ್ವಿಜಸ್ತ್ರೀಭಿರುಪಾಸ್ಯಾಃ ಸ್ಯುಃ ನಾನ್ಯೈರೇವ ಕಥಂಚನ

ಅನುಲೋಮೇಷು ಯೇ ಕೇಚಿತ್ ತ್ರಯೀವಿದ್ಯಾಧಿಕಾರಿಣಃ
ತೇಽಪಿ ದ್ವಿಜಾತಿವದ್ದೇಯಂ ತೇಷಾಂ ದೀಕ್ಷಾದಿಕಂ ತಥಾ

ಸಚ್ಛೂದ್ರಾ ಅಪಿ ಯೇ ಕೇಚಿತ್ ಸೂತಾದ್ಯಾಃ ಪ್ರತಿಲೋಮಿನಃ
ದ್ವಿಜಸ್ತ್ರೀವತ್ತುಸಂಸ್ಕಾರ್ಯಾಃ ತಥಾ ಮಂತ್ರೋಪದೇಶತಃ

ವೈದಿಕಾನಧಿಕಾರಾ ಯೇ ಸ್ತ್ರೀಶೂದ್ರಪತಿತಾದಯಃ
ತೇಷಾಂ ತಾಂತ್ರಿಕಮೇವ ಸ್ಯಾತ್ ಪೂಜಾಮಂತ್ರಜಪಾದಿಕಮ್

ನಿರೋಂಕಾರಾಶ್ಚ ನಿರ್ಬೀಜಾ ನಮಃಪೂರ್ವಾ ನಮೋಂತಕಾಃ
ಶ್ರೀಶಬ್ದಪೂರ್ವಕಾ ವಾಽಪಿ ಸಂಬುದ್ಧ್ಯಂತಾಶ್ಚ ಯೇ ಸ್ಮೃತಾಃ
ಸೌಮ್ಯರೂಪಾಶ್ಚ ರಾಮಾದ್ಯಾ ಮನವಸ್ತೇ ಯಥಾರುಚಿ
ಶೂದ್ರಾದಿಶ್ವಪಚಾಂತೇಭ್ಯ ಉಪದೇಶ್ಯಾ ವಿಶುದ್ಧಯೇ

ತತ್ರಾಪಿ ಯೇ ವಿಶಿಷ್ಟಾಃ ಸ್ಯುಃ ನಿಯಮವ್ರತಚಾರಿಣಃ
ತೇಷಾಂ ಸಾಮಾನ್ಯತೋ ಬೀಜಯುಕ್ತಮಂತ್ರಾನುಪಾದಿಶೇತ್

ಪಂಚಸಂಸ್ಕಾರಸಂಗ್ರಹದಲ್ಲಿ ಸ್ತ್ರೀಯರು ಜಪ ಧ್ಯಾನಗಳನ್ನು ಮಾಡಬೇಕೆಂದು ತಿಳಿಸಿ ತರ್ಪಣವನ್ನು ನೀಡಬಾರದೆಂದು ತಿಳಿಸಲಾಗಿದೆ–

ವ್ರತಂ ಸ್ತ್ರೀಣಾಂ ಜಪೋ ಧ್ಯಾನಂ ನತು ತರ್ಪ್ಪಣಮೇವ ಚ

ಹಾರೀತಸ್ಮೃತಿಯು ಗುರುಮಂತ್ರಜಪವನ್ನು ಸ್ತ್ರೀಯರಿಗೆ ವಿಧಿಸುತ್ತ ಭಗವಚ್ಚಿಂತನವನ್ನು ಮಾಡಲು ಹೇಳಿದೆ–

ಆಚಮ್ಯ ಧಾರಯೇತ್ಪೂರ್ವಂ ಊರ್ಧ್ವಪುಂಡ್ರಂ ಮೃದೈವ ತು
ಚಂದನೇನಾಽಪಿ ಕಸ್ತೂರ್ಯಾ ಕುಂಕುಮೇನಾಽಪಿ ವಾ ಸತೀ



**ಮಂತ್ರಂ ಜಪ್ತ್ವಾ ಗುರುಂ ಪಶ್ಚಾತ್ ಅಭಿವಂದ್ಯ ಚ ವೈಷ್ಣವಾನ್**

**ನಮಸ್ಕೃತ್ವಾ ಜಗನ್ನಾಥಂ ಜಪ್ತ್ವಾ ಚ ಶರಣಾಗತಿಮ್**

**ಆತ್ಮಾನಂ ಸಮಲಂಕೃತ್ಯ ಚಿಂತಯೇನ್ಮಧುಸೂದನಮ್**

ಕುಲ್ಲೂಕಭಟ್ಟನ ಸ್ಮೃತಿರತ್ನದಲ್ಲಿ ಗೃಹಿಣಿಯಾದವಳು ಸಂಧ್ಯಾವಂದನೆಯನ್ನು ನಡೆಸಬೇಕೆಂಬ ಪ್ರಮಾಣವೂ ಸಂಗೃಹೀತವಾಗಿದೆ–

**ಅಗ್ನಿಹೋತ್ರಸ್ಯ ಶುಶ್ರೂಷಾ ಸಂಧ್ಯೋಪಾಸನಮೇವ ಚ**

**ಕಾರ್ಯಂ ಪತ್ನ್ಯಾ ಪ್ರತಿದಿನಂ ಬಲಿಕರ್ಮ್ಮ ಚ ನೈತ್ಯಿಕಮ್**

ವೈದಿಕಮಂತ್ರಜಪ, ಸಂನ್ಯಾಸ, ಕ್ಷೇತ್ರಸಂಚಾರ, ದೇವಪೂಜೆ ಇವೆಲ್ಲ ಸ್ತ್ರೀಯರಿಗೆ, ವೇದಸಂಸ್ಕಾರ – ಶಿಕ್ಷಣವಿಲ್ಲದವರಿಗೆ ಇಲ್ಲ –

**ಜಪಸ್ತಪಸ್ತೀರ್ಥಸೇವಾ ಪ್ರವ್ರಜ್ಯಾ ಮಂತ್ರಸಾಧನಮ್**

**ದೇವತಾರಾಧನಂ ಚೈವ ಸ್ತ್ರೀಶೂದ್ರಪತನಾನಿ ಷಟ್**

ಅವರಿಗೆಲ್ಲ ಕೇವಲ ವಿಷ್ಣುವಿನ ನಾಮಮಂತ್ರ ಜಪಿಸಲು ಯೋಗ್ಯತೆ ಎಂದು **ಶೇಷಸಂಹಿತೆ – ಕೇವಲಂ ವೈಷ್ಣವಂ ನಾಮ ನಮಃಪ್ರಣವವರ್ಜ್ಜಿತಮ್**

**ಹುಂಫಡಾದಿವಷಟ್‌ಸ್ವಾಹಾವರ್ಜ್ಜಿತಂ ಕೇಶವಾದಿಕಮ್**

**ಅಧ್ಯಾಪ್ಯಂ ಸ್ತ್ರೀಷು ಶೂದ್ರೇಷು ತದ್ವದೇವಾನುಲೋಮಜೇ**

ನಾಮಮಂತ್ರಜಪದಲ್ಲಿಯೂ ಪ್ರಣವವನ್ನು ಕಡ್ಡಾಯವಾಗಿ ಸೇರಿಸಲೇಬಾರದು –

**ತಸ್ಮಾತ್ಸಪ್ರಣವಂ ಶೂದ್ರೋ ಮನ್ನಾಮಾಪಿ ನ ಕೀರ್ತ್ತಯೇತ್** (ಮಹಾಭಾರತ)

ಪ್ರಣವವನ್ನು ಹಾಕಿ ಮಂತ್ರ ಜಪಿಸಿದರೆ, ಅದು ವಿಷಫಲವನ್ನು ನೀಡಲಿದೆ –

**ವಿನಾ ಹಿ ಪ್ರಣವಂ ಮಂತ್ರಃ ಸ್ತ್ರೀಶೂದ್ರಾಣಾಂ ಪ್ರಕೀರ್ತ್ತಿತಃ**

**ಪ್ರಣವೇನ ಸಮಾಯುಕ್ತಾಃ ತನ್ಮಂತ್ರಾಶ್ಚ ವಿಷೋಪಮಾಃ**

ವೈದಿಕಸಂಸ್ಕಾರವಿಲ್ಲದವರು ಪುರಾಣಗಳಲ್ಲಿನ ಶ್ಲೋಕಮಂತ್ರಗಳನ್ನು ಜಪಿಸಲಿದೆ. ಗಾಯತ್ರೀಜಪಕ್ಕೂ ಸೂರ್ಯನಿಗೆ ನೀಡುವ ಅರ್ಘ್ಯಗೂ ವಿಹಿತವಾದ ವಿಷ್ಣುಪುರಾಣದಲ್ಲಿನ ಮಂತ್ರ – **ನಮೋ ವಿವಸ್ವತೇ ಬ್ರಹ್ಮಭಾಸ್ವತೇ ವಿಷ್ಣುತೇಜಸೇ**

**ಜಗತ್ಸವಿತ್ರೇ ಶುಚಯೇ ಸವಿತ್ರೇ ಕರ್ಮ್ಮಸಾಕ್ಷಿಣೇ**



# ತ್ರಿವೇದಿಗಳ ಸಂಧ್ಯಾವಂದನೆಯಲ್ಲಿ ಕೆಲವು ವ್ಯತ್ಯಾಸ

ಯಜುರ್ವೇದಿಗಳು ಮತ್ತು ಸಾಮವೇದಿಗಳು ಶ್ರೀವೈಷ್ಣವರಲ್ಲಿರುವಂತೆ ಎರಡನೆಯ ಮಾರ್ಜನದಲ್ಲಿ **ದಧಿಕ್ರಾವ್ಣೋ ಅಕಾರಿಷಂ** ಮಂತ್ರವನ್ನೂ ಸೇರಿಸುವರು.

ಯಾಜುಷರು ಸೂರ್ಯೋಪಸ್ಥಾನದಲ್ಲಿ **ಉದ್ವಯಂ ತಮಸಸ್ಪರಿ ಉದುತ್ಯಂ ಜಾತವೇದಸಂ, ಚಿತ್ರಂ ದೇವಾನಾಂ** ಮಂತ್ರಗಳನ್ನು ಮಾತ್ರ ಮಧ್ಯಾಹ್ನ ಬಳಸುವರು. ಸಾಯಂಕಾಲ ರಕ್ಷಣೆಯನ್ನು ಪ್ರಾರ್ಥಿಸುವ **ಇಮಂ ಮೇ ವರುಣ, ತತ್ತ್ವಾಯಾಮಿ ಬ್ರಹ್ಮಣಾ** ಮಂತ್ರಗಳನ್ನಷ್ಟೆ ಬಳಸುವರು.

ಋಗ್ವೇದಿಗಳು ಉಪಸ್ಥಾನದಲ್ಲಿ ಸುಖ ನೀಡೆಂಬ ಪ್ರಾರ್ಥನೆಯ **ಜಾತವೇದಸೇ, ತಚ್ಛಂಯೋರಾ ವೃಣೀಮಹೇ, ನಮೋ ಬ್ರಹ್ಮಣೇ** ಮಂತ್ರಗಳನ್ನೇ ಎರಡೂ ಹೊತ್ತು ಬಳಸುವರು. ಯಾಜುಷರು ಬೆಳಿಗ್ಗೆ **ಮಿತ್ರಸ್ಯ** ಮಂತ್ರಗಳನ್ನು ಉಪಯೋಗಿಸುವರು. ಇವು ಮಿತ್ರನ ಸರ್ವಧಾರಕತ್ವವನ್ನು ಸರ್ವಪ್ರೇರಕತ್ವವನ್ನು ಹೇಳಿದೆ.

ಗೌತಮಸ್ಮೃತಿ ಹೇಳಿದಂತೆ ಸಾಮವೇದಿಗಳು ಉಪಸ್ಥಾನದಲ್ಲಿ **ಯಶೋ ಮಾಂ ಭವಾಮಿ** ಮಂತ್ರಗಳನ್ನು ಪಠಿಸುವರು.

ಸಾಮವೇದಿಗಳು **ಅಹಶ್ಚ ಮಾದಿತ್ಯಶ್ಚ ಪುನಾತು ಸ್ವಾಹಾ, ರಾತ್ರಿಶ್ಚ ಮಾ ವರುಣಶ್ಚ ಪುನಾತು ಸ್ವಾಹಾ** ಎಂಬ ಮಂತ್ರಗಳಿಂದಷ್ಟೆ ಬೆಳಿಗ್ಗೆ ಮತ್ತು ಸಂಜೆ ಮಂತ್ರಾಚಮನವನ್ನು ನಡೆಸುವರು.

ಋಗ್ವೇದಿಗಳು ಮತ್ತು ಸಾಮವೇದಿಗಳು ಬೆಳಿಗ್ಗೆ ಪ್ರಾಯಶ್ಚಿತ್ತಾರ್ಘ್ಯವನ್ನು ಎಲ್ಲದರ ಒಡೆಯನಾದ ನೀನು ಕಾಲಾತೀತ ದೋಷವನ್ನು ಮನ್ನಿಸಿ ಸಲಹೆನ್ನುವ ಪ್ರಾರ್ಥನೆಯ **ಯದದ್ಯ ಕಚ್ಚ** ಮಂತ್ರದಿಂದ ನೀಡುವರು.

ಯಜುರ್ವೇದಿಗಳು ಸಪ್ತ ವ್ಯಾಹೃತಿ ಸಹಿತವಾದ ಗಾಯತ್ರಿಯಿಂದಲೆ ಮೂರು ಹೊತ್ತು ಪ್ರಾಯಶ್ಚಿತ್ತಾರ್ಘ್ಯ ನೀಡುವರು. ಸಾಯಂಕಾಲ ಸಾಮವೇದಿಗಳು **ನ ತಸ್ಯ ಮಾಯಯಾ** ಮಂತ್ರದಿಂದ, ಋಗ್ವೇದಿಗಳು **ಉದ್ಘೇದಭಿಶ್ರುತಾಮಘಂ**



ಮಂತ್ರದಿಂದ, ಮಧ್ಯಾಹ್ನ **ಪ್ರಾತರ್ದೇವೀಂ** ಮಂತ್ರದಿಂದ ಪ್ರಾಯಶ್ಚಿತ್ತಾರ್ಘ್ಯ ಕೊಡುವರು.

ಮಧ್ಯಾಹ್ನ **ಆದಿತ್ಯಂ ನಾವಂ** ಮಂತ್ರಗಳನ್ನು ಹೇಳುವರು. ಯಾಜುಷರಂತೆ **ಯಮಾಯ ಧರ್ಮರಾಜಾಯ, ಋತಂ ಸತ್ಯಂ** ಮಂತ್ರಗಳನ್ನೂ ದಕ್ಷಿಣ-ಪೂರ್ವಗಳಲ್ಲಿ ಬಳಸುವರು. ಋಗ್ವೇದಿಗಳು **ಧ್ರುವಾಸು ತ್ವಾ** ಮಂತ್ರವನ್ನು ಪಶ್ಚಿಮದಲ್ಲಿ ಬಳಸಿ ಉಳಿದೆಡೆ ಯಾಜುಷರಂತೆ ಯಮರುದ್ರರ ಉಪಸ್ಥಾನವನ್ನು ನಡೆಸುವರು.

ದಿಗುಪಸ್ಥಾನದಲ್ಲಿ ಆಯಾ ಶಾಖೆಯ ವೇದಮಂತ್ರಗಳನ್ನೆ ಬಳಸುವುದ ರಿಂದ ಮಂತ್ರವ್ಯತ್ಯಾಸವೆ ಹೊರತು ದೇವತಾವ್ಯತ್ಯಾಸವಿರದು. ಸೂರ್ಯನಮನದ ಬಳಿಕ ಇಂದ್ರಾದಿ ದಿಕ್ಪಾಲಕರನ್ನು ನಾಮಮಂತ್ರಗಳಿಂದಲೂ ನಮನಗೈಯಬೇಕೆಂದು **ಆಗ್ನೇಯದ** ಮಾತು-

**ಮಿತ್ರಸ್ಯೇತ್ಯುದಿತಂ ಸೂರ್ಯಂ ಉಪತಿಷ್ಠೇತ್ತು ಪೂರ್ವತಃ**
**ಶ್ರೌತೈಃ ಸ್ಮಾರ್ತೈಸ್ತಥಾ ಸೌರ್ಯೈಃ ಮಂತ್ರೈರ್ನಾನಾವಿಧೈರಪಿ**

ಸಾಯಂಕಾಲ ಪಶ್ಚಿಮದಿಂದ ಆರಂಭ. ಬೆಳಿಗ್ಗೆ ಪೂರ್ವದಿಂದ ಆರಂಭ ಎಂದಿಷ್ಟೆ ವ್ಯತ್ಯಾಸ. ಇದು ಎಲ್ಲ ಶಾಖೆಯವರಿಗೂ ಸಮಾನ ವಿಷಯ

ಋಗ್ವೇದಿಗಳಿಗೆ ತ್ರಿಸಂಧ್ಯೆಯಲ್ಲಿ ಮಂತ್ರಾಚಮನದ ಮಂತ್ರಗಳು ಮಾತ್ರ ಬೇರೆ ಬೇರೆ, ಉಳಿದೆಲ್ಲ ಒಂದೇ ರೀತಿ ಎಂದು ಕೆಲವು ಭಾಷ್ಯಕಾರರು ತಿಳಿಸಿರುವರು. ಅರ್ಘ್ಯಮಂತ್ರ ಮಧ್ಯಾಹ್ನ ಮಾತ್ರ ಬೇರೆಯಾಗುವುದೆಂದೂ ಕೆಲವರ ಮಾತು.

**ಪ್ರತೀಚೀಂ ದೇವಾಃ ಪರಾಚೀಮಸುರಾಃ** ಎಂದು ಯಜುರ್ವೇದದ ಮಾತು. ಇದರ ಆದೇಶದಲ್ಲಿ ಕೆಲವೆಡೆ ಮೂರು ಹೊತ್ತಿನ ಜಪವೂ ದೈವಿಕವಾಗಿ ಇರಲು ಪೂರ್ವಕ್ಕೆ ಮುಖಹಾಕಿಯೇ ನಡೆಸುವರು. ಪಶ್ಚಿಮ ಅಸುರರ ದಿಕ್ಕೆಂದು. ಇದೂ ಯೋಗ್ಯವೇ.

***ಕಿಂ ತಸ್ಯ ಬಹುಭಿಸ್ತೀರ್ಥೈಃ ಕಿಂ ತಪೋಭಿಃ ಕಿಮಧ್ವರೈಃ***
***ಯೋ ನಿತ್ಯಂ ಧ್ಯಾಯತೇ ದೇವಂ ನಾರಾಯಣಮನನ್ಯಧೀಃ***



# ಸಂನ್ಯಾಸಿಗಳ ಸಂಧ್ಯೆ

ಬ್ರಹ್ಮಚರ್ಯ, ಮನೆವಾಳ್ತೆ, ವಾನಪ್ರಸ್ಥ ಮತ್ತೆ ಸಂನ್ಯಾಸ – ಹೀಗೆ ನಾಲ್ಕು ಹಂತಗಳು ಬದುಕಿನ ಅನುಭವದ ಸಂಸ್ಥೆಗಳು. ಈ ಎಲ್ಲ ಹಂತಗಳಲ್ಲೂ ಜೀವ–ದೇವನ ಸಂಬಂಧದ ನಿತ್ಯವಿಧಿಯನ್ನು ಬಿಡುವಂತಿಲ್ಲ ಎನ್ನುವುದು ಹಾರೀತರ ಮಾತು –

**ಚತ್ವಾರೋಽಪ್ಯಾಶ್ರಮಾ ಹ್ಯೇತೇ ಸಂಧ್ಯಾವಂದನವರ್ಜಿತಾಃ**

**ಬ್ರಾಹ್ಮಣ್ಯಾದೇವ ಹೀಯಂತೇ ಯದ್ಯಪ್ಯುಗ್ರತಪೋಧರಾಃ**

ಸಂಸ್ಕಾರ ಪಡೆದ ದ್ವಿಜರೆಲ್ಲರಿಗೂ ವೈರಾಗ್ಯ ಮೂಡಿದಾಗ ಸಂನ್ಯಾಸಕ್ಕೆ ಅಧಿಕಾರವಿದೆ. ಯತಿಧರ್ಮವನ್ನು ನಾಲ್ಕು ರೀತಿಯಿಂದ ನಡೆಸಬಹುದು. ಎಲ್ಲಿಗೂ ಹೋಗದೆ, ಯಾರ ಊಟವನ್ನೂ ನಡೆಸದೆ, ಮನೆಯಲ್ಲೇ ಇದ್ದುಕೊಂಡು ತನ್ನವರು ಹಾಕಿದ ಭಿಕ್ಷೆಯಲ್ಲೇ ಬದುಕುವವ ಕುಟೀಚಕ ಸಂನ್ಯಾಸಿ. ಮನೆ ತೊರೆದು ಊರು ಸುತ್ತಿ ಭಿಕ್ಷೆ ಬೇಡಿ ಬದುಕುವವ ಬಹೂದ ಸಂನ್ಯಾಸಿ –

**ಕುಟೀಚಕಃ ಬಹೂದಶ್ಚ ಹಂಸೋ ಪರಮಹಂಸಕಃ**

**ಚತುರ್ಧಾ ಯತಯಃ ಪ್ರೋಕ್ತಾಃ.....**

ಹಂಸ ಮತ್ತು ಪರಮಹಂಸ ಸಂನ್ಯಾಸಿಗಳು ಊರು–ಕೇರಿಗಳಲ್ಲೂ ಹೆಚ್ಚಾಗಿ ಕಂಡುಬರದೆ, ಎಲ್ಲೋ ಅಲ್ಲಲ್ಲಿ ಅಪರೂಪದ ದುರ್ಗಮವಾದ ತೀರ್ಥಕ್ಷೇತ್ರಗಳಲ್ಲಿ, ರಹಸ್ಯತಾಣಗಳಲ್ಲಿ, ಗುಹೆ–ಗಹ್ವರಗಳಲ್ಲಿ ನಿಬಿಡ ಕಾನನಗಳಲ್ಲಿ ಏಕಾಂತವಾಸದಲ್ಲಿ ಸ್ವಸಾಧನೆಯಲ್ಲಿ ತೊಡಗಿರುವವರು. ಬದುಕಿಗಾಗಿ ಇಲ್ಲವೇ ಸಾಯಲಿಕ್ಕೆಂದು ಇವರು ಯಾವುದೇ ಕರ್ಮದಲ್ಲಿ ಪ್ರಯತ್ನಪೂರ್ವಕವಾಗಿ ತೊಡಗಿರುವುದಿಲ್ಲ ಎನ್ನುವುದು ವಿಶೇಷ. –

**ನಾಭಿನಂದೇತ ಮರಣಂ ನಾಭಿನಂದೇತ ಜೀವಿತಮ್**

**ಹಂಸಸ್ತು ತೀರ್ಥೋ ವಿಜ್ಞೇಯಃ.....**

ಈ ಎಲ್ಲ ಯತಿಗಳಿಗೂ ಸಂಧ್ಯಾವಂದನೆ ಮಾಡಲಿದೆ. ಆಚಾರ್ಯಮಧ್ವರು



ಮತ್ತು ವಿಷ್ಣುತೀರ್ಥರು ಯತಿಜಪಕ್ರಮವನ್ನು ಬಣ್ಣಿಸಿದ್ದಾರೆ. ಆಚಮನದಲ್ಲಿ ಯಜ್ಞ ಪ್ರಜಾಪತಿ ವ್ಯಾಹೃತಿಗಳ ಸೇರ್ಪಡೆ ಇದೆ. ಹಂಸ ಸಂನ್ಯಾಸಿಗಳಿಗಿಂತ ಬೇರೆಯಾದ ಯತಿಗಳಿಗೆ ಜಲಪ್ರೋಕ್ಷಣೆ, ಉಪಸ್ಥಾನ, ಅರ್ಘ್ಯಪ್ರದಾನ, ಗಾಯತ್ರೀ ಜಪಗಳೂ ಜಪದಲ್ಲಿ ಸೇರಿವೆ. ಹಂಸರಿಗೆ ಕೇವಲ ಪ್ರಣವ ಜಪತರ್ಪಣ ವಿಹಿತವಾಗಿದೆ. ಹಂಸರು ಯಾವೊಂದೂ ಹಿಂಸೆಯನ್ನು ನಡೆಸದವರೆಂದು ಅವರಿಗೆ ಅರ್ಘ್ಯಪ್ರದಾನವಿಲ್ಲ. ಅವರು ಎಂದೂ ಸಮಾಜದಲ್ಲಿ ಇಲ್ಲ. ಅರ್ಘ್ಯೆಯಲ್ಲಿ ಮಂದೇಹರ ನಾಶದ ಚಿಂತನೆಯಿದೆ. ಹೀಗಾಗಿ ಎಲ್ಲವನ್ನು ತೊರೆದ ಹಂಸರಲ್ಲಿ ಇದಿಲ್ಲ.

ಜಪಾರಂಭದಲ್ಲಿ ಆಸನಶುದ್ಧಿ ಗುರುನಮಸ್ಕಾರ ಶೋಷಣಾದಿಗಳು ಎಲ್ಲರಿಗೂ ಸಮಾನ.

ಪ್ರಣವಮಂತ್ರ ಜಪಿಸಿದ ಮೇಲೆ 6 ಓಂಕಾರವುಳ್ಳ ವಿಶ್ವಾಮಿತ್ರಗಾಯತ್ರಿಯ ಜಪವನ್ನು ಯತಿಗಳಿಗೆ ತಿಳಿಸಿದ್ದಾರೆ. ಹಂಸಮಂತ್ರ ಜಪಾನಂತರ ಅಷ್ಟಾಕ್ಷರಮಂತ್ರ ಜಪ ಇವರಿಗೆ ವಿಶೇಷ. ಮುಂದೆ ವ್ಯಾಹೃತ್ಯಾದಿ ಮಹಾಮಂತ್ರಗಳ ಇತರ ವೈಷ್ಣವ ಮಂತ್ರಗಳ ಜಪವನ್ನೂ ಯತಿಗಳು ನಡೆಸಬೇಕು. ಇತರ ದೇವತಾಮಂತ್ರಗಳನ್ನೂ ತಂತ್ರಸಾರೋಕ್ತಕ್ರಮದಲ್ಲಿ ಜಪಿಸಬೇಕು.

**ಸಂಸಾರಾರ್ಣ್ಣವಮಗ್ನಾನಾಂ ನರಾಣಾಂ ಪಾಪಕರ್ಮ್ಮಣಾಮ್**
**ನಾನ್ಯೋ ಧರ್ತಾ ಜಗನ್ನಾಥಂ ಮುಕ್ತ್ವಾ ನಾರಾಯಣಂ ಪರಮ್**
**ತೀರ್ಥಕೋಟಿಸಹಸ್ರಾಣಿ ವ್ರತಕೋಟಿಶತಾನಿ ಚ**
**ನಾರಾಯಣಪ್ರಣಾಮಸ್ಯ ಕಲಾಂ ನಾರ್ಹಂತಿ ಷೋಡಶೀಮ್** (ಕೃಷ್ಣಾಮೃತ–)



**ಸಾಕ್ಷಿಣ್ಯಃ ಕರ್ಮಣಾಂ ಸಂಧ್ಯಾಃ** (ಅಗ್ನಿಪುರಾಣ)
**ವಿಷ್ಣೋ ವೃಕ್ಷೋ ಮೂಲಕಾನ್ಯತ್ರ ಸಂಧ್ಯಾಃ**
**ಹವಿಷ್ಮಾನ್ ಅಸ್ತು ಸೂರ್ಯಃ** (ವಾಜಸನೇಯಸಂಹಿತೆ)
**ಯತಃ ಸೂರ್ಯ ಉದೇತಿ ಅಸ್ತಂ ಯತ್ರ ಚ ಗಚ್ಛತಿ**
**ತದೇವ ಮನ್ಯೇಽಹಂ ಜ್ಯೇಷ್ಠಂ ತದು ನಾತ್ಯೇತಿ ಕಿಂ ಚನ** (ಅಥರ್ವವೇದ)





# ಸಮೀಕ್ಷೆಯ ಸುತ್ತ

ನಾಲ್ಕು ವೇದಗಳ ಸಂಹಿತೆಗಳು, ಬ್ರಾಹ್ಮಣಗಳು, ಆರಣ್ಯಕಗಳು ಮತ್ತು ಉಪನಿಷತ್ತುಗಳು

ವೇದವ್ಯಾಸರ ಕೃತಿಗಳು – ಮಹಾಭಾರತ, ಹದಿನೆಂಟು ಪುರಾಣಗಳು ಮತ್ತು ಬ್ರಹ್ಮಸೂತ್ರಗಳು.

ಪಂಚರಾತ್ರಸಂಹಿತೆಗಳು – ಮುದ್ರಿತಗಳು ಮತ್ತು ಅಮುದ್ರಿತಗಳು

ತಂತ್ರಗಳು ಮತ್ತು ಆಗಮಗಳು

ಸ್ಮೃತಿಗಳು – ಮುದ್ರಿತಗಳು ಮತ್ತು ಅಮುದ್ರಿತಗಳು

ಆಚಾರ್ಯಮಧ್ವರ ಸರ್ವಮೂಲಗ್ರಂಥಗಳು – ವಿಶೇಷವಾಗಿ ಹತ್ತಾರು ವ್ಯಾಖ್ಯಾನಗಳೊಡನೆ ತಂತ್ರಸಾರಸಂಗ್ರಹ ಮತ್ತು ಹತ್ತಾರು ವ್ಯಾಖ್ಯಾನಗಳೊಡನೆ ಸದಾಚಾರಸ್ಮೃತಿ

ಆಚಾರ್ಯಮಧ್ವರ ಕಾಲದ ಸನಿಹ ರಚನೆಗೊಂಡ ಧರ್ಮಶಾಸ್ತ್ರಗಳು –

1. (ಕೃತ್ಯ)ಕಲ್ಪತರು – ಲಕ್ಷ್ಮೀಧರ ಭಟ್ಟ (12ನೇ ಶತಮಾನ)

   13 ಕಾಂಡಗಳಲ್ಲಿ ಆಚಾರಕಾಂಡ

2. ಧರ್ಮರತ್ನ – ಜೀಮೂತವಾಹನ (11ನೇ ಶತಮಾನ)

   3 ಭಾಗಗಳಲ್ಲಿ ಕಾಲವಿವೇಕ.

3. ಸ್ಮೃತಿಚಂದ್ರಿಕಾ – ದೇವಣ್ಣ ಭಟ್ಟ (12ನೇ ಶತಮಾನ)

   7 ಭಾಗಗಳಲ್ಲಿ ಅಹ್ನಿಕಕೃತ್ಯ.

4. ಹಾರಲತಾ (ಕರ್ಮೋಪದೇಶಿನೀಪದ್ಧತಿ) ಮತ್ತು ಪಿತೃದಯಿತಾ – ಅನಿರುದ್ಧ (1200)

5. ಆಚಾರಸಾಗರ – ಬಲ್ಲಾಳಸೇನ (12ನೇ ಶತಮಾನ)

   4 ಸಾಗರಗಳಲ್ಲಿ ಆಹ್ನಿಕ ಸಾಗರ.

6. ಸ್ಮೃತ್ಯರ್ಥಸಾರ – ಶ್ರೀಧರಾಚಾರ್ಯ (12ನೇ ಶತಮಾನ)

   3 ಪ್ರಕರಣಗಳಲ್ಲಿ ಆಚಾರಪ್ರಕರಣ

7. ಚತುರ್ವರ್ಗಚಿಂತಾಮಣಿ – ಹೇಮಾದ್ರಿ (13ನೇ ಶತಮಾನ)



5 ಖಂಡಗಳಲ್ಲಿ ಪರಿಶೇಷಖಂಡ

8. ಸ್ಮೃತಿಸಂಗ್ರಹ – ಸಾಯಣಮಾಧವರು (14ನೇ ಶತಮಾನ)

9. ಛಂದೋಗಾಹ್ನಿಕ ಮತ್ತು ಆಚಾರಾದರ್ಶ – ಶ್ರೀದತ್ತ ಉಪಾಧ್ಯಾಯ (1400)

10. ಸ್ಮೃತಿರತ್ನಾಕರ – ಚಂಡೇಶ್ವರ (14ನೇ ಶತಮಾನ)

7 ಅಧ್ಯಾಯಗಳಲ್ಲಿ ಕೃತ್ಯರತ್ನಾಕರ .

11. ಸ್ಮೃತಿವಿವೇಕ – ಶೂಲಪಾಣಿ (1460)

12. ಮದನಪಾರಿಜಾತ – ವಿಶ್ವೇಶ್ವರಭಟ್ಟ (14ನೇ ಶತಮಾನ)

9 ಸ್ತಬಕಗಳಲ್ಲಿ ಆಹ್ನಿಕಸ್ತಬಕ.

13. ಮದನರತ್ನಪ್ರದೀಪ – (1400) 7 ಉದ್ಯೋತಗಳಲ್ಲಿ ಆಚಾರೋದ್ಯೋತ.

14. ನೃಸಿಂಹಪ್ರಾಸಾದ – ದಲಪತಿರಾಜ (15ನೇ ಶತಮಾನ)

12 ಸಾರಗಳಲ್ಲಿ ಆಹ್ನಿಕಸಾರ

15. ಸ್ಮೃತಿತತ್ತ್ವ – ರಘುನಂದನಭಟ್ಟಾಚಾರ್ಯ (1490)

28 ಪ್ರಕರಣಗಳಲ್ಲಿ ಆಹ್ನಿಕತತ್ತ್ವ

16. ಸ್ಮೃತಿಸಾರ – ಹರಿನಾಥ (15ನೇ ಶತಮಾನ) 3 ಭಾಗಗಳಲ್ಲಿ ಆಚಾರಭಾಗ

17. ಚಿಂತಾಮಣಿ – ವಾಚಸ್ಪತಿಮಿಶ್ರ (15ನೇ ಶತಮಾನ)

18. ತೋಡರಾನಂದ – ತೋಡರಮಲ್ಲ (16ನೇ ಶತಮಾನ)

9 ಸೌಖ್ಯಗಳಲ್ಲಿ ಆಚಾರಸೌಖ್ಯ.

19. ವೈಜಯಂತೀ ಮತ್ತು ಸ್ಮೃತಿಸಿಂಧು – ನಂದಪಂಡಿತ (16ನೇ ಶತಮಾನ)

20. ನಿರ್ಣಯಸಿಂಧು – ಕಮಲಾಕರಭಟ್ಟ (17ನೇ ಶತಮಾನ)

21. ಸ್ಮೃತಿಭಾಸ್ಕರ – ನೀಲಕಂಠಭಟ್ಟ (17ನೇ ಶತಮಾನ)

12 ಮಯೂಖಗಳಲ್ಲಿ ಆಚಾರಮಯೂಖ.

22. ವೀರಮಿತ್ರೋದಯ – ಮಿತ್ರಮಿಶ್ರ (1620) 32 ಪ್ರಕಾಶಗಳಲ್ಲಿ ಆಹ್ನಿಕಪ್ರಕಾಶ.

23. ಸ್ಮೃತಿಕೌಸ್ತುಭ – ಅನಂತದೇವ (1670) 7 ಕೌಸ್ತುಭಗಳಲ್ಲಿ ಆಚಾರಕೌಸ್ತುಭ.

24. ಧರ್ಮಶಾಸ್ತ್ರಸುಧಾನಿಧಿ – ದಿವಾಕರಭಟ್ಟ (1683)



25. ಸ್ಮೃತಿಮುಕ್ತಾವಳಿ – ಕೃಷ್ಣಾಚಾರ್ಯ (17ನೇ ಶತಮಾನ)
26. ಶೇಖರ – ನಾಗೇಂದ್ರಭಟ್ಟ (18ನೇ ಶತಮಾನ)
27. ಧರ್ಮಸಿಂಧು (ಸಾರ) – ಕಾಶೀನಾಥ ಉಪಾಧ್ಯಾಯ (18ನೇ ಶತಮಾನ)

    3 ಪರಿಚ್ಛೇದಗಳಲ್ಲಿ ಆಹ್ನಿಕಕೃತ್ಯ.

28. ಸ್ಮೃತಿರತ್ನ – ಆಶ್ವಲಾಯನ
29. ಸ್ಮೃತಿರತ್ನಾವಳೀ – ಶ್ರೀನಿವಾಸ
30. ಸ್ಮೃತಿಸರ್ವಸ್ವ – ಸರಸ್ವತೀವಲ್ಲಭ
31. ಸ್ಮೃತಿಸಾರಸಂಗ್ರಹ – ವಿಶ್ವನಾಥ
32. ಆಚಾರಭೂಷಣ – ತ್ರ್ಯಂಬಕ
33. ಆಚಾರಾರ್ಕ
34. ಕರ್ಮಸಿದ್ಧಾಂತ – ಶ್ರೀ ಪುರುಷೋತ್ತಮತೀರ್ಥ ಒಡೆಯರ್
35. ಆಚಾರಕಿರಣ
36. ಆಚಾರೇಂದು – ತ್ರ್ಯಂಬಕಮಾಟೆ
37. ಉಜ್ವಲಾ
38. ಧರ್ಮಪ್ರಶ್ನ
39. ಭಟ್ಟೋಜಿದೀಕ್ಷಿತಾಹ್ನಿಕ
40. ಕರ್ಮಪ್ರದೀಪ
41. ಗೋವರ್ಧನಾಹ್ನಿಕ
42. ಯಾಜ್ಞವಲ್ಕ್ಯಸ್ಮೃತಿವ್ಯಾಖ್ಯಾ ಮಿತಾಕ್ಷರೀ – ವಿಜ್ಞಾನೇಶ್ವರ – ಆಚಾರಕಾಂಡ
43. ಸ್ಮೃತಿಸಾರಕೌಸ್ತುಭ – ರಾಯಸವೆಂಕಟಾದ್ರಿ
44. ಸ್ಮೃತಿಮುಕ್ತಾಫಲ – ವೈದ್ಯನಾಥದೀಕ್ಷಿತ
45. ಕಾಲಮಾಧವ ಮತ್ತು ಕಾಲನಿರ್ಣಯ – ಮಾಧವಾಚಾರ್ಯ

    – 5 ಪ್ರಕರಣಗಳಲ್ಲಿ ತಿಥಿಪ್ರಕರಣ

ಜಪಾನುಷ್ಠಾನಕ್ಕೆ ಸಂಬಂಧಿಸಿದಂತೆ ಇತರ ಸಣ್ಣಪುಟ್ಟ ಹೊತ್ತಗೆಗಳು

# ಅಷ್ಟಾಕ್ಷರ ಮಂತ್ರ ಪ್ರತಿಪಾದ್ಯ ರೂಪ



ಉದ್ಯದ್ಭಾಸ್ವತ್ಸಮಾಭಾಸಃ ಚಿದಾನಂದೈಕದೇಹವಾನ್
ಚಕ್ರಶಂಖಗದಾಪದ್ಮಧರೋ ಧ್ಯೇಯೋಽಹಮೀಶ್ವರಃ
ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿಗಣಮಧ್ಯಗಃ
ಬ್ರಹ್ಮವಾಯುಶಿವಾಹೀಶವಿಪ್ಯೈಃ ಶಕ್ರಾದಿಕೈರಪಿ
ಸೇವ್ಯಮಾನೋಽಧಿಕಂ ಭಕ್ತ್ಯಾ ನಿತ್ಯನಿಃಶೇಷಶಕ್ತಿಮಾನ್
(ತಂತ್ರಸಾರಸಂಗ್ರಹ)

